ನಿಮ್ಮ ಸ್ಪರ್ಧಾ ವಿಜೇತ ಸರಣಿ




# ಸಾಮಾನ್ಯ ಅರ್ಥಶಾಸ್ತ್ರ

## ಭಾರತ & ಕರ್ನಾಟಕದ ಆರ್ಥಿಕ ಸಮೀಕ್ಷೆ

### ಕೇಂದ್ರ & ರಾಜ್ಯ ಸರ್ಕಾರದ ಯೋಜನೆಗಳು ಹಾಗೂ ಕಾರ್ಯಕ್ರಮಗಳು


































ಡಾ|| ಕೆ.ಎಂ. ಸುರೇಶ್

ಎಂ.ಎಸ್ಸಿ, ಎಂ.ಎಡ್.ಪಿ.ಹೆಚ್.ಡಿ

# ಪರಿವಿಡಿ Content

## ಪರಾಮರ್ಶನ ಗ್ರಂಥಗಳು & ಮೂಲ ಆಕರಗಳು

- ಎನ್.ಸಿ.ಇ.ಆರ್.ಟಿ ಪಠ್ಯಪುಸ್ತಕಗಳು
- ಡಿ.ಎಸ್.ಇ.ಆರ್.ಟಿ ಯ ಪಠ್ಯಪುಸ್ತಕಗಳು
- ಕರ್ನಾಟಕ ಗೆಜೆಟಿಯರ್ – ಕರ್ನಾಟಕ ಸರ್ಕಾರ
- ಭಾರತದ ಆರ್ಥಿಕ ಸಮೀಕ್ಷೆ – ಭಾರತ ಸರ್ಕಾರ
- ಕರ್ನಾಟಕದ ಆರ್ಥಿಕ ಸಮೀಕ್ಷೆ – ಕರ್ನಾಟಕ ಸರ್ಕಾರ
- *Indian Economy - Ruddar dutt & Sundaram*
- *Economics for Growth & Development - M.L. Jhingon*
- *International Economics - M.L. Jhingon*
- *Indian Economy - Mishra & Puri*
- ರಾಜ್ಯ ಸರ್ಕಾರದ ಇಲಾಖಾ ಸುತ್ತೋಲೆಗಳು
- ಸರ್ಕಾರದ ವೆಬ್‌ಸೈಟ್‌ಗಳು
- ಇಂಡಿಯಾ ಇಯರ್ ಬುಕ್ – 2017
- ಕೇಂದ್ರ & ರಾಜ್ಯ ಬಜೆಟ್ – 20117–18

**ಮೇಲ್ಕಂಡ ಗ್ರಂಥಗಳನ್ನು ಪರಾಮರ್ಶಿಸಿ, ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಹೆಚ್ಚು ಗಮನದಲ್ಲಿರಿಸಿಕೊಂಡು, ಸಾಮಾನ್ಯ ಅರ್ಥಶಾಸ್ತ್ರ & ಆರ್ಥಿಕ ಸಮೀಕ್ಷೆ ಪುಸ್ತಕವನ್ನು ರಚಿಸಲಾಗಿದೆ.**

# ಅರ್ಥಶಾಸ್ತ್ರ (ECONOMICS)

## ಅರ್ಥಶಾಸ್ತ್ರದ ಸ್ವರೂಪ (Nature of Economics)

**ಶಬ್ದಾರ್ಥದಲ್ಲಿ ಅರ್ಥಶಾಸ್ತ್ರದ ಅರ್ಥ:-**




➢ 'ಅರ್ಥಶಾಸ್ತ್ರ' ಪ್ರಾಚೀನ 'ಗ್ರೀಕ್' ಭಾಷೆಯ **'Oikonomia'** ಪದದಿಂದ ಬಂದಿದ್ದು, ಇದು **`Oikos' & `Nomos'** ಪದಗಳ ಸಂಯೋಜಿತವಾಗಿದ್ದು, Oikos ಎಂದರೆ 'ಕುಟುಂಬ', **`Nomos'** ಎಂದರೆ **'ನಿರ್ವಹಣೆ'** ಎಂದರ್ಥ.

**ಅರ್ಥಶಾಸ್ತ್ರದ ಅರ್ಥ (Meaning of Economics)**

➢ ಅರ್ಥಶಾಸ್ತ್ರವು ಪ್ರಚಲಿತ ಆರ್ಥಿಕ ವಿನ್ಯಾಸಗಳ ಬಗ್ಗೆ ನಿರೂಪಿಸುವ ಒಂದು ಸಾಮಾಜಿಕ ವಿಜ್ಞಾನಗಳ ರಾಣಿ ಎನಿಸಿದೆ.

➢ ಅರ್ಥಶಾಸ್ತ್ರವು **"ಸರಕುಗಳು ಮತ್ತು ಸೇವೆಗಳ ಉತ್ಪಾದನೆ, ಹಂಚಿಕೆ ಮತ್ತು ಬಳಕೆಗಳನ್ನು ಅಧ್ಯಯನ ಮಾಡುವ ಒಂದು ಸಮಾಜ ವಿಜ್ಞಾನ"**ವಾಗಿದೆ.

➢ **ಸೂಕ್ಷ್ಮ & ಸಮಗ್ರ ಅರ್ಥಶಾಸ್ತ್ರ** ಎಂಬ ಪದಗಳನ್ನು ಮೊದಲ ಬಾರಿಗೆ ಬಳಸಿದವರು – **ರ್‍ಯಾಗ್ನರ್‌ಫ್ರಿಶ್** (1933) ಇವರು 1969 ರಲ್ಲಿ ಅರ್ಥಶಾಸ್ತ್ರ ವಿಷಯದಲ್ಲಿ ಮೊದಲ ಬಾರಿಗೆ **ಜಾನ್‌ಟಿನ್‌ಬರ್ಜಿನ್** ಅವರೊಂದಿಗೆ ನೊಬೆಲ್ ಪ್ರಶಸ್ತಿ ಪಡೆದುಕೊಂಡರು.

**ಆಧುನಿಕ ಅರ್ಥಶಾಸ್ತ್ರ** (Modren Economics)



➢ ಆಧುನಿಕ ಅರ್ಥಶಾಸ್ತ್ರದ ಪಿತಾಮಹ – **ಆಡಂಸ್ಮಿತ್**

➢ ಇವರು ಅರ್ಥಶಾಸ್ತ್ರದ ಸಾಂಪ್ರಾದಾಯಿಕ ಪಂಥದ ಸಂಪತ್ತಿನ ವ್ಯಾಖ್ಯಾನದ (Classical Economics) ಪ್ರತಿಪಾದಕರು. ಮೂಲತಃ ಸ್ಕಾಟ್‌ಲ್ಯಾಂಡ್‌ನವರು.

➢ ಪ್ರಮುಖ ಕೃತಿಗಳು – **"An Inquiry into the Nature and Causes of the Wealth of Nations"(1776). "The Theory of Moral Sentiments".**




➢ ಬಂಡವಾಳಶಾಹಿ & ಆಧುನಿಕ ಅರ್ಥಶಾಸ್ತ್ರ, ಕಾರ್ಮಿಕರ ವಿಭಜನೆ, ಮಾರುಕಟ್ಟೆಯ ಅಗೋಚರ ಹಸ್ತ, ತೆರಿಗೆ ತತ್ವಗಳು, ಆಧುನಿಕ ಮುಕ್ತ ಮಾರುಕಟ್ಟೆ, ಎಂಬ ಪರಿಕಲ್ಪನೆಗಳ ಕೊಡುಗೆ ನೀಡಿದರು.

| | ಅರ್ಥಶಾಸ್ತ್ರ ವ್ಯಾಖ್ಯಾನ | ಅರ್ಥಶಾಸ್ತ್ರಜ್ಞರು | ಪ್ರಸಿದ್ಧ ಗ್ರಂಥ | ವರ್ಷ | ಅಧ್ಯಯನ ವಸ್ತು |
|---|---|---|---|---|---|
| 1 | ಸಂಪತ್ತಿನ ವ್ಯಾಖ್ಯೆ | ಆಡಂ ಸ್ಮಿತ್ | Wealth of Nations | 1776 | ಸಂಪತ್ತಿನ ಗಳಿಕೆ & ವಿತರಣೆ |
| 2 | ಯೋಗಕ್ಷೇಮ ವ್ಯಾಖ್ಯೆ | ಆಲ್ಫ್ರೆಡ್ ಮಾರ್ಷಲ್ | Principles of Economics | 1890 | ಮಾನವನ ಕಲ್ಯಾಣ |
| 3 | ಕೊರತೆ/ವಿರಳತೆ ವ್ಯಾಖ್ಯಾನ | ಲಿಯೋನಲ್ ರಾಬಿನ್ಸ್ | An Essay on Nature and Signi ficance of Economic Science | 1932 | ಆಯ್ಕೆ ಮತ್ತು ಕೊರತೆ ಸಮಸ್ಯೆ |
| 4. | ಬೆಳವಣಿಗೆ ಆಧಾರಿತ ವ್ಯಾಖ್ಯೆ | ಜೆ.ಎಮ್ ಕೇನ್ಸ್ ಮತ್ತು ಪಿ.ಎ. ಸ್ಯಾಮ್ಯುಯಲ್ಸನ್ | General Theory of Employment, Interest and Money | 1936 | ಬೆಳವಣಿಗೆ ಗುರಿ ನಿರ್ಧಾರ |

### ಕೌಟಿಲ್ಯನ ಅರ್ಥಶಾಸ್ತ್ರ:-




✦ ಕೌಟಿಲ್ಯನ ಅರ್ಥಶಾಸ್ತ್ರವು ಆರ್ಥಿಕ ನೀತಿಯ ಬಗ್ಗೆ ತಿಳಿಸುವಂತಹ ಪ್ರಾಚೀನ ಭಾರತೀಯ ಶಾಸ್ತ್ರ ಗ್ರಂಥವಾಗಿದೆ. ಕೌಟಿಲ್ಯ ನನ್ನು **ವಿಷ್ಣುಗುಪ್ತ, ಚಾಣಕ್ಯ** ಎಂದು ಕೂಡ ಕರೆಯುತ್ತಾರೆ. ವಿಷ್ಣುಗುಪ್ತನು ತಕ್ಷಶಿಲೆ ವಿಶ್ವವಿದ್ಯಾಲಯದಲ್ಲಿ ಅರ್ಥಶಾಸ್ತ್ರ ಪ್ರಾಧ್ಯಾಪಕನಾಗಿದ್ದನು. ಕೌಟಿಲ್ಯನನ್ನು **ಭಾರತೀಯ ಅರ್ಥಶಾಸ್ತ್ರದ ಪಿತಾಮಹ** ಎಂದು ಕರೆಯಲಾಗುತ್ತದೆ.




✦ ಮೈಸೂರಿನಲ್ಲಿರುವ ಓರಿಯಂಟಲ್ ಗ್ರಂಥಾಲಯ ದಲ್ಲಿದ್ದ ಕೌಟಿಲ್ಯನ ಅರ್ಥಶಾಸ್ತ್ರ (ಸಂಸ್ಕೃತ) ವನ್ನು ಅಂದಿನ ಗ್ರಂಥ ಪಾಲಕರಾಗಿದ್ದ **ಆರ್. ಶಾಮಾಶಾಸ್ತ್ರಿಗಳು** ಪತ್ತೆ ಹಚ್ಚಿ ಅದನ್ನು 1909 ರಲ್ಲಿ ಇಂಗ್ಲೀಷ್‌ಗೆ ಭಾಷಾಂತರಿಸಿದರು.

### ಅರ್ಥಶಾಸ್ತ್ರ ಪದದ ಮೊದಲ ಬಳಕೆ: ಆಲ್ಫ್ರೆಡ್ ಮಾರ್ಷಲ್



➤ **ಅರ್ಥಶಾಸ್ತ್ರ** ಎಂಬ ಪದವನ್ನು ಮೊದಲ ಬಾರಿಗೆ ಬಳಕೆ ಮಾಡಿದ ಬ್ರಿಟಿಷ್ ಅರ್ಥಶಾಸ್ತ್ರಜ್ಞರಾಗಿದ್ದಾರೆ.

➤ ಇವರು ಬರೆದ ಪ್ರಮುಖ ಪುಸ್ತಕ Principles of Economics(1890), Economics of Industries

➤ ಆಲ್ಫ್ರೆಡ್ ಮಾರ್ಷಲ್ ಅವರು ಮೊದಲ ಬಾರಿಗೆ ಪೂರೈಕೆ & ಬೇಡಿಕೆ, ಪೂರೈಕೆ ಪರಿಮಿತಿ ಪ್ರಯೋಜನ & ಉತ್ಪಾದನೆಯ ಖರ್ಚು ವಿಚಾರಗಳನ್ನು ಇವರು ಬರೆದ ಪುಸ್ತಕದಲ್ಲಿ ಪ್ರಸ್ತಾಪಿಸಿದ್ದಾರೆ. ಇವರನ್ನು **ಸೂಕ್ಷ್ಮ ಅರ್ಥಶಾಸ್ತ್ರದ ಅಗ್ರಗಣ್ಯ** & **ನವ ಸಾಂಪ್ರದಾಯಿಕ ವ್ಯಾಖ್ಯಾನದ ಪಿತಾಮಹ** ಎನ್ನುವರು.

### ಅರ್ಥಶಾಸ್ತ್ರ ಬೈಬಲ್ - General Theory of Employment, interest & money(1936)



ಈ ಗ್ರಂಥವನ್ನು **ಅರ್ಥಶಾಸ್ತ್ರದ ಬೈಬಲ್** ಎನ್ನುವರು. ಈ ಕೃತಿಯನ್ನು ಬ್ರಿಟಿಷ್ ಅರ್ಥಶಾಸ್ತ್ರಜ್ಞ **ಜಾನ್ ಮೆನಾರ್ಡ್‌ಕೀನ್ಸ್** ರವರು ಬರೆದಿದ್ದಾರೆ. ಇವರು ಆರ್ಥಿಕ ಚಟುವಟಿಕೆಗಳಲ್ಲಿ ಸರ್ಕಾರದ ಹಸ್ತಕ್ಷೇಪ ಅನಿವಾರ್ಯ ಎಂದು ಪ್ರತಿಪಾದಿಸಿದರು. ಬೆಳವಣಿಗೆ ಆಧಾರಿತ ವ್ಯಾಖ್ಯಾನ ನೀಡಿದರು.

### ಆಕ್ಸ್‌ಫರ್ಡ್ ರಿವ್ಯೂ ಆಫ್ ಎಕನಾಮಿಕ್ ಪಾಲಿಸಿ:-

✦ ಅರ್ಥಶಾಸ್ತ್ರ ವಿಷಯದ ತ್ರೈಮಾಸಿಕ ಜಾಗತಿಕ ಮಟ್ಟದ ಜರ್ನಲ್ ಆಗಿದೆ.

✦ ಸೂಕ್ಷ್ಮ & ಸಮಗ್ರ ಅರ್ಥಶಾಸ್ತ್ರಗಳ ನಡುವೆ ಸಮತೋಲನ ತರುವ ಹಾಗೂ ಆರ್ಥಿಕ ಸಮಸ್ಯೆಗಳ ಬಗೆಗೆ ಮೌಲ್ಯಮಾಪನ ಮಾಡಿ, ರಚಿಸಿದ ವಿವಿಧ ಲೇಖನಗಳನ್ನು ಪ್ರಕಟಪಡಿಸುತ್ತದೆ.

✦ 1985 ರಿಂದ ಈ ಜರ್ನಲ್ ಪ್ರಕಟಗೊಳ್ಳುತ್ತಿದೆ.

### ವರ್ಲ್ಡ್ ಎಕನಾಮಿಕ್ ಔಟ್‌ಲುಕ್ (WEO):-

ಇದು ಒಂದು ಅಕಾಡೆಮಿಕ್ ಜರ್ನಲ್ ಆಗಿದ್ದು, **ಅಂತರಾಷ್ಟ್ರೀಯ ಹಣಕಾಸು ನಿಧಿ** ವಾರ್ಷಿಕವಾಗಿ 180 ಕ್ಕಿಂತ ಹೆಚ್ಚು ರಾಷ್ಟ್ರಗಳ ಸಮೀಕ್ಷೆ ಮಾಡಿ ಜಾಗತಿಕ, ಆರ್ಥಿಕ ಏರಿಳಿತಗಳನ್ನು ಪ್ರಕಟಪಡಿಸುತ್ತದೆ.




ಇದು ಅಲ್ಪಾವಧಿ, ಮಧ್ಯಮಾವಧಿ & ಮುಂದಿನ 4 ವರ್ಷಗಳ ವಿಶ್ವದ ಆರ್ಥಿಕ ಪ್ರವೃತ್ತಿಗಳನ್ನು ಅಂದಾಜಿಸುತ್ತದೆ.

ಸಮಗ್ರ ಆರ್ಥಿಕ ಸೂಚಕಗಳಾದ ಒಟ್ಟು ದೇಶೀಯ ಉತ್ಪನ್ನ, ಹಣದುಬ್ಬರ, ಚಾಲ್ತಿ ಖಾತೆ, ರಾಜ್ಯ ಕೋಶ ಸಮತೋಲನ & ಇತರೆ ಆರ್ಥಿಕ ವಿಚಾರಗಳ ಮುಂದಿನ ಅಂದಾಜು ಮಾಹಿತಿ ವ್ಯಕ್ತಿ ಪಡಿಸುತ್ತದೆ.

## ಅಂಬೇಡ್ಕರ್ ಸ್ಕೂಲ್ ಆಫ್ ಎಕನಾಮಿಕ್ಸ್ ಆರಂಭ – ಬೆಂಗಳೂರು

ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್‌ನಲ್ಲಿ ಮೊದಲ ಪದವಿಯನ್ನು ಪಡೆದ ಭಾರತೀಯ **ಡಾ.ಬಿ.ಆರ್.ಅಂಬೇಡ್ಕರ್**. ಆದ್ದರಿಂದ ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್ ಮಾದರಿಯಲ್ಲಿ ರಾಜ್ಯದಲ್ಲಿ ಉನ್ನತ ಅಧ್ಯಯನ ಸಂಸ್ಥೆಯನ್ನು ಬೆಂಗಳೂರು ವಿ.ವಿ. ಯ ಜ್ಞಾನಭಾರತಿ ಆವರಣದಲ್ಲಿ **ಡಾ.ಬಿ.ಆರ್.ಅಂಬೇಡ್ಕರ್ ಅವರ ಜನ್ಮ ದಿನಾಚರಣೆಯಾದ ಏಪ್ರಿಲ್ 14 ರಂದು** 2017–18 ರ ಶೈಕ್ಷಣಿಕ ವರ್ಷ ಪ್ರಾರಂಭಿಸಲಾಯಿತು. 43.35 ಎಕರೆಯಲ್ಲಿ ಆರಂಭದಲ್ಲಿ ರಾಜ್ಯ ಸರ್ಕಾರವು 17ಕೋಟಿ ವೆಚ್ಚ ಮಾಡುತ್ತಿದ್ದು, ನಂತರ 90 ಕೋಟಿಯನ್ನು ಕಟ್ಟಡಕ್ಕಾಗಿ ಒದಗಿಸಲಿದೆ. ಇದಲ್ಲದೇ ನಿರ್ವಹಣೆಗೆಂದು ಖಾಸಗಿ ಸಂಸ್ಥೆಗಳಿಂದಲೂ ಕೂಡ ಅನುದಾನ ಲಭಿಸಲಿದೆ. ವಿಶೇಷ ಅಧಿಕಾರಿಯಾಗಿ **ಅನೂಪ್ ಕೆ. ಪೂಜಾರಿ** ಅವರನ್ನು 2 ವರ್ಷದ ಅವಧಿಗೆ ನೇಮಿಸಲಾಗಿದೆ. & 150 ಕೋಟಿ ರೂ. ವೆಚ್ಚದಲ್ಲಿ ಸಂಸ್ಥೆಯ ಯೋಜನೆಯನ್ನು ರೂಪಿಸಲಾಗಿದೆ. ಸಾಮಾಜಿಕ ಸಮಾನತೆಯನ್ನು ಉತ್ತೇಜಿಸಲು & ಉನ್ನತ ಅಧ್ಯಯನಕ್ಕಾಗಿ ಪ.ಜಾತಿ/ಪ.ಪಂ.ದ ಜನರನ್ನು ಪ್ರೋತ್ಸಾಹಿಸಲು ದಾಖಲಾತಿಯಲ್ಲಿ ಸಂವಿಧಾನದಲ್ಲಿ ನೀಡಿದ ಮೀಸಲಾತಿಗಿಂತ ಹೆಚ್ಚು ಅಂದರೆ 30% ರಷ್ಟು ಮೀಸಲಾತಿ ಕೊಡಲು ತೀರ್ಮಾನಿಸಲಾಗಿದೆ.



### ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್ (LSE):-

**ಸ್ಥಾಪನೆ:–** 1895, **ಕೇಂದ್ರ ಕಛೇರಿ:–** ಇಂಗ್ಲೆಂಡ್‌ನ ಲಂಡನ್

**ಸ್ಥಾಪಕರು:–** ಫೇಬಿಯನ್ ಸಮಾಜವಾದದ ಸಿಡ್ನಿ ವೆಬ್ ಗ್ರಹಾಂ ವಾಲಾಸ್, ಜಾರ್ಜ್ ಬರ್ನಾರ್ಡ್ ಷಾ, ಬಿಯಟ್ರಿಸ್ ವೆಬ್

**ಸಂಸ್ಥೆ:–** ಸಾರ್ವಜನಿಕ ಸಂಶೋಧನಾ ವಿ.ವಿ. ಯಾಗಿದ್ದು, "To know the Causes of Things" ಧ್ಯೇಯವಾಕ್ಯವಾಗಿದೆ.

**ಪ್ರಸ್ತುತ ಮುಖ್ಯಸ್ಥರು:–** ಅಲನ್ ಎಲಿಯಾಸ್, **ಪ್ರಸ್ತುತ ನಿರ್ದೇಶಕರು:–** ಡೇಮ್ ನೆಮಾಟ್ ಷಫೀಕ್

**ಹಿನ್ನಲೆ:–** 1900 ರಲ್ಲಿ ಲಂಡನ್ ವಿ.ವಿ. ಜೊತೆಯಲ್ಲಿದ್ದು, 1901 ರಿಂದ ವಿ.ವಿ. ಸ್ಥಾನಮಾನ ಪಡೆದು, 2008 ರಿಂದ ಸ್ವತಂತ್ರವಾಗಿ ಪದವಿ ನೀಡುವ ಸಂಸ್ಥೆಯಾಗಿದೆ.

**ಈ ಸಂಸ್ಥೆಯಲ್ಲಿ ಅಧ್ಯಯನ ಮಾಡಿದ ಪ್ರಮುಖರು:–** ಕ್ಲೆಮೆಂಟ್ ಅಟ್ಲಿ, ಜೋಮೋ ಕೆ ನ್ಯಾಟೋ, ಬಿ.ಆರ್. ಅಂಬೇಡ್ಕರ್, ಮಾರ್ಗರೇಟ್–2, ಅಮರ್ತ್ಯಸೇನ್.

**ನೊಬೆಲ್ ಪ್ರಶಸ್ತಿ ಪಡೆದ ಪ್ರಮುಖರು:–** ಜಾರ್ಜ್ ಬರ್ನಾರ್ಡ್ ಷಾ (ಸಾಹಿತ್ಯ 1925), ಜಾನ್ ಹಿಕ್ಸ್ (ಅರ್ಥಶಾಸ್ತ್ರ 1972), ಫ್ರೆಡರಿಕ್ ಆಯೇಕ್, ಜೇಮ್ಸ್ ಮೀಡ್, ಆರ್ಥರ್ ಲೆವಿಸ್, ಅಮರ್ತ್ಯಸೇನ್, ರಾಬರ್ಟ್ ಮುಂಡೆಲ್, ಪಾಲ್ ಕ್ರೂಗ್‌ಮನ್, ಆಲಿವರ್ ಹಾರ್ಟ್ (2016), ಅರ್ಥಶಾಸ್ತ್ರ ವಿಷಯದಲ್ಲಿ ಪ್ರಶಸ್ತಿ ಪಡೆದವರು.

### 2017 ರ ವಿಶ್ವ ಅಭಿವೃದ್ಧಿ ವರದಿ (WDR) ಪ್ರಕಾರ - ವಿಶ್ವ ರಾಷ್ಟ್ರಗಳ ವರ್ಗೀಕರಣ:-

- ಅಂತರಾಷ್ಟ್ರೀಯ ಹಣಕಾಸು ಸಂಸ್ಥೆಯಾದ ವಿಶ್ವಬ್ಯಾಂಕ್(IBRD)ಪ್ರಕಟಪಡಿಸುವ ವಿಶ್ವ ಅಭಿವೃದ್ಧಿ ವರದಿ ಪ್ರಕಾರ ಜಗತ್ತಿನ ರಾಷ್ಟ್ರಗಳನ್ನು ತಲಾವಾರು ರಾಷ್ಟ್ರೀಯ ಆದಾಯ(GNI Percapita)ದ ಮೇರೆಗೆ ಈ ಕೆಳಗಿನಂತೆ ವರ್ಗೀಕರಿಸಿದೆ.
- 1,025 ಅಮೆರಿಕನ್ ಡಾಲರ್‌ಗಿಂತ ಕಡಿಮೆ ಆದಾಯ ಹೊಂದಿರುವ ರಾಷ್ಟ್ರಗಳನ್ನು **ಕಡಿಮೆ ಆದಾಯದ ರಾಷ್ಟ್ರಗಳು** (Low Income Countries)
- 1,026 ರಿಂದ 4,035 ಅಮೆರಿಕನ್ ಡಾಲರ್ ಆದಾಯ ಹೊಂದಿರುವ ರಾಷ್ಟ್ರಗಳನ್ನು **ಕಡಿಮೆ ಮಧ್ಯಮ ವರಮಾನ ಹೊಂದಿರುವ ರಾಷ್ಟ್ರಗಳು** (Lower Middle Income Countries) – **ಭಾರತ** ಈ ವರ್ಗೀಕರಣದಲ್ಲಿ ಬರುತ್ತದೆ.
- 4,036 ರಿಂದ 12,475 ಅಮೆರಿಕನ್ ಡಾಲರ್ ಆದಾಯ ಹೊಂದಿರುವ ರಾಷ್ಟ್ರಗಳನ್ನು **ಹೆಚ್ಚು ಮಧ್ಯಮ ವರಮಾನ ಹೊಂದಿರುವ ರಾಷ್ಟ್ರಗಳು** (Upper Middle Income Countries)·
- 12,476 ಅಮೆರಿಕನ್ ಡಾಲರ್‌ಗಿಂತ ಹೆಚ್ಚು ಆದಾಯ ಹೊಂದಿರುವ ರಾಷ್ಟ್ರಗಳನ್ನು **ಹೆಚ್ಚು ವರಮಾನ ಹೊಂದಿರುವ ರಾಷ್ಟ್ರಗಳು** (High Income Countries) ಎಂದು ವರ್ಗೀಕರಿಸಲಾಗಿದೆ.

# ಅರ್ಥಶಾಸ್ತ್ರದಲ್ಲಿ ನೊಬೆಲ್ (Nobel Prize in Economics)

ಸ್ಥಾಪನೆ ಹಿನ್ನೆಲೆ:



✦ ಅರ್ಥಶಾಸ್ತ್ರ ವಿಭಾಗದ ನೊಬೆಲ್ ಪ್ರಶಸ್ತಿಯನ್ನು ಸ್ಥಾಪಿಸುವಂತೆ ಆಲ್ಫ್ರೆಡ್ ನೊಬೆಲ್‌ರವರು 1895ರಲ್ಲಿ ಬರೆದಿದ್ದ ಉಯಿಲಿನಲ್ಲಿ ಬರೆದಿರಲಿಲ್ಲ. ಸ್ವೀಡನ್ ದೇಶದ ಅತಿ ಹಳೆಯ ಬ್ಯಾಂಕ್ ಆದ **ಸ್ವೀಡಿಶ್ ನ್ಯಾಷ್‌ನಲ್ ಬ್ಯಾಂಕ್** (Sveriges Riks Bank) ತನ್ನ 300ನೇ ವರ್ಷಾಚರಣೆಯಾದ 1968–69 ರಲ್ಲಿ ಅರ್ಥಶಾಸ್ತ್ರದಲ್ಲಿ ಅದ್ವಿತೀಯ ಸಾಧನೆ ಮಾಡಿದ ಸಾಧಕರಿಗೆ ಪ್ರತಿವರ್ಷ ಪ್ರಶಸ್ತಿ ನೀಡುವ ಉದ್ದೇಶದಿಂದ "Sveriges Riksbank Prize in Economic Sciences in Memory of Alfred Nobel" ಎಂಬ ಪ್ರಶಸ್ತಿ ಸ್ಥಾಪಿಸಿದೆ.




✦ ಸ್ವೀಡನ್ ದೇಶದ ಸ್ಟಾಕ್‌ಹೋಂನಲ್ಲಿ ಆಲ್‌ಫ್ರೆಡ್ ನೊಬೆಲ್‌ರವರ ಪುಣ್ಯ ತಿಥಿಯಾದ ಡಿಸೆಂಬರ್ 10 ರಂದು ಪ್ರತಿ ವರ್ಷ ಪ್ರದಾನ ಮಾಡಲಾಗುತ್ತದೆ.

✦ ಅರ್ಥಶಾಸ್ತ್ರ ವಿಭಾಗದ ನೊಬೆಲ್ ಪ್ರಶಸ್ತಿ ಮೊತ್ತ:– 80ಲಕ್ಷ ಸ್ವೀಡನ್ ಕ್ರೋನಾರ್ (6.18ಕೋಟಿ ರೂ)

**ಸ್ವೀಡಿಶ್ ನ್ಯಾಷನಲ್ ಬ್ಯಾಂಕ್ (Swedish National Bank)**

✦ ಇದನ್ನು **'Riks Bank'** ಎಂದು ಕರೆಯುತ್ತಾರೆ.
✦ ಇದು ಸ್ವೀಡನ್‌ನ ಸೆಂಟ್ರಲ್ ಬ್ಯಾಂಕ್ ಆಗಿದೆ.
✦ ನೆಗೆಟೀವ್ ಬಡ್ಡಿದರ ಜಾರಿಗೆ ತಂದ ಜಗತ್ತಿನ ಮೊದಲ ಬ್ಯಾಂಕ್
✦ ಇದು **ಜಗತ್ತಿನ ಅತಿ ಹಳೆಯ ಸೆಂಟ್ರಲ್** ಬ್ಯಾಂಕ್ ಆಗಿದೆ.
✦ ಪ್ರಸ್ತುತವಾಗಿ ಕಾರ್ಯ ನಿರ್ವಹಿಸುತ್ತಿರುವ ಜಗತ್ತಿನ 3ನೇ ಹಳೆಯ ಬ್ಯಾಂಕ್ ಆಗಿದೆ.

1901ರಿಂದ ನೊಬೆಲ್ ಪ್ರಶಸ್ತಿಯನ್ನು ಐದು ವಿಭಾಗಗಳಾದ **ಭೌತಶಾಸ್ತ್ರ, ರಸಾಯನಶಾಸ್ತ್ರ, ಸಾಹಿತ್ಯ, ವೈದ್ಯಕೀಯ ಹಾಗೂ ಶಾಂತಿ** ವಿಭಾಗದಲ್ಲಿ ಸಾಧನೆ ಮಾಡಿದ ಸಾಧಕರಿಗೆ ನೀಡಲಾಗುತ್ತಿತ್ತು. 1969ರಿಂದ **ಅರ್ಥಶಾಸ್ತ್ರ** ವಿಭಾಗದಲ್ಲಿ ಸಾಧನೆ ಮಾಡಿದ ಸಾಧಕರಿಗೆ ನೀಡುವ ಮೂಲಕ ಆರು ವಿಭಾಗಗಳ ಸಾಧಕರಿಗೆ ನೊಬೆಲ್ ಪ್ರಶಸ್ತಿ ನೀಡಲಾಗುತ್ತಿದೆ.

**ಅರ್ಥಶಾಸ್ತ್ರದ ಮೊದಲ ನೊಬೆಲ್ ಪ್ರಶಸ್ತಿ (First Nobel Prize in Economics)**

✦ ಡಚ್ ಅರ್ಥಶಾಸ್ತ್ರಜ್ಞ ಜಾನ್ ಟಿನ್‌ಬರ್ಜೆನ್ (Jan tinBergen) ಮತ್ತು ನಾರ್ವೆ ಅರ್ಥಶಾಸ್ತ್ರಜ್ಞ ರಾಗ್ನರ್ ಫ್ರಿಶ್ಚ್ (Ragnar Frisch)ರವರಿಗೆ "ಆರ್ಥಿಕ ಪ್ರಕ್ರಿಯೆ ವಿಶ್ಲೇಷಣೆಗಾಗಿ ಚಲನಾತ್ಮಕ ಮಾದರಿಯನ್ನು ಅಭಿವೃದ್ಧಿ ಪಡಿಸಿ ಮತ್ತು ಅನ್ವಯಿಸಿದ್ದಕ್ಕಾಗಿ" (For Having Developed and Applied Dynamic Models for the Analysis Economic Process) 1969ರಲ್ಲಿ ಅರ್ಥಶಾಸ್ತ್ರ ವಿಭಾಗದ ಮೊದಲ ನೊಬೆಲ್ ಪ್ರಶಸ್ತಿ ನೀಡಿ ಗೌರವಿಸಲಾಯಿತು.

**ಆಲ್ಫ್ರೆಡ್ ನೊಬೆಲ್ (Alfred Nobel):-**

ಜನನ:– 1833 ಅಕ್ಟೋಬರ್ 21



ಸ್ಥಳ:– ಸ್ವೀಡನ್‌ನ ಸ್ಟಾಕ್‌ಹೋಂ

ಮರಣ:– 1896 ಡಿಸೆಂಬರ್ 10

ಪ್ರಮುಖ ಕೊಡುಗೆ:- **ಜಿಲಾಟಿನ್ & ಡೈನಮೈಟ್‌ನ್ನು** ಕಂಡು ಹಿಡಿದಿದ್ದರು.

ಇಂಜಿನಿಯರ್ ಆಗಿ ವ್ಯವಹಾರೋದ್ಯಮಿ, ರಸಾಯನಶಾಸ್ತ್ರಜ್ಞ & ಸಂಶೋಧಕನಾಗಿದ್ದರು.

ತನ್ನ ಒಟ್ಟು ಆಸ್ತಿಯ ಶೇ 94 ರಷ್ಟು ಸ್ವೀಡಿಷ್ ಕ್ರೋನಾರ್‌ನ್ನು ಮೊದಲು 5 ವಿಭಾಗದ ನೊಬೆಲ್ ಪ್ರಶಸ್ತಿ ನೀಡಲು ಮೀಸಲಿರಿಸಿದರು.

**ಅರ್ಥಶಾಸ್ತ್ರ ವಿಭಾಗದಲ್ಲಿ ನೊಬೆಲ್ ಪ್ರಶಸ್ತಿ ಪಡೆದ ಪ್ರಮುಖರು**

ಪಾಲ್‌ಸ್ಯಾಮ್ಯುಯಲ್ಸನ್ (1970)
ಸೈಮನ್ ಕ್ಯುಜ್ನೆಟ್ಸ್ (1971)
ಕೆನೆತ್ ಹ್ಯಾರೋ (1972)
ಮಿಲ್ಟನ್ ಫ್ರೀಡ್ಮನ್ (1976)
ಆರ್ಥರ್ ಲೆವಿಸ್ (1979)
ಪಾಲ್‌ಕ್ರಗ್ಮನ್ (2008)
**ಎಲಿನೋರ್ ಆಸ್ಟ್ರೋಮ್**– ಅರ್ಥಶಾಸ್ತ್ರದಲ್ಲಿ ನೊಬೆಲ್ ಪ್ರಶಸ್ತಿ ಪಡೆದ ಮೊದಲ & ಏಕೈಕ ಮಹಿಳೆ – ಎಕನಾಮಿಕ್ ಗೌರ್ನೆನ್ಸ್ (2009)

# ಅರ್ಥಶಾಸ್ತ್ರದಲ್ಲಿ ನೊಬೆಲ್ ಪ್ರಶಸ್ತಿ ಪುರಸ್ಕೃತರಾದ ಪ್ರಮುಖರು



**ಸ್ವೀಡನ್ ದೇಶದ ಅರ್ಥಶಾಸ್ತ್ರಜ್ಞ ಗುನ್ನಾರ್ ಮಿರ್ಡಾಲ್:-**

✦ 1974ರಲ್ಲಿ ಅರ್ಥಶಾಸ್ತ್ರ ವಿಭಾಗದ ನೊಬೆಲ್ ಪ್ರಶಸ್ತಿಯನ್ನು ಸ್ವೀಡನ್ ದೇಶದ ಗುನ್ನಾರ್ ಮಿರ್ಡಾಲ್ ಮತ್ತು ಆಸ್ಟ್ರೀಯಾ ಮೂಲದ **ಫ್ರೆಡ್ರಿಕ್ ವಾನ್ ಹಾಯೆಕ್** ಅರ್ಥಶಾಸ್ತ್ರಜ್ಞರಿಗೆ ಹಣದ ಸಿದ್ಧಾಂತ ಮತ್ತು ಆರ್ಥಿಕ ವಿಚಲನತೆ ಮತ್ತು ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಥಿಕ ವಿದ್ಯಮಾನಗಳ ಅಂತರವಲಂಬನೆಯ ವಿಶ್ಲೇಷಣೆಗೆ ನೀಡಿದ ಕೊಡುಗೆಗಾಗಿ ನೀಡಲಾಗಿದೆ.

✦ ಇವರನ್ನು ಬಡತನದ ಅರ್ಥಶಾಸ್ತ್ರಜ್ಞ & ಆವರ್ತ ಯೋಜನೆಗಳ ಪಿತಾಮಹ ಎಂದು ಗುರುತಿಸಲಾಗಿದೆ.

**ಅರ್ಥಶಾಸ್ತ್ರದಲ್ಲಿ ನೊಬೆಲ್ ಪಡೆದ ಏಕೈಕ ಭಾರತೀಯ**

## ಅಮರ್ತ್ಯ ಸೇನ್



✦ 1998ರಲ್ಲಿ ಭಾರತೀಯ ಅರ್ಥಶಾಸ್ತ್ರಜ್ಞ ಅಮರ್ತ್ಯಸೇನ್ (Amartya Sen) ರವರು **"Welfare Economics(ಕಲ್ಯಾಣ ಅರ್ಥಶಾಸ್ತ್ರ)"** ಕ್ಷೇತ್ರಕ್ಕೆ ನೀಡಿರುವ ಕೊಡುಗೆಯನ್ನು ಪರಿಗಣಿಸಿ ನೊಬೆಲ್ ಪ್ರಶಸ್ತಿ ನೀಡಿ ಗೌರವಿಸಲಾಗಿದೆ.

✦ ಇವರಿಗೆ 1999ರಲ್ಲಿ ಭಾರತರತ್ನ ಪ್ರಶಸ್ತಿ ನೀಡಿ ಗೌರವಿಸಲಾಗಿದೆ.

✦ 2012 ರಲ್ಲಿ National Humanities Medal

✦ ಅಮರ್ತ್ಯಸೇನ್‌ರವರು **ಮಾನವ ಅಭಿವೃದ್ಧಿ ಸೂಚ್ಯಂಕ** (Human Development Index) ವನ್ನು ಪಾಕಿಸ್ತಾನದ ಅರ್ಥಶಾಸ್ತ್ರಜ್ಞ ಮಹಬೂಬ್ ಉಲ್‌ಹಕ್‌ರೊಂದಿಗೆ ಅಭಿವೃದ್ಧಿ ಪಡಿಸಿದರು.

✦ ಅಮರ್ತ್ಯಸೇನ್‌ರವರು ಕಲ್ಯಾಣ ಅರ್ಥಶಾಸ್ತ್ರ ಮತ್ತು "ಸಾಮಾಜಿಕ ಆಯ್ಕೆ"ಗಳ ಪ್ರತಿಪಾದನೆಗಳಲ್ಲಿ ಕೊಡುಗೆ ನೀಡಿದ್ದಾರೆ.

✦ **ಇವರ ಪ್ರಮುಖ ಕೃತಿಗಳು** – Poverty & Famines, Public Action, Development as Freedom, Inequality Re-examined, Commodities & capabilities, An Ethics & Economics, Identity & Voilence. etc.,

**ನೊಬೆಲ್ ಪ್ರಶಸ್ತಿ – 2015: ಆ್ಯಂಗಸ್ ಡೇಟನ್**



✦ ಸ್ಕಾಟ್‌ಲೆಂಡ್‌ನ ಅರ್ಥಶಾಸ್ತ್ರಜ್ಞ ಆ್ಯಂಗಸ್ ಡೇಟನ್ ಅವರು **ಅನುಭೋಗ,** ಬಡತನ ಮತ್ತು ಕಲ್ಯಾಣದ ಕುರಿತು ಅವರ ವಿಶ್ಲೇಷಣೆ (ಡೇಟನ್ ಪ್ಯಾರಾಡಾಕ್ಸ್) ಗಾಗಿ ಈ ಪ್ರಶಸ್ತಿಗೆ ಆಯ್ಕೆ ಮಾಡಲಾಗಿದೆ.

✦ ಡೇಟನ್‌ರವರ ಕಾರ್ಯವು ಪ್ರಮುಖವಾಗಿ ಮೂರು ಪ್ರಶ್ನೆಗಳ ಸುತ್ತ ವಿಕಸಿಸಿದೆ.

1) ಬಳಕೆದಾರರು ತಮ್ಮ ವೆಚ್ಚವನ್ನು ಹಂಚುವ ಬಗೆ ಹೇಗೆ?
2) ಸಮಾಜದ ಆದಾಯದಲ್ಲಿ ಎಷ್ಟು ಖರ್ಚಾಗುತ್ತದೆ ಮತ್ತು ಎಷ್ಟು ಉಳಿತಾಯವಾಗುತ್ತದೆ?
3) ಬಡತನ ಮತ್ತು ಕಲ್ಯಾಣವನ್ನು ನಾವು ಅಳೆಯುವುದು ಮತ್ತು ವಿಶ್ಲೇಷಿಸುವ ಬಗೆ ಹೇಗೆ?

**ನೊಬೆಲ್ ಪ್ರಶಸ್ತಿ – 2016:**



ಬ್ರಿಟಿಷ್ ಅಮೆರಿಕಾದ ಅರ್ಥಶಾಸ್ತ್ರಜ್ಞರಾದ **ಆಲಿವರ್ ಹಾರ್ಟ್ (Oliver Hart)** ಮತ್ತು ಫಿನ್‌ಲೆಂಡ್‌ನ **ಬೆಂಗ್ಟ್ ಹೋಮ್ಸ್ಟ್ರಮ್ (Bengt Holmstroom)** ಅವರಿಗೆ 2016ನೇ ಸಾಲಿನಲ್ಲಿ **ಗುತ್ತಿಗೆ ಸಿದ್ಧಾಂತ** (Contract Theory) ವನ್ನು ಅಭಿವೃದ್ಧಿ ಪಡಿಸಿರುವುದಕ್ಕಾಗಿ ನೊಬೆಲ್ ಪ್ರಶಸ್ತಿಗೆ ಭಾಜನರಾಗಿದ್ದಾರೆ. ಉನ್ನತ ಹುದ್ದೆಗಳಲ್ಲಿರುವ, ಕಾರ್ಯದಕ್ಷತೆ ಆಧರಿಸಿದ ವೇತನ, ವಿಮೆ, ಹಣ ಪಾವತಿ ಕಡಿತ & ಸರ್ಕಾರಿ ವಲಯದ ಉತ್ಪಾದನಾ ಚಟುವಟಿಕೆಗಳ ಖಾಸಗೀಕರಣ ಸೇರಿದಂತೆ ವೈವಿಧ್ಯಮಯ ವಿಷಯಗಳನ್ನು ವಿಶ್ಲೇಷಿಸುವ ಸಮಗ್ರ ವಿಧಾನವನ್ನು ಈ ಇಬ್ಬರು ಅರ್ಥಶಾಸ್ತ್ರಜ್ಞರು "ಗುತ್ತಿಗೆ ಸಿದ್ಧಾಂತ"ದಲ್ಲಿ ಅಭಿವೃದ್ಧಿ ಪಡಿಸಿದ್ದಾರೆ. ದಿವಾಳಿಗೆ ಸಂಬಂಧಿಸಿದ ಕಾನೂನುಗಳಿಂದ ಇಡಿದು ಇವರು ತಮ್ಮ ಗುತ್ತಿಗೆ ಸಿದ್ಧಾಂತದ ಮೂಲಕ ಭೌದ್ಧಿಕ ಅಡಿಪಾಯ ಹಾಕಿದ್ದಾರೆ.

# ಭಾರತದ ಆರ್ಥಿಕ ವಲಯಗಳು
# Sectors of the Indian Economy

ಭಾರತದಲ್ಲಿ ಆರ್ಥಿಕ ಚಟುವಟಿಕೆಗಳನ್ನು ಕೇಂದ್ರೀಯ ಸಾಂಖ್ಯಿಕ ಸಂಸ್ಥೆ (CSO) ಮೂರು ವಲಯಗಳಾಗಿ ವಿಂಗಡಿಸಲಾಗುತ್ತದೆ. ಅವುಗಳೆಂದರೆ

| ಪ್ರಾಥಮಿಕ/ಆದ್ಯತಾ ವಲಯ Primary Sector | ಮಾಧ್ಯಮಿಕ ವಲಯ Secondary Sector | ತೃತೀಯ/ಸೇವಾ ವಲಯ Tertiary/Service Sector |
|---|---|---|
| ಕೃಷಿ, ಅರಣ್ಯ, ಪಶುಪಾಲನೆ, ಮೀನುಗಾರಿಕೆ, ರೇಷ್ಮೆ, ನಾಟಾ ಕೃಗಳಿಕೆ, ಹೈನುಗಾರಿಕೆ,ಜೇಟೆಗಾರಿಕೆ, ಜೇನುಹುಳು ಸಾಕಾಣಿಕೆ | ಕೈಗಾರಿಕೆ, ಕಟ್ಟಡ ನಿರ್ಮಾಣ, ತಯಾರಿಕಾ ಕ್ಷೇತ್ರ, ವಿದ್ಯುಚ್ಛಕ್ತಿ, ಗಣಿಗಾರಿಕೆ, ಸಣ್ಣ ಮತ್ತು ಗುಡಿ ಕೈಗಾರಿಕೆ, ಸಹಕಾರಿ ಉದ್ಯಮ | ಶಿಕ್ಷಣ, ಆರೋಗ್ಯ, ಬ್ಯಾಂಕು, ವಿಮೆ, ಮಾಹಿತಿ ತಂತ್ರಜ್ಞಾನ, ಸಾರಿಗೆ ಸಂಪರ್ಕ, ಬಾಹ್ಯಾಕಾಶ, ಆಡಳಿತ, ಸಂಶೋಧನೆ, ವ್ಯಾಪಾರ, ವಾಣಿಜ್ಯ, ಮನರಂಜನೆ, ಕ್ರೀಡೆ, ಅಂಚೆ & ತಂತಿ |
| | ವಿಶೇಷತೆ | |
| ಹೆಚ್ಚು ಉದ್ಯೋಗಾವಕಾಶ | --- | ಹೆಚ್ಚು ಜಿಡಿಪಿಗೆ ಕೊಡುಗೆ |
| | ಉದ್ಯೋಗ (2015-16 ಆರ್ಥಿಕ ಸಮೀಕ್ಷೆ) | |
| 46.1% | 21.8% | 32.1% |
| | ಜಿ.ಡಿ.ಪಿ.ಗೆ ಕೊಡುಗೆ (2016 ರ ಪ್ರಕಾರ) | |
| 16.5% | 29.8% | 45.4% |

## ದಾದಾಬಾಯಿ ನವರೋಜಿ - ಭಾರತದ ವೃದ್ಧ ಪಿತಾಮಹ



ಭಾರತದ ರಾಜಕೀಯ & ಸಾಮಾಜಿಕ ನಾಯಕ, ತತ್ವಶಾಸ್ತ್ರಜ್ಞ, ಶೈಕ್ಷಣಿಕ ಚಿಂತಕ & ಅರ್ಥಶಾಸ್ತ್ರಜ್ಞ ದಾದಾಬಾಯಿ ನವರೋಜಿ ಅವರು 1825 ಸೆಪ್ಟೆಂಬರ್ 4 ರಂದು ಬಾಂಬೆಯಲ್ಲಿ ಜನಿಸಿದರು. **ಸಂಪತ್ತಿನ ಪ್ರವಾಹ ಸಿದ್ಧಾಂತ/ಆರ್ಥಿಕ ಪ್ರಸರಣಾ ಸಿದ್ಧಾಂತ/ಸಂಪತ್ತಿನ ಸೋರಿಕೆ ಸಿದ್ಧಾಂತ** (Drain Theory)ದ ಕರ್ತೃವಾದ ಇವರು ಬ್ರಿಟಿಷ್ ಭಾರತದಲ್ಲಿ ಭಾರತದ ಸಂಪತ್ತು ಇಂಗ್ಲೆಂಡ್‌ಗೆ ಹರಿದು ಹೋದ ಕಾರಣಗಳನ್ನು ಮೊದಲ ಬಾರಿಗೆ ಗುರ್ತಿಸಿದ್ದರು.

ಇಂಗ್ಲೆಂಡ್‌ನಲ್ಲಿ ಉಂಟಾದ ಕೈಗಾರಿಕಾ ಕ್ರಾಂತಿಯ ಫಲವಾಗಿ ಭಾರತೀಯ ವಸ್ತುಗಳು ಕಚ್ಚಾ ವಸ್ತುವಿನ ರೂಪದಲ್ಲಿ ಕಡಿಮೆ ಬೆಲೆಗೆ ಇಂಗ್ಲೆಂಡ್‌ಗೆ ರಫ್ತು ಆಗಿ, ಅಲ್ಲಿ ತಯಾರಿಸಲ್ಪಟ್ಟ ಸಿದ್ಧ ವಸ್ತುಗಳು ಭಾರತೀಯ ಮಾರುಕಟ್ಟೆಯಲ್ಲಿ ಹೆಚ್ಚಿನ ಬೆಲೆಗೆ ಮಾರಲ್ಪಟ್ಟವು. ಈ ಮೂಲಕ ಹೆಚ್ಚಿನ ಲಾಭ ಪಡೆದ ಬ್ರಿಟನ್ ವಸ್ತುಗಳು, ಬ್ರಿಟಿಷ್ ವಸ್ತುಗಳ ಮೇಲೆ ವಿಧಿಸುತ್ತಿದ್ದ ಕಡಿಮೆ ತೆರಿಗೆ, ಬ್ರಿಟಿಷ್ ಸೈನಿಕರು ಪಡೆಯುತ್ತಿದ್ದ ವೇತನ, ಪಿಂಚಣಿ, ಸಾಲದ ಬಡ್ಡಿ, ಆಡಳಿತ ವೆಚ್ಚ ಹೀಗೆ ಮುಂತಾದ ಮೂಲಗಳ ಮೂಲಕ ಭಾರತೀಯ ಸಂಪತ್ತು ಇಂಗ್ಲೆಂಡ್‌ಗೆ ಹರಿದು ಹೋಯಿತು. ಇವರು **ಭಾರತದಲ್ಲಿ ಮೊದಲ ಬಾರಿಗೆ 1868 ರಲ್ಲಿ ರಾಷ್ಟ್ರೀಯ ಆದಾಯವನ್ನು ಮಾಪನ ಮಾಡಿದ್ದು**, ಆಗ ಭಾರತೀಯರ ತಲಾ ವರಮಾನ ರೂ. 20 ಎಂದು ಅಂದಾಜಿಸಿದ್ದರು & 1867–68 ರಲ್ಲಿ ಜನಗಣತಿಯನ್ನು ನಡೆಸಿದ್ದರು. ದಾದಾಬಾಯಿ ನವರೋಜಿ ಅವರನ್ನು **"ಗ್ರ್ಯಾಂಡ್ ಓಲ್ಡ್ ಮ್ಯಾನ್ ಆಫ್ ಇಂಡಿಯಾ"** ಎಂದು ಕರೆಯುತ್ತಾರೆ. ಇವರು ಭಾರತದ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥಾಪಕರಲ್ಲಿ ಒಬ್ಬರಾಗಿದ್ದಾರೆ. 1886 ರಲ್ಲಿ ಕೋಲ್ಕತ್ತದಲ್ಲಿ ನಡೆದ 2ನೇ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷತೆ ವಹಿಸಿದ್ದರು. ಇವರು 1906 ರ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಾಗಿದ್ದ ಸಂದರ್ಭದಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಭಾರತೀಯ ಜನರ ಪ್ರಮುಖ ಉದ್ದೇಶವು ಸ್ವರಾಜ್ ಎಂಬುದಾಗಿ ಅಳವಡಿಸಿಕೊಂಡಿತು. ಈ ಸಂದರ್ಭದಲ್ಲಿ **"ಸ್ವರಾಜ್"** ಎಂಬ ಪದವನ್ನು ಮೊದಲ ಬಾರಿಗೆ ಅಂಗೀಕರಿಸಲಾಯಿತು. ಇವರು ಭಾರತದಿಂದ ಬ್ರಿಟಿಷ್ ಪಾರ್ಲಿಮೆಂಟ್‌ಗೆ ಆಯ್ಕೆಯಾದ ಏಷ್ಯಾದ ಮೊದಲ ವ್ಯಕ್ತಿ.

ಇವರ ಕೃತಿಗಳು:- **Poverty and Unbritish Rule in India - 1901**, Poverty of India - 1923, European & Asiatic Races - 1866

# ರಾಷ್ಟ್ರೀಯ ವರಮಾನ (National Income)

**ಒಂದು ದೇಶದ ಆರ್ಥಿಕಾಭಿವೃದ್ಧಿಯ ನೈಜ ಅಳತೆಗೋಲಾಗಿ ರಾಷ್ಟ್ರೀಯ ವರಮಾನವನ್ನು ಗುರ್ತಿಸಬಹುದು. ಆರ್ಥಿಕತೆಯ ವಿವಿಧ ವಲಯಗಳಾದ ಪ್ರಾಥಮಿಕ, ಮಾಧ್ಯಮಿಕ & ಸೇವಾ ವಲಯಗಳು ನಿರ್ದಿಷ್ಟ ವರ್ಷದಲ್ಲಿ ಉತ್ಪಾದನೆ ಮಾಡಲಾದ ಸರಕು ಸೇವೆಗಳ ಮೌಲ್ಯವನ್ನು ಪ್ರತಿನಿಧಿಸುವ ಜಿ.ಡಿ.ಪಿ ಅಥವಾ ಇನ್ನಿತರ ಪರಿಕಲ್ಪನೆಗಳನ್ನು ಹಾಗೂ ಅವುಗಳನ್ನು ಲೆಕ್ಕಾಚಾರ ಮಾಡುವ ಮಾಪನ ವಿಧಾನಗಳು & ಸಂಸ್ಥೆಗಳು ಭಾರತದಂತಹ ಆರ್ಥಿಕತೆಯಲ್ಲಿ ಅನುಭವಿಸುವಂತಹ ಮಾಪನದ ತೊಂದರೆಗಳು ಮುಂತಾದವುಗಳನ್ನು ಚರ್ಚಿಸಲಾಗಿದೆ.**

**ಅರ್ಥ:-** ಒಂದು ರಾಷ್ಟ್ರ ಒಂದು ನಿರ್ದಿಷ್ಟ ಅವಧಿಯಲ್ಲಿ ಉತ್ಪಾದಿಸಲಾದ ಎಲ್ಲಾ ಸರಕು ಮತ್ತು ಸೇವೆಗಳ ಅಂತಿಮ ಮಾರುಕಟ್ಟೆ ಮೌಲ್ಯವೇ ರಾಷ್ಟ್ರೀಯ ವರಮಾನ.

**ಉತ್ಪಾದನಾ ವೆಚ್ಚದಲ್ಲಿ ರಾಷ್ಟ್ರೀಯ ವರಮಾನ** = ಮಾರುಕಟ್ಟೆ ಬೆಲೆಗಳಲ್ಲಿ ರಾಷ್ಟ್ರೀಯ ವರಮಾನ – ಪರೋಕ್ಷ ತೆರಿಗೆಗಳು + ಸಹಾಯಧನ.

**ಮಾರುಕಟ್ಟೆ ಬೆಲೆಗಳಲ್ಲಿ ರಾಷ್ಟ್ರೀಯ ವರಮಾನ** = ಉತ್ಪಾದನಾ ವೆಚ್ಚದಲ್ಲಿ ರಾಷ್ಟ್ರೀಯ ವರಮಾನ + ಪರೋಕ್ಷ ತೆರಿಗೆಗಳು – ಸಹಾಯಧನ.

### ಒಟ್ಟು ದೇಶೀಯ ಉತ್ಪನ್ನ - G.D.P - Gross Domestic Product:-

- ಒಂದು ನಿರ್ದಿಷ್ಟ ಅವಧಿಯಲ್ಲಿ ದೇಶದೊಳಗೆ ಉತ್ಪಾದನೆಯಾದ ಎಲ್ಲಾ ಸರಕು ಮತ್ತು ಸೇವೆಗಳ ಮೌಲ್ಯವನ್ನು ತಿಳಿಸುತ್ತವೆ. ಇದು ದೇಶದ ನೈಜ ಅಭಿವೃದ್ಧಿಯ ಸಾಮರ್ಥ್ಯವನ್ನು ಅಳತೆ ಮಾಡುತ್ತದೆ.
- **GDP = C + I + G + (x-m)**
- ಅಂದರೆ C ಅನುಭೋಗ ವೆಚ್ಚವನ್ನು, I ಹೂಡಿಕೆ ವೆಚ್ಚವನ್ನು, G ಸರ್ಕಾರಿ ವೆಚ್ಚವನ್ನು ಹಾಗೂ (x-m) ಗಳು ರಫ್ತು & ಆಮದುಗಳನ್ನು ಸೂಚಿಸುತ್ತದೆ.

### ನಿವ್ವಳ ದೇಶೀಯ ಉತ್ಪನ್ನ - NDP-Net Domestic Product:-

- ಜಿಡಿಪಿಯಲ್ಲಿ ಸವಕಳಿ ವೆಚ್ಚವನ್ನು ಕಳೆದಾಗ ಉಳಿಯುವುದು.
- **NDP = GDP - ಸವಕಳಿ ವೆಚ್ಚ**

### ಒಟ್ಟು ರಾಷ್ಟ್ರೀಯ ಉತ್ಪನ್ನ - GNP-Gross National Product:-

- ಜಿಡಿಪಿಯ ಜೊತೆಗೆ ನಿವ್ವಳ ರಫ್ತು ಗಳಿಕೆಗಳನ್ನು ಒಳಗೊಂಡಿರುವುದು (r-p). ಇದು ಜಿ.ಡಿ.ಪಿ ಗಿಂತ ವಿಶಾಲವಾದ ಪರಿಕಲ್ಪನೆಯಾಗಿದೆ.
- **GNP = GDP + r-p**
- r ರಫ್ತು ಸ್ವೀಕೃತಿ & p ಆಮದು ಪಾವತಿಗಳನ್ನು ತಿಳಿಸುತ್ತದೆ.

### ನಿವ್ವಳ ರಾಷ್ಟ್ರೀಯ ಉತ್ಪನ್ನ (NNP-Net National Product):-

- GNP ಯಲ್ಲಿ ಸವಕಳಿ ವೆಚ್ಚವನ್ನು ಕಳೆದಾಗ ಉಳಿಯುವುದು.
- **NNP = GNP - ಸವಕಳಿ ವೆಚ್ಚ**

### ನಾಮಮಾತ್ರ ರಾಷ್ಟ್ರೀಯ ವರಮಾನ (NNI-Nominal National Income):-

- ಪ್ರಸ್ತುತ ವರ್ಷದ ಬೆಲೆಗಳಲ್ಲಿ ರಾಷ್ಟ್ರೀಯ ವರಮಾನವನ್ನು ಮಾಪನ ಮಾಡುವುದು.

### ನೈಜ ರಾಷ್ಟ್ರೀಯ ವರಮಾನ (RNI-Real National Income):-

- ಆಧಾರ ವರ್ಷ/ಮೂಲವರ್ಷದ ಬೆಲೆಗಳಲ್ಲಿ ರಾಷ್ಟ್ರೀಯ ವರಮಾನ ಮಾಪನ ಮಾಡುವುದು. ದೇಶದಲ್ಲಿ 1948–49, 1960–61, 1970–71, 1980–81, 1993–94, 2004–05 ಹಾಗೂ **ಪ್ರಸ್ತುತ 2011–12** ನ್ನು ಆಧಾರ ವರ್ಷವನ್ನಾಗಿ ಬಳಕೆ ಮಾಡುತ್ತಿದೆ.

### ತಲಾ ವರಮಾನ Percapita Income:-

- ಒಟ್ಟು ರಾಷ್ಟ್ರೀಯ ವರಮಾನವನ್ನು ಆ ದೇಶದ ಜನಸಂಖ್ಯೆಯಿಂದ ಭಾಗಿಸಿದಾಗ ಬರುವ ಸರಾಸರಿ ಆದಾಯವೇ ತಲಾ ವರಮಾನ.

$$\text{ತಲಾ ವರಮಾನ} = \frac{\text{ಒಟ್ಟು ರಾಷ್ಟ್ರೀಯ ವರಮಾನ}}{\text{ಒಟ್ಟು ಜನಸಂಖ್ಯೆ}}$$

### GDP Deflator:-

- ಚಾಲ್ತಿ ವರ್ಷದ ಬೆಲೆಯಲ್ಲಿನ ಜಿಡಿಪಿ ಮತ್ತು ಆಧಾರ ವರ್ಷದ ಬೆಲೆಯಲ್ಲಿನ ಜಿಡಿಪಿಗಳ ನಡುವಿನ ಅನುಪಾತ.
- GDP Deflator ಎಂಬುದು ಪ್ರಮುಖ ಆರ್ಥಿಕ ಸೂಚಕವಾಗಿದ್ದು, ರಾಷ್ಟ್ರದ ಎಲ್ಲಾ ಸರಕು ಸೇವೆಗಳ ಬೆಲೆಗಳ ವರ್ತನೆಯನ್ನು ಅಧ್ಯಯನ ಮಾಡುತ್ತದೆ.

GDP Deflator ಒಂದಕ್ಕೆ ಸಮನಾಗಿದ್ದರೆ ಬೆಲೆಯಲ್ಲಿ ಏರಿಳಿತಗಳಾಗಿರುವುದಿಲ್ಲ.
GDP Deflator ಒಂದಕ್ಕಿಂತ ಹೆಚ್ಚಾಗಿದ್ದರೆ ಚಾಲ್ತಿ ವರ್ಷದಲ್ಲಿ ಬೆಲೆ ಏರಿಕೆಗೊಂಡಿದೆ.
GDP Deflator ಒಂದಕ್ಕಿಂತ ಕಡಿಮೆ ಇದ್ದರೆ ಬೆಲೆ ಇಳಿಕೆಯಾಗಿದೆ ಎಂದರ್ಥ.

## ಭಾರತದಲ್ಲಿ ರಾಷ್ಟ್ರೀಯ ವರಮಾನದ ಮಾಪನಗಳು

- 1867–68ರಲ್ಲಿ ದಾದಾ ಬಾಯಿ ನವರೋಜಿ ಅವರು ಮೊದಲ ಬಾರಿಗೆ ಲೆಕ್ಕಾಚಾರ ಮಾಡಿದರು.
- 1931–32ರಲ್ಲಿ ವಿ.ಕೆ.ಆರ್.ವಿ. ರಾವ್ ಅವರು ವೈಜ್ಞಾನಿಕವಾಗಿ ಅಧ್ಯಯನ ಮಾಡಿದ ವ್ಯಕ್ತಿ.
- 1949ರಲ್ಲಿ **ಪ್ರೊ|| ಪಿ.ಸಿ. ಮಹಲನೋಬಿಸ್** ನೇತೃತ್ವದ **'ರಾಷ್ಟ್ರೀಯ ಆದಾಯದ ಸಮಿತಿ'** ವರಮಾನವನ್ನು ಮಾಪನ ಮಾಡಿದ ಸಮಿತಿಯಾಗಿದೆ. ಇದರಲ್ಲಿ **ವಿ.ಕೆ. ಆರ್.ವಿ.ರಾವ್** ಮತ್ತು **ಡಿ.ಆರ್.ಗಾಡ್ಗೀಲ್** ಅವರು ಸದಸ್ಯರಾಗಿದ್ದರು.
- 1951 ರ **ಕೇಂದ್ರೀಯ ಸಾಂಖ್ಯಿಕ ಸಂಸ್ಥೆ (CSO)** ರಾಷ್ಟ್ರೀಯ ಆದಾಯವನ್ನು ಪ್ರಸ್ತುತ ಮಾಪನ ಮಾಡುತ್ತಿರುವ ಸರ್ಕಾರಿ ಸಂಸ್ಥೆಯಾಗಿದೆ.
- ಪ್ರಸ್ತುತ ಮಾಪನ ಮಾಡಲು ಅನುಸರಿಸುತ್ತಿರುವ ವಿಧಾನವೇ **GVA- Gross Value Added**

### ಒಟ್ಟು ಮೌಲ್ಯ ಸೇರ್ಪಡಿತ ವಿಧಾನ:-

- ಮಾರುಕಟ್ಟೆ ಬೆಲೆಗಳಲ್ಲಿ ರಾಷ್ಟ್ರೀಯ ವರಮಾನವನ್ನು ಮಾಪನ ಮಾಡುವಾಗ ಉತ್ಪಾದನಾ ವೆಚ್ಚದ ರಾಷ್ಟ್ರೀಯ ವರಮಾನದಲ್ಲಿ ಸಹಾಯಧನಗಳನ್ನು ಕಳೆದು ಪರೋಕ್ಷ ತೆರಿಗೆಗಳನ್ನು ಸೇರಿಸಿಕೊಳ್ಳಬೇಕು.
- **ಪ್ರಸ್ತುತ ಮಾಪನ ಮಾಡಲು ಅನುಸರಿಸುತ್ತಿರುವ ಆಧಾರ ವರ್ಷ : 2011–12**

- ಕರ್ನಾಟಕ ರಾಜ್ಯದ ಆದಾಯವನ್ನು "ಒಟ್ಟು ರಾಜ್ಯ ಆಂತರಿಕ ಉತ್ಪನ್ನ" (GSDP- Gross State Domestic Product) ಎನ್ನುತ್ತಾರೆ. ಇದನ್ನು **ಆರ್ಥಿಕ & ಸಾಂಖ್ಯಿಕ ನಿರ್ದೇಶನಾಲಯ** ಮಾಪನ ಮಾಡಿ ಪ್ರಕಟ ಪಡಿಸುತ್ತದೆ.

## ರಾಷ್ಟ್ರೀಯ ವರಮಾನದ ಮಾಪನಗಳು

ಸೈಮನ್ ಕ್ಯುಜ್ನೆಟ್ಸ್ ಅವರ ಪ್ರಕಾರ 3 ವಿಧಾನಗಳಲ್ಲಿ ರಾಷ್ಟ್ರೀಯ ವರಮಾನವನ್ನು ಮಾಪನ ಮಾಡಬಹುದು.

### 1) ವರಮಾನ ವಿಧಾನ (Income Method):-

- ಆರ್ಥಿಕತೆಯ ಉತ್ಪಾದನಾಂಗಗಳಾದ ಭೂಮಿ, ಶ್ರಮ, ಬಂಡವಾಳ ಸಂಘಟನೆಗಳು ಪಡೆದುಕೊಳ್ಳುವ ಪ್ರತಿಫಲಗಳಾದ ಗೇಣಿ, ಕೂಲಿ, ಬಡ್ಡಿ & ಲಾಭಗಳ ಒಟ್ಟು ಮೊತ್ತವೇ ರಾಷ್ಟ್ರೀಯ ಆದಾಯ. ಇದನ್ನು ಆದಾಯ ವಿಧಾನ ಎಂತಲೂ ಕರೆಯುತ್ತಾರೆ.
- **ರಾಷ್ಟ್ರೀಯ ವರಮಾನ = ಗೇಣಿ + ಕೂಲಿ + ಬಡ್ಡಿ + ಲಾಭ**

### 2) ವೆಚ್ಚದ ವಿಧಾನ (Expenditure Method):-

- ಅನುಭೋಗಿಗಳು ಮಾಡುವ ವೆಚ್ಚ, ಉದ್ಯಮ ವಲಯ ಮಾಡುವ ಬಂಡವಾಳ ಹೂಡಿಕಾ ವೆಚ್ಚ & ಸಾರ್ವಜನಿಕ ಕ್ಷೇತ್ರದ ಸರ್ಕಾರದ ವೆಚ್ಚ. ಮೂರನ್ನೂ ಒಟ್ಟು ಗೂಡಿಸಿದಾಗ ಲಭ್ಯವಾಗುವುದು ಎಂದರ್ಥ. ಇದನ್ನು ಖರ್ಚಿನ ವಿಧಾನ ಎಂತಲೂ ಕರೆಯುತ್ತಾರೆ.
- **ರಾಷ್ಟ್ರೀಯ ವರಮಾನ = ಅನುಭೋಗಿಗಳ ವೆಚ್ಚ + ಹೂಡಿಕೆ ವೆಚ್ಚ + ಸರ್ಕಾರದ ವೆಚ್ಚ**

### 3) ಉತ್ಪನ್ನ ವಿಧಾನ (Product Method):-

- ಒಂದು ನಿರ್ದಿಷ್ಟ ಅವಧಿಯಲ್ಲಿ ದೇಶದೊಳಗೆ ಉತ್ಪಾದನೆಯಾದ ಎಲ್ಲಾ ಸರಕು ಮತ್ತು ಸೇವೆಗಳ ಮೌಲ್ಯವನ್ನು ತಿಳಿಸುತ್ತವೆ.
- ಇದನ್ನು **ಅಂತಿಮ ಸರಕುಗಳ ವಿಧಾನ & ವರ್ಧಿತ ಮೌಲ್ಯ ವಿಧಾನ** ಎಂಬ ಎರಡು ವಿಧಾನಗಳಲ್ಲಿ ಮಾಪನ ಮಾಡಲಾಗುತ್ತಿದೆ.
- ಆದರೆ ಯಾವುದೇ ಆರ್ಥಿಕತೆಗಳಲ್ಲಿ ನಿರ್ದಿಷ್ಟ ವಿಧಾನದ ಮೂಲಕ ರಾಷ್ಟ್ರೀಯ ವರಮಾನವನ್ನು ಮಾಪನ ಮಾಡಲು ಸಾಧ್ಯವಾಗುವುದಿಲ್ಲ. ಕಾರಣ, ಆರ್ಥಿಕತೆಯಲ್ಲಿ ಎದುರಿಸುವ ಹಲವಾರು ಸಮಸ್ಯೆಗಳು. ಇವುಗಳನ್ನು ರಾಷ್ಟ್ರೀಯ ವರಮಾನ ಮಾಪನದ ತೊಂದರೆಗಳೆನ್ನಬಹುದು.

**ರಾಷ್ಟ್ರೀಯ ಆದಾಯವನ್ನು ಮಾಪನ ಮಾಡುವಾಗ ಎದುರಾಗುವ ಮುಖ್ಯ ತೊಂದರೆಗಳೆಂದರೆ –**

1. ವರ್ಗಾವಣೆ ಪಾವತಿಗಳು
2. ವಿದೇಶಿ ಉದ್ದಿಮೆಗಳ ಆದಾಯ
3. ಸಾಮಾನ್ಯ ಬೆಲೆ ಮಟ್ಟದಲ್ಲಿನ ಬದಲಾವಣೆ
4. ನಂಬಲರ್ಹ ದತ್ತಾಂಶಗಳ ಕೊರತೆ
5. ವೃತ್ತಿ ವೈಶಿಷ್ಟ್ಯತೆಯ ಅಭಾವ
6. ಕಾನೂನು ಬಾಹಿರ ಚಟುವಟಿಕೆಗಳ ಆದಾಯ
7. ಸರ್ಕಾರಿ ಸೇವೆಗಳು
8. ದ್ವಿಗಣನೆ ಸಮಸ್ಯೆ. ಮುಂತಾದವುಗಳು

## ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಪ್ರಮುಖಾಂಶಗಳು

- ಹಿಂದೂ ಆರ್ಥಿಕ ಬೆಳವಣಿಗೆ ದರ – ರಾಜ್ ಕೃಷ್ಣ
- ಸಂಪತ್ತಿನ ಪ್ರವಾಹ ಸಿದ್ಧಾಂತ (ಆರ್ಥಿಕ ಪ್ರಸರಣ ಸಿದ್ಧಾಂತ) – ದಾದಾಬಾಯಿ ನವರೋಜಿ
- ಲೊರೇಂಜ್ ರೇಖೆ **(Lorenz Curve)**– ಆದಾಯ ವಿತರಣೆ ಅಥವಾ ಸಂಪತ್ತಿನ ಹಂಚಿಕೆ (Max o Lorenz)
- ಗಿನಿ ಸಹಗುಣಾಂಕ – ಆದಾಯದ ಅಸಮಾನತೆ (ಮೌಲ್ಯ '0' ಆಗಿದ್ದರೆ ಪರಿಪೂರ್ಣ ಸಮಾನತೆಯನ್ನು '1' ಆಗಿದ್ದರೆ ಪರಿಪೂರ್ಣ ಅಸಮಾನತೆಯನ್ನು ತಿಳಿಸುತ್ತದೆ. ಅಂದರೆ ಮೌಲ್ಯ ಹೆಚ್ಚಾದಂತೆ ಅಸಮಾನತೆಯೂ ಹೆಚ್ಚಾಗುತ್ತದೆ)
- ಓಕುನ್ ನಿಯಮ–**(Okun's Law)** ನಿರುದ್ಯೋಗ ದರ & ಒಟ್ಟು ರಾಷ್ಟ್ರೀಯ ಉತ್ಪನ್ನದ ನಡುವಿನ ಸಂಬಂಧ.
- ಗ್ರೇಷಂ ನಿಯಮ – (Gresham's Law)-Bad Money Drives out good money
- **GDP Deflator** – ಸ್ಥಿರ ಬೆಲೆ ಮತ್ತು ಚಾಲ್ತಿ ಬೆಲೆಗಳ ಒಟ್ಟು ರಾಷ್ಟ್ರೀಯ ಉತ್ಪನ್ನದ ನಡುವಿನ ಅನುಪಾತ
- ಜೆ.ಬಿ. ಸೇ ನಿಯಮ **(J.B. Say`s Law)** – ಪೂರೈಕೆಯು ತನ್ನದೇ ಆದ ಬೇಡಿಕೆಯನ್ನು ಸೃಷ್ಟಿಸಿಕೊಳ್ಳುತ್ತದೆ.
- ಜೆ.ಎಂ. ಕೇನ್ಸ್ ನಿಯಮ – ಪೂರೈಕೆಯು ತನ್ನದೇ ಆದ ಬೇಡಿಕೆಯನ್ನು ಸೃಷ್ಟಿಸಿಕೊಳ್ಳುವಲ್ಲಿ ವಿಫಲವಾಗುತ್ತದೆ.
- ಸುಸ್ಥಿರ ಅಭಿವೃದ್ಧಿ / ಹಸಿರು ಅರ್ಥ ವ್ಯವಸ್ಥೆ (ಶ್ರೀಮತಿ ಬ್ರೆಟ್‌ಲ್ಯಾಂಡ್ ಪ್ರಕಾರ) – ಮುಂದಿನ ಪೀಳಿಗೆಯ ಅಗತ್ಯತೆಗಳೊಂದಿಗೆ ಯಾವುದೇ ಒಪ್ಪಂದ ಮಾಡಿಕೊಳ್ಳದೇ ಇಂದಿನ ಪೀಳಿಗೆಯ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವುದು.
- ನೆಹರೂ ಪ್ರಕಾರ – ವಿವಿಧೋದ್ದೇಶ ನದಿ ಕಣಿವೆ ಯೋಜನೆಗಳು ಆಧುನಿಕ ಭಾರತದ ದೇವಾಲಯಗಳು.
- ಗ್ಲೋಕಲೈಸೇಷನ್ – Think Globaly, Act Personally (ಜಾಗತಿಕವಾಗಿ ಚಿಂತಿಸಿ, ವೈಯಕ್ತಿಕವಾಗಿ ವರ್ತಿಸಿ)
- ಸಮಾಂತರ ಅರ್ಥವ್ಯವಸ್ಥೆ/ಕಪ್ಪು ಹಣದ ಅರ್ಥವ್ಯವಸ್ಥೆ **(Parallel / Black Money Economy)** – ಅರ್ಥವ್ಯವಸ್ಥೆಯಲ್ಲಿ ಏಕ ಕಾಲದಲ್ಲಿ ಕಪ್ಪು ಹಣ & ಬಿಳಿ ಹಣಗಳು ಅಸ್ತಿತ್ವದಲ್ಲಿರುವುದು.
- ಫಿಲಿಪ್ಸ್ ವಕ್ರ ರೇಖೆ **(Philip`s Curve)**:– ಹಣದುಬ್ಬರ & ನಿರುದ್ಯೋಗ ದರದ ನಡುವಿನ ಸಂಬಂಧ ತಿಳಿಸುವುದು.
- ಲ್ಯಾಫರ್ ವಕ್ರ ರೇಖೆ **(Laffer Curve)**:– ತೆರಿಗೆ ದರ & ತೆರಿಗೆ ಆದಾಯದ ನಡುವಿನ ಸಂಬಂಧ ತಿಳಿಸುವುದು.
- ಏಂಜಲ್ ವಕ್ರ ರೇಖೆ **(Engel`s Curve)**:– ಆದಾಯ & ಅನುಭೋಗದ ನಡುವಿನ ಸಂಬಂಧ ತಿಳಿಸುವುದು.
- ಸಾಧ್ಯತಾ ವಕ್ರ ರೇಖೆ **(Posibility Curve)**:– ಉದ್ದಿಮೆದಾರರ ಲಾಭ & ಸಿಬ್ಬಂದಿಯ ವೆಚ್ಚದ ನಡುವಿನ ಸಂಬಂಧ ತಿಳಿಸುವುದು.
- ಔದಾಸೀನ್ಯ ವಕ್ರ ರೇಖೆ **(Indifference Curve)**:– ಒಂದೇ ಮಟ್ಟದ ತೃಪ್ತಿಯನ್ನು ನೀಡುವ ಎರಡು ಸರಕುಗಳ ಬೇರೆ ಬೇರೆ ಸಂಯೋಜನೆಗಳನ್ನು ಪ್ರತಿನಿಧಿಸುವ ರೇಖೆ.
- ಸಮ ಉತ್ಪನ್ನ ರೇಖೆ **(Iso-quant Curve)**:– ಒಂದೇ ಮಟ್ಟದ ಉತ್ಪನ್ನವನ್ನು ನೀಡುವ ಎರಡು ಉತ್ಪಾದನಾಂಗಗಳ ಬೇರೆ ಬೇರೆ ಸಂಯೋಜನೆಗಳನ್ನು ಪ್ರತಿನಿಧಿಸುವ ರೇಖೆ.
- **J** ವಕ್ರ ರೇಖೆ **(J. Curve)**:– ರೂಪಾಯಿ ಅಪಮೌಲ್ಯೀಕರಣದಿಂದ ಪಾವತಿ ಶಿಲ್ಕು ಅಲ್ಪಾವಧಿಯಲ್ಲಿ ಪ್ರತಿಕೂಲವಾಗಿ ದೀರ್ಘಾವಧಿಯಲ್ಲಿ ಅನುಕೂಲಕರ ಸ್ಥಿತಿಗೆ ಬರುವುದನ್ನು ತಿಳಿಸುತ್ತದೆ.
- ಯೂಲರ್ ಸಿದ್ಧಾಂತ **(Euler Theorem)**:– ಆದಾನ ಘಟಕಗಳ ಪ್ರಮಾಣ & ಉತ್ಪನ್ನದ ಪ್ರಮಾಣದ ನಡುವಿನ ಸಂಬಂಧ ತಿಳಿಸುವುದು.

### ಭಾರತದ ಆರ್ಥಿಕ ವರ್ಷ (Fiscal year in India)

- ಭಾರತದ ಆರ್ಥಿಕ ವರ್ಷವು ಆರಂಭವಾಗುವುದು ಪ್ರತಿ ವರ್ಷದ **ಏಪ್ರಿಲ್ 1ರಿಂದ ಮುಂಬರುವ ವರ್ಷದ ಮಾರ್ಚ್ 31**ರವರೆಗಿನ ಅವಧಿಯಾಗಿರುತ್ತದೆ. ಇದನ್ನು **'ಬಜೆಟ್ ವರ್ಷ/ಹಣಕಾಸಿನ ವರ್ಷ/ ಆಯವ್ಯಯದ ವರ್ಷ'** ಎನ್ನುವರು. (ಶಂಕರ ಆಚಾರ್ಯ ಸಮಿತಿ ಆರ್ಥಿಕ ವರ್ಷ ಬದಲಾವಣೆಗೆ ಸಂಬಂಧಿಸಿದಂತೆ ನೇಮಕ)
- ವಿಮಾ ವರ್ಷ:– ಜೂನ್ 1 ರಿಂದ ಮೇ 31ರವರೆಗಿನ ಅವಧಿ
- ಆರ್‌ಬಿಐನ ಹಣಕಾಸು ವರ್ಷ: ಜುಲೈ 1 ರಿಂದ ಜೂನ್ 30 ವರೆಗಿನ ಅವಧಿ.
- ಭಾರತದಲ್ಲಿ ಆರ್ಥಿಕ ವರ್ಷವನ್ನು ನಿರ್ಧಾರ ಮಾಡುವುದು – **ಸಾಂಖ್ಯಿಕ & ಕಾರ್ಯಕ್ರಮ ಅನುಷ್ಠಾನ ಸಚಿವಾಲಯ**

# ಆರ್ಥಿಕತೆಯ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ಸಮಿತಿಗಳು

ಭಾರತದ ಆರ್ಥಿಕತೆಯಲ್ಲಿ ಸ್ವಾತಂತ್ರ್ಯಾನಂತರ ವಿವಿಧ ಕ್ಷೇತ್ರಗಳ ಅಭಿವೃದ್ಧಿಗಾಗಿ ಕೇಂದ್ರ ಸರ್ಕಾರವು ಹಲವಾರು ಸಮಿತಿಗಳನ್ನು ನೇಮಿಸಿದ್ದು, ಸಮಿತಿಗಳು ಕೂಲಂಕಷವಾಗಿ ಸಂಬಂಧಿಸಿದ ಕ್ಷೇತ್ರಗಳ ಬಗ್ಗೆ ಅಧ್ಯಯನ ನಡೆಸಿ ಶಿಫಾರಸ್ಸು ನೀಡಿರುತ್ತಾರೆ. ಅಂತಹ ಶಿಫಾರಸ್ಸಿನ ಅನ್ವಯ ಸ್ಥಾಪನೆಯಾದ ವಿವಿಧ ಹಣಕಾಸು ಸಂಸ್ಥೆಗಳು & ಕ್ಷೇತ್ರಗಳ ಪ್ರಗತಿಯ ವಿಚಾರವನ್ನು ಈ ಕೆಳಗಿನಂತೆ ಪಟ್ಟಿ ಮಾಡಲಾಗಿದೆ.

| ಸಮಿತಿಗಳು | ವಿಷಯಗಳು |
|---|---|
| ಅಬಿದ್ ಹುಸೇನ್ | ಸಣ್ಣ ಕೈಗಾರಿಕೆಗಳು (1997) |
| ನಂಜುಂಡಪ್ಪ | ಪ್ರಾದೇಶಿಕ ಅಸಮಾನತೆ ನಿವಾರಣೆ (2000) |
| ಮಲ್ಹೋತ್ರ | ವಿಮಾ ಕ್ಷೇತ್ರ (1993) – ಇದು ಐ.ಆರ್.ಡಿ.ಎ.ಐ ಸ್ಥಾಪನೆಗೆ ಶಿಫಾರಸ್ಸು |
| ಮಹಾಜನ್ | ಸಕ್ಕರೆ ಕೈಗಾರಿಕೆ (1997) |
| ನರಸಿಂಹನ್ | ಬ್ಯಾಂಕಿಂಗ್ / ಹಣಕಾಸು ವಲಯದ ಸುಧಾರಣೆ (1991 & 1998) |
| ವೈದ್ಯನಾಥನ್ | ಸಹಕಾರಿ ಕ್ಷೇತ್ರ |
| ವಿಜಯ್ ಕೇಲ್ಕರ್ | ತೆರಿಗೆ ಸುಧಾರಣೆ |
| ಸುರೇಶ್ ತೆಂಡುಲ್ಕರ್ | ಬಡತನ ರೇಖೆ ಅಂದಾಜು (2009) |
| ರಂಗರಾಜನ್ ವರದಿ | ಬಡತನ |
| ಹನುಮಂತರಾವ್ | ರಸಗೊಬ್ಬರ ಕೈಗಾರಿಕೆ. |
| ಶಂಕರ ಆಚಾರ್ಯ | ಆರ್ಥಿಕ ವರ್ಷ ಬದಲಾವಣೆ |
| ಕೀರ್ತಿ ಪಾರೇಖ್ | ಮೂಲ ಸೌಕರ್ಯ |
| ಹಾಶೀಂ ಸಮಿತಿ | ನಗರ ಪ್ರದೇಶ ಬಡತನ ಅಂದಾಜು |
| ದೀಪಕ್ ಮೊಹಂತಿ | ಬ್ಯಾಂಕಿಂಗ್ ಕಾರ್ಯ ನಿರ್ವಹಣೆ |
| ತಾರಾಪುರ | ಬಂಡವಾಳ ಖಾತೆ ಪರಿವರ್ತನೆ. |
| ನಚಿಕೇತ್ ಮೋರ್ | ಪೇಮೆಂಟ್ ಬ್ಯಾಂಕಿಂಗ್. 2013 |
| ನಾರಿಮನ್ ಸಮಿತಿ | ಲೀಡ್ ಬ್ಯಾಂಕ್ ಯೋಜನೆ. (1969) |
| ಆರ್.ಜಿ. ಸರಯ್ಯ ಸಮಿತಿ | ಪ್ರಾದೇಶಿಕ ಗ್ರಾಮೀಣ ಬ್ಯಾಂಕ್ (1975) |
| ಶಿವರಾಮನ್ ಸಮಿತಿ | ನಬಾರ್ಡ್ ಸ್ಥಾಪನೆ. (1982) |
| ಹಿಲ್ಟನ್ ಯಂಗ್ ಸಮಿತಿ | ಆರ್.ಬಿ.ಐ ಸ್ಥಾಪನೆ. |
| ದಿನೇಶ್ ಶರ್ಮಾ ಸಮಿತಿ | ನೈಜ (Virtual) ಕರೆನ್ಸಿ |
| ಪಿ.ಕೆ. ಸಿನ್ಹಾ ಸಮಿತಿ | ಭಾರತೀಯ ರಿಸರ್ವ್ ಬ್ಯಾಂಕ್‌ನ ಗೌರ್ನರ್ ಹುದ್ದೆಗೆ ಅಂತಿಮ ಪಟ್ಟಿ ಸಿದ್ದಗೊಳಿಸಲು |
| ರತನ್ ಪಿ. ವಾಥಾಲ್ ಸಮಿತಿ | ಕಾರ್ಡ್ ಪೇಮೆಂಟ್‌ಮೂಲಕ ಟ್ಯಾಕ್ಸ್ ರಿಬೇಟ್ & ಕ್ಯಾಶ್ ಬ್ಯಾಕ್ ಯೋಜನೆಗಳ |

| | |
|---|---|
| ನ್ಯಾ॥ ಎಂ.ಬಿ. ಷಾ ಸಮಿತಿ | ಕಪ್ಪು ಹಣಕ್ಕೆ ಸಂಬಂಧಿಸಿದಂತೆ |
| ಅರವಿಂದ ಸುಬ್ರಮಣ್ಯ ಆಯೋಗ | ದ್ವಿದಳ ಧಾನ್ಯಗಳ ಕೊರತೆಯನ್ನು ನೀಗಿಸುವುದು. |
| ಸುಬ್ರಮಣ್ಯನ್ ಸಮಿತಿ | ರಾಷ್ಟ್ರೀಯ ಶಿಕ್ಷಣ ನೀತಿಯ ವಿಕಾಸ |
| ಡಿ.ಬಿ.ಶೇಕ್ತಾರ್ ಸಮಿತಿ | ಶಸ್ತ್ರಸ್ತ್ರ ಪಡೆಯ ಸಿಬ್ಬಂದಿಗಳ ರಕ್ಷಣಾ ವೆಚ್ಚ ಕುರಿತು. |
| ಎನ್.ಕೆ. ಸಿಂಗ್ ಸಮಿತಿ | ಭವಿಷ್ಯದಲ್ಲಿ ವಿತ್ತೀಯ ಜವಾಬ್ದಾರಿ & ಬಜೆಟ್ ನಿರ್ವಹಣೆ |
| ಸಂಸತ್ತಿನ ಅಂದಾಜು ಸಮಿತಿ | ಗಂಗಾ ನದಿಯ ಶುದ್ಧತೆ & ಹರಿವು & ರಕ್ಷಣೆ ಸಂಬಂಧಿಸಿದಂತೆ |
| ದಿವಾಕರ್ ರೆಡ್ಡಿ ಸಮಿತಿ | ಗ್ರಾಹಕ ಸಂರಕ್ಷಣಾ ಮಸೂದೆ–2015 |
| ಅಶೋಕ್ ಲಾಹಿರಿ ಸಮಿತಿ | ಆಭರಣಗಳ ಮೇಲೆ ಸುಂಕ ವಿಧಿಸುವುದನ್ನು ಕುರಿತು. |
| ಅಖಿಲೇಶ್ ರಂಜನ್ ನೇತೃತ್ವದ ವರದಿ | ಇ–ಕಾಮರ್ಸ್ ತೆರಿಗೆ |
| ಅರವಿಂದ ಪನಗಾರಿಯಾ ಸಮಿತಿ | ಮುಂಬೈ & ಅಹಮದಾಬಾದ್ ನಡುವಿನ ಹೈಸ್ಪೀಡ್ (ಫಾಸ್ಟ್‌ಟ್ರ್ಯಾಕ್) ಕಾರಿಡಾರ್ ಯೋಜನೆ |
| ಕಮಲೇಶ್ ಚಂದ್ರ ಸಮಿತಿ | ಗ್ರಾಮೀಣ್–ದಕ್–ಸೇವಕ್ ಕುರಿತು. |
| ನ್ಯಾ॥ ಎಲ್. ನರಸಿಂಹ ರೆಡ್ಡಿ ಸಮಿತಿ | ಮಾಜಿ ಸೈನಿಕರಿಗೆ ಜಾರಿಗೊಳಿಸಲು ಉದ್ದೇಶಿಸಿರುವ One Rank One Pension ಯೋಜನೆ ಪರಿಶೀಲನೆ |
| ಅರವಿಂದ ಸುಬ್ರಹ್ಮಣ್ಯಂ ಸಮಿತಿ | ಜಿ.ಎಸ್.ಟಿ ಯ ತೆರಿಗೆದರ ಕುರಿತು. |
| ಅಶೋಕ್ ಮಿಶ್ರಾ ಸಮಿತಿ | ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯವರು ಜಂಟಿ ಪ್ರವೇಶ ಪರೀಕ್ಷೆ ಸುಧಾರಣೆ |
| ಪ್ರೊ॥ ತರುಣ್ ಕಣ್ಣನ್ ಸಮಿತಿ | ಖಾಸಗಿ ವಲಯಗಳು, ಸಂಶೋಧನೆ ಮತ್ತು ಅಭಿವೃದ್ಧಿ |
| ಆರ್.ವಿ. ಈಶ್ವರ್ ಸಮಿತಿ | ಆದಾಯ ತೆರಿಗೆ ಕಾಯ್ದೆ–1961 ನ್ನು ಸರಳೀಕರಣ |
| ಪ್ರಧಾನಿ ನರೇಂದ್ರ ಮೋದಿ 149 ಸದಸ್ಯರ ರಾಷ್ಟ್ರೀಯ ಸಮಿತಿ | ಪಂಡಿತ್ ದೀನ್ ದಯಾಳ್ ಉಪಾಧ್ಯಾಯ ಅವರ ಜನ್ಮ ಶತಮಾನೋತ್ಸವದ ಆಚರಣೆಗೆ ಸಂಬಂಧಿಸಿದಂತೆ |
| ರಾಜನಾಥ್ ಸಿಂಗ್ 23 ಸದಸ್ಯರ ಕಾರ್ಯಕಾರಿ ಸಮಿತಿ | ಪಂಡಿತ್ ದೀನ್ ದಯಾಳ್ ಉಪಾಧ್ಯಾಯ ಅವರ ಜನ್ಮ ಶತಮಾನೋತ್ಸವದ ಆಚರಣೆಗೆ ಸಂಬಂಧಿಸಿದಂತೆ |
| ಚೇತನ್ ಗಾಟೆ ಹಣಕಾಸು ನೀತಿ ಸಮಿತಿ | ಬಡ್ಡಿ ದರವನ್ನು ನಿರ್ಧರಿಸಲು |
| ಚಂದ್ರಬಾಬು ನಾಯ್ಡು 13 ಸದಸ್ಯರ ಸಮಿತಿ | 500 & 1000 ಮುಖಬೆಲೆ ನೋಟುಗಳ ಚಲಾವಣೆಯನ್ನು ರದ್ದುಗೊಳಿಸಿದ ಪರಿಸ್ಥಿತಿಯನ್ನು ಅವಲೋಕಿಸಲು |
| ಎಸ್.ಎಸ್. ಮುಂದ್ರಾ ಸಮಿತಿ | ಎಟಿಎಂ ಗಳಲ್ಲಿ ಹೊಸ ನೋಟುಗಳನ್ನು ಬಳಕೆ ಮಾಡುವ ಬಗ್ಗೆ ವರದಿ |
| ಹಮೀದ್ ಕಾಂತ್ ಸಮಿತಿ | ಸರ್ಕಾರ & ನಾಗರೀಕರ ವಹಿವಾಟಿನಲ್ಲಿ ಡಿಜಿಟಲ್ ಪೇಮೆಂಟ್‌ನ್ನು ಉತ್ತೇಜಿಸುವುದು. |
| ಹೆಚ್ಚುವರಿ ಕಾರ್ಯದರ್ಶಿ & ಜಂಟಿ ಕಾರ್ಯದರ್ಶಿಗಳು & ನಿರ್ದೇಶಕರ ಸಮಿತಿ | 500 & 1000 ರೂ ಮುಖಬೆಲೆಯ ನೋಟುಗಳ ಚಲಾವಣೆಯನ್ನು ರದ್ದುಗೊಳಿಸಿದ ನಂತರ ಜಾರಿಗೊಳಿಸಿದ ನಂತರ ಕ್ರಮಗಳ ಬಗ್ಗೆ ಅಧ್ಯಯನ ಮಾಡಲು |
| ಹೇಮಪಾಂಡೆ ನೇತೃತ್ವದ ಅಂತರ್ ಸಚಿವರ ಸಮಿತಿ | ಸಬ್ಸಿಡಿ ದರದ ಬೇಳೆಕಾಳುಗಳನ್ನು ಅಂಚೆ ಕಚೇರಿ ಮೂಲಕ ಮಾರಾಟ ಮಾಡುವುದಕ್ಕೆ ಸಂಬಂಧಿಸಿದಂತೆ |

| | |
|---|---|
| | ಬಜೆಟ್‌ನ ಸುಧಾರಣೆಗಳನ್ನು ಪರಾಮರ್ಶಿಸುವುದರ ಬಗ್ಗೆ |
| ವೀರಪ್ಪ ಮೊಯ್ಲಿ ನೇತೃತ್ವದ ಸಂಸದೀಯ ನೇತೃತ್ವದ ಸಮಿತಿ | ಭಾರತದಲ್ಲಿ ವಿತ್ತೀಯ ತಂತ್ರಜ್ಞಾನ & ಡಿಜಿಟಲ್ ಬ್ಯಾಂಕಿಂಗ್‌ಗೆ ಸಂಬಂಧಿಸಿದಂತೆ |
| ಸುಂದರ್ ಶಾನ್ ಸೇನ್ ಸಮಿತಿ | ಸ್ಟಾಕ್ ಎಕ್ಸ್‌ಚೇಂಜ್ & ಕ್ಲಿಯರಿಂಗ್ ಕಾರ್ಪೊರೇಷನ್ ನಿಯಂತ್ರಣಗಳ ತಿದ್ದುಪಡಿಗೆ ಸಂಬಂಧಿಸಿದಂತೆ |
| ವಿಮಲ್ ಜಲಾನ್ ಸಮಿತಿ | ಕೇಂದ್ರ ಸರ್ಕಾರದ ನೌಕರರ ಸಂಬಳ & ನಿವೃತ್ತಿ ವೇತನದ ಹೆಚ್ಚಳಕ್ಕೆ ಸಂಬಂಧಿಸಿದಂತೆ ವರದಿ ನೀಡಲು |
| ಕೇಂದ್ರೀಯ ವೇತನ ಆಯೋಗ ನ್ಯಾ॥ ಎ.ಕೆ.ಮಥೂರ್ ಸಮಿತಿ | ಜಿಎಸ್‌ಟಿ ಮಸೂದೆಯನ್ನು ಪರಾಮರ್ಶಿಸಲು ಸಂಬಂಧಿಸಿದಂತೆ |
| ಅಮಿತ್ ಮಿಶ್ರಾ ಸಮಿತಿ | ಮ್ಯೂಚ್ಯುಯಲ್ ಫಂಡ್ |
| ದಾವೆ ಸಮಿತಿ | ಬ್ಯಾಂಕೇತರ ಹಣಕಾಸು ಸಂಸ್ಥೆಗಳು |
| ಎ.ಸಿ. ಷಾ ಸಮಿತಿ | ಕೈಗಾರಿಕಾ ನೀತಿ |
| ಹಜಾರೆ ಸಮಿತಿ | ಕೃಷಿ ಸಾಲ |
| ಎ.ಎಂ. ಖುಸ್ರೋ ಸಮಿತಿ | ಪರೋಕ್ಷ ತೆರಿಗೆ ಪದ್ಧತಿ |
| ಎಲ್.ಕೆ. ಝಾ ಸಮಿತಿ | ಆದಾಯ ಹಂಚಿಕೆ |
| ಮಹಲನೋಬಿಸ್ ಸಮಿತಿ | ರಫ್ತು ಕಾರ್ಯತಂತ್ರ & ಕೈಗಾರಿಕಾ ರೋಗ ಗ್ರಸ್ತತೆ |
| ಪಿ.ಎಲ್. ಟಂಡನ್ ಸಮಿತಿ | ತೆರಿಗೆ ಸುಧಾರಣೆಗಳು |
| ರಾಜಾ ಚೆಲ್ಲಯ್ಯ ಸಮಿತಿ | ಹಣಕಾಸು ಸಮನ್ವಯತೆ |
| ಉಷಾ ಥೋರಟ್ ಸಮಿತಿ | ನೇರ ತೆರಿಗೆ ಪದ್ಧತಿ |
| ವಾಂಛೂ ಸಮಿತಿ | ಅಭಿವೃದ್ಧಿ ಹಣಕಾಸು ಸಂಸ್ಥೆಗಳು |
| ಖಾನ್ ಸಮಿತಿ | ಪರೋಕ್ಷ ತೆರಿಗೆ ಪದ್ಧತಿ |
| ರೇಖಿ ಸಮಿತಿ | ನೇರ ತೆರಿಗೆ ವಿನಾಯಿತಿ ಪರಿಷ್ಕರಣೆ |
| ವೈ.ವಿ. ರೆಡ್ಡಿ ಸಮಿತಿ | ವಾಣಿಜ್ಯ ಬ್ಯಾಂಕುಗಳ ಪುನರ್ರಚನೆ |
| ವರ್ಮಾ ಸಮಿತಿ | ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಲ್ಲಿ ನಬಾರ್ಡ್‌ನ ಪಾತ್ರ |
| ಯು.ಕೆ. ಶರ್ಮಾ ಸಮಿತಿ | ಭಾರತದ ಹಣದ ಮಾರುಕಟ್ಟೆ ಸುಧಾರಣೆ |
| ವಾಘಲ್ ಸಮಿತಿ | ಡಿಜಿಟಲ್ ಪಾವತಿ |
| ಚಂದ್ರಬಾಬು ನಾಯ್ಡು ಸಮಿತಿ | ಬಡತನ ರೇಖೆಗೆ ಹೊಸ ಮಾನದಂಡ |
| ಅರವಿಂದ ಪನಗಾರಿಯಾ ಕಾರ್ಯಪಡೆ ಸಮಿತಿ | |

| ಪ್ರಮುಖ ದೇಶಗಳ ಹಣಕಾಸು ವರ್ಷಗಳು | |
|---|---|
| ಆಸ್ಟ್ರೇಲಿಯಾ, ಬಾಂಗ್ಲಾದೇಶ, ಪಾಕಿಸ್ತಾನ, ಈಜಿಪ್ಟ್ | ಜುಲೈ 1 – ಜೂನ್ 30 |
| ಚೀನಾ, ಫ್ರಾನ್ಸ್, ಬ್ರೆಜಿಲ್, ಇಟಲಿ | ಜನವರಿ 1 – ಡಿಸೆಂಬರ್ 31 |
| ಭಾರತ, ಜಪಾನ್, ಯುಕೆ, ಕೆನಡಾ | ಏಪ್ರಿಲ್ 1 – ಮಾರ್ಚ್ 31 |

## ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಸಂವಿಧಾನಾತ್ಮಕ ಅವಕಾಶಗಳು

| | |
|---|---|
| ವಿಧಿ 112 | ಕೇಂದ್ರ ಮುಂಗಡ ಪತ್ರ ಮಂಡನೆ/ವಾರ್ಷಿಕ ಹಣಕಾಸು ಹೇಳಿಕೆ-ಹಣಕಾಸುಸಚಿವ – ಲೋಕಸಭೆ – ಮಂಡನೆ |
| 116(2) | ವೋಟ್ ಆನ್ ಅಕೌಂಟ್ (ಲೇಖಾನುದಾನ) ಇದು ಸರ್ಕಾರದ ವೆಚ್ಚದ ಭಾಗ ಮಾತ್ರ ತಿಳಿಸುವುದು. |
| 202 | ರಾಜ್ಯ ಮುಂಗಡ ಪತ್ರ – ರಾಜ್ಯ ಹಣಕಾಸು ಸಚಿವರು – ವಿಧಾನಸಭೆಯಲ್ಲಿ ಮಂಡನೆ |
| 243 ಐ | (ಗ್ರಾಮೀಣ ಸ್ಥಳೀಯ ಸರ್ಕಾರ) & ವೈ (ನಗರ ಸ್ಥಳೀಯ ಸರ್ಕಾರ) – ರಾಜ್ಯ ಹಣಕಾಸು ಆಯೋಗ ರಚನೆ – ರಾಜ್ಯಪಾಲರು ಪ್ರತಿ 5 ವರ್ಷಗಳಿಗೊಮ್ಮೆ ನೇಮಕ. |
| 265 | ಹಣಕಾಸು ಮಸೂದೆ (ತೆರಿಗೆಗಳನ್ನು ವಿಧಿಸಲು ಸಂಸತ್ತಿನ ಅನುಮತಿ ಪಡೆಯುವುದು) |
| 266 | ಸಂಚಿತ ನಿಧಿ (ಕಂಟ್ರೋಲರ್ ಮತ್ತು ಆಡಿಟರ್ ಜನರಲ್ ನಿಯಂತ್ರಣ) – ನಗದು ಹಣವನ್ನು ಬಳಸಲು ಸಂಸತ್ತಿನ ಅನುಮತಿ ಅಗತ್ಯ. ಹಾಗೂ ಸಾರ್ವಜನಿಕ ಲೆಕ್ಕಪತ್ರ ಖಾತೆಗೂ ಸಂಬಂಧಿಸಿದೆ. |
| 267 | ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಅನುದಾನಗಳು |
| 267 (1) | ಕೇಂದ್ರ ವಿಪತ್ತು ಪರಿಹಾರ ನಿಧಿ (ರಾಷ್ಟ್ರಪತಿಗಳ ನಿಯಂತ್ರಣದಲ್ಲಿದ್ದು, ಆರ್ಥಿಕ ವ್ಯವಹಾರ ಇಲಾಖೆಯ ಹಣಕಾಸು ಕಾರ್ಯದರ್ಶಿ ಕಾರ್ಯನಿರ್ವಹಣೆ. – ತುರ್ತು ಸಂದರ್ಭಗಳಲ್ಲಿ ಬಳಕೆ) |
| 267 (2) | ರಾಜ್ಯ ವಿಪತ್ತು ಪರಿಹಾರ ನಿಧಿ |
| 280 | ಕೇಂದ್ರ ಹಣಕಾಸು ಆಯೋಗ ರಚನೆ – ರಾಷ್ಟ್ರಪತಿಯವರಿಂದ ಪ್ರತಿ 5 ವರ್ಷಗಳಿಗೆ ನೇಮಕ. |
| 360 | ಹಣಕಾಸು ತುರ್ತುಪರಿಸ್ಥಿತಿ (ಭಾರತದಲ್ಲಿ ಇದುವರೆವಿಗೂ ಒಂದು ಬಾರಿಯೂ ಘೋಷಣೆಯಾಗಿಲ್ಲ) |

## ಟಾಪ್-15 ನಲ್ಲಿ ಭಾರತ & ಕರ್ನಾಟಕದ ಸ್ಥಾನ

| ಸಂಖ್ಯೆ | ವಿಶೇಷತೆ |
|---|---|
| 1 | ಸಾಂಬಾರ ಪದಾರ್ಥ, ಹಾಲು ಉತ್ಪಾದನೆ (18.5%) ಯಲ್ಲಿ ಭಾರತದ ಸ್ಥಾನ |
| 2 | ಜಗತ್ತಿನ ಜನಸಂಖ್ಯೆಯಲ್ಲಿ ಭಾರತದ ಸ್ಥಾನ, ವಿಶ್ವದ ಉಕ್ಕು ಉತ್ಪಾದನೆಯಲ್ಲಿ ಭಾರತದ ಸ್ಥಾನ. |
| 3 | ಕೊನೆಯ ರಾಜ್ಯ ಹಣಕಾಸು ಆಯೋಗಗಳ ಸಂಖ್ಯೆ, ಅಧ್ಯಕ್ಷರು: **ಎ.ಜಿ. ಕೊಡ್ಗಿ** (2006) |
| 4 | ಚಾಲ್ತಿಯಲ್ಲಿರುವ ರಾಜ್ಯ ಹಣಕಾಸು ಆಯೋಗದ ಸಂಖ್ಯೆ, ಅಧ್ಯಕ್ಷರು: **ಚಿನ್ನಸ್ವಾಮಿ (2015)** |
| 5 | 2017 ರ ಸ್ವಚ್ಛ ಸರ್ವೇಕ್ಷಣಾ ವರದಿಯಲ್ಲಿ ಮೈಸೂರು ನಗರದ ಸ್ಥಾನ, 2016 ರ ಹೆಚ್.ಡಿ.ಐ ವರದಿಯಲ್ಲಿ ಬ್ರಿಕ್ಸ್ ರಾಷ್ಟ್ರಗಳಲ್ಲಿ ಭಾರತದ ಸ್ಥಾನ. (ವಿಶ್ವದಲ್ಲಿ 131 ನೇ ಸ್ಥಾನ) |
| 6 | ಭಾರತದಲ್ಲಿ ಇದುವರೆಗೆ ನಡೆದಿರುವ ಆರ್ಥಿಕ ಗಣತಿ ಸಂಖ್ಯೆ – ಮೊದಲು 1977, ಕೊನೆಯ (2013) ಪ್ರಸ್ತುತ ಜಗತ್ತಿನ ನಾಮರೂಪಿ ಜಿ.ಡಿ.ಪಿಯಲ್ಲಿ ಭಾರತದ ಸ್ಥಾನ |
| 7 | ವಿಶ್ವದ ಭೌಗೋಳಿಕ ವಿಸ್ತೀರ್ಣದಲ್ಲಿ ಭಾರತದ ಸ್ಥಾನ, ಸ್ವಾತಂತ್ರ್ಯಾನಂತರ 7ನೇ ಜನಗಣತಿ-2011 ಭಾರತದ ಭೌಗೋಳಿಕ ವಿಸ್ತೀರ್ಣ, ಅರಣ್ಯ, ನಗರೀಕರಣದಲ್ಲಿ ಕರ್ನಾಟಕದ ಸ್ಥಾನ |
| 8 | 2016 ರ ಗೋವಾದಲ್ಲಿ ನಡೆದ ಬ್ರಿಕ್ಸ್ ಶೃಂಗಸಭೆ, ಭಾರತದ ಜನಸಂಖ್ಯೆಯಲ್ಲಿ ಕರ್ನಾಟಕದ ಸ್ಥಾನ. |
| 9 | ಸಾಕ್ಷರತೆಯಲ್ಲಿ ಭಾರತದ ಪ್ರಮುಖ ರಾಜ್ಯಗಳಲ್ಲಿ ಕರ್ನಾಟಕದ ಸ್ಥಾನ. |
| 10 | ಭಾರತದಲ್ಲಿ ಒಟ್ಟು ನಡೆದಿರುವ ಕೃಷಿ ಗಣತಿ ಸಂಖ್ಯೆ – ಮೊದಲು 1970-71, ಕೊನೆ 2015-16 |
| 11 | 2007-12 ರ ಭಾರತದ ಪಂಚವಾರ್ಷಿಕ ಯೋಜನೆ ಉದ್ದೇಶ ತ್ವರಿತ & ಸಮನ್ವಯ ಪ್ರಗತಿ |
| 12 | ಭಾರತದಲ್ಲಿ ಇದುವರೆವಿಗೂ ಮುಗಿದಿರುವ ಪಂಚವಾರ್ಷಿಕ ಯೋಜನೆಗಳ ಸಂಖ್ಯೆ (2012-17) |
| ಚಾಲ್ತಿಯಲ್ಲಿರುವ ಆರ್ಥಿಕ ಯೋಜನೆ (NDA – National Development Agenda) ಅವಧಿ-2017-32 | |
| 13 | ಕೊನೆಯ ಹಣಕಾಸು ಆಯೋಗಗಳ ಸಂಖ್ಯೆ, ಅಧ್ಯಕ್ಷರು: **ವಿಜಯ್ ಖೇಲ್ಕರ್** (2010-15) |
| 14 | ಚಾಲ್ತಿಯಲ್ಲಿರುವ ಕೇಂದ್ರ ಹಣಕಾಸು ಆಯೋಗದ ಸಂಖ್ಯೆ, ಅಧ್ಯಕ್ಷರು: **ವೈ.ವಿ.ರೆಡ್ಡಿ, (2015-20)** |
| 15 | ಇತ್ತೀಚೆಗೆ ಭಾರತದಲ್ಲಿ ನಡೆದ ಜನಗಣತಿ – 2011 |

# ಭಾರತದಲ್ಲಿ ಆರ್ಥಿಕ ಯೋಜನೆಗಳು
# Economic Planning in India

ಆರ್ಥಿಕತೆಯಲ್ಲಿ ಲಭ್ಯವಿರುವ ನೈಸರ್ಗಿಕ & ಮಾನವ ಸಂಪನ್ಮೂಲಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಂಡು ನಿರೀಕ್ಷಿತವಾದ ಆರ್ಥಿಕ ಬೆಳವಣಿಗೆಯನ್ನು ಸಾಧಿಸಲು ಸರ್ಕಾರವು ಅನುಸರಿಸುವ ಆರ್ಥಿಕ ನೀತಿ, ವಿಧಾನ ಅಥವಾ ಕಾರ್ಯತಂತ್ರಗಳನ್ನು ಆರ್ಥಿಕ ಯೋಜನೆ ಎನ್ನಬಹುದು. ದೇಶದ ಆರ್ಥಿಕತೆಯ ಸರ್ವತೋಮುಖ ಪ್ರಗತಿ. ಅಲ್ಲಿನ ಸರ್ಕಾರದ ಯೋಜನಾ ಲಹರಿಯ ಮೇಲೆ ನಿಂತಿರುತ್ತದೆ. 20 ನೇ ಶತಮಾನದ ಆಧುನಿಕ ಕಲ್ಯಾಣ/ಸುಖೀ ರಾಜ್ಯ ಪರಿಕಲ್ಪನೆಯ ಸರ್ಕಾರಗಳು ದೇಶದ ಜನರಿಗೆ ಅಗತ್ಯವಿರುವ ಎಲ್ಲಾ ರೀತಿಯ ಸೌಲಭ್ಯಗಳನ್ನು ಒದಗಿಸುತ್ತಾ ಜಾಗತಿಕ ಮಟ್ಟದ ರಾಷ್ಟ್ರಗಳ ಸ್ಪರ್ಧಾತ್ಮಕತೆಗೆ ದೇಶವನ್ನು ಸಜ್ಜುಗೊಳಿಸಬೇಕಾದ ಅನಿವಾರ್ಯತೆ ಇರುತ್ತದೆ. ಇಂತಹ ಹಿನ್ನಲೆಯಲ್ಲಿ ಬ್ರಿಟಿಷ್ ಭಾರತದಲ್ಲಿ ಆರ್ಥಿಕ ಯೋಜನೆಗಳ ಪರಿಕಲ್ಪನೆ ಪ್ರಾರಂಭಗೊಂಡಿದೆ.

"Remember, Your work may be only to Sweep a railway Crossing, but it is your duty to keep it so clean that no other crossing in the world is as clean as yours"

*Sr. M. Vishweshwaraiah*



## ಸರ್.ಎಂ.ವಿಶ್ವೇಶ್ವರಯ್ಯ (Sir. M. Vishveshwaraiah)

- ಸರ್.ಎಂ.ವಿ ಅವರು 1934 ರಲ್ಲಿ ಬರೆದ **Planned Economy for India** ಇದು ಮೊದಲ ಬಾರಿಗೆ ಯೋಜನೆಗಳ ಬಗ್ಗೆ ಮಾಹಿತಿಯನ್ನು ನೀಡಿತು. ಈ ಕೃತಿಯನ್ನು ಆಧುನಿಕ ಭಾರತದ ಆರ್ಥಿಕ ಯೋಜನೆಗಳ ಅಗ್ರಗಣ್ಯ ಕೃತಿ ಎಂದೇ ಬಿಂಬಿಸಲಾಗಿದೆ. ಈ ಪುಸ್ತಕದಲ್ಲಿ "ಕೈಗಾರಿಕೀಕರಣ ಇಲ್ಲವೇ ವಿನಾಶ (Industrialize or Perish), **ಯೋಜಿಸಿ ಅಥವಾ** ವಿನಾಶಗೊಳ್ಳಿ (Plan or Perish)" ಎಂಬ ಪದ ಬಳಸಿದ್ದಾರೆ.
- Reconstructing India ಎಂಬ ಕೃತಿಯನ್ನು 1920 ರಲ್ಲಿ ಪ್ರಕಟಿಸಿದ್ದರು. ಇದು ಭಾರತದ ಆರ್ಥಿಕ ಸ್ಥಿತಿಗತಿಗಳನ್ನು ತಿಳಿಸುವ ಕೃತಿಯಾಗಿದೆ.
- **ಆತ್ಮಚರಿತ್ರೆ:-** Memories of the My working Life 1954
- ಸರ್.ಎಂ.ವಿ ಅವರನ್ನು "**ಭಾರತದ ಆರ್ಥಿಕ ಯೋಜನೆಗಳ ಪಿತಾಮಹ**" ಎಂದು ಕರೆಯುತ್ತಾರೆ.
- **ಜನನ:** 1861 ಸೆಪ್ಟೆಂಬರ್ 15 ರಂದು ಚಿಕ್ಕಬಳ್ಳಾಪುರ (ಅಂದಿನ ಕೋಲಾರ) ಜಿಲ್ಲೆಯ ಮುದ್ದೇನಹಳ್ಳಿಯಲ್ಲಿ ಜನಿಸಿದರು. ಅವರ ಹುಟ್ಟಿದ ದಿನವಾದ **ಸೆಪ್ಟೆಂಬರ್ 15** ನ್ನು ಇಂಜಿನಿಯರ್ಸ್ ದಿನವಾಗಿ ಪ್ರತಿವರ್ಷ ಆಚರಿಸಲಾಗುತ್ತಿದೆ.
- **ಮರಣ:-** 1962 ಏಪ್ರಿಲ್ 12
- ಸರ್. ಎಂ. ವಿ ಅವರನ್ನು Grand Old Man of Karnataka ಎಂದು ಕರೆಯುತ್ತಾರೆ.
- **ಸರ್.ಎಂ.ವಿ ಗೆ ಸಂದ ಪ್ರಶಸ್ತಿಗಳು:-** 1955 ರಲ್ಲಿ ಸರ್.ಎಂ. ವಿಶ್ವೇಶ್ವರಯ್ಯ ನವರಿಗೆ ದೇಶದ ಅತ್ಯುನ್ನತ ನಾಗರೀಕ ಪ್ರಶಸ್ತಿಯಾದ ಭಾರತ ರತ್ನ ಪ್ರಶಸ್ತಿಯನ್ನು ನೀಡಿ ಗೌರವಿಸಲಾಗಿದೆ. ಈ ಮೂಲಕ ಸರ್.ಎಂ.ವಿ ಅವರು ಭಾರತ ರತ್ನ ಪ್ರಶಸ್ತಿಯನ್ನು ಪಡೆದ ಮೊದಲ ಕನ್ನಡಿಗರಾಗಿದ್ದಾರೆ.
- ಕೈಸರ್ ಇ ಹಿಂದ್ ಪ್ರಶಸ್ತಿಯನ್ನು ಬ್ರಿಟಿಷ್ ಸರ್ಕಾರವು 1906 ರಲ್ಲಿ ನೀಡಿ ಗೌರವಿಸಿತು.
- 1911 ರಲ್ಲಿ CIE (Companion of the Indian Empire)
- 1915 KCIE (Knight Commandor of the Indian Empire)
- 1937 ರಲ್ಲಿ ಬನಾರಸ್ ಹಿಂದೂ ವಿ.ವಿ. ಯಿಂದ ಡಿ.ಲಿಟ್ ಪದವಿ

### ಸರ್.ಎಂ.ವಿ ಅವರ ಅಭಿವೃದ್ಧಿ ಮಾದರಿಯ ದೂರದೃಷ್ಟಿ:-

- ✦ ಮಂಡ್ಯ ಜಿಲ್ಲೆಯ ಕೃಷ್ಣರಾಜಸಾಗರ ಅಣೆಕಟ್ಟನ್ನು 2.5 ಕೋಟಿ ವೆಚ್ಚದಲ್ಲಿ ನಿರ್ಮಾಣ ಮಾಡಲು ಅಡಿಪಾಯ ಹಾಕಿದರು. ಇದು ಬೆಂಗಳೂರು & ಮೈಸೂರು ಜಿಲ್ಲೆಗಳಿಗೆ ಕುಡಿಯುವ ನೀರು, ಕೃಷಿ ಭೂಮಿಗೆ ನೀರಾವರಿ ಒದಗಿಸುವ ಉದ್ದೇಶ ಹೊಂದಿದೆ.
- ✦ ಭದ್ರಾವತಿಯಲ್ಲಿ ಕಬ್ಬಿಣ & ಉಕ್ಕಿನ ಕೈಗಾರಿಕೆ ಸ್ಥಾಪನೆ
- ✦ ಮೈಸೂರು ಗಂಧದ ಎಣ್ಣೆ ಕಾರ್ಖಾನೆ & ಸಾಬೂನು ಕಾರ್ಖಾನೆ
- ✦ ಶೈಕ್ಷಣಿಕ ಅಭಿವೃದ್ಧಿಗಾಗಿ ಮೈಸೂರು ವಿಶ್ವವಿದ್ಯಾಲಯ (1916) ಸ್ಥಾಪನೆ
- ✦ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಸ್ಥಾಪನೆ. ಇದರ ಮೊದಲ ಹೆಸರು ದಿ ಬ್ಯಾಂಕ್ ಆಫ್ ಮೈಸೂರು 1913 ಅಕ್ಟೋಬರ 2 ರಂದು ಸ್ಥಾಪನೆಯಾಯಿತು. 1960 ರಿಂದ ಎಸ್.ಬಿ.ಐ ನ ಸಹವರ್ತಿ ಬ್ಯಾಂಕ್ ಆಗಿದ್ದು, ಇದು 2017 ರ ಏಪ್ರಿಲ್ 1 ರಂದು ಎಸ್.ಬಿ.ಐ ನೊಂದಿಗೆ ವಿಲೀನಗೊಂಡಿತು. 2012 ಅಕ್ಟೋಬರ್ 2 ರಿಂದ 2013 ಅಕ್ಟೋಬರ್ 1 ರವರೆಗೆ ಎಸ್.ಬಿ.ಎಂ ನ ಶತಮಾನೋತ್ಸವ ವರ್ಷವನ್ನು ಆಚರಿಸಿಕೊಂಡಿತು. ಬ್ಯಾಂಕಿನ ಇತಿಹಾಸದ ಬಗ್ಗೆ ಬೆಂಗಳೂರಿನಲ್ಲಿ ಸ್ಥಾಪನೆಯಾದ ನೆನಪು ವಸ್ತು ಸಂಗ್ರಹಾಲಯವು ತಿಳಿಸುತ್ತದೆ.
- ✦ ವ್ಯಾಪಾರ & ವ್ಯವಹಾರದ ಉತ್ತೇಜನಕ್ಕಾಗಿ ದ ಮೈಸೂರ್ ಛೇಂಬರ್ಸ್ ಆಫ್ ಕಾಮರ್ಸ್ ಸ್ಥಾಪನೆ
- ✦ ಕನ್ನಡ ಸಾಹಿತ್ಯ ಪರಿಷತ್ (1915) ಸ್ಥಾಪನೆ
- ✦ ಹೆಬ್ಬಾಳ ಕೃಷಿ ಶಾಲೆಯನ್ನು 1912 ರಲ್ಲಿ ಸ್ಥಾಪಿಸಿದ್ದು, ಇದು ಪ್ರಸ್ತುತ ಕೃಷಿ ವಿಶ್ವವಿದ್ಯಾಲಯವಾಗಿದೆ.

## ಭಾರತದಲ್ಲಿ ಯೋಜನಾ ಸಮಿತಿ & ಆಯೋಗದ ಸ್ಥಾಪನೆಯ ಇತಿಹಾಸ:-

- ➢ 1938ರಲ್ಲಿ ರಾಷ್ಟ್ರೀಯ ಯೋಜನಾ ಸಮಿತಿ (National Planning Committee) ಯನ್ನು ಜವಾಹರ್‌ಲಾಲ್ ನೆಹರೂರವರ ನೇತೃತ್ವದಲ್ಲಿ ರಚಿಸಲಾಯಿತು.
- ➢ **ಬಾಂಬೆ ಯೋಜನೆ (Bombay Plan):** ಮುಂಬೈ 8 ಕೈಗಾರಿಕೋದ್ಯಮಿಗಳು 1944ರಲ್ಲಿ 15 ವರ್ಷಗಳ ಯೋಜನೆಗಳನ್ನು ರೂಪಿಸಿ ಬ್ರಿಟಿಷ್ ಸರ್ಕಾರಕ್ಕೆ ಸಲ್ಲಿಸಿದ್ದರು. ಈ ಯೋಜನೆಯನ್ನು ಬಾಂಬೆ ಯೋಜನೆ / ಕೈಗಾರಿಕೋದ್ಯಮಿಗಳ ಯೋಜನೆ (Industrial Plan) ಎಂದು ಕರೆಯುತ್ತಾರೆ. ಈ ಕೈಗಾರಿಕೋದ್ಯಮಿಗಳಲ್ಲಿ ಪ್ರಮುಖರೆಂದರೆ **ಜಾನ್ ಮಥಾಯಿ, ಟಾಟಾ, ಬಿರ್ಲಾ** ಇತ್ಯಾದಿ. ಈ ಯೋಜನೆಯನ್ನು **ಅರ್ದೀಶರ್ ದಲಾಲ್** ಅವರು ರೂಪಿಸಿದ್ದಾರೆ
- ➢ **ಗಾಂಧಿ ಯೋಜನೆ (Gandhian Plan):** ಶ್ರೀಮಾನ್ **ನಾರಾಯಣ್** ರವರು 1944 ರೂಪಿಸಿದರು. (Modest Kind of Plan)
- ➢ **ಗಾಂಧಿ ಮಾದರಿ (Gandhian Model):-** ಆಚಾರ್ಯ **ಎಸ್.ಎನ್ ಅಗರ್‌ವಾಲ್** ಅವರು ರೂಪಿಸಿದ್ದಾರೆ.
- ➢ **ಜನತಾ ಯೋಜನೆ (People Plan):** ಎಂ.ಎನ್. ರಾಯ್ ಎಂಬ ಕಮ್ಯೂನಿಸ್ಟ್ ವ್ಯಕ್ತಿ ಈ ಯೋಜನೆಯನ್ನು 1945 ರೂಪಿಸಿದರು.
- ➢ **ನಾಗ್ಪುರ ಯೋಜನೆ (Nagpura Plan):** ದೇಶದ ರಸ್ತೆಗಳನ್ನು ವರ್ಗೀಕರಿಸಿತು.

| ವರ್ಗೀಕರಣ | ಮೈಲುಗಲ್ಲುಗಳ ಬಣ್ಣಗಳು |
|---|---|
| ರಾಷ್ಟ್ರೀಯ ಹೆದ್ದಾರಿ | ಹಳದಿ & ಬಿಳಿ |
| ರಾಜ್ಯ ಹೆದ್ದಾರಿ | ಹಸಿರು & ಬಿಳಿ |
| ಜಿಲ್ಲಾ ರಸ್ತೆಗಳು | ಕಪ್ಪು & ಬಿಳಿ (ಬಿಳಿ & ಬಿಳಿ) |
| ಗ್ರಾಮೀಣ ರಸ್ತೆ | ಕೇಸರಿ & ಬಿಳಿ |

- ➢ **ಆರ್ಥಿಕ ಕಾರ್ಯಕ್ರಮಗಳ ಸಮಿತಿ (Economic Programme Committee):-** ಮಧ್ಯಂತರ ಸರ್ಕಾರದಲ್ಲಿ ಜವಾರಲಾಲ್ ನೆಹರೂ ನೇತೃತ್ವದಲ್ಲಿ 1947ರಲ್ಲಿ 'ಆರ್ಥಿಕ ಕಾರ್ಯಕ್ರಮಗಳ ಸಮಿತಿ'ಯನ್ನು ಯೋಜನೆಗಳಿಗೆ ಸಂಬಂಧಿಸಿದಂತೆ ಸಲಹೆ ನೀಡಲು ನೇಮಿಸಿತು.
- ➢ ಸ್ವತಂತ್ರ ಭಾರತದ ಮೊಟ್ಟ ಮೊದಲ ಪ್ರಧಾನಿ ನೆಹರೂರವರು ಆರ್ಥಿಕ ಯೋಜನೆಗೆ ಸಂಬಂಧಿಸಿದಂತೆ ಸಾಕಷ್ಟು ಕಾರ್ಯಕ್ರಮಗಳನ್ನು ಕೈಗೊಂಡರು. ನೆಹರೂ ಅವರನ್ನು **"ಭಾರತದ ಪಂಚವಾರ್ಷಿಕ ಯೋಜನೆಗಳ ಪಿತಾಮಹ"** ಎನ್ನುವರು.
- ➢ ಭಾರತದಲ್ಲಿ ಯೋಜನೆಗಳನ್ನು ರೂಪಿಸಲು ರಷ್ಯಾದ 1928ರಲ್ಲಿ **ಸ್ಟಾಲಿನ್ ಸರ್ಕಾರವು** ಹಾಕಿಕೊಂಡ **'Gosplan'** ನಿಂದ ಪ್ರೇರಿತವಾಗಿತ್ತು. ಆದ್ದರಿಂದ ರಷ್ಯಾದಿಂದ ಎರವಲು ಪಡೆದಂತಾಗಿದೆ.
- ➢ ಭಾರತದಲ್ಲಿ ಪಂಚವಾರ್ಷಿಕ ಯೋಜನೆಗಳನ್ನು ಅನುಷ್ಠಾನಕ್ಕೆ ತರಲು **1950 ಮಾರ್ಚ್ 15 ರಂದು ಯೋಜನಾ ಆಯೋಗವನ್ನು ಸ್ಥಾಪಿಸಲಾಯಿತು.**




✦ **ಸರ್ವೋದಯ(ಸರ್ವರ ಪ್ರಗತಿ)** ಎಂಬ ಪದವನ್ನು ಗಾಂಧೀಜಿಯವರು ಪರಿಚಯಿಸಿದರು. ಈ ಪದವನ್ನು ಬ್ರಿಟಿಷ್ ಚಿಂತಕ ಜಾನ್ ರಸ್ಕಿನ್ ರವರ **"ಅನ್ ಟು ದಿಸ್ ಲಾಸ್ಟ್" (Unto This Last)** ಎಂಬ ಗ್ರಂಥದಿಂದ ಆರಿಸಲಾಯಿತು.

✦ **ಅನ್ ಟು ದಿಸ್ ಲಾಸ್ಟ್** ಎಂಬುದು ಇದು ಮಹಾತ್ಮ ಗಾಂಧೀಜಿಯವರ ಮೇಲೆ ಪ್ರಭಾವ ಬೀರಿದ ಗ್ರಂಥವಾಗಿದೆ. ಈ ಗ್ರಂಥವು ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಪ್ರಬಂಧ ಮತ್ತು ಕೃತಿಯಾಗಿದೆ. ಈ ಗ್ರಂಥವನ್ನು ಮಹಾತ್ಮ ಗಾಂಧೀಜಿಯವರು ಗುಜರಾತಿ ಭಾಷೆಯಲ್ಲಿ 1908 ರಲ್ಲಿ **"ಸರ್ವೋದಯ"** ಎಂಬ ಶೀರ್ಷಿಕೆಯಡಿಯಲ್ಲಿ ಭಾಷಾಂತರಿಸಿದರು.

➢ **ಸರ್ವೋದಯ ಯೋಜನೆ (Sarvodaya Plan)**:- 1950 ರಲ್ಲಿ **ಜಯಪ್ರಕಾಶ್ ನಾರಾಯಣ್** ಅವರು ಸರ್ವೋದಯ ಯೋಜನೆಯನ್ನು ರೂಪಿಸಿದರು. ಜೆ.ಪಿ. ಎಂದೇ ಖ್ಯಾತರಾದ ಜಯಪ್ರಕಾಶ್ ನಾರಾಯಣ್ ಅವರು **ಸಂಪೂರ್ಣ** ಕ್ರಾಂತಿಯನ್ನು ಪ್ರತಿಪಾದಿಸಿದರು. ಜೆ.ಪಿ. ಅವರ ಜನ್ಮ ದಿನವಾದ **ಅಕ್ಟೋಬರ್ 11**ನ್ನು ಭಾರತ ಸರ್ಕಾರವು 2015 ಅಕ್ಟೋಬರ್ 11 ರಂದು ಮಹತ್ವಾಕಾಂಕ್ಷಿ ಯೋಜನೆಯಾದ **ಸಂಸದರ ಆದರ್ಶಗ್ರಾಮಯೋಜನೆ(SAGY)**ಯನ್ನು ಉದ್ಘಾಟಿಸಿತು.

➢ **ಉರುಳುವ (ಆವರ್ತ) ಯೋಜನೆ (Rolling Plan)**:- ಉರುಳುವ ಯೋಜನೆ ಎಂಬ ಪರಿಕಲ್ಪನೆಯನ್ನು ಮೊದಲ ಬಾರಿಗೆ ಪರಿಚಯಿಸಿದವರು **ಗುನ್ನಾರ್ ಮಿರ್ಡಾಲ್**ರವರು. ಸ್ವೀಡನ್ ದೇಶದ ನೊಬೆಲ್ ಪುರಸ್ಕೃತ ಅರ್ಥಶಾಸ್ತ್ರಜ್ಞ **ಉರುಳುವ ಯೋಜನೆ** ಎಂಬ ಪದವನ್ನು ಪರಿಚಯಿಸಿದರು. 1978–80ರ ಅವಧಿಯಲ್ಲಿ ಮೊರಾರ್ಜಿ ದೇಸಾಯಿ ನೇತೃತ್ವದ ಜನತಾ ಸರ್ಕಾರ ಭಾರತದಲ್ಲಿ ಅನುಷ್ಠಾನಕ್ಕೆ ತಂದಿತು.

## ನವಗಾಂಧಿ ಮಾದರಿ / PURA - Providing Urban Amenities to Rural Areas

ಪುರ ಎಂಬುದು ಗ್ರಾಮೀಣ ಪ್ರದೇಶಗಳಿಗೆ ನಗರ ಸೌಲಭ್ಯಗಳನ್ನು ಒದಗಿಸುವ ಯೋಜನೆಯಾಗಿದೆ.

ಈ ಪರಿಕಲ್ಪನೆಯನ್ನು ಭಾರತದ 11ನೇ ರಾಷ್ಟ್ರಪತಿ, ಕ್ಷಿಪಣಿ ಮನುಷ್ಯ ಎಂದೇ ಖ್ಯಾತವಾದ ಡಾ.ಎ.ಪಿ.ಜೆ ಅಬ್ದುಲ್ ಕಲಾಂ ಅವರು **"ಟಾರ್ಗೆಟ್ ತ್ರಿ ಬಿಲಿಯನ್"** ಎಂಬುದರಲ್ಲಿ ತಿಳಿಸಿದ್ದರು. ಮಹಾರಾಷ್ಟ್ರ ಮೂಲದ "ನಿಮ್ಕಾರ್ ಕೃಷಿ ಸಂಶೋಧನಾ ಸಂಸ್ಥೆ" ಎಂಬ ಸರ್ಕಾರೇತ್ತರ ಸಂಸ್ಥೆಯು ಪುರ ಕಲ್ಪನೆಯಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದೆ.



ಗ್ರಾಮೀಣ ಅಭಿವೃದ್ಧಿಗಾಗಿ ರೂಪಿಸಿದ ಪುರ ಕಲ್ಪನೆಯು ಅತ್ಯುತ್ತಮ ಮಾದರಿ ಯೋಜನೆಯಾಗಿದೆ. **2004 ಫೆಬ್ರವರಿ 5** ರಂದು **ಆಹಾರ ಭದ್ರತಾ ಸಮಾವೇಶದಲ್ಲಿ** ಪುರ ಯೋಜನೆಯನ್ನು ಘೋಷಣೆ ಮಾಡಲಾಯಿತು. ಇದು ಗ್ರಾಮಗಳ 5 ರೀತಿಯ ಸಂಪರ್ಕಿಸುಪಿಕೆಯನ್ನು ಒಳಗೊಂಡಿದೆ. ಪ್ರಾದೇಶಿಕ ಸಮಾನತೆಯು ಗ್ರಾಮೀಣಾಭಿವೃದ್ಧಿಗೆ ಬುನಾದಿಯಾಗಿದೆ ಎಂದು ಎ.ಪಿ.ಜೆ. ಅಬ್ದುಲ್ ಕಲಾಂ ಅವರು ಹೇಳಿದ್ದಾರೆ

**1) ಭೌತಿಕ ಸಂಪರ್ಕಿಸುವಿಕೆ (Physical Connectivity)**

✦ 15 ರಿಂದ 20 ಹಳ್ಳಿಗಳ ಒಂದು ಗುಂಪು ರಸ್ತೆಗಳ **ಸಂಪರ್ಕವನ್ನು** ಪಡೆಯಲಿವೆ. ಈ ಹಳ್ಳಿಗಳಿಗೆ ಹೊಂದಿಕೊಂಡಂತೆ ವರ್ತುಲ ರಸ್ತೆಗಳಿವೆ. ಇದರೊಂದಿಗೆ **ವಿದ್ಯುತ್ ಸಂಪರ್ಕವನ್ನು** ಪಡೆಯಲಿವೆ.

**2) ಜ್ಞಾನ ಸಂಪರ್ಕಿಸುವಿಕೆ (Knowledge Connectivity)**

✦ ಇದು ವರ್ತುಲ ರಸ್ತೆಯ ಪ್ರತಿ 5ರಿಂದ 7 ಕಿಮೀ ಅಂತರದಲ್ಲಿ ಒಂದು **ಶಾಲೆ, ಒಂದು ಉನ್ನತ ಶಿಕ್ಷಣ & ಕೌಶಲ್ಯ ಕೇಂದ್ರ** ಮತ್ತು **ಆಸ್ಪತ್ರೆಯನ್ನು ಸ್ಥಾಪಿಸುವುದು.**

**3) ವಿದ್ಯುನ್ಮಾನ ಸಂಪರ್ಕಿಸುವಿಕೆ (Electronic Connectivity)**:- ಅಂದರೆ ಹಳ್ಳಿಗಳಿಗೆ **ದೂರ ಸಂಪರ್ಕ ಮತ್ತು ಮಾಹಿತಿ ಜಾಲಗಳನ್ನು** ಒದಗಿಸುವುದು.

**4) ಆರ್ಥಿಕ ಸಂಪರ್ಕಿಸುವಿಕೆ (Economic Connectivity)**

✦ ಇದರ ಗುರಿಯು ಹಳ್ಳಿಗಳ ಗುಂಪಿನ ಒಳಗಡೆ **ಉತ್ತಮ ಮಾರುಕಟ್ಟೆ ಸ್ಥಾಪಿಸುವುದು.** ಇಲ್ಲಿ ಹಳ್ಳಿಗಳ ಎಲ್ಲಾ ಉತ್ಪನ್ನಗಳನ್ನು ಮಾರಲು ಮತ್ತು ದಿನಬಳಕೆಯ ವಸ್ತುಗಳನ್ನು ಕೊಳ್ಳಲು ಅನುಕೂಲವಾಗಿರಬೇಕು. ಬ್ಯಾಂಕಿಂಗ್ ಸೌಲಭ್ಯಗಳನ್ನು ಅಭಿವೃದ್ಧಿಪಡಿಸುವುದು.

**5) ಸಾಮಾಜಿಕ ಸಂಪರ್ಕಿಸುವಿಕೆ (Social Connectivity)**

✦ ಕುಡಿಯುವ ನೀರು ಸೌಲಭ್ಯ, ಗ್ರಂಥಾಲಯ, ಆರೋಗ್ಯ ಸೌಲಭ್ಯಗಳ ಅಭಿವೃದ್ಧಿ.

# ರಾಷ್ಟ್ರೀಯ ಯೋಜನಾ ಆಯೋಗ
## National Planning Commission

ಭಾರತವು ಸ್ವಾತಂತ್ರ್ಯ ಪಡೆದ ನಂತರ ಪಂಚವಾರ್ಷಿಕ ಯೋಜನೆ ರೂಪಿಸಲು, ನಿರ್ವಹಿಸಲು ಹಾಗೂ ಯೋಜನೆಗೆ ಸಂಬಂಧಿಸಿದ ವರದಿ ತಯಾರಿಸಿ, ದೇಶದಲ್ಲಿ ಅನುಷ್ಠಾನಕ್ಕೆ ತರಲು ಭಾರತ ಸರ್ಕಾರವು ಸ್ಥಾಪಿಸಿದ ಸಂವಿಧಾನೇತರ ಸಂಸ್ಥೆಯೇ "ಯೋಜನಾ ಆಯೋಗ". ಯೋಜನಾ ಆಯೋಗವನ್ನು ಭಾರತ ಸರ್ಕಾರದಿಂದ 1948 ರಲ್ಲಿ ಕೆ.ಸಿ. ನಿಯೋಗಿಯವರ ನೇತೃತ್ವದಲ್ಲಿ ನೇಮಕವಾದ ಯೋಜನಾ ಸಲಹಾ ಮಂಡಳಿಯ ಶಿಫಾರಸ್ಸಿನ ಮೇಲೆ ಮಾರ್ಚ್ 15, 1950ರಲ್ಲಿ ಪ್ರಧಾನಿ ಜವಹರಲಾಲ್ ನೆಹರೂ ಅವರ ಅಧ್ಯಕ್ಷತೆಯಲ್ಲಿ ರಚಿಸಿತು. 2015 ಜನವರಿ 1 ರಂದು ಪ್ರಧಾನಿ ನರೇಂದ್ರ ಮೋದಿ ಅವರು ರಾಷ್ಟ್ರೀಯ ಯೋಜನಾ ಆಯೋಗವನ್ನು ರದ್ದುಗೊಳಿಸಿ, ನೀತಿ ಆಯೋಗವನ್ನು ಜಾರಿಗೆ ತಂದರು ಪ್ರಸ್ತುತವಾಗಿ ಯೋಜನಾ ಆಯೋಗವು ಅಸ್ತಿತ್ವದಲ್ಲಿಲ್ಲ. ಬದಲಿಗೆ ನೀತಿ ಆಯೋಗವು ಅಸ್ತಿತ್ವದಲ್ಲಿದೆ. ಸ್ಪರ್ಧಾತ್ಮಕ ಪರೀಕ್ಷಾ ದೃಷ್ಟಿಯಲ್ಲಿ ಸುಮಾರು 65 ವರ್ಷಗಳ ಕಾಲ ಕಾರ್ಯನಿರ್ವಹಿಸಿದ ಯೋಜನಾ ಆಯೋಗದ ಬಗ್ಗೆಯೂ ಪ್ರಶ್ನೆಗಳು ಬರುವ ಸಾಧ್ಯತೆ ಇರುವುದರಿಂದ ಯೋಜನಾ ಆಯೋಗದ ಬಗ್ಗೆಯೂ ಕೂಡ ಮಾಹಿತಿ ನೀಡಲಾಗಿದೆ.

### ಯೋಜನಾ ಸಲಹಾ ಮಂಡಳಿ (Planning Advisory Council)

- 1948ರಲ್ಲಿ ಕೆ.ಸಿ. ನಿಯೋಗಿ ಯವರ ಅಧ್ಯಕ್ಷತೆಯಲ್ಲಿ ಯೋಜನೆಗಳನ್ನು ರೂಪಿಸಲು ಸಂಬಂಧಿಸಿದಂತೆ ಸಲಹೆಗಳನ್ನು ನೀಡಲು **ಯೋಜನಾ ಸಲಹಾ ಮಂಡಳಿಯನ್ನು** ರಚಿಸಲಾಯಿತು. ಈ ಸಲಹಾ ಮಂಡಳಿಯು ಭಾರತದಲ್ಲಿ ಆರ್ಥಿಕ ಯೋಜನೆಗಳನ್ನು ರೂಪಿಸುವ ಬಗ್ಗೆ ಸಮಗ್ರವಾಗಿ ಅಧ್ಯಯನ ನಡೆಸಿ ಯೋಜನೆಗಳನ್ನು ರೂಪಿಸಲು ಪೂರ್ಣಾವಧಿಯ ಯೋಜನಾ ಆಯೋಗವನ್ನು ರಚಿಸಬೇಕೆಂದು ಶಿಫಾರಸ್ಸು ಮಾಡಿತು.

### ಯೋಜನಾ ಆಯೋಗ – 1950 (NPC-National planning commission)

- ಕೆ.ಸಿ.ನಿಯೋಗಿಯವರ ಯೋಜನಾ ಸಲಹಾ ಮಂಡಳಿ ನೀಡಿದ ಸಲಹೆಯಂತೆ ಮಾರ್ಚ್ 15, 1950ರಲ್ಲಿ ಪ್ರಧಾನ ಮಂತ್ರಿಗಳ ಅಧ್ಯಕ್ಷತೆಯಲ್ಲಿ ಯೋಜನಾ ಆಯೋಗವನ್ನು ಭಾರತದಲ್ಲಿ ಸ್ಥಾಪಿಸಲಾಯಿತು. **ಭಾರತದ ಪ್ರಧಾನ ಮಂತ್ರಿಗಳು** ಇದರ ಪದನಿಮಿತ್ತ ಅಧ್ಯಕ್ಷರಾಗಿದ್ದು, ಇದು **ಶಾಸನಬದ್ಧವಲ್ಲದ** ಸಂಸ್ಥೆಯಾಗಿದೆ.
- ಕೇಂದ್ರ ಕಛೇರಿ ನವದೆಹಲಿಯ ಯೋಜನಾ ಭವನದಲ್ಲಿತ್ತು.

### ಸ್ಥಾಪಕರು - ಜವಾಹರ್ ಲಾಲ್ ನೆಹರೂ:-



- **ಜವಾಹರ್‌ಲಾಲ್ ನೆಹರೂ:-** ಯೋಜನಾ ಆಯೋಗದ ಸ್ಥಾಪಕರು & ಮೊದಲ ಅಧ್ಯಕ್ಷರಾಗಿ ನೆಹರೂ ಅವರು 1950 ರಿಂದ 1964 ರವರೆಗೆ ಕಾರ್ಯನಿರ್ವಹಿಸಿದ್ದರು.
- **ನರೇಂದ್ರ ಮೋದಿ:-** ಯೋಜನಾ ಆಯೋಗದ ಕೊನೆಯ ಅಧ್ಯಕ್ಷರು & ನೀತಿ ಆಯೋಗದ ಮೊದಲ ಅಧ್ಯಕ್ಷರಾಗಿದ್ದಾರೆ.

### ಉಪಾಧ್ಯಕ್ಷರು Deputy Chairman

- ಆಯೋಗದ ಉಪಾಧ್ಯಕ್ಷರು ಆಯೋಗದ ಕಾರ್ಯ ನಿರ್ವಹಣಾ ಮುಖ್ಯಸ್ಥರಾಗಿದ್ದರು. ಅವರು ಆಯೋಗದ ಕಾರ್ಯನಿರ್ವಹಣೆ ಮಾಡುವ ಪೂರ್ಣಾವಧಿಯ ಮುಖ್ಯಸ್ಥರಾಗಿದ್ದರು. ಈ ಹುದ್ದೆಯು **ಕ್ಯಾಬಿನೆಟ್ ದರ್ಜೆ ಹುದ್ದೆಯಾಗಿದ್ದು**, ಕ್ಯಾಬಿನೆಟ್ ದರ್ಜೆ ಸಚಿವರು ಪಡೆಯುವ ಎಲ್ಲಾ ಸವಲತ್ತು ಪಡೆಯುತ್ತಿದ್ದು, ಇವರು ಕ್ಯಾಬಿನೆಟ್‌ನ ಸಭೆಗಳಿಗೆ ಭಾಗವಹಿಸುತ್ತಿದ್ದರು ಆದರೆ ಮತ ಹಾಕುವ ಹಕ್ಕನ್ನು ಹೊಂದಿರಲಿಲ್ಲ.
- ಯೋಜನಾ ಆಯೋಗದ ಉಪಾಧ್ಯಕ್ಷರು ಪಂಚವಾರ್ಷಿಕ ಯೋಜನೆಯ ಕರಡು ಪ್ರತಿಯನ್ನು ತಯಾರಿಸಿ ಕೇಂದ್ರ ಸಚಿವ ಸಂಪುಟಕ್ಕೆ ಸಲ್ಲಿಸುತ್ತಿದ್ದರು.
- ಭಾರತದ ಯೋಜನಾ ಆಯೋಗದ ಮೊದಲ ಉಪಾಧ್ಯಕ್ಷರಾಗಿ **ಗುಲ್ಜಾರಿಲಾಲ್ ನಂದಾ**ರವರು ಕಾರ್ಯ ನಿರ್ವಹಿಸಿದರೆ, ಯೋಜನಾ ಆಯೋಗದ ಕೊನೆಯ ಉಪಾಧ್ಯಕ್ಷರಾಗಿ **ಮಾಂಟೆಕ್ ಸಿಂಗ್ ಅಹ್ಲುವಾಲಿಯಾ** ಕಾರ್ಯ ನಿರ್ವಹಿಸಿದ್ದರು.

## ಯೋಜನಾ ಆಯೋಗದ ಉಪಾಧ್ಯಕ್ಷರುಗಳು

1 ಗುಲ್ಜಾರಿ ಲಾಲ್ ನಂದ 2. ಟಿ.ಟಿ. ಕೃಷ್ಣಮಾಚಾರಿ
3 ಸಿ.ಎಂ. ತ್ರಿವೇದಿ 4. ಅಶೋಕ್ ಮೆಹ್ತಾ
5 ಡಾ|| ಡಿ.ಆರ್. ಗಾಡ್ಗಿಲ್ 6. ಸಿ. ಸುಬ್ರಹ್ಮಣ್ಯಂ
7 ಡಿ.ಪಿ.ಧಾರ್ 8. ಪಿ.ಎನ್.ಅಕ್ಸರ್
9 ಡಾ|| ಡಿ.ಟಿ.ಲಕಡ್‌ವಾಲ್ 10. ನಾರಾಯಣ್ ದತ್ತ ತಿವಾರಿ
11 ಶಂಕರರಾವ್ ಬಾವ್‌ರಾವ್ ಚೌವ್ಹಾನ್
12 ಪ್ರಕಾಶ ಚಂದ್ರ ಸೇಥಿ 13. ಪಿ.ವಿ.ನರಸಿಂಹ ರಾವ್
14 ಡಾ|| ಮನಮೋಹನ್ ಸಿಂಗ್ 15. ಪಿ.ಶಿವಶಂಕರ್
16 ಮಾಧವ್ ಸಿಂಗ್ ಸೊಲಂಕಿ 17. ರಾಮಕೃಷ್ಣ ಹೆಗ್ಗಡೆ
18 ಪ್ರೊ. ಮಧುದಂಡವತೆ 19. ಮೋಹನ್ ಧಾರಿಯ
20 ಪ್ರಣಬ್ ಮುಖರ್ಜಿ 21. ಪ್ರೊ.ಮಧು ದಂಡವತೆ
22 ಜಸ್ವಂತ್ ಸಿಂಗ್ 23. ಕೆ.ಸಿ.ಪಂತ್
24. ಮಾಂಟೆಕ್ ಸಿಂಗ್ ಅಹ್ಲುವಾಲಿಯಾ (2 ಬಾರಿ)

### ಗುಲ್ಜಾರಿಲಾಲ್ ನಂದಾ (1953 ಫೆ. 17 - 1963 ಸೆ. 21)

✦ ಇವರು ಭಾರತದ ಯೋಜನಾ ಆಯೋಗದ ಮೊದಲ ಉಪಾಧ್ಯಕ್ಷರಾಗಿದ್ದು, 1, 2, 3 ನೇ ಪಂಚವಾರ್ಷಿಕ ಯೋಜನೆಗಳ ಕರಡನ್ನು ಸಿದ್ಧಪಡಿಸಿದ ಕೀರ್ತಿ ಸಲ್ಲುತ್ತದೆ. ಯೋಜನಾ ಆಯೋಗದ ಉಪಾಧ್ಯಕ್ಷರಾಗಿ ನಂತರ ಭಾರತದ ಪ್ರಧಾನಿಯಾದ ವ್ಯಕ್ತಿಗಳಲ್ಲಿ ಇವರು ಒಬ್ಬರಾಗಿದ್ದಾರೆ. (ಉಳಿದವರೆಂದರೆ – ಪಿ.ವಿ. ನರಸಿಂಹರಾವ್, ಮನಮೋಹನ್ ಸಿಂಗ್)

### ಪಿ.ವಿ. ನರಸಿಂಹರಾವ್ (1984 ನವೆಂಬರ್ 1 ರಿಂದ 1985 ಜನವರಿ 14)

✦ ಭಾರತದ 6ನೇ ಪಂಚವಾರ್ಷಿಕ ಯೋಜನೆ ಅವಧಿಯಲ್ಲಿ ಯೋಜನಾ ಆಯೋಗದ ಉಪಾಧ್ಯಕ್ಷರಾಗಿದ್ದ ಪಿ.ವಿ. ನರಸಿಂಹರಾವ್ ಅವರು 1991 ಜೂನ್ 21 ರಿಂದ 1996 ಮೇ 16 ರವರೆಗೆ ದಕ್ಷಿಣ ಭಾರತದಿಂದ ಆಯ್ಕೆಯಾದ ಮೊದಲ ಪ್ರಧಾನಿಯಾಗಿದ್ದು, ಇವರ ಅವಧಿಯಲ್ಲಿ **ಹೊಸ ಆರ್ಥಿಕ ನೀತಿ** ಯು 1991 ಜುಲೈ 24 ರಂದು ಜಾರಿಗೆ ಬಂದಿದ್ದು, ಉದಾರೀಕರಣ, ಖಾಸಗೀಕರಣ, ಜಾಗತೀಕರಣ (LPG) ನೀತಿಗಳ ಅಳವಡಿಕೆಗೆ ಕಾರಣೀಕರ್ತರಾದರು. ಇವರನ್ನು ಆಧುನಿಕ ಭಾರತದ ಚಾಣಕ್ಯ, ಭಾರತದ ಆರ್ಥಿಕ ಸುಧಾರಣೆಯ ಪಿತಾಮಹ ಎಂದು ಕರೆಯುತ್ತಾರೆ. ಈ ಆರ್ಥಿಕ ನೀತಿಯ ಶಿಲ್ಪಿಯಾಗಿ ಮನಮೋಹನ್ ಸಿಂಗ್ ಅವರನ್ನು ಗುರ್ತಿಸುತ್ತಾರೆ.



### ಮನಮೋಹನ್ ಸಿಂಗ್ (1985 ಜನವರಿ 15 ರಿಂದ 1987 ಆಗಸ್ಟ್ 31)



✦ ಇವರು ಯೋಜನಾ ಆಯೋಗದ ಉಪಾಧ್ಯಕ್ಷರಾಗಿ, 7ನೇ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಕಾರ್ಯನಿರ್ವಹಿಸಿದ್ದರು.

✦ 1972–76 ರವರೆಗೆ ಭಾರತ ಸರ್ಕಾರದಲ್ಲಿ ಮುಖ್ಯ ಆರ್ಥಿಕ ಸಲಹೆಗಾರರಾಗಿ ಕಾರ್ಯನಿರ್ವಹಿಸಿದ್ದರು.

✦ ಆರ್.ಬಿ.ಐ ನ 15ನೇ ಗೌರ್ನರ್ ಆಗಿ (1982–85), ಪ್ರಧಾನಮಂತ್ರಿ ಹುದ್ದೆಗೆ ಏರಿದ ಏಕೈಕ & ಮೊದಲ ವ್ಯಕ್ತಿಯಾಗಿದ್ದಾರೆ.

✦ ಪಿ.ವಿ. ನರಸಿಂಹರಾವ್ ಅವರ ಅವಧಿಯಲ್ಲಿ ಹಣಕಾಸು ಸಚಿವರಾಗಿ, **ಹೊಸ ಆರ್ಥಿಕ ನೀತಿಯ ಶಿಲ್ಪಿಯಾಗಿದ್ದಾರೆ.** ಆದ್ದರಿಂದ 1993 ರಲ್ಲಿ ಉತ್ತಮ ಹಣಕಾಸು ಸಚಿವ ಎಂಬ ಪ್ರಶಸ್ತಿಗೆ ಭಾಜನರಾಗಿದ್ದರು.

✦ 2004 ರಿಂದ 2014 ರವರೆಗೆ ಅಂದರೆ 10, 11, 12 ನೇ ಪಂಚವಾರ್ಷಿಕ ಯೋಜನೆಗಳ ಸಂದರ್ಭದಲ್ಲಿ ಆಯೋಗದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದರು.

### ಪ್ರಣಬ್ ಮುಖರ್ಜಿ (1991 ಜೂನ್ 24 - 1996 ಮೇ 15):-

✦ ಭಾರತದ 8ನೇ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಯೋಜನಾ ಆಯೋಗದ ಉಪಾಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದರು.



✦ ಇವರು 2009 ಜನವರಿ 24 ರಿಂದ 2012 ಜೂನ್ 26 ರವರೆಗೆ ಮನಮೋಹನ್ ಸಿಂಗ್ ಸರ್ಕಾರದಲ್ಲಿ ಹಣಕಾಸು ಸಚಿವರಾಗಿದ್ದರು.

✦ 2012 ಜುಲೈ 25 ರಿಂದ ಭಾರತದ ರಾಷ್ಟ್ರಪತಿಗಳಾಗಿ ಕಾರ್ಯನಿರ್ವಹಿಸುತ್ತಿರುವುದರಿಂದ ಯೋಜನಾ ಆಯೋಗದ ಉಪಾಧ್ಯಕ್ಷರಾಗಿ ರಾಷ್ಟ್ರಪತಿ ಹುದ್ದೆಗೇರಿದ ಏಕೈಕ & ಮೊದಲ ಅರ್ಥಶಾಸ್ತ್ರಜ್ಞ ಎಂಬ ಕೀರ್ತಿಗೆ ಪಾತ್ರರಾಗಿದ್ದಾರೆ.

**ಮಧು ದಂಡವತೆ (1990 ಜುಲೈ 7 ರಿಂದ ಡಿಸೆಂಬರ್10 & 1996 ಆಗಸ್ಟ್ 1 ರಿಂದ 1998 ಮಾರ್ಚ್ 21)**



✦ 3ನೇ ಹಂತದ ಯೋಜನಾ ರಜೆಯಲ್ಲಿ, 8 & 9 ನೇ ಪಂಚವಾರ್ಷಿಕ ಯೋಜನೆಗಳ ನಿರ್ಧಿಷ್ಟಾವಧಿಯಲ್ಲಿ ಉಪಾಧ್ಯಕ್ಷರಾಗಿದ್ದರು. ಹಾಗೂ ಈ ಹುದ್ದೆಯಿಂದ ಕೇಂದ್ರದ ಹಣಕಾಸು ಸಚಿವರಾಗಿಯೂ ಕಾರ್ಯನಿರ್ವಹಿಸಿದ್ದರು.

**ಮಾಂಟೆಕ್ ಸಿಂಗ್ ಅಹ್ಲುವಾಲಿಯಾ (2004 ಜುಲೈ 6 ರಿಂದ 2014 ಮೇ 26)**



✦ 10, 11 & 12ನೇ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಮನಮೋಹನ್ ಸಿಂಗ್ ಅಧ್ಯಕ್ಷತೆಯ ಯೋಜನಾ ಆಯೋಗದ ಉಪಾಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದಾರೆ. ಇವರು ಐ.ಎಂ.ಎಫ್ ನ **Independant evaluation Office** ನಲ್ಲಿ ಮೊದಲ ನಿರ್ದೇಶರಾಗಿ ಕಾರ್ಯನಿರ್ವಹಿಸಿದ್ದಾರೆ.

✦ 1968 ರಲ್ಲಿ **ವಿಶ್ವ ಬ್ಯಾಂಕ್‌ನ ಡಿವಿಷನ್ ಚೀಫ್** ಆಗಿ ಆಯ್ಕೆಯಾದ ಅತ್ಯಂತ ತರುಣ ವ್ಯಕ್ತಿಯಾಗಿದ್ದರು. ಈ ಅವಧಿಯಲ್ಲಿ ವಿಶ್ವ ಬ್ಯಾಂಕ್‌ನ ಅಭಿವೃದ್ಧಿ ಸಂಶೋಧನಾ ಕೇಂದ್ರದ ಆದಾಯ ಹಂಚಿಕಾ ವಿಭಾಗದ ಉಸ್ತುವಾರಿ ವಹಿಸಿದ್ದರು.

✦ 1979 ರಲ್ಲಿ ಭಾರತದ ಹಣಕಾಸು ಸಚಿವಾಲಯದ ಆರ್ಥಿಕ ಸಲಹೆಗಾರರಾಗಿ ಕಾರ್ಯನಿರ್ವಹಿಸಿದ್ದರು.

✦ 1998 ರಲ್ಲಿ ಯೋಜನಾ ಆಯೋಗದ ಸದಸ್ಯರಾಗಿ ಆಯ್ಕೆಯಾಗಿದ್ದರು.

✦ 2001 ರಲ್ಲಿ ಐ.ಎಂ.ಎಫ್ ನ ಕಾರ್ಯನಿರ್ವಹಣೆಯ ಸ್ವತಂತ್ರ ಮೌಲ್ಯಮಾಪನ ಕಛೇರಿಯ ಮಂಡಳಿಯ ಮೊದಲ ನಿರ್ದೇಶಕರಾಗಿ ಆಯ್ಕೆಯಾಗಿದ್ದರು.

✦ 2004 ಜೂನ್ ನಲ್ಲಿ ಐ.ಎಂ.ಎಫ್ ಗೆ ರಾಜೀನಾಮೆ ನೀಡಿ ಯು.ಪಿ.ಎ ಸರ್ಕಾರದಲ್ಲಿ ಯೋಜನಾ ಆಯೋಗದ ಉಪಾಧ್ಯಕ್ಷರಾಗಿ ಕಾರ್ಯ ಜವಾಬ್ದಾರಿ ಹೊಂದಿದರು.

✦ ಭಾರತದ ರಾಷ್ಟ್ರಪತಿಗಳು ನೀಡುವ 2ನೇ ಅತ್ಯುನ್ನತ ನಾಗರೀಕ ಪ್ರಶಸ್ತಿಯಾದ ಪದ್ಮವಿಭೂಷಣ ಪ್ರಶಸ್ತಿ (2011) ಗೆ ಭಾಜನರಾದರು.

✦ ಭಾರತದ ಆರ್ಥಿಕತೆಯ ತ್ವರಿತ, ಸುಸ್ಥಿರ, ಸಮನ್ವಯ ಪ್ರಗತಿ, ಆರ್ಥಿಕ ಸುಧಾರಣೆಗಳ ಬಗೆಗೆ ಹಲವಾರು ಲೇಖನಗಳನ್ನು ಬರೆದಿದ್ದಾರೆ.

**ಪದನಿಮಿತ್ತ ಸದಸ್ಯರುಗಳು**

✦ ಕೇಂದ್ರ ಸರ್ಕಾರ ಕ್ಯಾಬಿನೆಟ್ ಸಚಿವರು ಆಯೋಗದ ತಾತ್ಕಾಲಿಕ ಸದಸ್ಯರಾಗಿದ್ದರು. ಇದರಲ್ಲಿ ಹಣಕಾಸು ಸಚಿವರು ಹಾಗೂ ಯೋಜನಾ ಸಚಿವರು ಪದನಿಮಿತ್ತ ಸದಸ್ಯರಾಗಿದ್ದರು.

**ಖಾಯಂ ಸದಸ್ಯರುಗಳು**

✦ **ಅರ್ಥಶಾಸ್ತ್ರ, ಕೈಗಾರಿಕೆ, ವಿಜ್ಞಾನ, ಆಡಳಿತ ಕ್ಷೇತ್ರದಲ್ಲಿ** ಕೊಡುಗೆ ನೀಡಿದ ಪರಿಣಿತನನ್ನು ಒಳಗೊಂಡಂತೆ 5 ರಿಂದ 8 ಮಂದಿ ಪೂರ್ಣಾವಧಿ ಸದಸ್ಯರನ್ನು ಒಳಗೊಂಡಿತ್ತು. ಇವರು ರಾಜ್ಯಸಚಿವರ ದರ್ಜೆಯ ಸ್ಥಾನಮಾನ ಹೊಂದಿರುತ್ತಾರೆ. ರಾಜ್ಯಸಚಿವರ ಎಲ್ಲಾ ಸವಲತ್ತನ್ನು ಅನುಭವಿಸುತ್ತಾರೆ.

✦ ಆಯೋಗವು ಒಬ್ಬರು ಸದಸ್ಯ – ಕಾರ್ಯದರ್ಶಿ ಇರುತ್ತಾರೆ. ಇವರು ಸಾಮಾನ್ಯವಾಗಿ ಐ.ಎ.ಎಸ್ ಹಿರಿಯ ಅಧಿಕಾರಿಯಾಗಿರುತ್ತಾರೆ.

**ಆಯೋಗದ ವಿಭಾಗಗಳು**

✦ ಆಯೋಗದ ಕಾರ್ಯಗಳು ಸುಗಮವಾಗಿ ಸಾಗಲು ಅನೇಕ ವಿಭಾಗ ಹೊಂದಿತ್ತು. ಆಯೋಗದಲ್ಲಿ 34 ವಿಭಾಗಗಳಿದ್ದವು. ಪ್ರತಿಯೊಂದು ವಿಭಾಗವು ಹಿರಿಯ ಅಧಿಕಾರಿಗಳನ್ನು ಒಳಗೊಂಡಿದೆ.

## ಯೋಜನಾ ಆಯೋಗ ಕೇಂದ್ರ ಪ್ರಾಬಲ್ಯ ಸಂಸ್ಥೆ

✦ ಯೋಜನಾ ಆಯೋಗವು ಕೇಂದ್ರ ಸರ್ಕಾರದಿಂದ ನೇಮಕಗೊಂಡ ಸದಸ್ಯರು ಹಾಗೂ ಕೇಂದ್ರ ಕ್ಯಾಬಿನೆಟ್ ಸಚಿವರನ್ನು ಒಳಗೊಂಡಿತ್ತು. ಈ ಆಯೋಗಕ್ಕೆ ರಾಜ್ಯ ಸರ್ಕಾರದಿಂದ ಯಾವ ಪ್ರಾತಿನಿಧ್ಯವಿಲ್ಲ. ಆದುದ್ದರಿಂದ ಇದೊಂದು ಕೇಂದ್ರ ಸರ್ಕಾರದ ಪ್ರಾಬಲ್ಯ ಸಂಸ್ಥೆಯಾಗಿತ್ತು.

**ಯೋಜನಾ ಆಯೋಗದ ಕಾರ್ಯಗಳು**

➢ ದೇಶದ ಭೌತಿಕ ಮತ್ತು ಮಾನವ ಸಂಪನ್ಮೂಲಗಳನ್ನು **ಅಂದಾಜು ಮಾಡುವುದು** (Estimation).

➢ ದೇಶದ ಆರ್ಥಿಕತೆಗೆ ಅಗತ್ಯಕ್ಕನುಗುಣವಾಗಿ ಸಂಪನ್ಮೂಲಗಳ ಆದರ್ಶ ಬಳಕೆಗೆ **ಯೋಜನೆ ರೂಪಿಸುವುದು.** (Formulation)

➢ ಕೇಂದ್ರ & ರಾಜ್ಯ ಸರ್ಕಾರಗಳ ನಡುವೆ **ಸಂಪನ್ಮೂಲಗಳನ್ನು ವಿತರಿಸುವುದು.** (Distribution)

➢ ಸಂಪನ್ಮೂಲಗಳ ಹಂಚಿಕೆ ಮತ್ತು ಇತರೆ ವಿಚಾರಗಳಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ ಉದ್ಭವಿಸುವ ವ್ಯಾಜ್ಯಗಳ **ಗುರ್ತಿಸುವಿಕೆ ಮತ್ತು ಪರಿಹರಿಸುವಿಕೆ.** (Identification + Solution)

# ರಾಷ್ಟ್ರೀಯ ಅಭಿವೃದ್ಧಿ ಮಂಡಳಿ
## (NDC-National Development Council)

- ಎನ್.ಡಿ.ಸಿ ಯು ಯೋಜನಾ ಆಯೋಗ ತಯಾರಿಸಿದ ಕರಡು ಪ್ರತಿಗೆ ಅನುಮೋದನೆ ನೀಡುವ ಅತ್ಯುನ್ನತ ಸಂಸ್ಥೆಯಾಗಿತ್ತು.
- ಪರ್ಯಾಯ ಹೆಸರು: **ರಾಷ್ಟ್ರೀಯ ವಿಕಾಸ್ ಪರಿಷತ್**, ಇದು 1952ರ ಆಗಸ್ಟ್ 6ರಂದು ಸ್ಥಾಪನೆಯಾಯಿತು.
- ಮೊದಲ ಸಭೆಯು 1952ರ ನವೆಂಬರ್ 8 ಮತ್ತು 9 ರಂದು ನಡೆಯಿತು. ಹಾಗೂ 57 ನೇ ಅಥವಾ ಕೊನೆಯ ಸಭೆಯು 2012 ರ ಡಿಸೆಂಬರ್ 22ರಂದು ನಡೆಯಿತು. ಪ್ರಸ್ತುತವಾಗಿ ನೀತಿ ಆಯೋಗ ಅಸ್ತಿತ್ವಕ್ಕೆ ಬಂದ ನಂತರ ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯು ರದ್ದುಗೊಂಡಿದ್ದು, ಅದಕ್ಕೆ ಪರ್ಯಾಯವಾಗಿ ನೀತಿ ಆಯೋಗದ ಆಡಳಿತ ಮಂಡಳಿ ಸಭೆಯು ಜರುಗುತ್ತಿದೆ.

✦ ಎನ್.ಡಿ.ಸಿ **ಸ್ವಾಯತತ್ತಾ ಸಂಸ್ಥೆ & ಸಂವಿಧಾನೇತರ** ಸಂಸ್ಥೆಯಾಗಿತ್ತು. ಇದು ದೇಶದ ಆರ್ಥಿಕ ಮತ್ತು ಸಾಮಾಜಿಕ ಬೆಳವಣಿಗೆಗಳ ಯೋಜನೆಗೆ ಸಂಬಂಧಿಸಿದ ನಿಯಮಗಳನ್ನು ರೂಪಿಸುವಿಕೆಗೆ ಸಂಬಂಧಿಸಿದಂತೆ ಅತ್ಯುನ್ನತ ಅಂಗವಾಗಿತ್ತು. ಆದ-ರೆ ಸಂಸತ್ತಿಗಿಂತ ಕೆಳಗಿನ ಸ್ಥಾನಮಾನ ಹೊಂದಿದ್ದು, ಇದು ಯೋಜನಾ ಆಯೋಗಕ್ಕೆ ಸಲಹೆ ನೀಡುವ ಸಲಹಾ ಮಂಡಲಿಯಾಗಿತ್ತು. **ಸಂವಿಧಾನದ 263ನೇ** ವಿಧಿ (ಕೇಂದ್ರ ಹಾಗೂ ರಾಜ್ಯಗಳ ಸಂಬಂಧ) ಸಂವಿಧಾನಾತ್ಮಕ ಸ್ಥಾನಮಾನ ನೀಡಬೇಕೆಂದು **ಸರ್ಕಾ-ರಿಯ ಆಯೋಗವು** ಶಿಫಾರಸ್ಸು ಮಾಡಿತು.

**ರಾಷ್ಟ್ರೀಯ ಅಭಿವೃದ್ಧಿ ಮಂಡಲಿ ರಚನೆ:**- ರಾಷ್ಟ್ರೀಯ ಅಭಿವೃದ್ಧಿ ಮಂಡಲಿಯು ಈ ಕೆಳಕಂಡ ರಚನೆಯಿಂದ ಕೂಡಿದೆ.

**ಅಧ್ಯಕ್ಷರು Chairman:-** ಭಾರತದ ಪ್ರಧಾನಿಯವರು ರಾಷ್ಟ್ರೀಯ ಅಭಿವೃದ್ಧಿ ಮಂಡಲಿಯ **ಪದನಿಮಿತ್ತ ಅಧ್ಯಕ್ಷರಾಗಿದ್ದು**, ಪ್ರಧಾನಮಂತ್ರಿಗಳ ಅಧ್ಯಕ್ಷತೆಯಲ್ಲಿ ಸಭೆಯು ಜರುಗುತ್ತಿತ್ತು.

### ಸದಸ್ಯರುಗಳು Members

1) ಕ್ಯಾಬಿನೆಟ್ ಎಲ್ಲಾ ಸಚಿವರು (1967 ಕ್ಕಿಂತ ಮೊದಲು ಗೃಹ, ಹಣಕಾಸು, ರಕ್ಷಣೆ, ವಿದೇಶಾಂಗ ಸಚಿವರು ಮಾತ್ರ ಸದಸ್ಯರಾಗಿದ್ದರು.
2) ಭಾರತ ದೇಶದ ಎಲ್ಲಾ ರಾಜ್ಯದ ಮುಖ್ಯ ಮಂತ್ರಿಗಳು
3) ಕೇಂದ್ರಾಡಳಿತ ಪ್ರದೇಶದ ಲೆಫ್ಟಿನೆಂಟ್ ಗೌರ್‍ನರ್‌ಗಳು.
4) ಯೋಜನಾ ಆಯೋಗದ ಎಲ್ಲಾ ಸದಸ್ಯರುಗಳು

**ಕಾರ್ಯದರ್ಶಿ Secretary:-** ರಾಷ್ಟ್ರೀಯ ಅಭಿವೃದ್ಧಿ ಮಂಡಲಿ ಕಾರ್ಯದರ್ಶಿಗಳಾಗಿ ಯೋಜನಾ ಆಯೋಗದ ಕಾರ್ಯದರ್ಶಿಯೇ ಕಾರ್ಯ ನಿರ್ವಹಿಸುತ್ತಿದ್ದರು. ಯೋಜನಾ ಆಯೋಗವು ರಾಷ್ಟ್ರೀಯ ಅಭಿವೃದ್ಧಿ ಮಂಡಲಿಯ ಆಡಳಿತಾತ್ಮಕ ಹಾಗೂ ಇತರೆ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು.

### ರಾಷ್ಟ್ರೀಯ ಅಭಿವೃದ್ಧಿ ಮಂಡಲಿಯ ಸಭೆ

✦ ರಾಷ್ಟ್ರೀಯ ಅಭಿವೃದ್ಧಿ ಮಂಡಲಿಯು ಒಂದು **ವರ್ಷಕ್ಕೆ ಕನಿಷ್ಠ 2 ಬಾರಿ ಸಭೆ** ಸೇರಿ ಕೇಂದ್ರ ಹಾಗೂ ರಾಜ್ಯ ಸರ್ಕಾರಕ್ಕೆ ಯೋಜನೆಗೆ ಸಂಬಂಧಿಸಿದ ಶಿಫಾರಸ್ಸುಗಳನ್ನು ನೀಡಬೇಕು. ಈ ಸಭೆಯಲ್ಲಿ ಯೋಜನಾ ಆಯೋಗ ತಯಾರಿಸಿದ ಯೋಜನಾ ಕರಡನ್ನು ಅನುಮೋದಿಸಲಾಗುತ್ತಿತ್ತು.

### ಉದ್ದೇಶಗಳು Objectives

✦ ರಾಷ್ಟ್ರೀಯ ಅಭಿವೃದ್ಧಿ ಮಂಡಲಿಯನ್ನು ಈ ಕೆಳಕಂಡ ಉದ್ದೇಶಗಳನ್ನು ಈಡೇರಿಸಲು ರಚಿಸಲಾಗಿತ್ತು. ಅಂತಹ ಉದ್ದೇಶಗಳೆಂದರೆ –

1) ಯೋಜನಾ ಆಯೋಗವು ಕೇಂದ್ರ ಸರ್ಕಾರವು ರಚಿಸಿದ ಸಂಸ್ಥೆಯಾಗಿದ್ದು, ದೇಶದ ಒಕ್ಕೂಟದ ರಾಜ್ಯಗಳಿಗೂ ಆದ್ಯತೆ ನೀಡಲಾಗಿದೆಯೇ ಎಂಬುದನ್ನು ಎಲ್ಲಾ ರಾಜ್ಯದ ಮುಖ್ಯ ಮಂತ್ರಿಗಳನ್ನೊಳಗೊಂಡ ಮಂಡಲಿಯು ಪರಿಶೀಲಿಸಲು ಈ ಮಂಡಲಿ ರಚಿಸಲಾಯಿತು. ಈ ಮೂಲಕ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಎಲ್ಲಾ ರಾಜ್ಯಗಳ ಸಹಕಾರ ಪಡೆಯಲಾಯಿತು.
2) ದೇಶದ ಎಲ್ಲಾ ರಾಜ್ಯಗಳಲ್ಲೂ ಸಮಾನವಾದ ಹಾಗೂ ಶೀಘ್ರವಾದ ಅಭಿವೃದ್ಧಿ ಹೊಂದುವಂತೆ ಮಾಡಲು ಸ್ಥಾಪಿಸಲಾಗಿತ್ತು.
3) ಎಲ್ಲಾ ಅಂಶಗಳಿಗೂ ಒಂದೇ ಸಮನಾದ ಆರ್ಥಿಕ ಯೋಜನೆ ರೂಪಿಸುವುದಾಗಿತ್ತು.
4) ದೇಶದ ಸಂಪನ್ಮೂಲಗಳ ಸಮರ್ಪಕವಾಗಿ ಬಳಸಲು ಹಾಗೂ ಸಾಧನೆಯನ್ನು ಬಲಗೊಳಿಸಲು ಹಾಗೂ ಕ್ರೋಢೀಕರಿಸುವುದು.
5) ಎಲ್ಲಾ ರಾಜ್ಯಗಳನ್ನು ಪಂಚವಾರ್ಷಿಕ ಯೋಜನೆಯಲ್ಲಿ ಪಾಲ್ಗೊಳ್ಳುವಂತೆ ಮಾಡಲು, ಹಾಗೂ ಎಲ್ಲಾ ರಾಜ್ಯದ ಅಭಿಪ್ರಾಯವನ್ನು ಪಡೆಯುವುದು.

**ರಾಷ್ಟ್ರೀಯ ಅಭಿವೃದ್ಧಿ ಮಂಡಲಿಯ ಇತಿಮಿತಿಗಳು**

- ಎನ್.ಡಿ.ಸಿ ಯು ಕೇಂದ್ರ ಹಾಗೂ ರಾಜ್ಯಗಳ ನಡುವೆ ಸಂಬಂಧ ವೃದ್ಧಿಸಲು ಸಹಕಾರಿಯಾದರೆ ಮತ್ತೊಂದೆಡೆ ಇದರ ಶಿಫಾರಸ್ಸುಗಳನ್ನು ಯೋಜನಾ ಆಯೋಗವು ಪಾಲಿಸಬೇಕೆಂಬ ನಿಯಮವಿಲ್ಲದ ಕಾರಣ ಕೆಲವೊಮ್ಮೆ ಇದರ ಶಿಫಾರಸ್ಸುಗಳನ್ನು ಯೋಜನಾ ಆಯೋಗವು ಅಳವಡಿಸಿ ಕೊಳ್ಳದಿರುವುದರಿಂದ ಇದೊಂದು **ರಬ್ಬರ್ ಸ್ಟ್ಯಾಂಪ್**ನಂತಿತ್ತು.
- ಇತ್ತೀಚೆಗೆ ಕೇಂದ್ರದಲ್ಲಿ ರಾಷ್ಟ್ರೀಯ ಪಕ್ಷಗಳು ಅಧಿಕಾರದಲ್ಲಿದ್ದು ರಾಜ್ಯದಲ್ಲಿ ಸ್ಥಳೀಯ ಪಕ್ಷಗಳು ಅಧಿಕಾರದಲ್ಲಿರುವುದರಿಂದ ಇಂತಹ ಸಂದರ್ಭದಲ್ಲಿ ರಾಷ್ಟ್ರೀಯ ಅಭಿವೃದ್ಧಿ ಸಭೆಯಲ್ಲಿ ಸ್ಥಳೀಯ ಪಕ್ಷ ಆಡಳಿತವಿರುವ ಮುಖ್ಯಮಂತ್ರಿ ಯೋಜನಾ ಆಯೋಗವು ತಯಾರಿಸಿದ ಪಂಚವಾರ್ಷಿಕ ಯೋಜನೆಗೆ ನೀಡಿದ ಸಲಹೆ, ಶಿಫಾರಸ್ಸುಗಳನ್ನು ಕೇಂದ್ರ ಸರ್ಕಾರವು ಪರಿಗಣಿಸದಿರುವುದು ಎನ್.ಡಿ.ಸಿ ಯು ಕೇಂದ್ರದ ಹಿಡಿತದಲ್ಲಿರುವಂತಹ ಮಂಡಲಿಯೆಂದು ಅನೇಕರ ವಾದವಾಗಿತ್ತು. ಎನ್.ಡಿ.ಸಿ ಯನ್ನು ಕೆಲವೊಮ್ಮೆ **ಸೂಪರ್ ಕ್ಯಾಬಿನೆಟ್** ಎನ್ನುತ್ತಿದ್ದರು. ಇದೊಂದು ಯೋಜನಾ ಆಯೋಗದ ಪಂಚವಾರ್ಷಿಕ ಯೋಜನೆಯ ಕರಡು ಪ್ರತಿಯನ್ನು ಸುಧಾರಿಸುವ, ಪರಿಷ್ಕರಿಸುವ, ಅನುಮೋದಿಸುವ ಉನ್ನತ ಮಂಡಲಿಯಾಗಿತ್ತು.

## ಪಂಚವಾರ್ಷಿಕ ಯೋಜನೆ ತಯಾರಿಕೆ ವಿನ್ಯಾಸದ ಪ್ರಮುಖ ಹಂತಗಳು

- ಪಂಚವಾರ್ಷಿಕ ಯೋಜನೆಗಳ ಕರಡು ಪ್ರತಿಯನ್ನು ರಾಷ್ಟ್ರೀಯ ಯೋಜನಾ ಆಯೋಗವು ಸಿದ್ಧಪಡಿಸಿದ ನಂತರ ಅದನ್ನು ಕೇಂದ್ರದ ಕ್ಯಾಬಿನೆಟ್‌ನ ಒಪ್ಪಿಗೆ ಪಡೆಯಲಾಗುತ್ತಿತ್ತು.
- ಪ್ರಧಾನಮಂತ್ರಿ ನೇತೃತ್ವದ ಎಲ್ಲಾ ರಾಜ್ಯಗಳ ಮುಖ್ಯಮಂತ್ರಿಗಳನ್ನೊಳಗೊಂಡ ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯಲ್ಲಿ **ಅಂಗೀಕಾರ** ಪಡೆಯಲಾಗುತ್ತಿತ್ತು.
- ಪಂಚವಾರ್ಷಿಕ ಯೋಜನೆಗಳ ಬಗ್ಗೆ ಸಂಸತ್‌ನಲ್ಲಿ **ಚರ್ಚೆ** ನಡೆಸಲಾಗುತ್ತಿತ್ತು.
- ಅಧಿಕೃತಗೊಳಿಸಿದ ಯೋಜನೆಯನ್ನು ಸರ್ಕಾರದ **ರಾಜ್ಯಪತ್ರದಲ್ಲಿ** ಹೊರಡಿಸಲಾಗುತ್ತಿತ್ತು.
- ಈ ಯೋಜನೆಯು ದೇಶಾದ್ಯಂತ **ಜಾರಿಗೆ** ಬರುತ್ತಿತ್ತು. ಆದರೆ ಪ್ರಸ್ತುತವಾಗಿ ರಾಷ್ಟ್ರೀಯ ಯೋಜನಾ ಆಯೋಗವನ್ನು ತೆಗೆದುಹಾಕಿದ್ದು, ಈ ವಿಧಾನವು ಸ್ವಲ್ಪ ಮಟ್ಟಿನ ಬದಲಾವಣೆಯೊಂದಿಗೆ ನೀತಿ ಆಯೋಗದ ಹೊಸದಾಗಿ ಯೋಜನೆ ರೂಪಿಸುವ ಯೋಜನೆಯನ್ನು ರೂಪಿಸಿದೆ.

**ಹಿಂದಿನ ಯೋಜನಾ ಆಯೋಗವು ಪಂಚವಾರ್ಷಿಕ ಯೋಜನೆಗಳನ್ನು ಜಾರಿಗೆ ಗೊಳಿಸುತ್ತಿದ್ದ ವಿನ್ಯಾಸ:-**




**ಉದ್ಯೋಗ ರಹಿತ ಆರ್ಥಿಕ ಬೆಳವಣಿಗೆ**

**(Jobless Economic Growth)**

ಭಾರತದ ಇತ್ತೀಚಿನ ಆರ್ಥಿಕ ಬೆಳವಣಿಗೆಯನ್ನು ಉದ್ಯೋಗ ರಹಿತ ಬೆಳವಣಿಗೆ ಎಂದು ವರ್ಣಿಸಲಾಗುತ್ತದೆ. 1990 ರಿಂದೀಚೆಗೆ ಜರುಗಿದ ಉದ್ಯಮ ರಂಗದ ಮತ್ತು ಸೇವಾ ವಲಯದ ಬೆಳವಣಿಗೆಯು ಬಂಡವಾಳ ಸಾಂದ್ರ ತಂತ್ರಜ್ಞಾನ ಬಳಸಿ ಸಾಧಿಸಿದ ಬೆಳವಣಿಗೆಯಾದ್ದರಿಂದ ಕಡಿಮೆ ಪ್ರಮಾಣದ ಉದ್ಯೋಗ ನಿರ್ಮಾಣವಾಗಿದೆ. ಹಾಗೆಯೇ, ಪ್ರಾಥಮಿಕ ವಲಯದ ಅತ್ಯಂತ ನಿಧಾನ ಗತಿಯ ಬೆಳವಣಿಗೆಯು ಗ್ರಾಮೀಣ ಪ್ರದೇಶಗಳಲ್ಲಿ ನಿರೀಕ್ಷಿಸಿದಷ್ಟು ಉದ್ಯೋಗ ಸೃಷ್ಟಿಯಾಗಿಲ್ಲ. ಹೀಗಾಗಿ ಒಟ್ಟಾರೆ ಬೆಳವಣಿಗೆಯು ಉದ್ಯೋಗ ರಹಿತವಾಗಿದೆ. ಆದ್ದರಿಂದ 11 & 12ನೇ ಪಂಚವಾರ್ಷಿಕ ಯೋಜನೆಯಡಿಯಲ್ಲಿ ಸಮನ್ವಯ ಪ್ರಗತಿಗೆ ಆದ್ಯತೆಯನ್ನು ನೀಡಿದ್ದು, ಸರ್ಕಾರವು ಸುಸ್ಥಿರ ಅಭಿವೃದ್ಧಿಯನ್ನು ಸಾಧಿಸಲು ಉದ್ಯೋಗ ಸಹಿತ ಆರ್ಥಿಕ ಬೆಳವಣಿಗೆಗೆ ಪೂರಕವಾದ ಆರ್ಥಿಕ ನೀತಿ ಕಾರ್ಯಕ್ರಮಗಳನ್ನು ರೂಪಿಸಬೇಕಾಗುತ್ತದೆ.

## ಕರ್ನಾಟಕ ಯೋಜನಾ ಮಂಡಳಿ (Karnataka State Planning Board)

ಕೇಂದ್ರದಲ್ಲಿ ಯೋಜನಾ ಆಯೋಗವು ಕೇಂದ್ರ ಸರ್ಕಾರಕ್ಕೆ ಯೋಜನೆಗಳು, ಕಾರ್ಯಕ್ರಮಗಳನ್ನು ರೂಪಿಸಲು, ಸಹಕಾರ ನೀಡುವಂತೆ ರಾಜ್ಯ ಮಟ್ಟದಲ್ಲಿ ರಾಜ್ಯ ಯೋಜನಾ ಮಂಡಳಿಯನ್ನು ಸ್ಥಾಪಿಸಲಾಯಿತು.

**ಸ್ಥಾಪನೆ:-** ಕರ್ನಾಟಕ ಯೋಜನಾ ಮಂಡಲಿಯನ್ನು 1993ರಲ್ಲಿ ಕರ್ನಾಟಕ ಸರ್ಕಾರವು ಕಾರ್ಯಾಂಗೀಯ ಆದೇಶದ ಮೂಲಕ ರಚಿಸಲಾಯಿತು. **ಕೇಂದ್ರ ಕಛೇರಿ:-** ಬೆಂಗಳೂರು

**ಉದ್ದೇಶ:- ರಾಜ್ಯದ ಯೋಜನೆಗಳು, ಕಾರ್ಯಕ್ರಮಗಳು & ಆದ್ಯತೆಗಳಿಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರಕ್ಕೆ ಸಲಹೆಗಳನ್ನು ನೀಡುತ್ತದೆ.**

**ರಾಜ್ಯ ಯೋಜನಾ ಮಂಡಳಿಯ ಸಂರಚನೆ:-**

**ಅಧ್ಯಕ್ಷರು:-** ಪದನಿಮಿತ್ತ ಮುಖ್ಯಮಂತ್ರಿಗಳು.

**ಉಪಾಧ್ಯಕ್ಷರು:-** ರಾಜ್ಯ ಸರ್ಕಾರವು ಉಪಾಧ್ಯಕ್ಷರನ್ನು ನೇಮಕ ಮಾಡುತ್ತದೆ.

**ಕರ್ನಾಟಕದ ಯೋಜನಾ ಮಂಡಳಿಯ ಮೊದಲ ಅಧ್ಯಕ್ಷರು - ಎಂ. ವೀರಪ್ಪ ಮೊಯ್ಲಿ:-**



ಕರ್ನಾಟಕ ಯೋಜನಾ ಮಂಡಳಿಯ ಮೊದಲ ಅಧ್ಯಕ್ಷರಾಗಿ ಅಂದಿನ ಮುಖ್ಯಮಂತ್ರಿಯಾದ ಎಂ. ವೀರಪ್ಪ ಮೊಯ್ಲಿ ಅವರು ಕಾರ್ಯನಿರ್ವಹಿಸಿದ್ದರು.

**ಮೊದಲ ಉಪಾಧ್ಯಕ್ಷರು:-** ರಾಜ್ಯ ಯೋಜನಾ ಮಂಡಳಿಯ ಮೊದಲ ಉಪಾಧ್ಯಕ್ಷರಾಗಿ ಖ್ಯಾತ ಅರ್ಥಶಾಸ್ತ್ರಜ್ಞ ಡಿ.ಎಂ. ನಂಜುಂಡಪ್ಪನವರು (1993) ಕಾರ್ಯನಿರ್ವಹಿಸಿದ್ದಾರೆ.

**ಪ್ರಸ್ತುತ ಅಧ್ಯಕ್ಷರು:-** 2017 (ಜೂನ್) ನಲ್ಲಿ ರಾಜ್ಯ ಯೋಜನಾ ಮಂಡಳಿಯ ಅಧ್ಯಕ್ಷರಾಗಿ ಮುಖ್ಯಮಂತ್ರಿ **ಸಿದ್ದರಾಮಯ್ಯ** ಕಾರ್ಯನಿರ್ವಹಿಸುತ್ತಿದ್ದಾರೆ.

**ಉಪಾಧ್ಯಕ್ಷರು:-** ರಾಜ್ಯ ಯೋಜನಾ ಮಂಡಳಿಯ ಉಪಾಧ್ಯಕ್ಷರಾಗಿ **ಸಿ.ಎಂ. ಇಬ್ರಾಹಿಂ** ಅವರು ಕಾರ್ಯನಿರ್ವಹಿಸುತ್ತಿದ್ದಾರೆ.

## ಅರ್ಥಶಾಸ್ತ್ರದಲ್ಲಿ ಕಂಡು ಬರುವ ಪ್ರಮುಖ ವಿಶ್ಲೇಷಣಾತ್ಮಕ ಪರಿಕಲ್ಪನೆಗಳು:-

**ಗುಣಕ (Multiplier):-** ಆರಂಭಿಕ ಹೂಡಿಕೆಯಿಂದ ಅಂತಿಮ ರಾಷ್ಟ್ರೀಯ ಆದಾಯದಲ್ಲಾಗುವ ಬದಲಾವಣೆಯನ್ನು ತಿಳಿಸುವುದೇ ಹೂಡಿಕೆ ಗುಣಕ. ಹೂಡಿಕೆ ಅಥವಾ ಆದಾಯ **ಗುಣಕದ ಪರಿಕಲ್ಪನೆಯನ್ನು ಜೆ.ಎಂ. ಕೇನ್ಸ್** ಪರಿಚಯಿಸಿದ್ದಾರೆ. ಆರ್.ಎಫ್. ಖಾನ್ ಮೊದಲ ಬಾರಿಗೆ ಉದ್ಯೋಗ ಗುಣಕದ ಪರಿಕಲ್ಪನೆ ನೀಡಿದ್ದು, ಆರಂಭಿಕ ಉದ್ಯೋಗದಲ್ಲಿನ ಬದಲಾವಣೆಯಿಂದ ಅಂತಿಮ ರಾಷ್ಟ್ರೀಯ ಆದಾಯದಲ್ಲಾಗುವ ಬದಲಾವಣೆಯನ್ನು ತಿಳಿಸುವುದೇ **ಉದ್ಯೋಗ ಗುಣಕ.**

**ವೇಗೋತ್ಕರ್ಷ (Accelarator):-** ಆದಾಯದ ಬದಲಾವಣೆಯಿಂದ ಪ್ರೇರಿತ ಅನುಭೋಗದಲ್ಲಾಗುವ ಬದಲಾವಣೆಯನ್ನು ತಿಳಿಸುವುದು. ಇದನ್ನು ಜೆ.ಎಂ. ಕ್ಲಾರ್ಕ್ 1917 ರಲ್ಲಿ ಪರಿಚಯಿಸಿದ್ದು, ನಂತರ ಹಿಕ್ಸ್ ಸ್ಯಾಮುಯಲ್‌ಸನ್ ಅಭಿವೃದ್ಧಿ ಪಡಿಸಿದರು.

**ಮಹಾ ಗುಣಕ (Super Multiplier):-** ಪ್ರಾರಂಭಿಕ ಹೂಡಿಕೆಯಿಂದ ಅಂತಿಮ ಆದಾಯದಲ್ಲಾಗುವ ಒಟ್ಟುಪರಿಣಾಮವನ್ನು ತಿಳಿಸುತ್ತದೆ. ಅಂದರೆ, ಗುಣಕ & ವೇಗೋತ್ಕರ್ಷಗಳ ಸಂಯುಕ್ತ ಕಾರ್ಯಾಚರಣೆಯನ್ನು ತಿಳಿಸುವ ಪರಿಕಲ್ಪನೆ. ಇದನ್ನು Leverage ಪರಿಣಾಮ ಎನ್ನುವರು. ಇದನ್ನು **ಜೆ.ಆರ್. ಹಿಕ್ಸ್** ಪರಿಚಯಿಸಿದರು. ಅಂದರೆ ಪ್ರಾರಂಭಿಕ ಹೂಡಿಕೆಯಿಂದ ಆದಾಯದಲ್ಲಿ, ಪ್ರೇರಿತ ಅನುಭೋಗದಲ್ಲಿ & ಪ್ರೇರಿತ ಹೂಡಿಕೆಯಲ್ಲಿನ ಬದಲಾವಣೆ ಅಂತಿಮವಾಗಿ ರಾಷ್ಟ್ರದ ಆದಾಯವನ್ನು ವೃದ್ಧಿಸುತ್ತದೆ ಎಂದು ತಿಳಿಸುತ್ತದೆ.

**ವಿದೇಶಿ ವ್ಯಾಪಾರ ಗುಣಕ (Foreign Trade Multiplier):-** ದೇಶದ ರಫ್ತುಗಳ ಬದಲಾವಣೆಯಿಂದ ಅಂತಿಮ ರಾಷ್ಟ್ರೀಯ ವರಮಾನದಲ್ಲಾಗುವ ಬದಲಾವಣೆಯನ್ನು ತಿಳಿಸುವುದು. ಇದು ಆ ದೇಶದ ಸೀಮಾಂತ ಉಳಿತಾಯ ಪ್ರವೃತ್ತಿ & ಸೀಮಾಂತ ಆಮದು ಪ್ರವೃತ್ತಿಯ ಮೇಲೆ ನಿರ್ಧಾರವಾಗುತ್ತದೆ.

**ಹಣದ ಗುಣಕ (Money Multiplier):-** ವಿಶಾಲ ಹಣ (M3) & ಮೀಸಲು ಹಣ (M0) ದ ನಡುವಿನ ಅನುಪಾತ

# ಭಾರತದ ಪಂಚವಾರ್ಷಿಕ ಯೋಜನೆಗಳ ಐತಿಹಾಸಿಕ ಹಿನ್ನೋಟ

ಭಾರತ ಸ್ವಾತಂತ್ರ್ಯಾ ನಂತರ ಭವ್ಯ ಭಾರತದ ನಿರ್ಮಾಣಕ್ಕಾಗಿ ಮೊದಲ ಪ್ರಧಾನಿ ಜವಾಹರ್ ಲಾಲ್ ನೆಹರೂ ಅವರು ಸಮಾಜವಾದಿ ವ್ಯವಸ್ಥೆಯ ಸ್ಥಾಪನೆಗಾಗಿ 1951 ರಿಂದ ಮೊದಲ ಪಂಚವಾರ್ಷಿಕ ಯೋಜನೆ(1951-56) ಯನ್ನು ರೂಪಿಸಿದ್ದು, ಸ್ವಾತಂತ್ರ್ಯಾನಂತರದ ಆರೂವರೆ ದಶಕಗಳಲ್ಲಿ 12 ಪಂಚವಾರ್ಷಿಕ ಯೋಜನೆಗಳನ್ನು ಭಾರತದ ಯೋಜನಾ ಆಯೋಗ ರೂಪಿಸಿ, ಯಶಸ್ವಿಯಾಗಿ ಪೂರೈಸಿದೆ. ಪಂಚವಾರ್ಷಿಕ ಯೋಜನೆಗಳನ್ನು ಸೋವಿಯತ್ ಯೂನಿಯನ್‌ನಿಂದ ಎರವಲು ಪಡೆಯಲಾಗಿದ್ದು, 1951ರ ಡಿಸೆಂಬರ್ 8 ರಂದು ಪ್ರಧಾನಿ ಜವಾಹರ್ ಲಾಲ್ ನೆಹರು ಅವರು ಮೊದಲ ಪಂಚವಾರ್ಷಿಕ ಬಜೆಟ್‌ನ ಮೊದಲ ಕರಡು ಪ್ರತಿಯನ್ನು ಸಂಸತ್ತಿನಲ್ಲಿ ಮಂಡಿಸಿದರು. ದೇಶದ ಪ್ರಸ್ತುತ ಕೇಂದ್ರ ಸರ್ಕಾರ ರೂಪಿಸಿದ ರಾಷ್ಟ್ರೀಯ ಅಭಿವೃದ್ಧಿ ಕಾರ್ಯತಂತ್ರದವರೆಗೆ ದೇಶದ ಆರ್ಥಿಕತೆಯ ಬೆಳವಣಿಗೆಯ ವಿವಿಧ ಮಜಲುಗಳನ್ನು ಕೂಲಂಕುಷವಾಗಿ ಚರ್ಚಿಸಲಾಗಿದೆ.

- Plans are of Little Importance, but Planning is essential - *Winston Churchil*
- Plans are Nothing; Planning is Everything - *Dwight D. Eisenhower*

## ಮೊದಲನೇ ಪಂಚವಾರ್ಷಿಕ ಯೋಜನೆ (1951-1956)



- ಮೊದಲ ಪಂಚವಾರ್ಷಿಕ ಯೋಜನೆ ಅವಧಿಯಲ್ಲಿ ಜವಾಹರ್ ಲಾಲ್ ನೆಹರೂ ಅವರು ಯೋಜನಾ ಆಯೋಗದ ಮೊದಲ ಅಧ್ಯಕ್ಷರಾಗಿದ್ದು, ಗುಲ್ಜಾರಿ ಲಾಲ್ ನಂದಾ ಅವರು ಯೋಜನಾ ಆಯೋಗದ ಮೊದಲ ಉಪಾಧ್ಯಕ್ಷರಾಗಿದ್ದರು.
- ಈ ಯೋಜನೆಯ ಪ್ರಮುಖ ಉದ್ದೇಶಗಳೆಂದರೆ "ಕೃಷಿ ಮತ್ತು ನೀರಾವರಿ"ಗೆ ಹೆಚ್ಚು ಪ್ರಾಶಸ್ತ್ಯ ನೀಡಲಾಯಿತು.
- ದಾಮೋದರ, ಭಾಕ್ರಾ, ಹಿರಾಕುಡ್ ಅಣೆಕಟ್ಟುಗಳನ್ನು ಸ್ಥಾಪಿಸಲು ಉತ್ತೇಜಿಸಲಾಯಿತು.
- ಈ ಯೋಜನೆಯ ಜಿ.ಡಿ.ಪಿ ಬೆಳವಣಿಗೆ 2.1% ನಿರೀಕ್ಷಿಸಲಾಗಿತ್ತು ಆದರೆ 3.6% ಸಾಧನೆಯಾಯಿತು. ಈ ಯೋಜನೆಯಲ್ಲಿ ಶಿಶು ಮರಣ ಪ್ರಮಾಣ ಕೂಡ ಕಡಿಮೆಯಾಯಿತು, ಆಹಾರ ಧಾನ್ಯಗಳ ಉತ್ಪಾದನೆ ಹೆಚ್ಚಳವಾಯಿತು. ಒಟ್ಟು ಯೋಜನಾ ಗಾತ್ರವು 2,378 ಕೋಟಿ. ರೂ. ಆಗಿತ್ತು.

### ಹ್ಯಾರಡ್-ಡೋಮಾರ್ ಮಾದರಿ ಆಧಾರ




- ಮೊದಲ ಪಂಚವಾರ್ಷಿಕ ಯೋಜನೆಗೆ ಅಭಿವೃದ್ಧಿ ಅರ್ಥಶಾಸ್ತ್ರಜ್ಞರಾದ ಹ್ಯಾರಡ್ - ಡೋಮಾರ್ ಅವರ ಅಪೇಕ್ಷಿತ ಬೆಳವಣಿಗೆ ದರ, ವಾಸ್ತವಿಕ ಬೆಳವಣಿಗೆ ದರ & ನೈಸರ್ಗಿಕ ಬೆಳವಣಿಗೆ ದರ ಪರಿಕಲ್ಪನೆಗಳ ಆರ್ಥಿಕ ಮಾದರಿಯನ್ನು ಆಧಾರವಾಗಿರಿಸಿಕೊಳ್ಳಲಾಗಿತ್ತು.
- ಕೃಷಿಗೆ ಪ್ರಾಧಾನ್ಯತೆ, ಭೂ ಸುಧಾರಣೆ ಕ್ರಮಗಳನ್ನು ಅನುಷ್ಠಾನಗೊಳಿಸಲಾಯಿತು.
- ಜಮೀನ್ದಾರಿ ಪದ್ಧತಿಯನ್ನು ನಿರ್ಮೂಲನೆಗೊಳಿಸಲಾಯಿತು.
- 1952 ರಲ್ಲಿ ಸಮುದಾಯ ಅಭಿವೃದ್ಧಿ ಕಾರ್ಯಕ್ರಮ (CDP) (ಮೊಟ್ಟ ಮೊದಲ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮ) ವನ್ನು ಜಾರಿಗೊಳಿಸಲಾಯಿತು.
- ಕುಟುಂಬ ಯೋಜನೆ – 1952 ನ್ನು ವಿಶ್ವದಲ್ಲೇ ಮೊದಲ ಬಾರಿಗೆ ಜಾರಿಗೆ ತಂದಿದ್ದು, ಇದು 1977 ರಲ್ಲಿ ಕುಟುಂಬ ಕಲ್ಯಾಣ ಯೋಜನೆಯಾಗಿ ಮರುನಾಮಕರಣಗೊಂಡಿತು.
- 1953 ರಲ್ಲಿ ರಾಷ್ಟ್ರೀಯ ವಿಸ್ತರಣಾ ಸೇವೆ (NES) ಆರಂಭ.

### ಮೊದಲ ಪಂಚವಾರ್ಷಿಕ ಯೋಜನಾ ಅವಧಿಯಲ್ಲಿ ಸ್ಥಾಪನೆಗೊಂಡ ಪ್ರಮುಖ ಕೈಗಾರಿಕೆಗಳು:-

| ಕೈಗಾರಿಕೆ | ಸ್ಥಳಗಳು |
|---|---|
| HMT, BEL | ಬೆಂಗಳೂರು (ಕರ್ನಾಟಕ) |
| ರೈಲ್ವೆ ಇಂಜಿನ್ | ಚಿತ್ತರಂಜನ್ (ಪ.ಬಂಗಾಳ) |
| ರಸಗೊಬ್ಬರ | ಸಿಂದ್ರಿ (ಜಾರ್ಖಂಡ್) |
| ಆಂಟಿ ಬಯಾಟಿಕ್ಸ್, ಫಾರ್ಮಸ್ಯುಟಿಕಲ್ಸ್, ಪೆನ್ಸಿಲಿನ್ | ಪಿಂಪ್ರಿ (ಮಹಾರಾಷ್ಟ್ರ) |
| ನ್ಯೂಸ್ ಪೇಪರ್ ಕಾಗದ ಕಾರ್ಖಾನೆ | ಮಧ್ಯಪ್ರದೇಶದ ನೇಪಾನಗರ. |
| ಹಡಗು ನಿರ್ಮಾಣ ಕಾರ್ಖಾನೆ | ವಿಶಾಖ ಪಟ್ಟಣ (ಆಂಧ್ರಪ್ರದೇಶ) |

- 1956 ರಲ್ಲಿ 5 ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ ಸಂಸ್ಥೆಗಳು ದೇಶಾದ್ಯಂತ ಸ್ಥಾಪನೆಗೊಂಡವು.
- 1955 ಜುಲೈ 1 ರಂದು ಭಾರತೀಯ ಸ್ಟೇಟ್ ಬ್ಯಾಂಕ್ ಆರ್.ಬಿ.ಐ ನೊಂದಿಗೆ ವಿಲೀನಗೊಂಡು 1956 ಜೂನ್ 2 ರಂದು ರಾಷ್ಟ್ರೀಕರಣಗೊಂಡಿತು.

ದೇಶದ ಉನ್ನತ ಶಿಕ್ಷಣ ಸುಧಾರಿಸುವುದಕ್ಕಾಗಿ ವಿಶ್ವ ವಿದ್ಯಾಲಯಗಳ ಧನ ಸಹಾಯ ಆಯೋಗ (UGC) – 1956 ರಲ್ಲಿ ಸ್ಥಾಪನೆಗೊಂಡಿತು. ವಿಶ್ವವಿದ್ಯಾಲಯ ಧನಸಹಾಯ ಆಯೋಗವನ್ನು ಭಾರತದ ಮೊದಲ ಶಿಕ್ಷಣ ಸಚಿವರಾದ **ಮೌಲಾನಾ ಅಬುಲ್ ಕಲಾಂ ಆಜಾದ್** ಅವರು ಉದ್ಘಾಟಿಸಿದರು. ಮೌಲಾನಾ ಅಬುಲ್ ಕಲಾಂ ಆಜಾದ್ ಅವರ ಜನ್ಮ ದಿನವಾದ **ನವೆಂಬರ್ 11** ನ್ನು 2008 ರಿಂದ ಪ್ರತಿವರ್ಷ **ರಾಷ್ಟ್ರೀಯ ಶಿಕ್ಷಣ ದಿನ (National Education Day)** ವನ್ನಾಗಿ ಆಚರಿಸಲಾಗುತ್ತಿದೆ. ಮೌಲಾನಾ ಅಬುಲ್ ಕಲಾಂ ಆಜಾದ್ ಅವರು ತಮ್ಮ 35 ನೇ ವಯಸ್ಸಿನಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಅಧ್ಯಕ್ಷರಾಗಿ 1923 ರಲ್ಲಿ ಕಾರ್ಯನಿರ್ವಹಿಸಿದ ಅತಿ ಕಿರಿಯ ವ್ಯಕ್ತಿ ಎನಿಸಿದ್ದಾರೆ.
ಇವರು ಬರೆದ ಪ್ರಮುಖ ಗ್ರಂಥ – ಇಂಡಿಯಾ ವಿನ್ಸ್ ಫ್ರೀಡಂ
1951 ರಲ್ಲಿ ದೇಶದ ಮೊದಲ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ (ಐಐಟಿ) ಯನ್ನು ಪ. ಬಂಗಾಳದ ಖರಗ್ ಪುರದಲ್ಲಿ ಸ್ಥಾಪಿಸಿದರು.
ಹೈದರಾಬಾದ್‌ನಲ್ಲಿ ಮೌಲಾನಾ ಆಜಾದ್ ನ್ಯಾಷನಲ್ ಉರ್ದು ವಿ.ವಿ. ಯನ್ನು ಸ್ಥಾಪಿಸಲಾಗಿದೆ.



## ಎರಡನೇ ಪಂಚವಾರ್ಷಿಕ ಯೋಜನೆ (1956–1961)

- ಈ ಯೋಜನೆಯ ಅವಧಿಯಲ್ಲಿ **ಜವಾಹರ್ ಲಾಲ್ ನೆಹರೂ** ಅವರು ಯೋಜನಾ ಆಯೋಗದ ಅಧ್ಯಕ್ಷರಾಗಿದ್ದು, **ಟಿ. ಟಿ. ಕೃಷ್ಣಮಾಚಾರಿ** ಅವರು ಯೋಜನಾ ಆಯೋಗದ ಉಪಾಧ್ಯಕ್ಷರಾಗಿದ್ದರು.
- **"ಕೈಗಾರಿಕಾ ಅಭಿವೃದ್ಧಿ"**ಗೆ ಆದ್ಯತೆ ನೀಡಿತು. ಅದರಲ್ಲೂ ಉನ್ನತ ಕೈಗಾರಿಕೆಗಳ ಬೆಳವಣಿಗೆಗೆ ಉದ್ದೇಶ ಹೊಂದಿತ್ತು.
- ಈ ಯೋಜನೆಯಲ್ಲಿ **ಮಹಲನೋಬಿಸ್** ರವರ ಆರ್ಥಿಕ ಬೆಳವಣಿಗೆ ಮಾದರಿಯನ್ನು ಅಳವಡಿಸಿಕೊಳ್ಳಲಾಯಿತು.

### ಮಹಲನೋಬಿಸ್ ಮಾದರಿ:-

- ಪಿ.ಸಿ. ಮಹಲನೋಬಿಸ್ ಹುಟ್ಟಿದ ದಿನವಾದ **ಜೂನ್ 29** ನ್ನು **ಸಂಖ್ಯಾಶಾಸ್ತ್ರೀಯ** ದಿನವಾಗಿ ಪ್ರತಿವರ್ಷ ಆಚರಿಸಲಾಗುತ್ತಿದೆ.



- 1949 ರಲ್ಲಿ ಭಾರತ ಸರ್ಕಾರ ಮಹಲನೋಬಿಸ್ ನೇತೃತ್ವದಲ್ಲಿ **ರಾಷ್ಟ್ರೀಯ ಆದಾಯ ಸಮಿತಿ** ನೇಮಕ ಮಾಡಿದ್ದು, ವಿ.ಕೆ. ಆರ್.ವಿ. ರಾವ್ ಮತ್ತು ಡಿ.ಆರ್. ಗಾಡ್ಗಿಲ್ ಸದಸ್ಯರಾಗಿದ್ದರು.
- ಭಾರತೀಯ ಖ್ಯಾತ ಸಂಖ್ಯಾಶಾಸ್ತ್ರರಾದ ಪ್ರಶಾಂತ್ ಚಂದ್ರ ಮಹಲನೋಬಿಸ್‌ರವರು ಯೋಜನಾ ಆಯೋಗದ ಸದಸ್ಯರಾಗಿದ್ದರು. ಇವರು 2ನೇ ಪಂಚವಾರ್ಷಿಕ ಯೋಜನೆ & 3ನೇ ಪಂಚವಾರ್ಷಿಕ ಯೋಜನೆಗಳಲ್ಲಿ **ಮಹಲನೋಬಿಸ್ ಮಾದರಿಯನ್ನು** ಅಳವಡಿಸಿಕೊಂಡಿತ್ತು.
- ಮಹಲನೋಬಿಸ್ ರವರು ರಾಷ್ಟ್ರಾದಾಯ & ಹೂಡಿಕೆಯ ಅಂಶಗಳನ್ನು ಆಧರಿಸಿ 1952ರಲ್ಲಿ ಏಕ ವಲಯ ಮಾದರಿಯನ್ನು, 1953ರಲ್ಲಿ ದ್ವಿವಲಯ ಮಾದರಿಯನ್ನು, 1953ರಲ್ಲಿ ಚತುರ್ವಲಯ ಮಾದರಿಯನ್ನು ನೀಡಿದರು.

- ಭಾರತೀಯ ಸಂಖ್ಯಾಶಾಸ್ತ್ರ ಸಂಸ್ಥೆ (ISI - Indian Statistical Institute). ಅಣುಶಕ್ತಿ ಆಯೋಗ(1957). ಟಾಟಾ ಸಂಶೋಧನಾ ಕೇಂದ್ರವನ್ನು ಸ್ಥಾಪಿಸಲಾಯಿತು.
- ಈ ಯೋಜನೆ ಅವಧಿಯಲ್ಲಿ ನಿರೀಕ್ಷಿತ ಬೆಳವಣಿಗೆ ದರ 4.5% ಆದರೆ, ವಾಸ್ತವಿಕವಾಗಿ 4.27% ಆಗಿದೆ.

**ಪ್ರಮುಖ ಅಂಶಗಳು:-**

a) ಕೈಗಾರಿಕಾ ಯೋಜನೆ. ಸಾಂಗೆ ಯೋಜನೆ ಎಂಬ ಇತರೆ ಹೆಸರುಗಳು

b) ಕೈಗಾರಿಕಾ ಕ್ಷೇತ್ರದ ಅಭಿವೃದ್ಧಿಗೆ ಆದ್ಯತೆ

c) 1956ರಲ್ಲಿ ಕೈಗಾರಿಕಾ ನೀತಿ ಘೋಷಣೆ ಮಾಡಿದ್ದು, ಇದನ್ನು **ಭಾರತದ ಆರ್ಥಿಕ ಸಂವಿಧಾನ** ಎನ್ನುವರು.

d) 3 ಕಬ್ಬಿಣ ಮತ್ತು ಉಕ್ಕು ಕೈಗಾರಿಕಾ ಸ್ಥಾಪನೆ:-

| ರಾಜ್ಯ | ಸ್ಥಳ | ಸಹಭಾಗಿತ್ವದ ರಾಷ್ಟ್ರಗಳು |
|---|---|---|
| 1) ಛತ್ತೀಸ್‌ಘರ್ | ಭಿಲಾಯ್ | ರಷ್ಯಾ |
| 2) ಒಡಿಶಾದ | ರೂರ್ಕೆಲಾ | ಪಶ್ಚಿಮ ಜರ್ಮನಿ |
| 3) ಪ. ಬಂಗಾಳ | ದುರ್ಗಾಪುರ | ಇಂಗ್ಲೆಂಡ್ |

f) ರಾಸಾಯನಿಕ ಗೊಬ್ಬರ ಕಾರ್ಖಾನೆ:-

1) ಒಡಿಶಾ-ರೂರ್ಕೆಲಾ 2) ತಮಿಳುನಾಡು - ನೈವೇಲಿ 3) ಪಂಜಾಬ್ - ನಂಗಲ್ ಗಳಲ್ಲಿ ಸ್ಥಾಪನೆಯಾದವು.

## ಮೂರನೇ ಪಂಚವಾರ್ಷಿಕ ಯೋಜನೆ (1961-1966)

- ಈ ಯೋಜನೆಯ ಅವಧಿಯಲ್ಲಿ ಜವಾಹರ್ ಲಾಲ್ ನೆಹರೂ (1950 - 64) & ಲಾಲ್ ಬಹದ್ದೂರ್ ಶಾಸ್ತ್ರಿ (1964 - 66) ಅವರು ಯೋಜನಾ ಆಯೋಗದ ಅಧ್ಯಕ್ಷರಾಗಿದ್ದು, ಸಿ.ಎಂ. ತ್ರಿವೇದಿ (22 ಸೆಪ್ಟೆಂಬರ್ 1963 ರಿಂದ ಡಿಸೆಂಬರ್ 2, 1963) ಹಾಗೂ ಅಶೋಕ್ ಮೆಹ್ತಾ (1963-67) ಅವರು ಯೋಜನಾ ಆಯೋಗದ ಉಪಾಧ್ಯಕ್ಷರುಗಳಾಗಿದ್ದರು



- ಈ ಯೋಜನೆಯಲ್ಲಿ **'ಕೃಷಿ ಹಾಗೂ ಅಕ್ಕಿ'** ಉತ್ಪಾದನೆಗೆ ಆದ್ಯತೆ ನೀಡಲಾಯಿತು. ಸಾರಿಗೆ ಮತ್ತು ಸಂಪರ್ಕಕ್ಕೂ ಆದ್ಯತೆ ನೀಡಲಾಯಿತು.
- ಮೂರನೇ ಪಂಚವಾರ್ಷಿಕ ಯೋಜನೆಯನ್ನು **ಗಾಡ್ಗೀಲ್ ಯೋಜನೆ** & **ದೂರದೃಷ್ಟಿ ಯೋಜನೆ** ಎಂತಲೂ ಕರೆಯುತ್ತಾರೆ.

### ವಿಫಲತೆಗೆ ಕಾರಣಗಳು

- ಚೀನಾ ಮತ್ತು ಭಾರತದ ನಡುವೆ ಯುದ್ಧ(1962) 1965ರಲ್ಲಿ ಭಾರತ ಮತ್ತು ಪಾಕಿಸ್ತಾನ ಯುದ್ಧ ಪ್ರಾರಂಭವಾಗಿ ರಕ್ಷಣಾ ವೆಚ್ಚ ಹೆಚ್ಚಾಯಿತು.
- ರಾಷ್ಟ್ರದಲ್ಲಿ ಮಾನ್ಸೂನ್ ಮಳೆಯ ಅಭಾವ ಆಹಾರ ಧಾನ್ಯಗಳ ಉತ್ಪಾದನೆ ಕುಂಠಿತವಾಗಲು ಕಾರಣವಾಯಿತು. ಇದರಿಂದ ಕೃಷಿಕರು ಕೃಷಿಯ ಬಗ್ಗೆ ನಿರಾಸಕ್ತಿ ಭಾವನೆ ಹೊಂದಿದರು. ಆದ್ದರಿಂದ 3ನೇ ಪಂಚವಾರ್ಷಿಕ ಯೋಜನೆ ವಿಫಲಗೊಂಡಿತ್ತು.

- ಈ ಸಂದರ್ಭದಲ್ಲಿ ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ವಿಶ್ವದ ಹಸಿರು ಕ್ರಾಂತಿಯ ಪಿತಾಮಹ ಅಮೆರಿಕದ ನಾರ್ಮನ್ ಬೋರ್ಲಾಗ್‌ರವರನ್ನು ಭಾರತಕ್ಕೆ ಆಹ್ವಾನಿಸಿ ಹಸಿರು ಕ್ರಾಂತಿಯನ್ನು ಹಮ್ಮಿಕೊಳ್ಳಲಾಯಿತು.



- ✦ 1970 ರಲ್ಲಿ ಇವರಿಗೆ ನೊಬೆಲ್ ಪ್ರಶಸ್ತಿಯನ್ನು ನೀಡಲಾಗಿದೆ. 2006 ರಲ್ಲಿ ಪದ್ಮವಿಭೂಷಣ ಪ್ರಶಸ್ತಿಯನ್ನು ನೀಡಲಾಗಿದೆ.
- ಹೆಚ್.ವೈ.ವಿ.ಪಿ (ಅಧಿಕ ಇಳುವರಿ ವೈವಿಧ್ಯತಾ ಕಾರ್ಯಕ್ರಮ) & ಐ.ಎ.ಡಿ.ಪಿ (ಸಾಂದ್ರ ಕೃಷಿ ಅಭಿವೃದ್ಧಿ ಕಾರ್ಯಕ್ರಮ) 1960 ರ ದಶಕದಲ್ಲೇ ಪ್ರಾರಂಭಗೊಂಡಿತು.
- ಭಾರತದಲ್ಲಿ ಇದರ ಹರಿಕಾರರನ್ನಾಗಿ **ಎಂ.ಎಸ್. ಸ್ವಾಮಿನಾಥನ್** ಅವರನ್ನು ಗುರುತಿಸುತ್ತೇವೆ.

### ಶ್ವೇತ ಕ್ರಾಂತಿಯ ಪಿತಾಮಹ - ವರ್ಗೀಸ್ ಕುರಿಯನ್



- 1965ರಲ್ಲಿ ಭಾರತದ ಶ್ವೇತಕ್ರಾಂತಿ ಪಿತಾಮಹ ವರ್ಗೀಸ್ ಕುರಿಯನ್‌ರವರ ನೇತೃತ್ವದಲ್ಲಿ ರಾಷ್ಟ್ರೀಯ ಹೈನುಗಾರಿಕಾ ಮಂಡಳಿಯನ್ನು ಗುಜರಾತ್‌ನ ಆನಂದ್‌ನಲ್ಲಿ ಸ್ಥಾಪಿಸಿ, **'ಆಪರೇಷನ್ ಫ್ಲಡ್'** (ಕ್ಷೀರಕ್ರಾಂತಿ) ರೂಪಿಸಲಾಯಿತು.

➢ **ಭಾರತದ ಆಹಾರ ನಿಗಮ (FCI) 1965 ರಲ್ಲಿ ಸ್ಥಾಪನೆ:-** ಇದು ದೇಶದ ಸಾರ್ವಜನಿಕ ವಿತರಣಾ ವ್ಯವಸ್ಥೆಯ ನೋಡಲ್ ಸಂಸ್ಥೆಯಾಗಿದೆ.

➢ **ಕಾರ್ಯಗಳು:-** ಕೃಷಿ ಉತ್ಪನ್ನಗಳನ್ನು ಕೊಂಡುಕೊಳ್ಳುವುದು, ದಾಸ್ತಾನು ಮಾಡಲು ಸಾಗಣೆ ಮಾಡುವ, ವೈಜ್ಞಾನಿಕವಾಗಿ ಸಂಗ್ರಹಿಸುವ & ಅಗತ್ಯವಿರುವ ಜನರಿಗೆ ಪಿ.ಡಿ.ಎಸ್ ಮೂಲಕ ವಿತರಿಸುವ ಸಂಸ್ಥೆಯಾಗಿದೆ.

✦ ಮೂರನೇ ಯೋಜನೆ ಅವಧಿಯಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಪ್ರಾಥಮಿಕ ಶಾಲೆಗಳ ಸ್ಥಾಪನೆ, ಪಂಚಾಯತ್ ಚುನಾವಣೆಗಳು ಆರಂಭಗೊಂಡು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ರಾಜ್ಯಗಳು ಅಭಿವೃದ್ಧಿಯಲ್ಲಿ ಹೆಚ್ಚಿನ ಜವಾಬ್ದಾರಿಯನ್ನು ಪಡೆಯುವಂತಾಯಿತು.

✦ ನಿರೀಕ್ಷಿತ ಬೆಳವಣಿಗೆ ದರ 5.6%, ವಾಸ್ತವಿಕವಾಗಿ 2.4% ರಷ್ಟು ಸಾಧಿಸಿತು.

✦ 1966 ರಲ್ಲಿ ಭಾರತೀಯ ರಫ್ತುಗಳನ್ನು ಉತ್ತೇಜಿಸಲು ಭಾರತೀಯ ಕರೆನ್ಸಿಯನ್ನು ಅಪಮೌಲ್ಯೀಕರಣ ಗೊಳಿಸಲಾಯಿತು.

## ವಾರ್ಷಿಕ ಯೋಜನೆಗಳು (1966 ರಿಂದ 1969)

➢ ಈ ಯೋಜನೆಯ ಅವಧಿಯಲ್ಲಿ ಇಂದಿರಾಗಾಂಧಿ ಅವರು ಯೋಜನಾ ಆಯೋಗದ ಅಧ್ಯಕ್ಷರಾಗಿದ್ದು, **ಅಶೋಕ್ ಮೆಹ್ತಾ** (1963 – 67) & **ಡಿ.ಆರ್. ಗಾಡ್ಗೀಲ್** (1967–71) ಅವರು ಯೋಜನಾ ಆಯೋಗದ ಉಪಾಧ್ಯಕ್ಷರುಗಳಾಗಿದ್ದರು.

➢ ಯಾವುದೇ ಪಂಚವಾರ್ಷಿಕ ಯೋಜನೆಗಳನ್ನು ಜಾರಿಗೆ ತರದ ಕಾರಣ ಮೊದಲ ಯೋಜನಾ ರಜೆಯ ಅವಧಿ & 3 ವಾರ್ಷಿಕ ಯೋಜನೆಗಳ ಅವಧಿ ಆಗಿದೆ. ಈ ಸಂದರ್ಭದಲ್ಲಿ ಕೃಷಿಗೆ ಆದ್ಯತೆ ನೀಡಲಾಗಿದೆ.

### ಆರ್ಥಿಕತೆಯ ಪ್ರಮುಖ ಕ್ರಾಂತಿಗಳು

| | |
|---|---|
| 1) ಹಸಿರು ಕ್ರಾಂತಿ (Green Revolution) | ಆಹಾರ ಧಾನ್ಯ ಉತ್ಪಾದನೆ (ಕೃಷಿ ಕ್ಷೇತ್ರ) |
| 2) ಶ್ವೇತ ಕ್ರಾಂತಿ (White Revolution) | ಕ್ಷೀರೋತ್ಪಾದನೆ(ಆಪರೇಷನ್ ಫ್ಲಡ್) |
| 3) ಹಳದಿ ಕ್ರಾಂತಿ (Yellow Revolution) | ಖಾದ್ಯ ತೈಲ |
| 4) ಬೂದು ಕ್ರಾಂತಿ (Grey Revolution) | ರಸಗೊಬ್ಬರ |
| 5) ನೀಲಿ ಕ್ರಾಂತಿ (Blue Revolution)) | ಮತ್ಸ್ಯೋದ್ಯಮ |
| 6) ಕಪ್ಪು ಕ್ರಾಂತಿ (Black Revolution) | ಕಲ್ಲಿದ್ದಲು, ಪೆಟ್ರೋಲಿಯಂ |
| 7) ಸುವರ್ಣ ಕ್ರಾಂತಿ (Gold Revolution) | ತರಕಾರಿ, ಹಣ್ಣು ಹೂ |
| 8) ಕೆಂಪು ಕ್ರಾಂತಿ (Red Revolution) | ಟೊಮೆಟೋ, ಮಾಂಸ |
| 9) ರಜತ ಕ್ರಾಂತಿ (Silver Revolution) | ಮೊಟ್ಟೆ ಉತ್ಪಾದನೆ |
| 10) ದುಂಡು ಕ್ರಾಂತಿ (Round Revolution) | ಆಲೂಗಡ್ಡೆ |

**ಮೊದಲನೇ ಹಸಿರು ಕ್ರಾಂತಿ:-**

✦ ಕೃಷಿ ಕ್ಷೇತ್ರದಲ್ಲಿ ಸಾಧಿಸಲಾದ ಅದ್ಭುತ & ರಚನಾತ್ಮಕ ಪ್ರಗತಿಯೇ ಹಸಿರು ಕ್ರಾಂತಿ.

✦ ನಾಲ್ಕನೇ ಪಂಚವಾರ್ಷಿಕ ಯೋಜನೆ (1969–74)ಯಲ್ಲಿ ಪರಿಣಾಮಕಾರಿ ಅನುಷ್ಠಾನ.

**2X2X2 ಮಾದರಿ:-**

✦ 2 ರಾಜ್ಯ – ಪಂಜಾಬ್ & ಹರಿಯಾಣ

✦ 2 ಬೆಳೆ – ಗೋಧಿ ಮತ್ತು ಭತ್ತ,

✦ 2 ವ್ಯಕ್ತಿಗಳು – ಭಾರತದಲ್ಲಿ ಡಾ|| ಎಂ.ಎಸ್. ಸ್ವಾಮಿನಾಥನ್, ಸಿ. ಸುಬ್ರಮಣ್ಯಂ – ಪಿತಾಮಹರುಗಳು

✦ ಕೃಷಿಯಲ್ಲಿ ಆಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನದ ಬಳಕೆ (**ಉದಾ:-** ರಸಗೊಬ್ಬರ, ಬಿತ್ತನೆ ಬೀಜ, ಯಂತ್ರೋಪಕರಣಗಳು) ಅಂದರೆ ವೈಜ್ಞಾನಿಕ ಬೇಸಾಯಕ್ಕೆ ಆದ್ಯತೆ ನೀಡಿದೆ.

**ಸದಾ/ನಿತ್ಯ ಹಸಿರು ಕ್ರಾಂತಿ (Ever Green Revolution):-**

✦ ಡಾ|| ಎಂ.ಎಸ್. ಸ್ವಾಮಿನಾಥನ್ ಕರೆ ನೀಡಿದರು.

✦ ಆಹಾರೋತ್ಪಾದನೆ 210 ರಿಂದ 420 ಮಿ.ಟನ್‌ಗಳಿಗೆ ದ್ವಿಗುಣಗೊಳಿಸುವುದು. ಕಾರಣ ಆಹಾರ ಧಾನ್ಯಗಳ ಹಣದುಬ್ಬರ ಸಮಸ್ಯೆಯನ್ನು ನಿಯಂತ್ರಿಸುವ ಮುಖ್ಯ ಉದ್ದೇಶ ಹೊಂದಿದೆ.

✦ ಪ್ರಯೋಗಾಲಯದಿಂದ ಭೂಮಿಗೆ (Lab to Land) ನೀತಿ.

✦ ಮಣ್ಣು ಸಂರಕ್ಷಣೆ, ಮಳೆ ನೀರು ಕೊಯ್ಲು ತಂತ್ರ ಬಳಕೆ.

## ಭಾರತೀಯ ಹಸಿರು ಕ್ರಾಂತಿಯ ಪಿತಾಮಹ - ಎಂ.ಎಸ್. ಸ್ವಾಮಿನಾಥನ್ (M.S. Swaminathan)

- ಇವರು ಪ್ರಸ್ತುತ ರಾಷ್ಟ್ರೀಯ ಕೃಷಿ ಆಯೋಗದ ಅಧ್ಯಕ್ಷರು. 1987 ರಲ್ಲಿ ವಿಶ್ವ ಆಹಾರ ಸಂಸ್ಥೆಯು ಮೊದಲ ವಿಶ್ವ ಆಹಾರ ಪ್ರಶಸ್ತಿಯನ್ನು ಪ್ರೊ|| ಎಂ.ಎಸ್. ಸ್ವಾಮಿನಾಥನ್ ಅವರಿಗೆ ನೀಡಲಾಗಿದೆ.
- ವಿಶ್ವ ಕೃಷಿ & **ಆಹಾರ ಸಂಘಟನೆಯ** ಸಂಸ್ಥಾಪನ ದಿನವಾದ ಅಕ್ಟೋಬರ್ 16 ರಂದು ಪ್ರತಿವರ್ಷ ವಿಶ್ವ ಆಹಾರ ಪ್ರಶಸ್ತಿಯನ್ನು 1987 ರಿಂದ ನೀಡಲಾಗುತ್ತದೆ.
- ಹೆಚ್ಚು ಇಳುವರಿ ನೀಡುವ ಗೋಧಿ ತಳಿಯನ್ನು ಅಭಿವೃದ್ಧಿಪಡಿಸಿದ್ದಕ್ಕಾಗಿ ಇವರನ್ನು **ಭಾರತೀಯ ಹಸಿರು ಕ್ರಾಂತಿಯ ಪಿತಾಮಹ** ಎನ್ನುವರು.
- ಇವರು ಅಂದಿನ ಕೃಷಿ ಸಚಿವರಾಗಿದ್ದ ಸುಬ್ರಹ್ಮಣ್ಯ ಸ್ವಾಮಿ ಅವರಿಗೆ **ಹಸಿರು ಕ್ರಾಂತಿ ಪಿತಾಮಹ ನಾರ್ಮನ್ ಬೋರ್ಲಾಗ್** ಅವರ ಬಗ್ಗೆ ಮನವರಿಕೆ ಮಾಡಿ. ಭಾರತಕ್ಕೆ ಕರೆ ತರುವಂತೆ ಮಾಡಿದರು.
- ಪ್ರಧಾನ ಮಂತ್ರಿ ನರೇಂದ್ರ ಮೋದಿ ಅವರು ಕೃಷಿ ವಿಜ್ಞಾನಿ **ಎಂ.ಎಸ್. ಸ್ವಾಮಿನಾಥನ್** ಅವರು ಬರೆದ "M.S. Swaminathan: The Quest for a world without Hunger" ಪುಸ್ತಕಗಳ ಸರಣಿಯನ್ನು 2017ರ ಮೇ 20ರಂದು ಬಿಡುಗಡೆ ಮಾಡಿದರು. ಈ ಸರಣಿಯು ಎರಡು ಭಾಗವನ್ನು ಹೊಂದಿದೆ.
- ನಾರ್ಮನ್ ಬೋರ್ಲಾಗ್ ಭಾರತದಲ್ಲಿ ಹಸಿರು ಕ್ರಾಂತಿಯನ್ನು ಉಂಟು ಮಾಡಲು ಪ್ರಮುಖವಾಗಿ ಅಂದಿನ ಕೃಷಿ ಸಚಿವರಾದ ಸುಬ್ರಹ್ಮಣ್ಯಸ್ವಾಮಿ, ಕೃಷಿ ಕಾರ್ಯದರ್ಶಿ ಶಿವರಾಜನ್, ಕೃಷಿ ವಿಜ್ಞಾನಿ ಎಂ.ಎಸ್. ಸ್ವಾಮಿನಾಥನ್ ಅವರುಗಳು ಕಾರಣರಾಗಿದ್ದು, ಈ ಹಿನ್ನಲೆಯಲ್ಲಿ ಹಸಿರು ಕ್ರಾಂತಿಗೆ 3`s ಗಳ ಕೊಡುಗೆ ಇದೆ ಎಂದು ಹೇಳಲಾಗುತ್ತದೆ.



- ಅಮೆರಿಕದ ಕೃಷಿ ವಿಜ್ಞಾನಿ ನಾರ್ಮನ್ ಬೋರ್ಲಾಗ್ ಅವರು ಭಾರತದಲ್ಲಿ ಮೊದಲ ಬಾರಿಗೆ ಉತ್ತಮ ಇಳುವರಿ ಕೊಡುವ ಗೋಧಿ ತಳಿಯನ್ನು **ಹರಿಯಾಣ & ಪಂಜಾಬ್** ರಾಜ್ಯಗಳಲ್ಲಿ ಬಿತ್ತನೆ ಮಾಡಿ ಹಸಿರು ಕ್ರಾಂತಿಗೆ ಬುನಾದಿ ಹಾಕಿದರು.

### ಭಾರತ ದ್ವಿತೀಯ ಹಸಿರು ಕ್ರಾಂತಿಯೆಡೆಗೆ ಸಾಗಲಿ (GO Back to Green Revolution - II)

- II ನೇ ಪಂಚವಾರ್ಷಿಕ ಯೋಜನೆ ಕಾರ್ಯತಂತ್ರ
- ಎ.ಪಿ.ಜೆ. ಅಬ್ದುಲ್ ಕಲಾಂ ಕರೆ ನೀಡಿದರು.
- ತಳಿ ಕ್ರಾಂತಿ – ಸಾವಯವ/ಜೈವಿಕ ಬೇಸಾಯ/ಸುಸ್ಥಿರ ಜೀವನಾಧಾರ ಬೇಸಾಯಕ್ಕೆ ಸಂಬಂಧಿಸಿದೆ.
- ಮಳೆ ನೀರು ಕೊಯ್ಲು ತಂತ್ರ, ಜಲಾನಯನ ನಿರ್ವಹಣೆ, ಮಣ್ಣು ಸಂರಕ್ಷಣೆ ಭೂ ಸುಧಾರಣೆಗೆ ಒತ್ತು, ಸಾವಯವ ಗೊಬ್ಬರ ಬಳಕೆ, ನೀರಾವರಿ ಪ್ರದೇಶ ದ್ವಿಗುಣ ಮೊದಲಾದ ಕಾರ್ಯತಂತ್ರಗಳು.

### ಕೃಷಿ ಅಧ್ಯಯನದ ವಿವಿಧ ಶಾಖೆಗಳು

| | |
|---|---|
| ಎಫಿಕಲ್ಚರ್ (Ephiculture) | ಜೇನುನೊಣ ಸಾಕುವುದನ್ನು ಎಫಿಕಲ್ಚರ್ ಎನ್ನುವರು. |
| ಪಾಮೊಲಜಿ (Pomology) | ಹಣ್ಣುಗಳ ಕೃಷಿ & ಉತ್ಪಾದನೆಯ ಬಗ್ಗೆ ಅಧ್ಯಯನ. |
| ವಿಟಿಕಲ್ಚರ್ (Viticulture) | ದ್ರಾಕ್ಷಿ ಬೆಳೆಯ ಉತ್ಪಾದನೆಯ ಬಗ್ಗೆ & ವೈನ್ ತಯಾರಿಕೆಯ ಪ್ರಕ್ರಿಯೆಗೆ ಸಂಬಂಧಿಸಿದೆ. |
| ಹಾರ್ಟಿಕಲ್ಚರ್ (Horticulture) | ಇದು ಸಸ್ಯಶಾಸ್ತ್ರದ ಶಾಖೆಯಾಗಿದ್ದು, ತೋಟಗಾರಿಕೆ ಕ್ಷೇತ್ರಕ್ಕೆ ಸಂಬಂಧಿಸಿದೆ. |
| ಒಲೆರಿಕಲ್ಚರ್ (Olericulture) | ಇದು ಸಸ್ಯಶಾಸ್ತ್ರದ ಶಾಖೆಯಾಗಿದ್ದು, ತರಕಾರಿ ಬೆಳೆಯುವುದರ ಬಗ್ಗೆ ಅಧ್ಯಯನ |
| ಫ್ಲೋರಿಕಲ್ಚರ್ (Floriculture) | ಹೂವಿನ ಹಾಗೂ ಅಲಂಕಾರಿಕ ಸಸ್ಯಗಳ ಕೃಷಿ ಬಗ್ಗೆ ಅಧ್ಯಯನವಾಗಿದೆ. |
| ಹೈಡ್ರೋಪೋನಿಕ್ಸ್ (Hydroponics) | ಮಣ್ಣಿಲ್ಲದೆ ಪೋಷಕಾಂಶ & ದ್ರವ ಹೊಂದಿರುವ ನೀರಿನಲ್ಲಿ ಸಸ್ಯ ಬೆಳೆಸುವ ವಿಧಾನ |
| ಮೈಕ್ರೋ ಪ್ರಾಪೋಗೇಷನ್ (Micropro-pogation) | ಆಧುನಿಕ ಸಸ್ಯ ಅಂಗಾಂಶ ಕೃಷಿ ವಿಧಾನದಿಂದ ಮೂಲ ಸಸ್ಯವನ್ನು ಅನೇಕ ತುಂಡಾಗಿ ವಿಭಜಿಸಿ ಅಧಿಕ ಸಂಖ್ಯೆಯ ಹೊಸ ಸಸ್ಯಗಳನ್ನು ಪಡೆಯುವ ವಿಧಾನವಾಗಿದೆ. |
| ಅಗ್ರೋಲಜಿ (Agrology) | ಇದು ಮಣ್ಣಿನ ವಿಜ್ಞಾನದ ಶಾಖೆಯಾಗಿದ್ದು, ಬೆಳೆಗಳ ಉತ್ಪನ್ನ ಅಧ್ಯಯನ |
| ಸಿರಿಕಲ್ಚರ್ (Sericulture) | ರೇಷ್ಮೆ ಹುಳು ಸಾಕಾಣಿಕೆ ಮತ್ತು ರೇಷ್ಮೆ ಉತ್ಪಾದನೆಗೆ ಸಂಬಂಧಿಸಿದ್ದು. |
| ಮಾರಿಕಲ್ಚರ್ (Mariculture) | ಸಮುದ್ರ ಜೀವಿಯನ್ನು ಆಹಾರ & ಆಹಾರ ಉತ್ಪನ್ನಕ್ಕಾಗಿ ಸಾಕುವುದು. |
| ಪೆಡಾಲಜಿ (Pedology) | ಮಣ್ಣಿಗೆ ಸಂಬಂಧಿಸಿದಂತೆ ಅಧ್ಯಯನ ಮಾಡುವುದು. |

## ನಾಲ್ಕನೇ ಯೋಜನೆ (1969-1974)

- ಈ ಯೋಜನೆಯ ಅವಧಿಯಲ್ಲಿ ಇಂದಿರಾಗಾಂಧಿ ಅವರು ಯೋಜನಾ ಆಯೋಗದ ಅಧ್ಯಕ್ಷರಾಗಿದ್ದು, **ಡಿ.ಆರ್. ಗಾಡ್ಗಿಲ್, ಸಿ. ಸುಬ್ರಹ್ಮಣ್ಯ** (1971-72), **ದುರ್ಗಾ ಪ್ರಸಾದ್ ಧಾರ್** (1972-74) ಅವರು ಯೋಜನಾ ಆಯೋಗದ ಉಪಾಧ್ಯಕ್ಷರುಗಳಾಗಿದ್ದರು
- 1969ರಲ್ಲಿ ಅಂದಿನ ಯೋಜನಾ ಆಯೋಗದ ಉಪಾಧ್ಯಕ್ಷರಾಗಿದ್ದ ಬಿ.ಆರ್. ಗಾಡ್ಗಿಲ್ ಅವರ ತತ್ವವನ್ನು ಅಳವಡಿಸಿಕೊಳ್ಳಲಾಯಿತು. ಆದ್ದರಿಂದ ಈ ಯೋಜನೆಯನ್ನು **ಗಾಡ್ಗಿಲ್ ಯೋಜನೆ** ಎಂದೇ ಕರೆಯಲಾಗಿದೆ.
- ಈ ಯೋಜನೆಯು ಸ್ಥಿರತೆಯೊಂದಿಗೆ ಬೆಳವಣಿಗೆ & ಸ್ವ ಪ್ರಗತಿಗೆ ಉತ್ತೇಜನ ನೀಡುವ ಉದ್ದೇಶ ಹೊಂದಿತ್ತು.
- 1969 ಜುಲೈ 19 ರಂದು 50 ಕೋಟಿಗಿಂತ ಹೆಚ್ಚು ವಹಿವಾಟು ಹೊಂದಿದ್ದ 14 ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರೀಕರಣ ಮಾಡಲಾಯಿತು. ಇದನ್ನು **ಮೊದಲ ಹಂತದ ಬ್ಯಾಂಕುಗಳ ರಾಷ್ಟ್ರೀಕರಣ** ಎನ್ನುವರು. ಜುಲೈ 19 ನ್ನು ಬ್ಯಾಂಕುಗಳ ರಾಷ್ಟ್ರೀಕರಣ ದಿನವನ್ನಾಗಿ ಪ್ರತಿವರ್ಷ ಆಚರಿಸಲಾಗುತ್ತಿದೆ. 14 ಬ್ಯಾಂಕುಗಳು ದೇಶದ ಬ್ಯಾಂಕ್ ನ ಒಟ್ಟು ಠೇವಣಿಯಲ್ಲಿ ಶೇ 85 ರಷ್ಟು ಭಾಗವನ್ನು ಹೊಂದಿದ್ದವು. ಈ ಸಂದರ್ಭದಲ್ಲಿ **ಇಂದಿರಾಗಾಂಧಿ** ಅವರು ಪ್ರಧಾನಿಯಾಗಿದ್ದರು. ಹಾಗೂ **ಎಲ್.ಕೆ. ಝಾ** ಆರ್.ಬಿ.ಐನ ಗೌರ್ನರ್ ಆಗಿದ್ದರು.
- ಕೃಷಿಯನ್ನು ಅಭಿವೃದ್ಧಿಗೊಳಿಸಲು ಹಸಿರು [illegible] ಯೋಜನೆಯನ್ನು ಮುಂದುವರಿಸಲಾಯಿತು. [illegible] ರಿಂದ ಈ ಯೋಜನೆಯನ್ನು ಹಸಿರು [illegible] **ಫಲಪ್ರದವಾದ ಅವಧಿ** ಎನ್ನುವರು.
- 1969 ರಲ್ಲಿ ಅಗ್ರಬ್ಯಾಂಕ್ (ಲೀಡ್ [illegible]) ಯೋಜನೆಯನ್ನು ನಾರಿಮನ್ ಸಮಿತಿ [illegible] ಮೇರೆಗೆ ರೂಪಿಸಿದ್ದು, ಜಿಲ್ಲಾವಾರು [illegible] ಉದ್ದೇಶದಿಂದ ಆದ್ಯತಾ ವಲಯದಲ್ಲಿ ವಿವಿಧ [illegible] ಸಾಲಗಳನ್ನು ನೀಡಲು & ಬ್ಯಾಂಕುಗಳ ಶಾಖೆ[illegible] ವಿಸ್ತರಿಸುವ ಜವಾಬ್ದಾರಿ ಮೊದಲ ಬಾರಿಗೆ [illegible] ರೂಪಿಸಿತು.
- ಈ ಅವಧಿಯಲ್ಲಿ ಕೂಡ ಭಾರತ ಮತ್ತು ಪಾಕಿ[illegible] ನಡುವಿನ ಯುದ್ಧ(1971) ಜರುಗಿ ಬಾಂಗ್ಲಾ ದೇ[illegible] ವಿಮೋಚನೆಯಾಯಿತು.
- 1973 ಬರಗಾಲ ಪೀಡಿತ ಪ್ರದೇಶಾಭಿವೃದ್ಧಿ ಕಾರ್ಯ[illegible] ಜಾರಿ (DPAP)
- ನಿರೀಕ್ಷಿತ ಬೆಳವಣಿಗೆ ದರ 5.6%, ಆದರೆ ವಾಸ್ತವಿಕ 3.3% ಸಾಧಿಸಿತು.
- ಈ ಅವಧಿಯಲ್ಲಿ ರಾಜಸ್ಥಾನದ ಪೋಖ್ರಾನ್ [illegible] ಸ್ಥಳದಲ್ಲಿ **'ಸ್ಮೈಲಿಂಗ್ ಬುದ್ಧ'** ಎಂಬ ಹೆಸ[illegible] ಪೋಖ್ರಾನ್-1 ಅಣು ಪರೀಕ್ಷೆಯನ್ನು ಮೇ[illegible] 1974ರಲ್ಲಿ ನಡೆಸಲಾಯಿತು.

## ಗಾಡ್ಗಿಲ್ ತತ್ವ Gadgil Formula




- ಸಮಾಜ ವಿಜ್ಞಾನಿ **ಡಿ.ಆರ್. ಗಾಡ್ಗಿಲ್** (ಧನಂಜಯ ರಾಮಚಂದ್ರ ಗಾಡ್ಗಿಲ್)ರವರು ಭಾರತದ ಶ್ರೇಷ್ಠ ಅರ್ಥಶಾಸ್ತ್ರಜ್ಞರು ಹಾಗೂ ಪುಣೆಯ **"ಗೋಖಲೆ ಇನ್‌ಸ್ಟಿಟ್ಯೂಟ್ ಆಫ್ ಪಾಲಿಟಿಕ್ಸ್ ಅಂಡ್ ಎಕಾನಾಮಿಕ್ಸ್ ಸಂಸ್ಥೆ"**ಯ ಮಾಜಿ ನಿರ್ದೇಶಕರು, ಇವರು **ಗಾಡ್ಗಿಲ್ ಸೂತ್ರ** ಎಂಬ ಪುಸ್ತಕದ ಕರ್ತೃವಾಗಿದ್ದಾರೆ. ಗಾಡ್ಗಿಲ್ ಸೂತ್ರವನ್ನು ಭಾರತದಲ್ಲಿ ರಾಜ್ಯಗಳ ಯೋಜನೆಗೆ ಸಂಬಂಧಿಸಿದಂತೆ ಕೇಂದ್ರದ ಸಹಭಾಗಿತ್ವ ಮತ್ತು ಸಹಕಾರವನ್ನು ನೀಡುವ ಬಗ್ಗೆ ಮತ್ತು ರಾಜ್ಯಗಳಿಗೆ ಅನುದಾನವನ್ನು ಹಂಚಿಕೆ ಮಾಡುವ ಬಗ್ಗೆ ಸೂತ್ರವನ್ನು ನೀಡಲಾಗಿದೆ.

| ಮಾನದಂಡಗಳು | ಶೇಕಡಾವಾರು |
|---|---|
| ಜನಸಂಖ್ಯೆ | 60% |
| ತಲಾದಾಯ | 25% |
| ತೆರಿಗೆ ಸಂಗ್ರಹಣೆ | 7.5% |
| ವಿಶೇಷ ಸಮಸ್ಯೆಗಳು | 7.5% |

- ಈ ಸೂತ್ರವನ್ನು 1980ರಲ್ಲಿ ಮತ್ತೆ ಪರಿಷ್ಕರಿಸಲಾ[illegible] ಪರಿಷ್ಕರಿಸಿದ ಸೂತ್ರವನ್ನು 6 & 7ನೇ ಪಂಚವಾ[illegible] ಯೋಜನೆಯಲ್ಲಿ ಅಳವಡಿಸಿ ಕೊಳ್ಳಲಾ[illegible] ಪರಿಷ್ಕರಿಸಿದ ಸೂತ್ರದಲ್ಲಿ ತಲಾದಾಯ & ಮು[illegible] ಯೋಜನೆಗಳಿಗೆ ಶೇ.20ರಷ್ಟು ಆದ್ಯತೆ ನೀಡಲಾ[illegible]
- ಅಸ್ಸಾಂ, ಜಮ್ಮು ಕಾಶ್ಮೀರ, ನಾಗಾಲ್ಯಾಂಡ್ ರಾ[illegible] ವಿಶೇಷವಾದ ಕೇಂದ್ರ ನೆರವು ನೀಡಿತು. ಸಂ[illegible] **282 ನೇ ವಿಧಿ ಪ್ರಕಾರ** ಯೋಜನೆಗಳಡಿಯಲ್ಲಿ [illegible] ಸಂಪನ್ಮೂಲಗಳನ್ನು ವರ್ಗಾಯಿಸಲಾಗುತ್ತ[illegible]

## ಐದನೇ ಯೋಜನೆ (1974 -1978)



➢ ಈ ಯೋಜನೆಯ ಅವಧಿಯಲ್ಲಿ ಇಂದಿರಾಗಾಂಧಿ ಅವರು ಯೋಜನಾ ಆಯೋಗದ ಅಧ್ಯಕ್ಷರಾಗಿದ್ದು, ಪಿ.ಎನ್. ಹಕ್ಸಾರ್ (1975-77) ಅವರು ಯೋಜನಾ ಆಯೋಗದ ಉಪಾಧ್ಯಕ್ಷರಾಗಿದ್ದರು

➢ **ಉದ್ದೇಶ:-** ಐದನೇ ಪಂಚವಾರ್ಷಿಕ ಯೋಜನೆಯು ಉದ್ಯೋಗ, ಬಡತನ ನಿರ್ಮೂಲನೆ (ಗರೀಬಿ ಹಟಾವೊ) ಹಾಗೂ ಸಾಮಾಜಿಕ ನ್ಯಾಯ ಸ್ಥಾಪನೆಯೊಂದಿಗೆ ಬೆಳವಣಿಗೆಗೆ ಆದ್ಯತೆ ನೀಡಲಾಯಿತು.

➢ 1974 **ವಿಶ್ವಬ್ಯಾಂಕ್ ನೆರವಿನಿಂದ ಕನಿಷ್ಠ ಅಗತ್ಯತೆ ಕಾರ್ಯಕ್ರಮ (Basic Needs Stratergy)** ಜಾರಿ. ಇದು ದೇಶದ ಕಡುಬಡವರಿಗೆ ಆಹಾರ ಭದ್ರತೆಯನ್ನು ಒದಗಿಸುವ ಮುಖ್ಯ ಉದ್ದೇಶ ಹೊಂದಿದೆ.

➢ 1974-75ರಲ್ಲಿ **ಸಮುದಾಯ ಜಲಾನಯನ ಅಭಿವೃದ್ಧಿ ಕಾರ್ಯಕ್ರಮ** ರೂಪಿಸಿದ್ದು, ಇದು ಜಲಾನಯನ ಅಭಿವೃದ್ಧಿಗೆ ಸಂಬಂಧಿಸಿದ್ದು, ಮಳೆ ನೀರು ಕೊಯ್ಲು ತಂತ್ರಗಳ ಅಳವಡಿಕೆ & ಕೆರೆ ಬಾವಿಗಳನ್ನು ಪುನರುಜ್ಜೀವನಗೊಳಿಸುವ ಉದ್ದೇಶ ಹೊಂದಿದೆ.

➢ 1975 ಅಕ್ಟೋಬರ್ 2 ರಂದು ಇಂದಿರಾ ಗಾಂಧಿಯವರು **20 ಅಂಶಗಳ ಕಾರ್ಯಕ್ರಮವನ್ನು** ಉದ್ಘಾಟಿಸಿದರು.

➢ 20 ಅಂಶದ ಕಾರ್ಯಕ್ರಮದಲ್ಲಿ ಶಿಕ್ಷಣ, ಉದ್ಯೋಗ, ಆಹಾರ, ವಸತಿ, ಬಡತನ ನಿರ್ಮೂಲನೆ, ಕೈಗಾರಿಕೆಗಳಂತಹ ಎಲ್ಲಾ ರಂಗಗಳ ಅಭಿವೃದ್ಧಿಗೆ ಸಂಬಂಧಿಸಿದ ಕಾರ್ಯಕ್ರಮ ಕೈಗೊಳ್ಳಲಾಯಿತು.

➢ 20 ಅಂಶದ ಕಾರ್ಯಕ್ರಮಗಳನ್ನು 1982, 1986, 2006 ರಲ್ಲಿ ಪುನರ್ ನವೀಕರಿಸಲಾಗಿದೆ.

➢ 1975 ಅಕ್ಟೋಬರ್ 2 ರಂದು **ಪ್ರಾದೇಶಿಕ ಗ್ರಾಮೀಣ ಬ್ಯಾಂಕು (RRBs)** ಗಳನ್ನು **ಆರ್.ಜಿ. ಸರಯ್ಯ** ಸಮಿತಿ ಶಿಫಾರಸ್ಸಿನ ಮೇರೆಗೆ ಗ್ರಾಮೀಣಾಭಿವೃದ್ಧಿಗೆ ಅಗತ್ಯವಾದ ಸಾಂಸ್ಥಿಕ ಸಾಲವನ್ನು ಒದಗಿಸಲು ಸ್ಥಾಪಿಸಲಾಯಿತು. (ಕರ್ನಾಟಕದಲ್ಲಿ ಪ್ರಸ್ತುತ ಪ್ರಗತಿ ಗ್ರಾಮೀಣ ಬ್ಯಾಂಕ್, ಕರ್ನಾಟಕ ವಿಕಾಸ ಗ್ರಾಮೀಣ ಬ್ಯಾಂಕ್ ಮತ್ತು ಕಾವೇರಿ ಬ್ಯಾಂಕ್ ಎಂಬ 3 ಬ್ಯಾಂಕ್‌ಗಳಿವೆ) 1976 ರಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕು ಕಾಯ್ದೆ ರೂಪಿಸಲಾಗಿದೆ.

➢ **ಸಿಂಡಿಕೇಟ್ ಬ್ಯಾಂಕ್** ಪ್ರಾಯೋಜಕತ್ವದಲ್ಲಿ ಮೊದಲ ಗ್ರಾಮೀಣ ಬ್ಯಾಂಕ್ ಸ್ಥಾಪಿಸಲಾಗಿದೆ.

➢ **ಉಳುವವನೇ ಭೂಮಿಯ ಒಡೆಯ** ಶಾಸನ (Tiller is Tenant) ಜಾರಿಗೆ ತರಲಾಯಿತು. ಇದು ಭೂರಹಿತ ರೈತರಿಗೆ ಮಾಲೀಕತ್ವದ ಹಕ್ಕನ್ನುಒದಗಿಸಲು ಅನುಕೂಲವಾಯಿತು.

➢ 1975 ರಲ್ಲಿ **ವಿದ್ಯುಚ್ಛಕ್ತಿ ಪೂರೈಕೆ ಕಾಯ್ದೆ** ಪರಿಷ್ಕರಣೆಗೊಂಡು ಕೇಂದ್ರ ಸರ್ಕಾರ ವಿದ್ಯುತ್‌ನ್ನು ಉತ್ಪಾದಿಸುವ ಮತ್ತು ವರ್ಗಾಯಿಸುವ ಕ್ಷೇತ್ರಕ್ಕೆ ಪ್ರವೇಶಿಸಿತು. ವಿದ್ಯುತ್ ಕ್ಷೇತ್ರವು ಸಂವಿಧಾನದ ಪ್ರಕಾರ **ಸಮವರ್ತಿ ಪಟ್ಟಿಗೆ** ಸೇರಿದ ವಿಷಯವಾಗಿದೆ.

➢ 1976 ರಲ್ಲಿ **ಜೀತ ಪದ್ಧತಿ ರದ್ದತಿ ಕಾನೂನು** ಜಾರಿಗೆ ತಂದು, ಸಾಮಾಜಿಕ ನ್ಯಾಯ ಸ್ಥಾಪನೆಗೆ ಅವಕಾಶ ಕಲ್ಪಿಸಿತು. & ಸಂವಿಧಾನದ 23 ನೇ ವಿಧಿಯನ್ವಯ ದೇಶದಲ್ಲಿ ಬಲತ್ಕಾರದ ದುಡಿಮೆ & ದುರ್ವ್ಯವಹಾರ ದುಡಿಮೆ ಪದ್ಧತಿಯನ್ನು ನಿಷೇಧಿಸಲಾಗಿದೆ.

➢ 1976 ರಲ್ಲಿ ಭಾರತ ಸರ್ಕಾರದ ಕಾರ್ಮಿಕ & ಉದ್ಯೋಗ ಇಲಾಖೆಯು **ಸಮಾನ ಕೆಲಸಕ್ಕಾಗಿ ಸಮಾನ ವೇತನ ಕಾನೂನನ್ನು** ಜಾರಿಗೆ ತರಲಾಯಿತು. ಈ ಮೂಲಕ ಸಂವಿಧಾನದ ರಾಜ್ಯ ನಿರ್ದೇಶಕ ತತ್ವದಲ್ಲಿ ಸೂಚಿಸಲಾಗಿರುವ ಸಂವಿಧಾನದ 43 ನೇ ವಿಧಿಯನ್ನು ಸಾಕಾರಗೊಳಿಸಲಾಗಿದೆ.

➢ **1977 ರಲ್ಲಿ ಕೂಲಿಗಾಗಿ ಕಾಳು ಯೋಜನೆ** ಜಾರಿಗೆ ತಂದಿದ್ದು, ಬಡತನ ನಿವಾರಣೆ ಮುಖ್ಯ ಉದ್ದೇಶ ಹೊಂದಿದೆ. ಬರಗಾಲ/ಕ್ಷಾಮದ ಸಂದರ್ಭದಲ್ಲಿ ಉದ್ಯೋಗ ಒದಗಿಸುವುದು. ಇದು **2004** ರಲ್ಲಿ **ರಾಷ್ಟ್ರೀಯ ಕೂಲಿಗಾಗಿ ಕಾಳು ಕಾರ್ಯಕ್ರಮ** (NFWP - National Food for Work Programme) ವಾಗಿ ಪುನರ್ ನಾಮಕರಣಗೊಂಡಿತು.

➢ ಈ ಯೋಜನೆಯಲ್ಲಿ ಕೃಷಿ ಉತ್ಪಾದನೆ ಮತ್ತು **ರಕ್ಷಣೆಯಲ್ಲಿ ಸ್ವಾವಲಂಬನೆ ಸಾಧಿಸಲು** ಪ್ರಯತ್ನವನ್ನು ಮಾಡಲಾಯಿತು. ಈ ಯೋಜನೆಯು 1977ರಲ್ಲಿ ಬಂದ ಮೊರಾರ್ಜಿ ದೇಸಾಯಿ ನೇತೃತ್ವದ ಸರ್ಕಾರ ತಿರಸ್ಕರಿಸಿತು. ಆದ್ದರಿಂದ 5ನೇ ಪಂಚವಾರ್ಷಿಕ ಯೋಜನೆಯು ನಿಗದಿತ ಅವಧಿಗಿಂತ ಒಂದು ವರ್ಷ ಮುಂಚಿತವಾಗಿ ಮುಕ್ತಾಯಗೊಂಡು ಆವರ್ತ ಯೋಜನೆ ಜಾರಿಗೆ ಬಂದಿತು.

➢ ನಿರೀಕ್ಷಿತ ಬೆಳವಣಿಗೆ ದರ 4.4%, ವಾಸ್ತವಿಕವಾಗಿ 4.8% ರಷ್ಟು ಸಾಧಿಸಿದೆ.

## ಪಂಚವಾರ್ಷಿಕ ಯೋಜನೆ 5ನೇ ಹಂತದ ರಜೆ / ಉರುಳುವ - ಆವರ್ತ ಯೋಜನೆ (1978-1980)



- ಈ ಯೋಜನೆಯ ಅವಧಿಯಲ್ಲಿ **ಮೊರಾರ್ಜಿ ದೇಸಾಯಿ** (1977-79), **ಚೌದ್ರಿ ಚರಣ್ ಸಿಂಗ್** (1979-80) ಅವರು ಯೋಜನಾ ಆಯೋಗದ ಅಧ್ಯಕ್ಷರಾಗಿದ್ದು, **ಡಿ.ಟಿ. ಲಕಡ್‌ವಾಲ್** (1977-80) ಅವರು ಯೋಜನಾ ಆಯೋಗದ ಉಪಾಧ್ಯಕ್ಷರಾಗಿದ್ದರು. ಇವರು ದೇಶದ ಬಡತನ ಅಂದಾಜು ಕ್ಷೇತ್ರಕ್ಕೆ ಸಂಬಂಧಿಸಿದಂತೆ ಸಾಕಷ್ಟು ಸಂಶೋಧನೆ ನಡೆಸಿದ್ದಾರೆ.
- 1978 **ರಾಷ್ಟ್ರೀಯ ವಯಸ್ಕ ಶಿಕ್ಷಣ ಕಾರ್ಯಕ್ರಮ** ಜಾರಿ. ಇದರ ಮುಖ್ಯ ಉದ್ದೇಶ ಅನಕ್ಷರಸ್ಥ ಮತದಾರ ವರ್ಗದವರನ್ನು ಸಾಕ್ಷರರನ್ನಾಗಿಸುವುದು.
- 1979 **TRYSEM** ಗ್ರಾಮೀಣ ಯುವಕರಿಗೆ ಸ್ವಯಂ ಉದ್ಯೋಗ ತರಬೇತಿ ಕಾರ್ಯಕ್ರಮ ಜಾರಿ.
- 1980 – **IRDP** ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ ಜಾರಿಗೆ ಬಂದಿದ್ದು, ದೇಶದ ಬಡತನ ನಿವಾರಣೆಯ ಅತ್ಯುನ್ನತ ಕಾರ್ಯಕ್ರಮ ಎನಿಸಿದೆ. ಆದರೆ 1999 ಏಪ್ರಿಲ್ 1 ರಿಂದ **ಸ್ವರ್ಣ ಜಯಂತಿ ಗ್ರಾಮ್ ಸ್ವರೋಜ್‌ಗಾರ್ ಯೋಜನೆಯೊಂದಿಗೆ** ವಿಲೀನಗೊಂಡಿದೆ. ನಂತರ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯನ್ನು **ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನ** (NRLM) ವಾಗಿ 2011 ಜೂನ್ ನಲ್ಲಿ ಮರುನಾಮಕರಣಗೊಳಿಸಲಾಯಿತು.

## ಆರನೇ ಯೋಜನೆ (1980-1985)



- 6ನೇ ಯೋಜನೆಯ ಅವಧಿಯಲ್ಲಿ **ಇಂದಿರಾಗಾಂಧಿ** (1980-84), **ರಾಜೀವ್ ಗಾಂಧಿ** (1984-89) ಅವರು ಯೋಜನಾ ಆಯೋಗದ ಅಧ್ಯಕ್ಷರುಗಳಾಗಿದ್ದು, **ನಾರಾಯಣ್ ದತ್ ತಿವಾರಿ** (1980-81), **ಎಸ್.ಬಿ. ಚೌಹಾಣ್** (1981-84), **ಪ್ರಕಾಶ್ ಚಂದ್ರ ಸೇಥಿ** (1984), **ಪಿ.ವಿ. ನರಸಿಂಹರಾವ್** (1984-85) ಅವರು ಯೋಜನಾ ಆಯೋಗದ ಉಪಾಧ್ಯಕ್ಷರುಗಳಾಗಿದ್ದರು
- ಆರನೇ ಯೋಜನೆಯನ್ನು ಮೊರಾರ್ಜಿ ದೇಸಾಯಿ ನೇತೃತ್ವದ ಜನತಾ ಸರ್ಕಾರ ರೂಪಿಸಿತ್ತು. ನಂತರ ಇಂದಿರಾಗಾಂಧಿ ಸರ್ಕಾರವು ಇದನ್ನು ವಜಾಗೊಳಿಸಿ ಮತ್ತೆ ಹೊಸ ಯೋಜನೆಯನ್ನು ರೂಪಿಸಿತು. ಹೀಗೆ ಒಂದು ಸರ್ಕಾರ ರೂಪಿಸಿದ ಯೋಜನೆಯನ್ನು ಮತ್ತೊಂದು ಸರ್ಕಾರ ವಜಾಗೊಳಿಸಿ, ಹೊಸ ಯೋಜನೆಯನ್ನು ರೂಪಿಸಿದರೆ ಅಂತಹ ಯೋಜನೆಯನ್ನು ಉರುಳುವ ಯೋಜನೆ ಎನ್ನುವರು ಈ ಪರಿಕಲ್ಪನೆಯನ್ನು ಸ್ವೀಡನ್ ದೇಶದ **ನೊಬೆಲ್ ಪುರಸ್ಕೃತ ಅರ್ಥಶಾಸ್ತ್ರಜ್ಞ ಗುನ್ನಾರ್ ಮಿರ್ಡಾಲ್** ಪರಿಚಯಿಸಿದರು.
- ಈ ಅವಧಿಯಲ್ಲಿ ಕೈಗಾರಿಕಾ ಅಭಿವೃದ್ಧಿಗೆ ಹೆಚ್ಚು ಆದ್ಯತೆ. ಅದರಲ್ಲೂ ಮಾಹಿತಿ ತಂತ್ರಜ್ಞಾನಕ್ಕೆ ಆದ್ಯತೆ ನೀಡಲಾಯಿತು.
- ಭಾರತದಲ್ಲಿ ಹೆದ್ದಾರಿ ಪದ್ಧತಿ ಪರಿಚಯ.
- 1980 NREP-National Rural Employment Programme - ಜಾರಿ
- 1980 ಏಪ್ರಿಲ್ 15 ರಂದು 200 ಕೋಟಿಗಿಂತ ಹೆಚ್ಚು ವಹಿವಾಟು ಹೊಂದಿದ್ದ 6 ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರೀಕರಣ ಮಾಡಲಾಯಿತು. ಇದನ್ನು **ಎರಡನೇ ಹಂತದ ಬ್ಯಾಂಕುಗಳ ರಾಷ್ಟ್ರೀಕರಣ** ಎನ್ನುವರು. ನಂತರದಲ್ಲಿ ಭಾರತದ ಬ್ಯಾಂಕಿಂಗ್ ವ್ಯವಹಾರದ % 91 ರಷ್ಟು ನಿಯಂತ್ರಣ ಭಾರತದ ಕೇಂದ್ರ ಸರ್ಕಾರದ ಅಧೀನಕ್ಕೊಳಪಟ್ಟಿತು.
- 1980ರಲ್ಲಿ ಒಟ್ಟಾರೆ 20 ಬ್ಯಾಂಕುಗಳು ರಾಷ್ಟ್ರೀಕರಣಗೊಂಡಿದ್ದವು. ಆದರೆ 1993 ರಲ್ಲಿ **"ನ್ಯೂ ಬ್ಯಾಂಕ್ ಆಫ್ ಇಂಡಿಯಾ"** ಪಂಜಾಬ್ ನ್ಯಾಷನಲ್ ಬ್ಯಾಂಕಿನೊಂದಿಗೆ ವಿಲೀನಗೊಂಡ ನಂತರ 19 ಆಯಿತು.
- 1982 ಜುಲೈ 12 ರಂದು **NABARD**- National Bank for Agricultural & Rural Development **ಬಿ. ಶಿವರಾಮನ್ ಸಮಿತಿ** ಶಿಫಾರಸ್ಸಿನ ಮೇರೆಗೆ ಸ್ಥಾಪನೆಯಾಗಿದ್ದು, ಮರುಹಣಕಾಸು ಸೌಲಭ್ಯ ನೀಡುವ ಅತ್ಯುನ್ನತ ಹಣಕಾಸು ಸಂಸ್ಥೆ & ಅಭಿವೃದ್ಧಿ ಬ್ಯಾಂಕ್.
- 1982 **EXIM**- Export & Import Bank ಸ್ಥಾಪನೆ
- 1983 ರಲ್ಲಿ ಗ್ರಾಮೀಣ ಭೂ ರಹಿತ ಕಾರ್ಮಿಕರಿಗೆ ಉದ್ಯೋಗ ಕಾರ್ಯಕ್ರಮ (**RLEGP**-Rural Landless Employment Guarantee Programme), ಗ್ರಾಮೀಣ ಮಹಿಳೆ & ಮಕ್ಕಳ ಅಭಿವೃದ್ಧಿ ಕಾರ್ಯಕ್ರಮ (**DWACRA**-Development of women & children in Rural Area), ನಗರ ಮಹಿಳೆ & ಮಕ್ಕಳ ಅಭಿವೃದ್ಧಿ ಕಾರ್ಯಕ್ರಮ (**DWACUA**-Development of women & children in Urban Area) ಕಾರ್ಯಕ್ರಮಗಳ ಜಾರಿ
- ಆರ್ಥಿಕ ಉದಾರೀಕರಣದ ಪ್ರಾರಂಭದ ಅವಧಿ & **ನೆಹರೂ ಅವರ ಸಮಾಜವಾದಿ ಯುಗದ** ಅಂತ್ಯದ

## ಏಳನೇ ಯೋಜನೆ (1985-1990)



- ಈ ಯೋಜನೆಯ ಅವಧಿಯಲ್ಲಿ **ರಾಜೀವ್ ಗಾಂಧಿ (1984-89)** ಅವರು ಯೋಜನಾ ಆಯೋಗದ ಅಧ್ಯಕ್ಷರಾಗಿದ್ದು, **ಮನಮೋಹನ್ ಸಿಂಗ್ (1985-87), ಪಿ. ಶಿವಶಂಕರ್ (1987-88), ಮಾಧವ್ ಸಿಂಗ್ ಸೋಲಂಕಿ (1988-89)** ಅವರು ಯೋಜನಾ ಆಯೋಗದ ಉಪಾಧ್ಯಕ್ಷರುಗಳಾಗಿದ್ದರು
- ಈ ಅವಧಿಯಲ್ಲಿ ಮತ್ತೆ ಕಾಂಗ್ರೆಸ್ ಅಧಿಕಾರಕ್ಕೆ ಬಂದಿತು. ಇದು ಶಕ್ತಿ ಉತ್ಪಾದನೆಗೆ ಹೆಚ್ಚು ಆದ್ಯತೆ ಕೊಡಲಾಯಿತು, ಉದ್ಯೋಗಗಳನ್ನು ಸೃಷ್ಟಿಸುವುದು, ಆಹಾರದ ಉತ್ಪಾದನೆ ಹೆಚ್ಚಿಸುವುದು ಹಾಗೂ ಈ ಯೋಜನೆಯಲ್ಲಿ ತಂತ್ರಜ್ಞಾನವನ್ನು ಉನ್ನತೀಕರಿಸಲು ಆದ್ಯತೆ ನೀಡಲಾಯಿತು.
- 7ನೇ ಪಂಚವಾರ್ಷಿಕ ಯೋಜನೆಯಲ್ಲಿ ಸಾಮಾಜಿಕ ನ್ಯಾಯ, ಬಡತನ ನಿರ್ಮೂಲನೆಗೆ ಸಂಬಂಧಿಸಿದ ಕಾರ್ಯಕ್ರಮಗಳು ಹೆಚ್ಚು ರೂಪುಗೊಂಡು, ಭಾರತದಲ್ಲಿ ಸ್ವತಂತ್ರ ಅರ್ಥವ್ಯವಸ್ಥೆಯನ್ನು ನಿರ್ಮಾಣ ಮಾಡಲು ಪ್ರಯತ್ನಿಸಲಾಯಿತು.
- ಈ ಯೋಜನೆಯಲ್ಲಿ ಜಿ.ಡಿ.ಪಿ ದರವು ಶೇ.5 ನ್ನು ತಲುಪುವ ನಿರೀಕ್ಷೆಯಲ್ಲಿತ್ತು. ಆದರೆ ನೈಜ ಬೆಳವಣಿಗೆಯು ಶೇ.5.7 ಆಗಿತ್ತು.
- 1985ರಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಾಲಯ (**MHRD**- Ministry of Human Resources Development) ಸ್ಥಾಪನೆ.
- 1985 ರಲ್ಲಿ ಗ್ರಾಮೀಣ ತಂತ್ರಜ್ಞಾನ & ಜನರ ಕ್ರಿಯಾ ಭಾಗವಹಿಸುವಿಕೆ ಮುನ್ನಡೆ ಸಮಿತಿ (**CAPART** - Council for Advancement of People Action and Rural Technology) ಸೇರಿದೆ.
- 1985-86 **IAY** - ಇಂದಿರಾ ಆವಾಸ್ ಯೋಜನೆ. ಇದು ಪ್ರಸ್ತುತ **ಪ್ರಧಾನ ಮಂತ್ರಿ ಆವಾಸ್ ಯೋಜನೆ** ಆಗಿ 2015 ಜೂನ್ 25 ರಂದು ಮರು ನಾಮಕರಣಗೊಂಡಿದೆ. ಇದರ ಮುಖ್ಯ ಉದ್ದೇಶ ಗ್ರಾಮೀಣ ವಸತಿ ರಹಿತರಿಗೆ ವಸತಿ ನಿರ್ಮಾಣ.
- **1986** - ಹೊಸ ರಾಷ್ಟ್ರೀಯ ಶಿಕ್ಷಣ ನೀತಿ, ಗ್ರಾಹಕ ರಕ್ಷಣ ಕಾನೂನು, ಬಾಲಕಾರ್ಮಿಕ ನಿಷೇಧ ಕಾನೂನು, ವರದಕ್ಷಿಣೆ ವಿರೋಧಿ ಕಾನೂನು (1961) ಪರಿಷ್ಕರಣೆಗೊಂಡವು.
- 1988 ರಲ್ಲಿ **ಸ್ವರ್ಣಲಾಘವ ಹಸ್ತ ಪದ್ಧತಿ** ಜಾರಿಗೆ ತಂದಿದ್ದು, ಇದು ಸ್ವಯಂ ನಿವೃತ್ತಿ ಘೋಷಣೆ ಮಾಡುವ (VRS) ನೌಕರರಿಗೆ ಸಂಬಂಧಿಸಿದೆ.
- 1988 ರಲ್ಲಿ ಸೆಬಿ (**SEBI**-Securities Exchange Board of India) ಸ್ಥಾಪನೆ. ಇದು 1992 ರಲ್ಲಿ ಶಾಸನ ಬದ್ಧ ಸಂಸ್ಥೆಯಾಯಿತು. ಇದು ಬಂಡವಾಳ ಮಾರುಕಟ್ಟೆಯ ನಿಯಂತ್ರಕ ಕಾರ್ಯವನ್ನು ನಿರ್ವಹಿಸುತ್ತಿದೆ.
- 1989 ನವಂಬರ್ 14, **NRY**- Neharu Rozgar Yojana, **JRY** - Jawahar Rozgar Yojana ಯೋಜನೆ ಜಾರಿಯಾಗಿದ್ದು, ಕ್ರಮವಾಗಿ ಗ್ರಾಮೀಣ & ನಗರ ಪ್ರದೇಶಗಳಿಗೆ ಉದ್ಯೋಗ ಕಲ್ಪಿಸುವುದು.
- 1989 ನವಂಬರ್ 14 ರಲ್ಲಿ ಮಕ್ಕಳ ಹಕ್ಕು ಒಡಂಬಡಿಕೆ, ವಿಶ್ವಸಂಸ್ಥೆಯ ಸಾಮಾನ್ಯ ಸಭೆಯಲ್ಲಿ ಘೋಷಣೆಯಾಯಿತು. ಭಾರತವು 1992 ಡಿಸೆಂಬರ್ 11 ರಂದು ಈ ಒಡಂಬಡಿಕೆಗೆ ಸಹಿ ಹಾಕಿತು.

## 3ನೇ ಹಂತದ ಯೋಜನಾ ರಜೆ/ಹೊಸ ಆರ್ಥಿಕ ನೀತಿಯ ಅನುಷ್ಠಾನದ ಅವಧಿ (1990-92)

- ಈ ಯೋಜನೆಯ ಅವಧಿಯಲ್ಲಿ **ಚಂದ್ರಶೇಖರ್ (1990-91), ಪಿ.ವಿ. ನರಸಿಂಹರಾವ್ (1991-96)** ಅವರು ಯೋಜನಾ ಆಯೋಗದ ಅಧ್ಯಕ್ಷರಾಗಿದ್ದು, **ರಾಮಕೃಷ್ಣ ಹೆಗಡೆ (1989-90), ಮಧು ದಂಡವತೆ (1990), ಮೋಹನ್ ದಾರಿಯಾ (1990-91), ಪ್ರಣಬ್ ಮುಖರ್ಜಿ (1991-96)** ಅವರು ಯೋಜನಾ ಆಯೋಗದ ಉಪಾಧ್ಯಕ್ಷರುಗಳಾಗಿದ್ದರು.
- **ರಾಜ್ ಕೃಷ್ಣ** ಎಂಬುವವರು 1947-91ರ ಭಾರತದ ಆರ್ಥಿಕತೆಯ ಬೆಳವಣಿಗೆಯನ್ನು ಹಿಂದೂ ಆರ್ಥಿಕ ಬೆಳವಣಿಗೆ ದರ ಎಂದು ಕರೆದಿದ್ದಾರೆ, ಅಂದರೆ ದೇಶದ ಜಿಡಿಪಿ ಬೆಳವಣಿಗೆ ದರ ಶೇ 3ರನ್ನು ದಾಟುವುದಿಲ್ಲ ಎಂದು ಭಾವಿಸಿದ್ದರು.
- **1991 ಜುಲೈ 24,** ಹೊಸ ಆರ್ಥಿಕ ನೀತಿ & ಹೊಸ ಕೈಗಾರಿಕಾ ನೀತಿ ಘೋಷಣೆ ಮಾಡಲಾಗಿದ್ದು, ಇದರಲ್ಲಿ ಉದಾರೀಕರಣ, ಜಾಗತೀಕರಣ, ಖಾಸಗೀಕರಣ (LPG) ತಂತ್ರಗಳನ್ನು ಹೊಂದಿತ್ತು. ಇದರ ರೂವಾರಿಯಾಗಿ ಅಂದಿನ ಹಣಕಾಸು ಸಚಿವ **ಮನಮೋಹನ್ ಸಿಂಗ್** ಅವರನ್ನು ಗುರ್ತಿಸಬಹುದು.
- 1949, 1966, 1991ರಲ್ಲಿ ರೂಪಾಯಿ ಅಪಮೌಲ್ಯೀಕರಣ ಮಾಡಲಾಗಿದ್ದು, ದೇಶದ ರಫ್ತನ್ನು ಉತ್ತೇಜಿಸಿ ಆಮದನ್ನು ನಿಯಂತ್ರಿಸುವ ಮುಖ್ಯ ಉದ್ದೇಶ ಹೊಂದಿದೆ.

## ಎಂಟನೇ ಯೋಜನೆ (1992-1997)

- ಈ ಯೋಜನೆಯ ಅವಧಿಯಲ್ಲಿ ಪಿ.ವಿ. ನರಸಿಂಹರಾವ್ (1991-96), ಎ.ಬಿ. ವಾಜಪೇಯಿ (1996), ಹೆಚ್.ಡಿ. ದೇವೇಗೌಡ (1996-97) ಅವರು ಯೋಜನಾ ಆಯೋಗದ ಅಧ್ಯಕ್ಷರಾಗಿದ್ದು, ಪ್ರಣಬ್ ಮುಖರ್ಜಿ (1991-96) ಅವರು ಯೋಜನಾ ಆಯೋಗದ ಉಪಾಧ್ಯಕ್ಷರಾಗಿದ್ದರು.



- ಕೈಗಾರಿಕೆಗಳನ್ನು ಆಧುನೀಕರಣಗೊಳಿಸಲು ಹೆಚ್ಚು ಆದ್ಯತೆ ನೀಡಲಾಯಿತು.
- ಭಾರತವು ವಿಶ್ವ ವ್ಯಾಪಾರ ಸಂಸ್ಥೆ (WTO) ಯ ಸದಸ್ಯರಾಷ್ಟ್ರವಾಗಿ ಜ.1, 1995ರಲ್ಲಿ ಸೇರ್ಪಡೆಯಾಯಿತು.
- 1993 ಪಂಚಾಯತ್‌ರಾಜ್ ಕಾಯ್ದೆ, ನಗರಪಾಲಿಕೆಗಳನ್ನು ಸ್ಥಾಪಿಸಲಾಯಿತು.
- 1993- ಉದ್ಯೋಗ ಭರವಸೆ ಯೋಜನೆ (**EAS** - Employment Assurance Scheme)
- 1993- ಪ್ರಧಾನಮಂತ್ರಿ ರೋಜ್‌ಗಾರ್ ಯೋಜನೆ (**PMRY** - Pradhan mantri Rozgar Yojana)
- 1995-ಪೋಲಿಯೋ ಲಸಿಕೆ ಕಾರ್ಯಕ್ರಮ ಪ್ರಾರಂಭ ಮತ್ತು **HDI** - Human Development Index ಮೊದಲ ಬಾರಿಗೆ ಭಾರತದಲ್ಲಿ ಸಿದ್ಧಪಡಿಸಲಾಯಿತು.
- 1996-ಹೂಡಿಕೆ ಹಿಂತೆಗೆತ ಆಯೋಗ ನೇಮಕ
- 1997- ರಾಷ್ಟ್ರೀಯ ಆರೋಗ್ಯ ನಿಧಿ ಸ್ಥಾಪನೆ
- ನಿರೀಕ್ಷಿತ ಬೆಳವಣಿಗೆ ದರವನ್ನು ಮೀರಿ ವಾಸ್ತವಿಕ ಬೆಳವಣಿಗೆ ದರ ಸಾಧಿಸಲಾದ ಯೋಜನೆ.

## ಒಂಭತ್ತನೇ ಯೋಜನೆ (1997-2002)



- ಈ ಯೋಜನೆಯ ಅವಧಿಯಲ್ಲಿ ಐ.ಕೆ. ಗುಜ್ರಾಲ್ (1997-98), ಎ.ಬಿ. ವಾಜಪೇಯಿ (1998-2004) ಅವರು ಯೋಜನಾ ಆಯೋಗದ ಅಧ್ಯಕ್ಷರಾಗಿದ್ದು, ಮಧು ದಂಡವತೆ (1996-98), ಜಸ್ವಂತ್ ಸಿಂಗ್ (1998-99), ಕೆ.ಸಿ. ಪಂತ್ (1999-2004) ಅವರು ಯೋಜನಾ ಆಯೋಗದ ಉಪಾಧ್ಯಕ್ಷರುಗಳಾಗಿದ್ದರು.
- ಈ ಯೋಜನೆಯಲ್ಲಿ **"ಪ್ರಗತಿಯೊಂದಿಗೆ ಸಾಮಾಜಿಕ ನ್ಯಾಯ ಮತ್ತು ಸಮಾನತೆ"** ಎಂಬ ಧ್ಯೇಯದೊಂದಿಗೆ ಈ ಯೋಜನೆ ಪ್ರಾರಂಭವಾಯಿತು. ಈ ಯೋಜನೆಯು ಕೈಗಾರಿಕೆಗಳನ್ನು ಉನ್ನತಗೊಳಿಸುವುದು, ಮಾನವ ಸಂಪನ್ಮೂಲ ಅಭಿವೃದ್ಧಿ, ಕೃಷಿ ಕ್ಷೇತ್ರ ಮತ್ತು ಗ್ರಾಮೀಣಾಭಿವೃದ್ಧಿ, ಪ್ರಾಥಮಿಕ ಶಿಕ್ಷಣ, ಸಾಮಾಜಿಕ ಹಿಂದುಳಿದ ವರ್ಗಗಳ ಸಬಲೀಕರಣ, ಬೆಲೆ ಸ್ಥಿರತೆ, ಪ್ರಾಥಮಿಕ ಆರೋಗ್ಯ ಸೌಲಭ್ಯಗಳ ಒದಗಿಸುವಿಕೆಗೆ ಮಹತ್ವ ನೀಡಲಾಯಿತು.
- ಈ ಯೋಜನೆಯ ಒಟ್ಟು ಸಾರ್ವಜನಿಕ ವಲಯದ ಯೋಜನಾ ಗಾತ್ರವು 8,59,200 ಕೋಟಿ
- 1997- ಸ್ವರ್ಣಜಯಂತಿ ಶಹರೀ ರೋಜ್‌ಗಾರ್ ಯೋಜನೆ (**SJSRY**- Swarna jayanti Shahari Rozgar Yojana). ಇದು 2012-13ರಲ್ಲಿ ರಾಷ್ಟ್ರೀಯ ನಗರ ಜೀವನೋಪಾಯ ಅಭಿಯಾನ (NULM- National Urban Lively hood Mission). ಇದು 2016-17 ರಲ್ಲಿ ದೀನ್ ದಯಾಳ್ **ಅಂತ್ಯೋದಯ ರಾಷ್ಟ್ರೀಯ ನಗರ ಜೀವನೋಪಾಯ ಅಭಿಯಾನ** ಆಗಿ ಮರುನಾಮಕರಣಗೊಂಡಿತು.
- 1999 - ಸ್ವರ್ಣಜಯಂತಿ ಗ್ರಾಮ್‌ಸ್ವರೋಜ್‌ಗಾರ್ ಯೋಜನೆ (**SGSY** - Swarna jayanti Gram swarozgar Yojana) (IRDP + DWACRA + TRYSEM + MWS ಸೇರಿ):- ಇದು 2010-11 ರಲ್ಲಿ NRLM -National Rural Lively hood Mission ಆಗಿ ಮರುನಾಮಕರಣಗೊಂಡಿತು. ಇದನ್ನು ಕರ್ನಾಟಕ **ರಾಜ್ಯ ಸರ್ಕಾರ ಸಂಜೀವಿನಿ** ಎಂಬ ಹೆಸರಿನಲ್ಲಿ ಅಜೀವಿಕ ಯೋಜನೆಯನ್ನಾಗಿ ಜಾರಿಗೆ ತಂದಿದೆ.
- 2000 ಡಿಸೆಂಬರ್ 25 ಪ್ರಧಾನಮಂತ್ರಿ ಗ್ರಾಮ್ ಸಡಕ್ ಯೋಜನೆ (**PMGSY** - Pradhan mantri Gram sadak Yojana) ಮುಖ್ಯ ಉದ್ದೇಶ:-ಗ್ರಾಮೀಣ ಪ್ರದೇಶಗಳಲ್ಲಿ ಸರ್ವಋತು ರಸ್ತೆ ನಿರ್ಮಾಣ.
- 2000 ಡಿಸೆಂಬರ್ 25 ರಂದು ಅಂತ್ಯೋದಯ ಅನ್ನ ಯೋಜನೆ (**AAY** - Antyodaya Anna yojana) ಜಾರಿ ತಂದಿದ್ದು, ದೇಶದ ಅತ್ಯಂತ ಕಡು ಬಡವರಿಗೆ ಕನಿಷ್ಠ ಪೌಷ್ಟಿಕ ಆಹಾರ ಪೂರೈಕೆ ಮಾಡುವ ಉದ್ದೇಶ ಹೊಂದಿದೆ.
- 2001- ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (**SGRY**- Sampoorna Grameen Rozgar Yojana) ಜಾರಿ. ಇದು ಉದ್ಯೋಗಾಧಾರಿತ ಬಡತನ ನಿವಾರಣಾ ಕಾರ್ಯಕಮ.

- 2001 ರಲ್ಲಿ ಸರ್ವಶಿಕ್ಷಣ ಅಭಿಯಾನ (SSA) ಜಾರಿಯಾಗಿದ್ದು, ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣ ಮೂಲ ಉದ್ದೇಶವಾಗಿದೆ.
- 2001 ರಲ್ಲಿ ವಾಲ್ಮೀಕಿ ಅಂಬೇಡ್ಕರ್ ಆವಾಸ್ ಯೋಜನೆ (**VAMBAY** - Valmiki Ambedkar Awas Yojana), ಇದು ನಗರ ಪ್ರದೇಶದ ಬಡವರಿಗೆ ವಸತಿ ನಿರ್ಮಾಣ ಕಾರ್ಯಕ್ರಮವಾಗಿದೆ.
- 2001 ರಲ್ಲಿ **ಗೋಲ್ಡನ್ ಕ್ವಾಡ್ರಿಲ್ಯಾಟರಲ್ (ಸುವರ್ಣ ಚತುಷ್ಕೋನ ಪಥ) ಯೋಜನೆ** ಅಂದರೆ 6 ಅಥವಾ 8 ಸಾಲುಗಳ ಬೃಹತ್ ರಾಜಮಾರ್ಗ ಯೋಜನೆ ಶ್ರೀನಗರದಿಂದ ಕನ್ಯಾಕುಮಾರಿವರೆಗೆ ಗುಜರಾತ್‌ನ ಕಛ್‌ನಿಂದ ಕಾಜಾರ್ ಪ್ರದೇಶದವರೆಗೆ ನಿರ್ಮಾಣ.
- ದೇಶದ 4 ಮೆಟ್ರೋ ನಗರಗಳಾದ ದೆಹಲಿ, ಕೋಲ್ಕತ್ತ, ಚೆನ್ನೈ & ಮುಂಬೈ ನಗರಗಳಿಗೆ ಸಂಪರ್ಕ ಕಲ್ಪಿಸುವ ಯೋಜನೆಯಾಗಿದೆ.

| | |
|---|---|
| ಸ್ವ ಉದ್ಯೋಗ | SGSY, SJSRY, PMRY |
| ಕೂಲಿ ಉದ್ಯೋಗ | NFWP, NREGP, SGRY |
| ಮೂಲ ಸೌಕರ್ಯ | PMGY, PMGSY |

## ಹತ್ತನೇ ಯೋಜನೆ (2002-2007)



- ಈ ಯೋಜನೆಯ ಅವಧಿಯಲ್ಲಿ ಎ.ಬಿ. ವಾಜಪೇಯಿ (1998–2004), ಮನಮೋಹನ್ ಸಿಂಗ್ (2004 – 2014) ಅವರು ಯೋಜನಾ ಆಯೋಗದ ಅಧ್ಯಕ್ಷರುಗಳಾಗಿದ್ದು, ಕೆ.ಸಿ. ಪಂತ್ (1999–2004), ಮಾಂಟೆಕ್ ಸಿಂಗ್ ಅಹ್ಲುವಾಲಿಯಾ (2004 –2014) ಅವರು ಯೋಜನಾ ಆಯೋಗದ ಉಪಾಧ್ಯಕ್ಷರುಗಳಾಗಿದ್ದರು.
- ಈ ಯೋಜನೆಯ ಪ್ರಮುಖ ಉದ್ದೇಶಗಳೆಂದರೆ ತಲಾದಾಯವನ್ನು ದ್ವಿಗುಣಗೊಳಿಸುವುದು. ದೇಶದ ಸಮಗ್ರ ಆರ್ಥಿಕಾಭಿವೃದ್ಧಿ, ಜಿ.ಡಿ.ಪಿಯನ್ನು ಶೇಕಡಾ 8ಕ್ಕೆ ಏರಿಸುವುದು. ಜೀವನ ಗುಣಮಟ್ಟ ಮತ್ತು ಮಾನವ ಅಭಿವೃದ್ಧಿ ಸಾಧಿಸುವುದು.
- ಸಂವಿಧಾನಕ್ಕೆ 2002 ರಲ್ಲಿ 86ನೇ ತಿದ್ದುಪಡಿ ತಂದು **6 ರಿಂದ 14 ವರ್ಷದ ಮಕ್ಕಳಿಗೆ ಉಚಿತ & ಕಡ್ಡಾಯ ಶಿಕ್ಷಣವನ್ನು** 21(ಎ) ವಿಧಿಯಡಿಯಲ್ಲಿ ಮೂಲಭೂತ ಹಕ್ಕನ್ನಾಗಿ ಮತ್ತು 51ಎ(ಕೆ) ವಿಧಿಯಡಿಯಲ್ಲಿ ಪೋಷಕರ ಕರ್ತವ್ಯವನ್ನಾಗಿ ಮಾಡಲಾಯಿತು.
- **2005 ಸಹಸ್ರಾಬ್ದ ಅಭಿವೃದ್ಧಿ ಗುರಿ ಘೋಷಣೆ** (2000 ರಿಂದ 2015 ಅಂತ್ಯ) ಇದನ್ನು 2015 ರಿಂದ 2030 ರವರೆಗೆ ಸಹಸ್ರಾಬ್ದ ಅಭಿವೃದ್ಧಿಯ ನಂತರದ ಗುರಿ ಅಥವಾ **ಸುಸ್ಥಿರ ಅಭಿವೃದ್ಧಿಯ ಗುರಿಗಳು** ಎಂದು ಘೋಷಣೆ ಮಾಡಲಾಗಿದೆ.
- 2005 ಬೆಂಗಳೂರು – ಐನ್, ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ (**NRHM** - National Rural Health Mission), ವಿಶೇಷ ಆರ್ಥಿಕ ವಲಯ (**SEZ** - Special Economic zone), ಮೌಲ್ಯ ವರ್ಧಿತ ತೆರಿಗೆ (**VAT** - Value Added Tax), ನಗರ ಸಾಮಾಜಿಕ ಆರೋಗ್ಯ ಕಾರ್ಯಕರ್ತೆ (**USHA** - Urban Social Health Activist), **ASHA**- Accridiated Social Health Activist (ಅತ್ಯಂತ ವಿಶ್ವಾಸಾರ್ಹ ಸಾಮಾಜಿಕ ಆರೋಗ್ಯ ಸಾಹಸಿ ಕಾರ್ಯಕರ್ತೆ) ಕಾರ್ಯಕ್ರಮಗಳು ಜಾರಿಯಾದವು.
- 2005–09 **ಬೃಹತ್ ಭಾರತ್ ನಿರ್ಮಾಣ ಯೋಜನೆ.** ಗ್ರಾಮೀಣ ಪ್ರದೇಶಗಳಿಗೆ ಮೂಲಭೂತ ಸೌಕರ್ಯ ಕಲ್ಪಿಸುವ ಉದ್ದೇಶ ಹೊಂದಿತ್ತು.
- ಫೆಬ್ರವರಿ 5, 2004 **ಪುರಕಾರ್ಯಕ್ರಮ** (**PURA**- Providing Urban Facilities to Rural Areas) ಘೋಷಣೆ. ಕಸ್ತೂರ್ ಬಾ ಗಾಂಧಿ ಬಾಲಿಕಾ ವಿದ್ಯಾಲಯ (**KGBV**-Kasturba Gandhi Balika Vidyalaya)
- 2004 **NFWP** - National Food for Work Programme (ರಾಷ್ಟ್ರೀಯ ಕೂಲಿಗಾಗಿ ಕಾಳು ಕಾರ್ಯಕ್ರಮ)
- 2004–05 ರಲ್ಲಿ ಎನ್.ಎಸ್.ಎಸ್.ಓ 61 ನೇ ಸಮೀಕ್ಷೆ ನಡೆಸಿದ್ದು, ದೇಶದ ಬಡತನ ಪ್ರಮಾಣ ಶೇ 22 ಎಂದು ಅಂದಾಜಿಸಿದೆ.
- 2004 ರಲ್ಲಿ ಅಸಂಘಟಿತ ವಲಯ ನೌಕರರಿಗೆ ಛತ್ರಿಶಾಸನ ಜಾರಿ. ಇದು ಸಾಮಾಜಿಕ ಭದ್ರತಾ ಕಾರ್ಯಕ್ರಮವಾಗಿದೆ.
- ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ (**NREGA** - National Rural Employment Guarantee Act) 2005 ಸೆಪ್ಟೆಂಬರ್ 7 ರಂದು ಘೋಷಣೆ. ಫೆಬ್ರವರಿ 2, 2006 ಪ್ರಾಯೋಗಿಕವಾಗಿ ಮೊದಲು 200 ಜಿಲ್ಲೆಗಳಲ್ಲಿ ಜಾರಿ. ಇದು ಉದ್ಯೋಗಾಧಾರಿತ, ಸಾಮಾಜಿಕ ಸಮನ್ವಯತೆಯ ಕಾರ್ಯಕ್ರಮವಾಗಿದೆ.

# 11ನೇ ಪಂಚವಾರ್ಷಿಕ ಯೋಜನೆ (2007-2012)

- ಈ ಯೋಜನೆಯ ಅವಧಿಯಲ್ಲಿ ಮನಮೋಹನ್ ಸಿಂಗ್ (2004-14) ಅವರು ಯೋಜನಾ ಆಯೋಗದ ಅಧ್ಯಕ್ಷರಾಗಿದ್ದು, ಮಾಂಟೆಕ್ ಸಿಂಗ್ ಅಹ್ಲುವಾಲಿಯಾ (2004-14) ಅವರು ಯೋಜನಾ ಆಯೋಗದ ಉಪಾಧ್ಯಕ್ಷರುಗಳಾಗಿದ್ದರು.



- ಇದರ ಮುಖ್ಯ ಉದ್ದೇಶ Rapid & Inclusive Growth (ತ್ವರಿತ & ಸಮನ್ವಯ ಪ್ರಗತಿ)
- 11ನೇ ಪಂಚವಾರ್ಷಿಕ ಯೋಜನೆಯು ಪ್ರಮುಖವಾಗಿ 6 ಕ್ಷೇತ್ರಗಳಿಗೆ ಸಂಬಂಧಿಸಿದ ಉದ್ದೇಶಗಳನ್ನು ಹೊಂದಿದೆ.
- **ವರಮಾನ ಮತ್ತು ಬಡತನ:-** ಜಿ.ಡಿ.ಪಿಯನ್ನು 8ರಿಂದ 10ಕ್ಕೆ ಏರಿಸುವುದು. ಹಾಗೂ 10% ರಲ್ಲೇ ಕಾಯ್ದುಕೊಳ್ಳುವುದು.
- **ಶಿಕ್ಷಣ:-** ಅಪವ್ಯಯದ ಪ್ರಮಾಣವನ್ನು ಕಡಿಮೆ ಮಾಡುವುದು. 7 & ಅದಕ್ಕಿಂತ ಹೆಚ್ಚಿನ ವಯಸ್ಸಿನವರ ಸಾಕ್ಷರತಾ ಮಟ್ಟವನ್ನು 85% ಹೆಚ್ಚಿಸುವುದು.
- **ಆರೋಗ್ಯ:-** ಶಿಶುಮರಣ & ತಾಯ್ತನ ಮರಣ ಪ್ರಮಾಣವನ್ನು ಕಡಿಮೆ ಮಾಡುವುದು.
- **ಮಹಿಳೆ & ಮಕ್ಕಳು:-** ಲಿಂಗಾನುಪಾತವನ್ನು ಹೆಚ್ಚಿಸುವುದು.
- **ಮೂಲಭೂತ ಸೌಕರ್ಯ:-** ಗ್ರಾಮೀಣ ಪ್ರದೇಶದಲ್ಲಿ ರಸ್ತೆ, ನೀರು, ಶೌಚಾಲಯಗಳನ್ನು ಹೆಚ್ಚಿಸುವುದು.
- **ಪರಿಸರ:-** ಅರಣ್ಯವನ್ನು ಹೆಚ್ಚಿಸುವುದು. ನಗರಗಳಲ್ಲಿ WHOನ ಗುಣ ಮಟ್ಟದಂತೆ ನಗರಗಳಲ್ಲಿ ಗಾಳಿಯ ಗುಣಮಟ್ಟವನ್ನು ಹೆಚ್ಚಿಸುವುದು.
- 2007-INOAPS ಇಂದಿರಾಗಾಂಧಿ ರಾಷ್ಟ್ರೀಯ ವೃದ್ಧಾಪ್ಯ ಪಿಂಚಣಿ ವ್ಯವಸ್ಥೆ ಜಾರಿ
- 2007- ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ (NFSM- National Food Security Mission),
- 2007 ಆಮ್ ಆದ್ಮಿ ಭೀಮಾ ಯೋಜನೆ (AABY - Aam Admi Bhima Yojana) ಜಾರಿ
- 2008 ಏಪ್ರಿಲ್ 1ರಂದು ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ NREGA ವಿಸ್ತರಣೆ
- 2009 ಅಕ್ಟೋಬರ್ 2, MGNREGP - Mahatma gandhiji ಹೆಸರಿನಲ್ಲಿ ಮರುನಾಮಕರಣಗೊಂಡಿದೆ.
- 2012ರಲ್ಲಿ NUHM - National Urban Health Mission ಆರಂಭ
- 11 ನೇ ಪಂಚವಾರ್ಷಿಕ ಯೋಜನೆಯನ್ನು ಅಂದಿನ ಪ್ರಧಾನಿ ಮನಮೋಹನ್ ಸಿಂಗ್‌ಅವರು "ಭಾರತೀಯ ಶಿಕ್ಷಣದ ಯೋಜನೆ" ಎಂದು ಕರೆದರು.

## ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಪ್ರಮುಖ ಕೃತಿಗಳು

- Planned Economy for India (1934) - Sir. M.Vishweshwaraiah
- Economic History of India - **R.C. Dutt**
- Small is Beautiful - E.F Schumacher
- Asian Drama - **Gunnar Myrdal**
- Poverty and Famines - A.K. Sen
- Poverty and unbritish Rule in India - **Dadabai Navaroji**
- development plannings and Indian Experience- Sukumai Chakravarthi
- Plannings and the poor - **B.S. Minhas**
- How to Pay for the War - J.M. Keynes
- Economics for Imperfect competition - **Joan Rabinson**
- Theory of Monopolistic Competition - E.H. Chemberlin
- Value and Capital - **J.R. Hicks**
- An Essay an Nature and Significance of Economic Science - Lional Robinson
- Das Capital & Communist Manifeasto - **Karlmarx**

## 11 ನೇ ಪಂಚವಾರ್ಷಿಕ ಯೋಜನೆಯ ಸಾಧನೆಗಳು

- ಜೀವನದ ಗುಣಮಟ್ಟ, ಉತ್ಪಾದಕ ಉದ್ಯೋಗದ ಸೃಷ್ಟಿ, ಪ್ರಾದೇಶಿಕ ಸಮತೋಲನ, ಸ್ವಯಂ ಪ್ರಗತಿ ಈ 4 ಆಯಾಮಗಳ ಅಭಿವೃದ್ಧಿ.
- ಶೇ 6.5 ರಷ್ಟು ನಿರೀಕ್ಷಿತ ಬೆಳವಣಿಗೆ ದರಕ್ಕೆ ಬದಲಾಗಿ ಶೇ 5.4 ರಷ್ಟು ವಾಸ್ತವಿಕ ಬೆಳವಣಿಗೆ ದರ.
- ಶೇ 4.2 ಕೃಷಿ ವಲಯದ ಪ್ರಗತಿಗೆ ವಿರುದ್ಧವಾಗಿ ಶೇ 2.1 ರಷ್ಟು ಮಾತ್ರ ಬೆಳವಣಿಗೆ.
- ಶೇ 3 ಕೈಗಾರಿಕಾ ವಲಯದ ಪ್ರಗತಿಗೆ ವಿರುದ್ಧವಾಗಿ ಶೇ 4.5 ರಷ್ಟು ಬೆಳವಣಿಗೆ.
- ಆಮದುಗಳು ಶೇ 6.6 & ರಫ್ತುಗಳು ಶೇ 7.4 ರಷ್ಟು ಈ ಯೋಜನೆಯಲ್ಲಿ ಬೆಳವಣಿಗೆ ಹೊಂದಿದವು.

## 12ನೇ ಪಂಚವಾರ್ಷಿಕ ಯೋಜನೆ-2012-2017



➢ ಈ ಯೋಜನೆಯ ಅವಧಿಯಲ್ಲಿ ಮನಮೋಹನ್ ಸಿಂಗ್ (2004-14) ಅವರು ಯೋಜನಾ ಆಯೋಗದ ಅಧ್ಯಕ್ಷರಾಗಿದ್ದು, ಮಾಂಟೆಕ್ ಸಿಂಗ್ ಅಹ್ಲುವಾಲಿಯಾ (2004-14) ಅವರು ಯೋಜನಾ ಆಯೋಗದ ಉಪಾಧ್ಯಕ್ಷರಾಗಿದ್ದರು. ಆದರೆ 2015 ಜನವರಿ 1 ರ ನಂತರ ನೀತಿ ಆಯೋಗವಾಗಿ ಮರು ನಾಮಕರಣಗೊಂಡ ಮೇಲೆ ಅಧ್ಯಕ್ಷರಾಗಿ ಪ್ರಧಾನಿ ನರೇಂದ್ರ ಮೋದಿ, ಉಪಾಧ್ಯಕ್ಷರಾಗಿ ಅರವಿಂದ ಪನಗಾರಿಯಾ ಅವರು ಕಾರ್ಯನಿರ್ವಹಿಸುತ್ತಿದ್ದಾರೆ.

➢ ಭಾರತವು 2012-17ರ ಅವಧಿಯಲ್ಲಿ ಜಾರಿಗೆ ತರಲಿರುವ 12ನೇ ಪಂಚವಾರ್ಷಿಕ ಯೋಜನೆಗೆ ಏ.21, 2011ರಂದು ಪ್ರಧಾನ ಮಂತ್ರಿಗಳ ಅಧ್ಯಕ್ಷತೆಯಲ್ಲಿ ಯೋಜನಾ ಆಯೋಗವು ಕರಡು ಪ್ರತಿಯನ್ನು ರೂಪಿಸಿದೆ. ಈ ಯೋಜನೆಯ ಅವಧಿಯಲ್ಲಿ ಬೆಳವಣಿಗೆಯ ದರವನ್ನು ಶೇ.9 ರಿಂದ 9.5% ರವರೆಗೆ ಸಾಧಿಸುವ ಉದ್ದೇಶ ಒಳಗೊಂಡಿತ್ತು.

➢ ಇದರ ಮುಖ್ಯ ಉದ್ದೇಶ Towards Faster more Sustainable & Inclusive Growth (ತ್ವರಿತ, ವೇಗ, ಸಮರ್ಥನೀಯ, ಸುಸ್ಥಿರ, ಸಮನ್ವಯ ಪ್ರಗತಿಯೆಡೆಗೆ)

➢ 12 ನೇ ಪಂಚವಾರ್ಷಿಕ ಯೋಜನೆಯನ್ನು "ಆರೋಗ್ಯ ಯೋಜನೆ" ಎಂದು ಕರೆಯಲಾಯಿತು. ಈ ಯೋಜನೆಯಲ್ಲಿ ಆರೋಗ್ಯಕ್ಕೆ ಹೆಚ್ಚಿನ ಆದ್ಯತೆ ನೀಡಲಾಯಿತು. ಈ ಯೋಜನೆಯ ಅವಧಿಯಲ್ಲಿ ರೂಪಿತವಾದ ಹಾಗೂ ಕೇಂದ್ರ ಸರ್ಕಾರದ ಇತ್ತೀಚಿನ ಕಾರ್ಯಕ್ರಮಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

## 2014 ನೇ ಸಾಲಿನ ಪ್ರಮುಖ ಕಾರ್ಯಕ್ರಮಗಳು

### ನಮಾಮಿ ಗಂಗಾ ಯೋಜನೆ




✦ 2014 ರ ಜುಲೈ 10ರಂದು ಜಾರಿಗೆ ತರಲಾಗಿದೆ. ಇದು ಗಂಗಾ ನದಿಯನ್ನು ವಿಸ್ತೃತವಾಗಿ ರಕ್ಷಣೆ ಮಾಡುವುದು ಮತ್ತು ಸ್ವಚ್ಛಗೊಳಿಸುವುದಾಗಿದೆ.

### My govt website: ಉದ್ಘಾಟನೆ

✦ ನರೇಂದ್ರ ಮೋದಿಯವರು 2014ರ ಜುಲೈ 26ರಂದು ಭಾರತದ ನಾಗರೀಕರು ತಮ್ಮ ಅಭಿಪ್ರಾಯಗಳನ್ನು ಹಂಚಿಕೊಳ್ಳುವ ಉದ್ದೇಶದಿಂದ "ಮೈ ಗವರ್ನಮೆಂಟ್" ಎಂಬ ವೆಬ್‌ಸೈಟ್‌ನ್ನು ಉದ್ಘಾಟಿಸಿದರು.




✦ ಗಂಗಾ ನದಿ ಶುದ್ಧೀಕರಣ, ಹೆಣ್ಣು ಮಗುವಿನ ಶಿಕ್ಷಣ, ಸ್ವಚ್ಛ ಭಾರತ, ಕೌಶಲ್ಯ ಭಾರತ, ಡಿಜಿಟಲ್ ಇಂಡಿಯಾ ಮತ್ತು ಉದ್ಯೋಗ ಸೃಷ್ಟಿಗೆ ಸಂಬಂಧಿಸಿದ ಅನೇಕ ಗುಂಪುಗಳನ್ನಾಗಿ ವಿಂಗಡಿಸಿ ಸಲಹೆ ನೀಡಲು ಸಾರ್ವಜನಿಕರಿಗೆ ಕೋರಲಾಯಿತು.

### ರಾಷ್ಟ್ರೀಯ ಗೋಕುಲ್ ಮಿಷನ್




✦ 2014ರ ಜುಲೈ 28 ರಂದು ಜಾರಿಯಾಯಿತು. ದೇಶೀಯ ಗೋ ತಳಿಗಳ ಸಂರಕ್ಷಣೆ ಹಾಗೂ ಅಭಿವೃದ್ಧಿಯ ಉದ್ದೇಶದಿಂದ ಗೋಕುಲ್ ಮಿಷನ್ ಜಾರಿಗೊಳಿಸಲಾಗಿದೆ.

✦ ಗೋ ತಳಿ ಹಾಗೂ ಹೈನುಗಾರಿಕೆ ಅಭಿವೃದ್ಧಿಗೆ ರಾಷ್ಟ್ರೀಯ ಕಾರ್ಯಕ್ರಮ (NPBDD - National Programme for Bovine Breeding and Dairy Development) ಅಡಿಯಲ್ಲಿ ಈ ಯೋಜನೆ ರೂಪಿಸಲಾಗಿದೆ.

✦ ಇದೊಂದು ರಾಷ್ಟ್ರ ಮಟ್ಟದ ಯೋಜನೆಯಾಗಿದೆ.

✦ ದೇಶೀಯ ಗೋ ತಳಿಗಳನ್ನು ಸಂರಕ್ಷಿಸಿದವರಿಗೆ ಗೋಪಾಲರತ್ನ ಪ್ರಶಸ್ತಿ ನೀಡಲಾಗುತ್ತದೆ. & ಗೋಕುಲ ಗ್ರಾಮವನ್ನು ಸ್ಥಾಪಿಸಲಾಗುತ್ತದೆ.

### 6 ಆಗಸ್ಟ್ 2014 ರೈಲ್ವೆ ವಲಯಕ್ಕೆ ಆದ್ಯತೆ :

✦ ರೈಲ್ವೆ ಮೂಲಸೌಕರ್ಯ ಅಭಿವೃದ್ಧಿಗೆ ಶೇ 100 ಎಫ್.ಡಿ.ಐ, ಸೇನೆ ಮತ್ತು ವಿಮಾ ವಲಯದಲ್ಲಿ ಶೇ 49ರಷ್ಟು ಎಫ್‌ಡಿಐ ಗೆ ಅಸ್ತು.

### ಪ್ರಧಾನಮಂತ್ರಿ ಕೃಷಿ ಸಿಂಚಾಯಿ ಯೋಜನೆ (PMKSY)




- 2014ರ ಆಗಸ್ಟ್ 19 ರಂದು ಮೋದಿಯವರು ಹರಿಯಾಣದ ಕೈತಾಲ್‌ನಲ್ಲಿ ದೇಶಾದ್ಯಂತ ಜನರ ನೀರಾವರಿ ಆಗತ್ಯತೆ ಪೂರೈಸುವ 1000 ಕೋಟಿ ವೆಚ್ಚದ ಯೋಜನೆಯನ್ನು ಉದ್ಘಾಟಿಸಿದರು.

### ಪ್ರಧಾನ ಮಂತ್ರಿ ಜನಧನ್ ಯೋಜನೆ (PMJDY-Pradhan Mantri Jan Dhan Yojana)




- ದೇಶದ ಪ್ರತಿಯೊಬ್ಬ ನಾಗರೀಕನಿಗೂ ಖಾತೆ ಒದಗಿಸುವ ಉದ್ದೇಶದಿಂದ ಪ್ರಧಾನಮಂತ್ರಿ ನರೇಂದ್ರ ಮೋದಿಯವರು ಪ್ರಧಾನಮಂತ್ರಿ ಜನಧನ್‌ಯೋಜನೆಯನ್ನು 2014ರ ಆಗಸ್ಟ್ 28ರಂದು ಉದ್ಘಾಟಿಸಿದರು. ಉದ್ಘಾಟನೆ ದಿನದಂದೇ 1.5ಕೋಟಿ ಖಾತೆಗಳನ್ನು ತೆರೆಯಲಾಯಿತು. ಶೂನ್ಯ ಬ್ಯಾಲೆನ್ಸ್ ನೊಂದಿಗೆ ತೆರೆಯಬಹುದಾದ ಈ ಖಾತೆಯು ಒಂದು ಲಕ್ಷದವರೆಗಿನ ಅಪಘಾತ ವಿಮೆ. 6 ತಿಂಗಳ ನಂತರ 5ಸಾವಿರದೊಂದಿಗೆ ಓವರ್‌ಡ್ರಾಫ್ಟ್ ಸೌಲಭ್ಯವನ್ನು ಹೊಂದಿರುತ್ತದೆ.
- ಕರ್ನಾಟಕದಲ್ಲಿ ಉದ್ಘಾಟನೆಯಾದ ದಿನದಂದೇ 11 ಲಕ್ಷ ಖಾತೆಗಳನ್ನು ತೆರೆಯಲಾಯಿತು. ಎಸ್.ಬಿ.ಐ 30,000 ಖಾತೆಗಳನ್ನು ತೆರೆದರೆ, ಪಂಜಾಬ್ ನ್ಯಾಷನಲ್ ಬ್ಯಾಂಕ್ 22.24 ಲಕ್ಷ ಖಾತೆಗಳನ್ನು ತೆರೆದು ಕ್ರಮವಾಗಿ 1 & 2ನೇ ಸ್ಥಾನದಲ್ಲಿವೆ.

### ಪ್ರಧಾನಮಂತ್ರಿ ಜನಧನ ಯೋಜನೆ ಗಿನ್ನಿಸ್ ದಾಖಲೆ:-

- 2015 ಜನವರಿ 20ರಂದು ಪ್ರಧಾನಮಂತ್ರಿ ಜನಧನ ಯೋಜನೆಯು ಗಿನ್ನಿಸ್ ದಾಖಲೆ ಸೇರಿದೆ. ಭಾರತೀಯ ಬ್ಯಾಂಕ್‌ಗಳು ಈ ಯೋಜನೆಯಡಿ 11.5ಕೋಟಿ ಖಾತೆಗಳನ್ನು ತೆರೆಯಲಾಗಿದೆ. ಇದರಲ್ಲಿ 5.68 ಕೋಟಿ ಖಾತೆಯು ಪುರುಷರಾಗಿದ್ದು, 5.82 ಕೋಟಿ ಖಾತೆಯು ಮಹಿಳೆಯರದ್ದಾಗಿದೆ. ಈ ಯೋಜನೆಯಡಿಯ ಬ್ಯಾಂಕ್ ಖಾತೆಯಲ್ಲಿ 6.84 ಕೋಟಿ ಖಾತೆಗಳು (59.49%) ಗ್ರಾಮೀಣ ಭಾಗದಲ್ಲಿ ತೆರೆದ ಖಾತೆಗಳು ಈ ಮೂಲಕ ಗಿನ್ನಿಸ್ ದಾಖಲೆ ನಿರ್ಮಿಸಿತು.
- ಇತ್ತೀಚಿನ ಸರ್ಕಾರದ ಯೋಜನೆಗಳು ಫಲಾನುಭವಿಗಳ ಸಬ್ಸಿಡಿಯನ್ನು ಜನಧನ್ ಖಾತೆಗೆ ವರ್ಗಾಯಿಸಿ ಫಲಾನುಭವಿಗಳಿಗೆ ತಲುಪುವಂತೆ ಮಾಡಲಾಗುತ್ತಿದೆ.

### ಮಂಗಳಯಾನ ಯೋಜನೆಗೆ ಮೋದಿ ಸಾಥ್:-




- 2014ರ ಸೆಪ್ಟೆಂಬರ್ 24 ರಂದು ಮಂಗಳನ ಕಕ್ಷೆ ಸೇರಿದ ಭಾರತದ ಮಂಗಳಯಾನ ಉಪಗ್ರಹವು ಸೇರುವ ಸಂದರ್ಭದಲ್ಲಿ ಭಾರತದ ಪ್ರಧಾನಿ ನರೇಂದ್ರ ಮೋದಿಯವರು ಬೆಂಗಳೂರಿನ ಬ್ಯಾಲಾಳುವಿನಲ್ಲಿರುವ ಇಸ್ರೋದ ಐ ಸ್ಟ್ರಾಕ್ ನಲ್ಲಿ ವಿಜ್ಞಾನಿಗಳೊಂದಿಗೆ ಆ ಕ್ಷಣವನ್ನು ಹಂಚಿಕೊಂಡರು. ಈ ಮೂಲಕ ಮಂಗಳಯಾನ ಯಶಸ್ಸಿನ ಸಂತೋಷ ಕ್ಷಣದಲ್ಲಿ ಭಾಗಿಯಾದರು.
- 450 ಕೋಟಿ ವೆಚ್ಚದ ಮಹತ್ವಾಕಾಂಕ್ಷಿ ಯೋಜನೆ ಮಾಮ್ (Mars Orbitar Mission) ಅನ್ನು 2013 ನವೆಂಬರ್ 5 ರಂದು ಪಿ.ಎಸ್.ಎಲ್.ವಿ ಸಿ-25 ಉಡಾವಣಾ ವಾಹಕದ ಮೂಲಕ ಆಂಧ್ರಪ್ರದೇಶದ ಶ್ರೀ ಹರಿಕೋಟಾ ಸತೀಶ್ ಧವನ್ ಉಡಾವಣಾ ಕೇಂದ್ರದಿಂದ ಇಸ್ರೋದವರು ಉಡಾಯಿಸಿದ್ದರು.

### ತುಮಕೂರಿನಲ್ಲಿ 'ಫುಡ್ ಪಾರ್ಕ್' ಉದ್ಘಾಟನೆ:



- 2014 ಸೆಪ್ಟೆಂಬರ್ 24ರಂದು ನರೇಂದ್ರ ಮೋದಿಯವರು ತುಮಕೂರಿನ ಬಳಿಯ ವಸಂತನರಸಾಪುರದಲ್ಲಿ ಮೆಗಾ ಫುಡ್ ಪಾರ್ಕ್‌ನ್ನು ಸ್ಥಾಪಿಸಿದರು.
- ಈ ಫುಡ್ ಪಾರ್ಕ್ ಡಿಸೆಂಬರ್ 2014ರಿಂದ ಕಾರ್ಯನಿರ್ವಹಿಸುತ್ತಿದ್ದು, ಕೋಲಾರ, ತುಮಕೂರು, ಶಿವಮೊಗ್ಗ ಜಿಲ್ಲೆಗಳ ರೈತರುಗಳಿಗೆ ಉಪಯೋಗವಾಗಲಿದೆ. ಈ ಫುಡ್ ಪಾರ್ಕ್ 4000 ಕ್ಕಿಂತ ಹೆಚ್ಚು ಉದ್ಯೋಗ ಸೃಷ್ಟಿಸಲಿದೆ.

### ಮೇಕ್ ಇನ್ ಇಂಡಿಯಾ (ಭಾರತದಲ್ಲೇ ಉತ್ಪಾದಿಸಿ) (Make in India)




- 2014ರ ಸೆಪ್ಟೆಂಬರ್ 25 ರಂದು ಪ್ರಧಾನಮಂತ್ರಿ ನರೇಂದ್ರ ಮೋದಿಯವರು ನವದೆಹಲಿಯ ವಿಜ್ಞಾನ ಭವನದಲ್ಲಿ **ಮೇಕ್ ಇನ್ ಇಂಡಿಯಾ** ಯೋಜನೆಗೆ ಚಾಲನೆ ನೀಡಿ, ಇದರೊಂದಿಗೆ ವೆಬ್ ಪೋರ್ಟಲ್, ಲಾಂಛನ ಮತ್ತು **25 ಉತ್ಪಾದನಾ ವಲಯಗಳ** ಬಗ್ಗೆ ವಿವರಗಳನ್ನೊಳಗೊಂಡ ಕೈಪಿಡಿಯನ್ನು ಬಿಡುಗಡೆ ಮಾಡಿದರು.
- **ಮೇಕ್ ಇನ್ ಇಂಡಿಯಾ ವೆಬ್‌ಸೈಟ್** ಎಂಬ **ಪೋರ್ಟಲ್‌ನ್ನು** ಉದ್ದಿಮೆದಾರರಿಗೆ 25 ವಲಯಗಳಲ್ಲಿ ಹೂಡಿಕೆ ಮಾಡುವುದರ ಬಗ್ಗೆ ಸಮಗ್ರ ಮಾಹಿತಿ ನೀಡುತ್ತದೆ. **ಲಾಂಛನವು ಹಲ್ಲುಗಳಿರುವ ಗಾಲಿಗಳಿಂದ ಕೂಡಿದ ಸಿಂಹದ ಹೆಜ್ಜೆಯಾಗಿದೆ.**
- ಇತ್ತೀಚಿಗೆ ವಿವಿಧ ದೇಶಗಳು ಭಾರತದಲ್ಲೇ ಬಂದು ತಯಾರಿಸಲು ಉತ್ತೇಜನ ನೀಡಲಾಗುತ್ತಿದೆ.
- ಭಾರತದಲ್ಲೇ ತಯಾರಿಸಲು ಸಂಬಂಧಿಸಿದಂತೆ ವಿದೇಶಿ ನೇರ ಬಂಡವಾಳ (FDI) ವನ್ನು ಶೇ 49 ನ್ನು ರಕ್ಷಣಾ ಕ್ಷೇತ್ರಕ್ಕೆ, ಶೇ 100 ರಷ್ಟು ರೈಲ್ವೆಯ ಮೂಲಭೂತ ಸೌಕರ್ಯಗಳನ್ನು ಅಭಿವೃದ್ಧಿ ಪಡಿಸಲು ಅವಕಾಶ ನೀಡಲಾಗಿದೆ.
- ಮೇಕ್ ಇನ್ ಇಂಡಿಯಾ ಅಭಿಯಾನವನ್ನು Wieden + Kennedy ಎಂಬ ಅಮೆರಿಕ ಮೂಲದ ಜಾಹೀರಾತು ಕಂಪನಿ ವಿನ್ಯಾಸಗೊಳಿಸಿದೆ.

### ದೀನದಯಾಳ್ ಉಪಾಧ್ಯಾಯ ಗ್ರಾಮೀಣ ಕೌಶಲ್ಯ ಯೋಜನೆ (DDU-GKY - Deen Dayal Upadhyaya- Grameen Koushalya Yojana):-




- **2014ರ ಸೆಪ್ಟೆಂಬರ್ 25ರಂದು ಪಂಡಿತ್ ದೀನದಯಾಳ್** ರವರ **98ನೇ ಹುಟ್ಟುಹಬ್ಬದಂದು** ಕೇಂದ್ರ ಸಚಿವರಾದ ನಿತಿನ್ ಗಡ್ಕರಿ ಮತ್ತು ವೆಂಕಯ್ಯನಾಯ್ಡುರವರು ಉದ್ಘಾಟಿಸಿದರು.
- ಈ ಯೋಜನೆಯು ಪ್ರಮುಖವಾಗಿ **15 ರಿಂದ 35 ವರ್ಷ ವಯಸ್ಸಿನ ಗ್ರಾಮೀಣ ಯುವಕರಿಗೆ ಉದ್ಯೋಗ ನೀಡುವುದಾಗಿದೆ.** ಇದು **ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನ (ಎನ್‌ಆರ್‌ಎಲ್‌ಎಂ)** ನ ಒಂದು ಭಾಗವಾಗಿದೆ.
- ಗ್ರಾಮೀಣ ಬಡ ಯುವಕರನ್ನು ಸ್ವತಂತ್ರವಾಗಿ & ಜಾಗತಿಕವಾಗಿ ವೃತ್ತಿಯನ್ನು ಹೊಂದುವಂತೆ ಮಾಡುವುದು. ಗ್ರಾಮೀಣ ಯುವಕರನ್ನು ಸ್ವಯಂ ಉದ್ಯೋಗಕ್ಕೆ ಅನುವುಗೊಳಿಸಲು ಕೌಶಲ್ಯಾಭಿವೃದ್ಧಿ ತರಬೇತಿಗಳನ್ನು ನೀಡಲಾಗುತ್ತದೆ.

### ಸ್ವಚ್ಛ ಭಾರತ ಯೋಜನೆ (SBY)




- **2014ರ ಅಕ್ಟೋಬರ್ 2 ರಂದು** ನರೇಂದ್ರ ಮೋದಿಯವರು **ನವದೆಹಲಿಯ ರಾಜ್‌ಘಾಟ್** ನಲ್ಲಿ ಈ ಯೋಜನೆಯನ್ನು ಉದ್ಘಾಟಿಸಿದರು.
- ಈ ಯೋಜನೆಯ ಪ್ರಮುಖ ಉದ್ದೇಶವು ಮಹಾತ್ಮ ಗಾಂಧೀಯವರ ತತ್ವಗಳಲ್ಲಿ ಒಂದಾದ ಸ್ವಚ್ಛತೆ ತತ್ವವನ್ನು ಸಾಕಾರಗೊಳಿಸುವುದು. ಇದಕ್ಕಾಗಿ ಸಾರ್ವಜನಿಕ ಶೌಚ ಗೃಹಗಳು ಮತ್ತು ಸಮುದಾಯ ಶೌಚ ಗೃಹಗಳನ್ನು ನಿರ್ಮಾಣ ಗೊಳಿಸಿ, ದೇಶದ ಸ್ವಚ್ಛತೆಯನ್ನು **2019 ಅಕ್ಟೋಬರ್ 2** (ಮಹಾತ್ಮ ಗಾಂಧೀಜಿಯವರ 150ನೇ ಜನ್ಮ ದಿನಾಚರಣೆ ವೇಳೆಗೆ) ರ ವೇಳೆಗೆ ಭಾರತವನ್ನು ಬಯಲು ಬಹಿರ್ದೆಸೆ ಮುಕ್ತ & ಕಸಮುಕ್ತಗೊಳಿಸುವುದು.
- ಈ ಯೋಜನೆಯನ್ನು ದೇಶಾದ್ಯಂತ 4,041 ನಗರಗಳು & ಪಟ್ಟಣಗಳಲ್ಲಿ ರಾಷ್ಟ್ರೀಯ ಅಭಿಯಾನವಾಗಿ ಕೈಗೊಳ್ಳಲಾಗಿದೆ. 2017 ಫೆಬ್ರವರಿಯಲ್ಲಿ ಬಾಲಿವುಡ್ ನಟಿ **ಶಿಲ್ಪಾಶೆಟ್ಟಿ** ಅವರನ್ನು ರಾಯಭಾರಿಯಾಗಿ ನೇಮಿಸಲಾಗಿದೆ. ಉತ್ತಮ ಸ್ವಚ್ಛತೆಯನ್ನು ಕಾಪಾಡಿದ ನಗರಗಳನ್ನು ಸಮೀಕ್ಷೆ ನಡೆಸಿ, ಸ್ವಚ್ಛತಾ ರ್‍ಯಾಂಕಿಂಗ್‌ನ್ನು ನೀಡಲಾಗುತ್ತದೆ. ಈ ಅಭಿಯಾನವನ್ನು ಯಶಸ್ವಿಗೊಳಿಸಲು ದೇಶಾದ್ಯಂತ ಸಮುದಾಯ ಶೌಚಾಲಯ & ಗೃಹ ಶೌಚಾಲಯಗಳನ್ನು ನಿರ್ಮಿಸಲಾಗುತ್ತಿದೆ.
- **ಕುಡಿಯುವ ನೀರು & ನೈರ್ಮಲ್ಯ ಸಚಿವಾಲಯದ ಕಾರ್ಯದರ್ಶಿಗಳು** ಸ್ವಚ್ಛ ಭಾರತ ಯೋಜನೆಯ ಸಂಯೋಜಕರಾಗಿ ಸ್ವಚ್ಛ ಭಾರತ ಮಿಷನ್ (ಗ್ರಾಮೀಣ), ಸ್ವಚ್ಛ ಭಾರತ್ ಮಿಷನ್ (ನಗರ) ಎಂಬ 2 ಸಂಸ್ಥೆಗಳೊಂದಿಗೆ ಕಾರ್ಯನಿರ್ವಹಿಸುತಾರೆ.

+ ಕರ್ನಾಟಕದ ಮೈಸೂರು ನಗರವು ಕಳೆದ ಸತತ ಎರಡು ವರ್ಷ ಮೊದಲ ಸ್ಥಾನವನ್ನು 2017 ನೇ ಸಾಲಿನಲ್ಲಿ 5 ನೇ ಸ್ಥಾನ ಪಡೆದಿದೆ. ಇದೇ ಸಾಲಿನಲ್ಲಿ ಇಂಧೋರ್ (ಮಧ್ಯಪ್ರದೇಶ) ಮೊದಲನೇ ಸ್ಥಾನದಲ್ಲಿದೆ.
+ ಇದರ ಘೋಷ ವಾಕ್ಯ:- One Stop Towards Cleanlyness
+ ಕರ್ನಾಟಕ ರಾಜ್ಯವು 2018 ರ ವೇಳೆಗೆ ಗುರಿಯನ್ನು ಹೊಂದಿದೆ.

## ಸಂಸದರ ಆದರ್ಶ ಗ್ರಾಮ ಯೋಜನೆ (SAGY):-




+ 2014ರ ಅಕ್ಟೋಬರ್ 11ರಂದು ಭಾರತದ ಪ್ರಧಾನಿ ನರೇಂದ್ರ ಮೋದಿಯವರು ಆದರ್ಶ ಸಂಸದರ ಗ್ರಾಮ ಯೋಜನೆಯನ್ನು ಉದ್ಘಾಟಿಸಿದರು. ಅಂದು ಲೋಕನಾಯಕ ಜಯಪ್ರಕಾಶ ನಾರಾಯಣ್‌ರವರ ಜನ್ಮ ದಿನಾಚರಣೆಯಾಗಿತ್ತು. ಈ ಯೋಜನೆಯಲ್ಲಿ ಸಂಸದರು ತಮ್ಮ ಕ್ಷೇತ್ರದ ಒಂದು ಗ್ರಾಮವನ್ನು ದತ್ತು ತೆಗೆದುಕೊಂಡು ಅದನ್ನು ಸರ್ವಾಂಗೀಣ ಅಭಿವೃದ್ಧಿ ಮಾಡುವುದಾಗಿದೆ.

| | |
|---|---|
| ಪ್ರಧಾನಿ ನರೇಂದ್ರ ಮೋದಿ | ವಾರಣಾಸಿ ಲೋಕಸಭಾ ಕ್ಷೇತ್ರದ ನಾಗೆಪುರ ಗ್ರಾಮ |
| ಸಚಿನ್ ತೆಂಡೂಲ್ಕರ್ | ಆಂಧ್ರಪ್ರದೇಶ ನಲ್ಲೂರು ಜಿಲ್ಲೆ ಗಡ್ಡೂರು ಬಳಿ ಇರುವ ಪುಟ್ಟಂರಾಜು ವಾರಿ ಕಂಡ್ರಿಗ ಗ್ರಾಮ |
| ಸೋನಿಯಾ ಗಾಂಧಿ | ಉ. ಪ್ರದೇಶದ ರಾಯಬರೇಲಿ ಕ್ಷೇತ್ರದ ಉದಾವಾ ಗ್ರಾಮ |

## ಶ್ರಮೇವ್ ಜಯತೇ ಕಾರ್ಯಕ್ರಮ:-

+ ಪಂಡಿತ್ ದೀನ್ ದಯಾಳ್ ಉಪಾಧ್ಯಾಯರವರ ಹೆಸರಿನಲ್ಲಿ ಭಾರತದ ಪ್ರಧಾನಮಂತ್ರಿ ನರೇಂದ್ರ ಮೋದಿಯವರು, "ಪಂಡಿತ್ ದೀನ್ ದಯಾಳ ಉಪಾಧ್ಯಾಯ ಶ್ರಮೇವ್ ಜಯತೇ" ಕಾರ್ಯಕ್ರಮವನ್ನು 2014ರ ಅಕ್ಟೋಬರ್ 16ರಂದು ಉದ್ಘಾಟಿಸಿದರು. ಕಾರ್ಮಿಕ ವರ್ಗದವರಿಗೆ ಆತ್ಮ ವಿಶ್ವಾಸ ಮೂಡಿಸುವ, ಯುವಕರಲ್ಲಿ ಕೌಶಲ್ಯ ವೃದ್ಧಿಸುವ ಯೋಜನೆಯಾಗಿದೆ. ಕಲ್ಯಾಣ ಕಾರ್ಯಕ್ರಮಗಳನ್ನು ಮತ್ತು ಅವರಿಗೆ ಸಂಬಂಧಿಸಿದ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೊಳಿಸಲಾಯಿತು.



+ ಈ ಯೋಜನೆಯಡಿಯಲ್ಲಿ 5 ... ನಿರ್ವಹಿಸಲ್ಪಡುತ್ತವೆ. ಅವುಗಳೆಂದರೆ -
+ ಶ್ರಮ-ಸುವಿಧಾ ಪೋರ್ಟಲ್ :- ... ಗುರುತಿನ ಸಂಖ್ಯೆ ನೀಡಲಾಗಿದ್ದು, 44 ... ಕಾನೂನುಗಳಲ್ಲಿ 16 ಕಾನೂನುಗಳಿಗೆ ... ಆನ್‌ಲೈನ್ ದೂರುಗಳನ್ನು ಸಲ್ಲಿಸಬಹುದಾಗಿದೆ.
+ ರ್‍ಯಾಂಡಂ ಇನ್ಸ್ಪೆಕ್ಷನ್ ಸ್ಕೀಂ
+ ಸಾರ್ವತ್ರಿಕ ಖಾತೆ ಸಂಖ್ಯೆ
+ ಅಪ್ರೆಂಟಿಸ್ ಪ್ರೋತ್ಸಾಹನ್ ಯೋಜನೆ
+ Revamped Rashtriya Swastya Bima ... jana

## ಉಡಾನ್ ಯೋಜನೆ (UDAAN Scheme):-




+ 2014ರ ನವೆಂಬರ್ 14ರಂದು ಜಾರಿ. ... ತಾಂತ್ರಿಕ ಶಿಕ್ಷಣಕ್ಕೆ ಹೆಣ್ಣು ಮಕ್ಕಳನ್ನು ಉತ್ತೇಜಿಸುವ ಯೋಜನೆಯಾಗಿದೆ.

## ಕಿಸಾನ್ ವಿಕಾಸ್ ಪತ್ರ (KVP):-




+ 2014 ನವೆಂಬರ್ 18 ರಂದು ವಿತ್ತಸಚಿವ ಅರುಣ್ ಜೇಟ್ಲಿ ಅವರು ಮರು ಚಾಲನೆ ನೀಡಿದರು.
+ ಸಣ್ಣ ಹೂಡಿಕೆದಾರರ ರಕ್ಷಣೆ ಮತ್ತು ... ಈ ಯೋಜನೆ ಜಾರಿಗೊಳಿಸಲಾಗಿದೆ. 1988 ... ಜಾರಿಗೊಳಿಸಲಾಗಿತ್ತು. 2011 ರಲ್ಲಿ ಈ ಯೋಜನೆಯನ್ನು ಅಂದಿನ ಕೇಂದ್ರ ಸರ್ಕಾರವು ಸ್ಥಗಿತಗೊಳಿಸಿತ್ತು.
+ ಕಿಸಾನ್ ವಿಕಾಸ್ ಪತ್ರದಲ್ಲಿ 100 ತಿಂಗಳು ... ವರ್ಷ 4 ತಿಂಗಳು) ಗಳಲ್ಲಿ ಹೂಡಿಕೆ ಹಣದ ...

ಪಡೆಯಲಾಗುತ್ತದೆ. ಈ ಪತ್ರಗಳು 1000, 5,000 & 50,000 ಮುಖಬೆಲೆಯ ಪತ್ರಗಳಾಗಿವೆ. ಇವುಗಳನ್ನು ವಿವಿಧ ಅಂಚೆ ಕಛೇರಿಗಳಲ್ಲಿ ನಾಗರೀಕರುಗಳು ಖರೀದಿಸಬಹುದಾಗಿದೆ & ಕೆಲವು ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಕಿಸಾನ್ ಪತ್ರಗಳು ದೊರೆಯಲಿದ್ದು, ಇದು ನಾಗರೀಕರಲ್ಲಿ ಸೇವಾ ಮನೋಭಾವ ಹೆಚ್ಚಿಸುತ್ತದೆ.

## ಉನ್ನತ್ ಭಾರತ್ ಅಭಿಯಾನ್ (Unnat Bharath Abhiyan)




✦ 2014 ಡಿಸೆಂಬರ್ 10 ರಂದು ಜಾರಿ. ಉನ್ನತ ಶಿಕ್ಷಣ ಸಂಸ್ಥೆಗಳಾದ ಐಐಟಿ, NIT's, ಐಐಎಸ್ಇಆರ್ಎಸ್‌ಗಳ ನಡುವೆ ಸಂಪರ್ಕ ಕಲ್ಪಿಸುವುದು. ಇದನ್ನು ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆಯು ಉದ್ಘಾಟಿಸಿದೆ.

✦ ಜ್ಞಾನ ಆಧಾರಿತ ಸಂಸ್ಥೆಗಳ ಮೂಲಕ ಗ್ರಾಮೀಣ ಪ್ರದೇಶವನ್ನು ಅಭಿವೃದ್ಧಿ ಪಡಿಸುವುದಾಗಿದೆ. ಇದನ್ನು ಸಂಯೋಜನೆ & ನಿರ್ವಹಿಸುವವರು ಐಐಟಿ ದೆಹಲಿ ಅವರು ನಿರ್ವಹಿಸುತ್ತಾರೆ.

✦ ಈ ಯೋಜನೆಯಲ್ಲಿ ಉನ್ನತ ಶಿಕ್ಷಣ ಸಂಸ್ಥೆಗಳು ಗ್ರಾಮೀಣ ಭಾಗಕ್ಕೆ ಅಗತ್ಯವಿರುವ ಸಂಶೋಧನೆ & ತರಬೇತಿಯನ್ನು ನೀಡುತ್ತವೆ.

## ಭಾರತರತ್ನ ಪ್ರಶಸ್ತಿ ಪ್ರದಾನ




✦ 2014 ಡಿಸೆಂಬರ್ 24 ರಂದು ಬನಾರಸ್ ಹಿಂದೂ ವಿ.ವಿ. ಸಂಸ್ಥಾಪಕರಾದ ಪಂಡಿತ್ ಮದನ್ ಮೋಹನ್ ಮಾಳವೀಯ ಅವರಿಗೆ ಭಾರತದ ರಾಷ್ಟ್ರಪತಿಗಳು ಭಾರತ ರತ್ನ ಪ್ರಶಸ್ತಿಯನ್ನು ಮರಣೋತ್ತರವಾಗಿ 153 ನೇ ಜನ್ಮ ದಿನದಂದು ಘೋಷಿಸಿದರು.

✦ 2014 ಡಿಸೆಂಬರ್ 25 ರಂದು ಭಾರತದ ರಾಷ್ಟ್ರಪತಿಗಳು ದೇಶದ ಅತ್ಯುನ್ನತ ಪ್ರಶಸ್ತಿಯಾದ ಭಾರತ ರತ್ನ ಪ್ರಶಸ್ತಿಯನ್ನು ಮಾಜಿ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ ಅವರಿಗೆ ಘೋಷಿಸಿದರು. ಭಾರತ ರತ್ನ ಪ್ರಶಸ್ತಿಯನ್ನು ಭಾರತದ ರಾಷ್ಟ್ರಪತಿ ಪ್ರಣಬ್ ಮುಖರ್ಜಿ ಅವರು 2015 ಮಾರ್ಚ್ 17 ರಂದು ವಾಜಪೇಯಿ ಅವರ ನಿವಾಸದಲ್ಲಿ ಪ್ರದಾನ ಮಾಡಿದರು.

## ಇಂದ್ರ ಧನುಷ್ ಅಭಿಯಾನ




✦ ಈ ಅಭಿಯಾನವನ್ನು 2014ರ ಡಿಸೆಂಬರ್ 25ರಂದು ಉದ್ಘಾಟಿಸಲಾಯಿತು.

✦ ಈ ಯೋಜನೆಯ ಪ್ರಮುಖ ಉದ್ದೇಶವು 2 ವರ್ಷದೊಳಗಿನ ಮಕ್ಕಳು ಮತ್ತು ಗರ್ಭಿಣಿ ಸ್ತ್ರೀಯರಲ್ಲಿ 7 ರೋಗಗಳಿಗೆ ಸಂಬಂಧಿಸಿದಂತೆ ಅಬಾಧತೆ ಉಂಟು ಮಾಡುವ ಯೋಜನೆಯಾಗಿದೆ.

✦ 7 ರೋಗಗಳೆಂದರೆ – ಡಿಫ್ತೀರಿಯಾ (Diphtheria), ನಾಯಿಕೆಮ್ಮು (Woofing Cough), ಧನುರ್ವಾಯು (Tetanus), ಪೋಲಿಯೋ (Polio), ಕ್ಷಯರೋಗ (TuberCulasis), ದಡಾರ (Measles), ಹೆಪಟೈಟಿಸ್ ಬಿ (Hepatitis B)

✦ 2016 ರಲ್ಲಿ 4 ಹೊಸ ರೋಗಗಳನ್ನು ಸೇರ್ಪಡೆ ಮಾಡಲಾಗಿದೆ. ಅವುಗಳೆಂದರೆ ರುಬೆಲ್ಲಾ, ಜಪಾನೀಸ್ ಎನ್‌ಸೆಫಲೈಟೀಸ್, ಇಂಜೆಕ್ಟಬಲ್ ಪೋಲಿಯೋ ಟೈ ವಾಲೆಂಟ್ & ರೆಟ್ರೋವೈರಸ್ ನ್ನು ಹೆಚ್ಚುವರಿಯಾಗಿ ಸೇರಿಸಲಾಗಿದೆ.

## ರಾಷ್ಟ್ರೀಯ ಬಾಲ ಸ್ವಚ್ಛತಾ ಮಿಷನ್




✦ 2014 ನವೆಂಬರ್ 14 ರಂದು ಮೊದಲ ಪ್ರಧಾನಿ ನೆಹರೂ ಅವರ 125 ನೇ ಜನ್ಮ ದಿನಾಚರಣೆ ಅಂಗವಾಗಿ ನವದೆಹಲಿಯಲ್ಲಿ ಉದ್ಘಾಟಿಸಲಾಯಿತು. ಈ ಯೋಜನೆಯು 2014 ಅಕ್ಟೋಬರ್ 2 ರಂದು ಘೋಷಣೆಯಾದ ಸ್ವಚ್ಛ ಭಾರತ್ ಅಭಿಯಾನದ ಅಂಗವಾಗಿ ದೇಶಾದ್ಯಂತ ಮಕ್ಕಳಿಗೆ ಶುದ್ಧ & ಆರೋಗ್ಯಕರ ಪರಿಸರ, ಆಹಾರ, ಶುದ್ಧ ಕುಡಿಯುವ ನೀರು, ಶೌಚಾಲಯವನ್ನು ಅಂಗನವಾಡಿ, ಶಾಲಾ- ಕಾಲೇಜು, ಆಟದ ಮೈದಾನಗಳಲ್ಲಿ ಒದಗಿಸುವ ಉದ್ದೇಶದಿಂದ ಜಾರಿಗೆ ತರಲಾಯಿತು.

# 2015 ನೇ ಸಾಲಿನ ಪ್ರಮುಖ ಕಾರ್ಯಕ್ರಮಗಳು

## ಪಹಲ್ ಯೋಜನೆ (DBTL- Direct Benefit Transfer of LPG)

PAHAL SCHEME
DIRECT BENEFIT TRANSFER FOR LPG)




- 2015ರ ಜನವರಿ 1 ರಂದು ಗ್ರಾಹಕರಿಗೆ ಎಲ್‌ಪಿಜಿ ಸಿಲಿಂಡರ್‌ನ ಸಬ್ಸಿಡಿ ಹಣವನ್ನು ಗ್ರಾಹಕರ ಬ್ಯಾಂಕ್ ಖಾತೆಗೆ ವರ್ಗಾಯಿಸುವುದನ್ನು ದೇಶಾದ್ಯಂತ ಜಾರಿಗೊಳಿಸಲಾಯಿತು.
- ದೇಶಾದ್ಯಂತ 622 ಜಿಲ್ಲೆಗಳಲ್ಲಿ ಜಾರಿಗೊಳಿಸಲಾಯಿತು.
- ಈ ಯೋಜನೆಯನ್ನು 2013 ಜೂನ್ 1 ರಂದು ಅಂದಿನ ಪೆಟ್ರೋಲಿಯಂ & ಸ್ವಾಭಾವಿಕ ಅನಿಲ ಸಚಿವರಾದ ಎಂ. ವೀರಪ್ಪ ಮೊಯ್ಲಿ ಅವರು 20 ಜಿಲ್ಲೆಗಳಲ್ಲಿ ಉದ್ಘಾಟಿಸಿದರು.
- ಮೋದಿ ಸರ್ಕಾರವು 11 ರಾಜ್ಯದ 54 ಜಿಲ್ಲೆಗಳಿಗೆ 2014 ನವೆಂಬರ್ 15 ರಂದು ವಿಸ್ತರಿಸಿತ್ತು. ನಂತರ ಇದನ್ನು 2015 ಜನವರಿ 1 ರಂದು ದೇಶಾದ್ಯಂತ ಜಾರಿಗೆ ತರಲಾಯಿತು.
- ಪ್ರಸ್ತುತವಾಗಿ 2016 ಮೇ 31 ರವರೆಗೆ ಕೇಂದ್ರ ಸರ್ಕಾರದ 17 ಸಚಿವಾಲಯದ 74 ಕಾರ್ಯಕ್ರಮಗಳು DBTL ಅಡಿಯಲ್ಲಿ ತರಲಾಗಿದೆ.

## ಪ್ರಕಾಶ್ ಪಾಥ್‌ವೇ ಟು ಲೈಟ್ (The National LED Programme)




- 2015ರ ಜನವರಿ 5 ಜಾರಿ. ಎಲ್‌ಇಡಿ ಬಲ್ಬ್‌ಗಳನ್ನು ವಿತರಿಸಿ ವಿದ್ಯುತ್ ಬಳಕೆಯನ್ನು ಕಡಿಮೆಗೊಳಿಸುವುದು.

## ರಾಷ್ಟ್ರೀಯ ಪಾರಂಪರಿಕ ನಗರ ಅಭಿವೃದ್ಧಿ ಮತ್ತು ವರ್ಧನೆ (HRIDAY)

HRIDAY Scheme
(Heritage City Development and Augmentation Yojana)

- 2015ರ ಜನವರಿ 21ರಂದು ಜಾರಿ. ದೇಶದ 12 ಪಾರಂಪರಿಕ ತಾಣಗಳನ್ನು ಸಂರಕ್ಷಿಸುವುದು ಮತ್ತು ಅವುಗಳನ್ನು ಅಭಿವೃದ್ಧಿ ಪಡಿಸುವುದು. ಇವುಗಳಲ್ಲಿ ಕರ್ನಾಟಕದ ಬಾದಾಮಿ ನಗರ ಸೇರಿದೆ.

## ಬೇಟಿ ಬಚಾವೊ ಬೇಟಿ ಪಡಾವೊ (Beti Bachao, Beti Padaho) ಅಭಿಯಾನ




- ಪ್ರಧಾನಿ ನರೇಂದ್ರ ಮೋದಿಯವರು 2015ರ ಜನವರಿ 22ರಂದು ಹರ್ಯಾಣದ ಪಾಣಿಪಟ್‌ನಲ್ಲಿ ಬೇಟಿ ಬಚಾವೊ ಬೇಟಿ ಪಡಾವೊ (Beti Bachao, Beti Padaho) (Save Girl Child, Educate Girl Child) ಮಹತ್ವಾಕಾಂಕ್ಷಿ ಅಭಿಯಾನಕ್ಕೆ ಚಾಲನೆ ನೀಡಿದರು.
- ಈ ಯೋಜನೆಯು ಪ್ರಮುಖವಾಗಿ ಹೆಣ್ಣು ಮಕ್ಕಳಿಗೆ ಶಿಕ್ಷಣ, ಪೌಷ್ಠಿಕಾಂಶವನ್ನು ಒದಗಿಸುವುದು. ಭ್ರೂಣಹತ್ಯೆಯನ್ನು ತಡೆಯುವುದು, ಭದ್ರತೆಯನ್ನು ಒದಗಿಸುವುದಾಗಿದೆ.
- ದೇಶದಲ್ಲಿ ಲಿಂಗಾನುಪಾತವು ಕಡಿಮೆಯಾಗುತ್ತಿರುವ ಸಂದರ್ಭದಲ್ಲಿ ಮಹಿಳೆಯರ ಜಾಗೃತಿ ಮೂಡಿಸುವ ಮತ್ತು ಅವರಿಗಾಗಿ ಕಲ್ಯಾಣ ಕಾರ್ಯಕ್ರಮಗಳನ್ನು ಕೈಗೊಳ್ಳುವ ಉದ್ದೇಶದಿಂದ 100 ಕೋಟಿ ರೂ. ಅನುದಾನ ನೀಡಲಾಗಿದ್ದು, ಹೆಣ್ಣುಮಕ್ಕಳಲ್ಲಿ ಜಾಗೃತಿ ಮೂಡಿಸಲಾಗುವುದು.
- ಈ ಯೋಜನೆಯು 3 ಇಲಾಖೆಗಳಾದ ಮಹಿಳಾ & ಮಕ್ಕಳ ಅಭಿವೃದ್ಧಿ ಇಲಾಖೆ, ಆರೋಗ್ಯ & ಕುಟುಂಬ

ಕಲ್ಯಾಣ, ಮಾನವ ಸಂಪನ್ಮೂಲ ಸಚಿವಾಲಯದ ಜಂಟಿ ಸಹಭಾಗಿತ್ವದಲ್ಲಿ ಕಾರ್ಯ ನಿರ್ವಹಿಸುತ್ತಿದೆ.

+ ಈ ಯೋಜನೆಯ ರಾಯಭಾರಿಯಾಗಿ 2016ನೇ ಸಾಲಿನ ಒಲಂಪಿಕ್ ಕಂಚಿನ ಪದಕ ವಿಜೇತೆ ಕುಸ್ತಿ ಪಟು ಸಾಕ್ಷಿ ಮಲ್ಲಿಕ್ ಅವರನ್ನು ಮಾಡಲಾಗಿದೆ.

## ಸುಕನ್ಯಾ ಸಮೃದ್ಧಿ ಯೋಜನೆ ಉದ್ಘಾಟನೆ



Sukanya Samriddhi Scheme A Small Savings Scheme

+ 2015ರ ಜನವರಿ 22ರಂದು ಪ್ರಧಾನಿ ನರೇಂದ್ರ ಮೋದಿಯವರು ಬಾಲಕಿಯರಿಗಾಗಿ ಸಣ್ಣ ಉಳಿತಾಯ ಯೋಜನೆಯಾದ "ಸುಕನ್ಯಾ ಸಮೃದ್ಧಿ ಯೋಜನೆ"ಯನ್ನು ಬೇಟಿ ಬಚಾವೊ ಬೇಟಿ ಪಡಾವೊ (Beti Bacho Beti Padho) ಅಭಿಯಾನದಡಿಯಲ್ಲಿ ಉದ್ಘಾಟಿಸಿದರು.

+ ಈ ಯೋಜನೆಯಡಿಯಲ್ಲಿ ಪೋಷಕರು 10 ವರ್ಷದೊಳಗಿನ ಹೆಣ್ಣು ಮಕ್ಕಳಿಗೆ ಅಂಚೆ ಕಚೇರಿಯಲ್ಲಿ ಖಾತೆ ತೆರೆಯಬಹುದಾಗಿದೆ.

+ ಈ ಯೋಜನೆಯು ಬಾಲಕರಿಂದ ತಾರತಮ್ಯಕ್ಕೆ ಒಳಗಾದ ಬಾಲಕಿಯರಿಗೂ ಉಳಿತಾಯ ಮತ್ತು ಸಂಪನ್ಮೂಲಗಳಿಂದ ಸಮಾನ ಪಾಲು (Equitable Share) ಪಡೆಯುವ ಭರವಸೆ ಒದಗಿಸುತ್ತದೆ.

### ಸುಕನ್ಯಾ ಸಮೃದ್ಧಿ ಯೋಜನೆಯ ಮುಖ್ಯಾಂಶಗಳು:-

+ ಈ ಯೋಜನೆ ಜಾರಿಯಾದ ಆರಂಭದಲ್ಲಿ ಖಾತೆ-ದಾರರಿಗೆ ಶೇ 9.1 ರಷ್ಟು ಬಡ್ಡಿ ನೀಡಲಾಗುತ್ತದೆ. ಮತ್ತು ಆದಾಯ ತೆರಿಗೆಯ ರಿಬೇಟ್ ನೀಡುತ್ತದೆ. 2016 ಅಕ್ಟೋಬರ್ 1 ರಂದು, ಬಡ್ಡಿದರ ಶೇ 8.5 ರಷ್ಟನ್ನು ನಿಗದಿ ಮಾಡಲಾಗಿದೆ. ಪ್ರಸ್ತುತವಾಗಿ ಈ ಬಡ್ಡಿದರ ಜಾರಿಯಲ್ಲಿದೆ.

+ ಈ ಯೋಜನೆಯಡಿ ತೆರೆದ ಖಾತೆಯು ಖಾತೆ ತೆರೆದ ದಿನದಿಂದ 21 ವರ್ಷದವರೆಗೆ ಚಾಲನೆಯಲ್ಲಿರುತ್ತದೆ. ಅಥವಾ 18 ವರ್ಷ ವಯಸ್ಸಿನ ನಂತರದ ವಿವಾಹದವರೆಗೂ ಚಾಲ್ತಿಯಲ್ಲಿರುತ್ತದೆ.

+ ಕರ್ನಾಟಕ ರಾಜ್ಯವು ಅತಿ ಹೆಚ್ಚು ಖಾತೆಗಳನ್ನು ಹೊಂದಿದೆ. ಈ ಯೋಜನೆಯಡಿ ಹೆಣ್ಣು ಮಗು ಜನಿಸಿದ ನಂತರ 10 ವರ್ಷ ವಯೋಮಿತಿಯೊಳಗೆ ಯಾವುದೇ ದಿನದಲ್ಲಿ ಒಂದು ಸಾವಿರ ಕನಿಷ್ಠ ಠೇವಣಿ ಮೂಲಕ ಖಾತೆ ತೆರೆಯಬಹುದು. ಒಂದು ಆರ್ಥಿಕ ವರ್ಷದಲ್ಲಿ ಗರಿಷ್ಠ 1.5 ಲಕ್ಷ ರೂ.ಗಳನ್ನು ಠೇವಣಿ ಇಡಬಹುದು.

+ ಹೆಣ್ಣು ಮಕ್ಕಳು 18 ವರ್ಷ ವಯಸ್ಸು ತಲುಪಿದಾಗ ಉನ್ನತ ಶಿಕ್ಷಣ ಖರ್ಚಿಗಾಗಿ ಅಗತ್ಯ ಬಿದ್ದ-ರೆ ಖಾತೆಯ ಉಳಿಕೆಯ ಶೇ 50 ರಷ್ಟು ಹಣವನ್ನು ಒಂಪಡೆಯಬಹುದು.

## ಮಣ್ಣು ಆರೋಗ್ಯ ಕಾರ್ಡ್ (Soil Health card)




+ 2015ರ ಫೆಬ್ರವರಿ 17 ರಂದು ರಾಜಸ್ಥಾನದ ಸೂರತ್‌ಘರ್ ನಲ್ಲಿ ಪ್ರಧಾನಿ ನರೇಂದ್ರ ಮೋದಿ ಅವರು ಉದ್ಘಾಟಿಸಿದರು.

+ ಈ ಯೋಜನೆ ಅಡಿ ಸರ್ಕಾರ ರೈತರಿಗೆ ಮಣ್ಣಿನ ಆರೋಗ್ಯ ಕಾರ್ಡ್ ವಿತರಿಸಿದೆ. ಇದರಿಂದ ಜಮೀನಿನಲ್ಲಿ ಮಣ್ಣಿನ ಗುಣಮಟ್ಟವನ್ನು ಅಧ್ಯಯನ ಮಾಡಿ ಅದಕ್ಕೆ ಅನುಗುಣವಾದ ಬೆಳೆಯನ್ನು ಬೆಳೆಯಬಹುದು.

+ ಕೇಂದ್ರ ಸರ್ಕಾರವು 14 ಕೋಟಿ ರೈತರಿಗೆ ಮಣ್ಣು ಆರೋಗ್ಯ ಕಾರ್ಡು ವಿತರಿಸುವ ಯೋಜನೆಯಾಗಿದೆ.

## ರಾಷ್ಟ್ರೀಯ ಕ್ರೀಡಾ ಪ್ರತಿಭಾನ್ವೇಷಣ ಯೋಜನೆ (NSTSS - National Sports Talent Search Scheme)

National Talent Search Scheme

to Scout for Sports Talent in Schools



+ 2015ರ ಫೆಬ್ರವರಿ 20 ರಂದು ಜಾರಿ.

+ 8 ರಿಂದ 12 ವರ್ಷದೊಳಗಿನ ವಯಸ್ಸಿನ ವಿದ್ಯಾರ್ಥಿಗಳಲ್ಲಿ ಕ್ರೀಡಾ ಪ್ರತಿಭೆಯನ್ನು ಗುರ್ತಿಸುವ ಯೋಜನೆಯಾಗಿದೆ.

+ ಈ ಯೋಜನೆಯನ್ನು ಯುವಜನ & ಕ್ರೀಡಾ ಸಚಿವಾಲಯವು ಆರಂಭಿಸಿದೆ.

## ಸ್ವದೇಶ್ ದರ್ಶನ್ ಯೋಜನೆ

(Swadesh Darshan Scheme):-




- 2015 ಮಾರ್ಚ್ 9 ರಂದು ಜಾರಿ.
- ವಿಶ್ವ ದರ್ಜೆಯ ಪ್ರವಾಸೋದ್ಯಮ ದ ಮೂಲಭೂತ ಸೌಕರ್ಯವನ್ನು ಅಭಿವೃದ್ಧಿ ಪಡಿಸುವುದು.
- 2014-15 ರ ಬಜೆಟ್‌ನಲ್ಲಿ ಘೋಷಿಸಲಾಗಿತ್ತು. ಇದು ಧ್ಯೇಯ ಆಧಾರಿತ ಪ್ರವಾಸೋದ್ಯಮದ ಸರ್ಕ್ಯೂಟ್‌ನ್ನು ಅಭಿವೃದ್ಧಿಪಡಿಸುವುದು.
- ಈ ಯೋಜನೆಯಲ್ಲಿ 13 ಸರ್ಕ್ಯೂಟ್‌ಗಳನ್ನು ಗುರ್ತಿಸಲಾಗಿದೆ. 1. ಈಶಾನ್ಯ ಭಾರತ ಸರ್ಕ್ಯೂಟ್, 2. ಬೌದ್ಧಿಸ್ಟ್ ಸರ್ಕ್ಯೂಟ್, 3. ಹಿಮಾಲಯನ್ ಸರ್ಕ್ಯೂಟ್, 4. ಕೋಸ್ಟಲ್ ಸರ್ಕ್ಯೂಟ್, 5. ಕೃಷ್ಣ ಸರ್ಕ್ಯೂಟ್, 6. ಡಸರ್ಟ್ ಸರ್ಕ್ಯೂಟ್, 7. ಟ್ರೈಬಲ್ ಸರ್ಕ್ಯೂಟ್, 8. ಇಕೋ ಸರ್ಕ್ಯೂಟ್, 9. ವೈಡ್‌ಲೈಫ್ ಸರ್ಕ್ಯೂಟ್, 10. ರೂರಲ್ ಸರ್ಕ್ಯೂಟ್, 11. ಸ್ಪಿರಿಚುಯಲ್ ಸರ್ಕ್ಯೂಟ್, 12. ರಾಮಾಯಣ, 13. ಹೆರಿಟೇಜ್ ಸರ್ಕ್ಯೂಟ್
- ಇದು 450 ಕೋಟಿ ರೂ. ವೆಚ್ಚದ ಯೋಜನೆಯಾಗಿದ್ದು, 5 ರಾಜ್ಯಗಳಲ್ಲಿ ವ್ಯಾಪಿಸಿದೆ. ಅಂತಹ ರಾಜ್ಯಗಳೆಂದರೆ – ಮಧ್ಯಪ್ರದೇಶ, ಉತ್ತರಾಖಂಡ, ಉ. ಪ್ರದೇಶ, ಸಿಕ್ಕಿಂ & ತಮಿಳುನಾಡು

**ಪ್ರಸಾದ್** (PRASAD-Pilgrimage Rejuvenation and Spiritual Augmentation Drive):-

- **2015ರ ಮಾರ್ಚ್ 9 ರಂದು** ಜಾರಿಗೆ ತರಲಾಯಿತು.
- ಇದು ಪ್ರವಾಸೋದ್ಯಮ ಸಚಿವಾಲಯದಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಯಾತ್ರಾ ಸ್ಥಳಗಳಲ್ಲಿ ವಿಶ್ವ ದರ್ಜೆಯ ಮೂಲಭೂತ ಸೌಕರ್ಯ ಒದಗಿಸುವುದು.




- ಈ ಯೋಜನೆಯಲ್ಲಿ 13 ತಾಣಗಳನ್ನು ಅಭಿವೃದ್ಧಿ ಪಡಿಸಲಾಗುತ್ತಿದೆ. ಅವುಗಳೆಂದರೆ – **ಅಮೃತಸರ, ಅಜ್ಮೀರ್, ದ್ವಾರಕಾ, ಮಥುರಾ, ವಾರಣಾಸಿ, ಗಯಾ, ಪುರಿ, ಅಮರಾವತಿ, ಕಾಂಚೀಪುರಂ, ವೇಲಾಂಕಣಿ, ಕೇದಾರನಾಥ, ಕಾಮಾಕ್ಯ & ಪಾಟ್ನಾ**

## ಊರ್ಜಾ ಸಂಗಂ -2015 (ಭಾರತೀಯ ಜಾಗತಿಕ ಹೈಡ್ರೋ ಕಾರ್ಬನ್ ಸಮ್ಮೇಳನ) (Urja Sangam - 2015 India's Global Hydro Carbon Summit)




- 2015 ಮಾರ್ಚ್ 27 ರಂದು ಭಾರತದ ಪ್ರಧಾನಿ ನರೇಂದ್ರ ಮೋದಿ ಅವರು **ನವದೆಹಲಿಯ** ವಿಜ್ಞಾನ ಭವನದಲ್ಲಿ ದೇಶದ ಅತಿ ದೊಡ್ಡ ಜಾಗತಿಕ ಹೈಡ್ರೋ ಕಾರ್ಬನ್ ಸಮ್ಮೇಳನ (Urja Sangam - 2015 India's Global Hydro Carbon Summit) ವನ್ನು ಉದ್ಘಾಟಿಸಿದರು.
- ಇದರ ಪ್ರಮುಖ ಉದ್ದೇಶವು ಭಾರತೀಯ ಶಕ್ತಿ ಭದ್ರತೆಯ ಗುರಿಯನ್ನು ಹೊಂದಿತ್ತು. ಇದೇ ಸಂದರ್ಭದಲ್ಲಿ Give it up Abhiyan ಕ್ಕೂ ಕೂಡ ಚಾಲನೆ ನೀಡಿತು.

## ಗೀವ್ ಇಟ್ ಅಪ್ ಅಭಿಯಾನ

(Give it Up Campaign)




- ಭಾರತದ ಪ್ರಧಾನಿ ನರೇಂದ್ರ ಮೋದಿ ಅವರು 2016 ಮಾರ್ಚ್ 27 ರಂದು ಉದ್ಘಾಟಿಸಿದರು.
- **ಊರ್ಜಾಸಂಗಂ ಜಾಗತಿಕ ಶಕ್ತಿ** ಸಭೆಯ ಉದ್ಘಾಟನೆ ಸಂದರ್ಭದಲ್ಲಿ ಈ ಅಭಿಯಾನವನ್ನು ಆರಂಭಿಸಿದರು.
- ಈ ಅಭಿಯಾನದಲ್ಲಿ ಸ್ವಯಂ ಪ್ರೇರಿತವಾಗಿ ಆರ್ಥಿಕವಾಗಿ ಸಬಲರಾದವರು ಎಲ್.ಪಿ.ಜಿ ಸಂಪರ್ಕಕ್ಕೆ ನೀಡುತ್ತಿರುವ ಸಬ್ಸಿಡಿಯನ್ನು ಸರ್ಕಾರಕ್ಕೆ ಒಪ್ಪಿಸುವುದಾಗಿದೆ ಇದರಿಂದ ಬಡ ಜನರಿಗೆ ಎಲ್.ಪಿ.ಜಿ ಸಂಪರ್ಕವನ್ನು ಒದಗಿಸಲು ಸಹಕಾರಿಯಾಗುತ್ತದೆ.

### ಮುದ್ರಾ ಬ್ಯಾಂಕ್ (MUDRA - Micro Unit Development and Re- finance Agency Bank)




- 2015 ಏಪ್ರಿಲ್ 8 ರಂದು ನರೇಂದ್ರ ಮೋದಿ ಅವರು ಪ್ರಧಾನಮಂತ್ರಿ ಮುದ್ರಾ ಯೋಜನಾ ಅಡಿಯಲ್ಲಿ ಉದ್ಘಾಟಿಸಿದರು.
- ಈ ಬ್ಯಾಂಕ್‌ನ ಕೇಂದ್ರ ಕಛೇರಿ – **ನವದೆಹಲಿಯಲ್ಲಿದೆ.**
- ಇದು SIDBI (ಭಾರತೀಯ ಸಣ್ಣ ಕೈಗಾರಿಕಾಭಿವೃದ್ಧಿ ಬ್ಯಾಂಕ್) ಯ ಅಂಗ ಸಂಸ್ಥೆಯಾಗಿದೆ.
- **ಸಣ್ಣ** ಉದ್ಯಮಗಳಿಗೆ 10 ಲಕ್ಷದವರೆಗೆ ಸಾಲ ನೀಡುವ ಯೋಜನೆಯಾಗಿದೆ. ಸಾಲ ನೀಡುವ ಸಾಲದ ಮೊತ್ತದ ಆಧಾರದ ಮೇಲೆ 3 ಯೋಜನೆಗಳನ್ನು ಒಳಗೊಂಡಿದ್ದು, **1) ಶಿಶು** -50 ಸಾವಿರದವರೆಗೆ ಸಾಲ **2) ಕಿಶೋರ** -5ಲಕ್ಷದವರೆಗೆ ಸಾಲ **3) ತರುಣ**-10ಲಕ್ಷದವರೆಗೆ ಸಾಲ

### ಪ್ರಧಾನ ಮಂತ್ರಿ ಜೀವನ್ ಜ್ಯೋತಿ ಭಿಮಾ ಯೋಜನೆ (PMJJBY)




- ನರೇಂದ್ರ ಮೋದಿ ಅವರು **2015 ಮೇ 9 ರಂದು ಕೋಲ್ಕತ್ತಾದಲ್ಲಿ** ಉದ್ಘಾಟಿಸಿದರು.
- **ಸರ್ಕಾರದ ಜೀವ ವಿಮಾ ಯೋಜನೆಯಾಗಿದ್ದು,** ಭಾರತದ ಎಲ್ಲಾ ನಾಗರೀಕರಿಗೂ ಅನ್ವಯವಾಗುತ್ತದೆ.
- **18 ರಿಂದ 50** ವರ್ಷದೊಳಗಿನವರುಗಳಿಗೆ ಒದಗಿಸುವ ಜೀವ ವಿಮಾ ಯೋಜನೆಯಾಗಿದ್ದು, ವರ್ಷಕ್ಕೆ **330 ರೂಗಳನ್ನು** ಪಾವತಿಸುವ ಮೂಲಕ 2ಲಕ್ಷ ರೂಗಳನ್ನು ಪಡೆಯಬಹುದಾಗಿದೆ. ಈ ಯೋಜನೆಯಲ್ಲಿ ಹೂಡಿಕೆ ಮಾಡಿದ ಹಣಕ್ಕೆ ಸೇವಾ ತೆರಿಗೆಯಿಂದ ವಿನಾಯಿತಿ ಪಡೆದಿದೆ. ಈ ಹಣವು ನೇರವಾಗಿ ಖಾತೆದಾರರ ಖಾತೆಗೆ ವರ್ಗಾವಣೆಯಾಗುತ್ತದೆ.
- ಯಾವುದಾದರೂ ಕಾರಣದಿಂದ ಮರಣ ಹೊಂದಿದರೆ, ಫಲಾನುಭವಿಯ ಅವಲಂಬಿತರಿಗೂ ಕೂಡ 2 ಲಕ್ಷ ರೂ.ಗಳವರೆಗೆ ಹಣ ದೊರೆಯುತ್ತದೆ.

### ಪ್ರಧಾನ ಮಂತ್ರಿ ಸುರಕ್ಷಾ ಭೀಮಾ ಯೋಜನೆ (PMSBY)




- ಈ ಯೋಜನೆಯನ್ನು ಪ್ರಧಾನಿ ನರೇಂದ್ರ ಮೋದಿ ಅವರು **2015 ಮೇ 9ರಂದು ಕೋಲ್ಕತ್ತಾದಲ್ಲಿ** ಉದ್ಘಾಟಿಸಿದರು.
- ಇದೊಂದು **ಅಪಘಾತ ವಿಮಾ ರಕ್ಷಣಾ ಯೋಜನೆಯಾಗಿದ್ದು,** ಎಲ್ಲಾ ವರ್ಗದ ಜನರಿಗೂ ಕೈಗೆಟುಕುವಂತಾಗಿದೆ.
- ವರ್ಷಕ್ಕೆ 12 **ರೂಪಾಯಿಯನ್ನು** ಕಟ್ಟುವ ಯೋಜನೆಯಾಗಿದೆ.
- **18 ರಿಂದ 70** ವರ್ಷದವರಿಗೆ ಅಪಘಾತದಲ್ಲಿ **ಸಾವು ಅಥವಾ ಸಂಪೂರ್ಣ ವಿಕಲತೆ ಹೊಂದಿದರೆ 2 ಲಕ್ಷದವರೆಗೆ** ಮತ್ತು ಭಾಗಶಃವಾಗಿ ಅಂಗ ವೈಕಲ್ಯತೆ ಹೊಂದಿದರೆ 1 ಲಕ್ಷ ರೂಗಳನ್ನು ನೀಡುವಂತಹ ಯೋಜನೆಯಾಗಿದೆ.
- ಈ ಯೋಜನೆಯಲ್ಲಿ ಹೂಡಿಕೆ ಮಾಡಿದ ಹಣಕ್ಕೆ ಸೇವಾ ತೆರಿಗೆಯಿಂದ ವಿನಾಯಿತಿ ಪಡೆದಿದೆ.
- ಅಪಘಾತ ವಿಮಾ ಯೋಜನೆಯು **ವಿಮಾ ವರ್ಷವಾದ ಜೂನ್ 1 ರಿಂದ ಮೇ 31** ರ ಅವಧಿಯ ವ್ಯಾಪ್ತಿಯನ್ನು ಹೊಂದಿದ್ದು, 1 ವರ್ಷ ನಿಗದಿತ ಅವಧಿಯದ್ದಾಗಿದೆ. ಮತ್ತೆ ಪರಿಷ್ಕರಣೆ ಮಾಡಲಾಗುತ್ತದೆ.
- ಪ್ರಧಾನಮಂತ್ರಿ ಜನಧನ ಯೋಜನೆಯ ಖಾತೆ ಹೊಂದಿರುವವರಿಗೆ ಅದರೊಂದಿಗೆ ಸಂಪರ್ಕ ಕಲ್ಪಿಸಲಾಗಿದೆ. ಜನಧನ್ ಖಾತೆ ಇಲ್ಲದ ಉಳಿತಾಯ ಖಾತೆ ಹೊಂದಿರುವ ಯಾವುದೇ ವ್ಯಕ್ತಿಯೂ ಈ ಸೌಲಭ್ಯ ಪಡೆಯಲು ಅರ್ಹರು.

### ಅಟಲ್ ಪಿಂಚಣಿ ಯೋಜನೆ (Atal Pension Scheme)




- ಈ ಯೋಜನೆಯನ್ನು ನರೇಂದ್ರ ಮೋದಿ ಅವರು **2015 ಮೇ 9ರಂದು** ಕೋಲ್ಕತ್ತಾದಲ್ಲಿ ಉದ್ಘಾಟಿಸಲಾಯಿತು.

✦ ಈ ಯೋಜನೆಯು ಅಸಂಘಟಿತ ವಲಯದ ಕಾರ್ಮಿಕರು ಅಥವಾ ಕೆಲಸಗಾರರನ್ನು ಗುರಿಯಿಟ್ಟುಕೊಂಡು ರೂಪಿಸಿರುವ ನಿವೃತ್ತಿ ಪಿಂಚಣಿ ಯೋಜನೆಯಾಗಿದೆ.

✦ ಇದರ ಮುಖ್ಯ ಉದ್ದೇಶ ದೇಶದ ಅತ್ಯಂತ ನಿವೃತ್ತಿ ಯೋಜನೆಯ ಫಲಾನುಭವಿಗಳ ಸಂಖ್ಯೆಯನ್ನು ಹೆಚ್ಚಿಸುವುದಾಗಿದೆ.

✦ ಈ ಯೋಜನೆಯು 18 ರಿಂದ 40 ವರ್ಷದೊಳಗಿನವರು ಅಸಂಘಟಿತ ವಲಯದ ಕಾರ್ಮಿಕರು 1 ಸಾವಿರದಿಂದ 5 ಸಾವಿರದವರೆಗೆ ಪ್ರತಿ ತಿಂಗಳು ಅವರ ಕೊಡುಗೆಗನುಸಾರವಾಗಿ ಪಡೆಯುವ ಪಿಂಚಣಿ ಯೋಜನೆಯಾಗಿದೆ.

✦ ಈ ಯೋಜನೆಯಲ್ಲಿ ಸರ್ಕಾರವು ಒಟ್ಟು ಕೊಡುಗೆ ಶೇ 50ರಷ್ಟು ಅಥವಾ 1000/- ನ್ನು ಸರ್ಕಾರವು ಕೊಡುಗೆಯಾಗಿ ನೀಡುತ್ತದೆ. ಫಲಾನುಭವಿಗಳಿಗೆ 60 ವರ್ಷ ವಯಸ್ಸಾಗುತ್ತಿದ್ದಂತೆ ಪಿಂಚಣಿ ನೀಡಲಾಗುತ್ತಿದೆ.

## ಅಮೃತ್ ಯೋಜನೆ (AMRUT- Atal Mission for Rejuvenation and Urban Transformation)




✦ 2015ರ ಜೂನ್ 24ರಂದು ಪ್ರಧಾನಿ ನರೇಂದ್ರ ಮೋದಿ ಅವರು ಉದ್ಘಾಟಿಸಿದರು.

✦ ನಗರಗಳ ಕುಟುಂಬಗಳಿಗೆ ಮೂಲಭೂತ ಸೇವೆಗಳಾದ ನೀರು ಪೂರೈಕೆ, ಚರಂಡಿ ಮತ್ತು ನಗರ ಸಾರಿಗೆಯನ್ನು ಒದಗಿಸುವುದಾಗಿದೆ.

✦ ಅಮೃತ್ ಯೋಜನೆಯಡಿಯಲ್ಲಿ ಕ್ರಿಯಾ ಯೋಜನೆಯನ್ನು ರಾಜಸ್ಥಾನ ರಾಜ್ಯವು ದೇಶದಲ್ಲೇ ಸಲ್ಲಿಸಿದ ಮೊದಲ ರಾಜ್ಯವಾಗಿದೆ.

✦ ಈ ಯೋಜನೆಯಲ್ಲಿ ದೇಶದ 500 ನಗರಗಳನ್ನು ಅಭಿವೃದ್ಧಿ ಪಡಿಸುವುದಾಗಿದೆ. ಮೊದಲ ಹಂತದಲ್ಲಿ ಆಂಧ್ರಪ್ರದೇಶ, ಗುಜರಾತ್, ರಾಜಸ್ಥಾನಕ್ಕೆ 2015-16 ನೇ ಸಾಲಿನಲ್ಲಿನ ನಿಧಿಯನ್ನು ಬಿಡುಗಡೆ ಮಾಡಲಾಯಿತು.

✦ ಕರ್ನಾಟಕ ರಾಜ್ಯದಲ್ಲಿ 27 ನಗರಗಳು ಈ ಯೋಜನೆಗೆ ಆಯ್ಕೆಯಾಗಿವೆ.

## ಸ್ಮಾರ್ಟ್ ಸಿಟಿ (Smart City)

✦ 2015ರ ಜೂನ್ 25 ಜಾರಿ.

✦ ಎನ್.ಡಿ.ಎ ಸರ್ಕಾರದ ಮಹತ್ವಕಾಂಕ್ಷೆಯ ಸುಸಜ್ಜಿತ ನಗರಗಳ (ಸ್ಮಾರ್ಟ್ ಸಿಟಿ) ನಿರ್ಮಾಣ ಯೋಜನೆ.

✦ ದೇಶದ 100 ನಗರಗಳನ್ನು ಸ್ಮಾರ್ಟ್ ನಗರಗಳಾಗಿ ಅಭಿವೃದ್ಧಿ ಪಡಿಸುವ ಯೋಜನೆಯಾಗಿದೆ. ಈ ಗುರಿಯನ್ನು ಪರಿಷ್ಕರಣೆ ... 109 ನಗರಗಳನ್ನು ಅಭಿವೃದ್ಧಿ ಪಡಿಸುವ ಗುರಿ... ಹೊಂದಲಾಗಿದೆ. ಈ ಮೂಲಕ ದೇಶದ ನಗರ... ನಾಗರೀಕ ಸ್ನೇಹಿ & ಸುಸ್ಥಿರಗೊಳಿಸುವುದಾಗಿದೆ.

✦ ಕೇಂದ್ರ ನಗರಾಭಿವೃದ್ಧಿ ಸಚಿವಾಲಯವು ಆಯಾ ರಾ... ರಾಜ್ಯ ಸರ್ಕಾರಗಳ ಸಹಭಾಗಿತ್ವದಲ್ಲಿ ಅನುಷ್ಠಾ... ಜವಾಬ್ದಾರಿಯನ್ನು ಹೊಂದಿದೆ. ಈ ಯೋಜನೆ... 98,000 ಕೋಟಿಯನ್ನು ಬಿಡುಗಡೆ ಮಾಡಲಾಗಿ...

✦ ಮೊದಲ ಹಂತದಲ್ಲಿ 2016 ಜನವರಿ ... ರಂದು ಘೋಷಣೆಯಲ್ಲಿ ದೇಶದ 20 ನಗರ... ಆಯ್ಕೆಯಾಗಿದ್ದು, ಅವುಗಳಲ್ಲಿ ಭುವನೇಶ್ವರ, ಪುಣೆ, ಜೈಪುರಗಳು ಮೊದಲ 3 ಸ್ಥಾನದಲ್ಲಿ ಆಯ್ಕೆಯಾ...

✦ ಕರ್ನಾಟಕದ ದಾವಣಗೆರೆ, ಬೆಳಗಾವಿ ಆಯ್ಕೆಯಾ... ಈ ನಗರಗಳನ್ನು Light House Cities ...

✦ 2ನೇ ಹಂತದಲ್ಲಿ ದೇಶದ 13 ನಗರ... ಆಯ್ಕೆಯಾಗಿದ್ದವು. ಕರ್ನಾಟಕದ ... ನಗರಗಳು ಆಯ್ಕೆಯಾಗಿಲ್ಲ.

✦ 3ನೇ ಹಂತದಲ್ಲಿ 27 ನಗರಗಳು ಆಯ್ಕೆಯಾ... ಕರ್ನಾಟಕದ ಹುಬ್ಬಳ್ಳಿ-ಧಾರವಾಡ, ಮಂಗಳೂ... ಶಿವಮೊಗ್ಗ, ತುಮಕೂರು, ಆಯ್ಕೆಯಾಗಿವೆ.

✦ 2017 ಜೂನ್ 23 ರಂದು ಬೆಂಗಳೂರು ಆಯ್ಕೆಯಾ...

## ಜಾರ್ಖಂಡ್‌ನಲ್ಲಿ ಕೃಷಿ ಸಂಶೋಧನಾ ಸಂಸ್ಥೆ ಶಿಲಾನ್ಯಾಸ



✦ ಜಾರ್ಖಂಡ್‌ನ ಹಜಾರಿಬಾಗ್‌ನ ಬಾರ್ಹಿ (Barhi) ... ಭಾರತೀಯ ಕೃಷಿ ಸಂಶೋಧನಾ ಸಂಸ್ಥೆಗೆ ಶಿಲಾನ್ಯಾಸ... ಜೂನ್ 28, 2015ರಂದು ನೆರವೇರಿ...

## ಡಿಜಿಟಲ್ ಇಂಡಿಯಾ (Digital India)



Digital India
Power To Empower

- ಈ ಯೋಜನೆಗೆ 2015ರ ಜುಲೈ 2 ರಂದು ಉದ್ಘಾಟನೆಯಾಯಿತು. ಆಧುನಿಕ ತಂತ್ರಜ್ಞಾನವನ್ನು ಬಳಸಿಕೊಂಡು ಜನರಿಗೆ ಮಾಹಿತಿ ಒದಗಿಸುವುದು. ದೇಶದ ಎಲ್ಲಾ ನಾಗರೀಕರು ಡಿಜಿಟಲ್ ತಂತ್ರಜ್ಞಾನದ ಮೂಲಕ ಮಾಹಿತಿಯು ಸರ್ಕಾರಿ ಸೇವೆಯನ್ನು ಒದಗಿಸುವಂತಹ ಈ ಯೋಜನೆಯು 1 ಲಕ್ಷ ಕೋಟಿ ರೂ. ವೆಚ್ಚದ್ದಾಗಿದ್ದು, 2018 ರ ವೇಳೆಗೆ ಪೂರ್ಣಗೊಳ್ಳಲಿದೆ ಮತ್ತು 9 ಕ್ಷೇತ್ರಗಳಿಗೆ ನೆರವಾಗಲಿದೆ.
- ಇದು 3 ಘಟಕಗಳನ್ನು ಒಳಗೊಂಡಿದ್ದು, ಅವುಗಳೆಂದರೆ – 1. ಡಿಜಿಟಲ್ ಮೂಲಭೂತ ಸೌಕರ್ಯಗಳ ಸೃಷ್ಠಿ, 2. ಡಿಜಿಟಲ್ ಆಡಳಿತ & ಸೇವೆಯನ್ನು ಒದಗಿಸುವುದು, 3. ಡಿಜಿಟಲ್ ಸಾಕ್ಷರತೆ
- ಧ್ಯೇಯವಾಕ್ಯ– Power to Empower
- **ಡಿಜಿಟಲ್ ಇಂಡಿಯಾದ 9 ಸ್ತಂಭಗಳು:–** ಬ್ರಾಡ್ ಬ್ಯಾಂಡ್ ಹೈವೇ, ಸಾರ್ವತ್ರಿಕ ಇಂಟರ್‌ನೆಟ್, ಸಾರ್ವಜನಿಕ ಅಂತರ್ಜಾಲ ಲಭ್ಯತಾ ಕಾರ್ಯಕ್ರಮ, ಇ–ಗವರ್ನೆನ್ಸ್, ಇ–ಕ್ರಾಂತಿ, ಎಲ್ಲರಿಗೂ ಮಾಹಿತಿ, ಎಲೆಕ್ಟ್ರಾನಿಕ್ ತಯಾರಿಕೆ, ಉದ್ಯೋಗಕ್ಕಾಗಿ ಮಾಹಿತಿ ತಂತ್ರಜ್ಞಾನ, ಪೂರ್ವ ಬಿತ್ತನೆ ಕಾರ್ಯಕ್ರಮ.
- ಡಿಜಿಟಲ್ ಲಾಕರ್ಸ್ ವ್ಯವಸ್ಥೆಯನ್ನು ನಾಗರೀಕರಿಗೆ ಒದಗಿಸಿ ಅವರ ಅವಶ್ಯ ದಾಖಲೆಗಳಾದ ಪಾನ್‌ಕಾರ್ಡ್, ಪಾಸ್‌ಪೋರ್ಟ್, ಮಾರ್ಕ್ಸ್ ಕಾರ್ಡ್‌ಗಳು ಇತ್ಯಾದಿ ದಾಖಲೆಗಳನ್ನು ಶೇಖರಿಸಿಡುವುದು.
- 2015 ಜುಲೈ 1 ರಂದು ಡಿಜಿಟಲ್‌ಗೆ ಸಂಬಂಧಿಸಿದ ವೆಬ್‌ಸೈಟ್ My Gov.in ನ್ನು ನರೇಂದ್ರ ಮೋದಿ ಉದ್ಘಾಟಿಸಿದರು. ಇದರ ಮುಖ್ಯ ಉದ್ದೇಶ ದೇಶದ ಆಡಳಿತದಲ್ಲಿ ನಾಗರೀಕರನ್ನು ಚರ್ಚೆ, ಭಾಗವಹಿಸುವಿಕೆ, ಅನುಷ್ಠಾನದಲ್ಲಿ ತೊಡಗುವಂತೆ ಮಾಡುವುದು.
- ಕೇಂದ್ರ ಮಾಹಿತಿ ತಂತ್ರಜ್ಞಾನ ಸಚಿವಾಲಯವು ಅಭಿವೃದ್ಧಿಗೊಳಿಸಿ ಮೇಲ್ವಿಚಾರಣೆ ನಡೆಸುತ್ತದೆ.
- ಹರಿಯಾಣ ರಾಜ್ಯದ ಪಂಚಕುಲ ಜಿಲ್ಲೆಯು 2015 ಡಿಸೆಂಬರ್ 28 ರಂದು ಡಿಜಿಟಲ್ ಇಂಡಿಯಾ ಅಭಿಯಾನದಲ್ಲಿ ಉತ್ತಮ ಸಾಧನೆಗೈದ ಜಿಲ್ಲೆಯೆಂದು ಪ್ರಶಸ್ತಿ ಪಡೆದಿದೆ.

## ಕೌಶಲ್ಯ ಭಾರತ (Skill India)

- 2015ರ ಜುಲೈ 15 ರಂದು ಚಾಲನೆ.



Skill India
कौशल भारत-कुशल भारत

- ಜುಲೈ 15 ರಂದು ವಿಶ್ವ ಯುವಕೌಶಲಗಳ ದಿನದಂದೇ ಸ್ಕಿಲ್ ಇಂಡಿ–ಯಾ ಯೋಜನೆಯನ್ನು ಜಾರಿಗೊಳಿಸಲಾಯಿತು.
- ಈ ಯೋಜನೆಯು ದೇಶದ ಉತ್ತೇಜಕ ಯೋಜನೆಗಳಾದ ಕೌಶಲ್ಯ ಸಾಲ ಯೋಜನೆ, ಪ್ರಧಾನ ಮಂತ್ರಿ ಕೌಶಲ್ಯ ವಿಕಾಸ ಯೋಜನೆ, ರಾಷ್ಟ್ರೀಯ ಕೌಶಲ್ಯಾಭಿವೃದ್ಧಿ & ಉದ್ಯಮ ನೀತಿ & ರಾಷ್ಟ್ರೀಯ ಕೌಶಲ್ಯಾಭಿವೃದ್ಧಿ ಅಭಿಯಾನವನ್ನು ಒಳಗೊಂಡಿದೆ.
- **ಉದ್ದೇಶ** – ಯುವ ಜನರಿಗೆ ವಾರ್ಷಿಕವಾಗಿ 20 ಲಕ್ಷಕ್ಕೂ ಹೆಚ್ಚು ಯುವ ಜನರಿಗೆ ಉದ್ಯೋಗವಕಾಶವನ್ನು ನೀಡುವ ಕೈಗಾರಿಕಾ ತರಬೇತಿ ಕೇಂದ್ರಗಳ ಪುನರುಜ್ಜೀವನ. ಹಾಗೂ 2022ರ ವರ್ಷದೊಳಗಾಗಿ 500 ದಶಲಕ್ಷ ಉದ್ಯೋಗ ಸೃಷ್ಟಿ ಯೋಜನೆಯನ್ನು ಹೊಂದಲಾಗಿದೆ.
- ಈ ಅಭಿಯಾನದಲ್ಲಿ ಕಾರ್ಯಕ್ರಮದ ಅನುಷ್ಠಾನಕ್ಕೆ ಭಾರತ ಗ್ರೇಟ್ ಬ್ರಿಟನ್‌ದೊಂದಿಗೆ ಸಹಭಾಗಿತ್ವ ಹೊಂದಿದೆ.
- ಈ ಅಭಿಯಾನದಲ್ಲಿ ಭಾರತ ಸರ್ಕಾರ 4,000 ಕೋಟಿ ರೂ. ಹಣವನ್ನು ಹೂಡಿಕೆ ಮಾಡಿ ಸಂಕಲ್ಪ (Skill at Aquisition and Knowledge Awareness Livelyhood Promotion Programme) ಅನುಷ್ಠಾನಕ್ಕೆ ತಂದಿದೆ.
- ಇದನ್ನು ಕೌಶಲ್ಯಾಭಿವೃದ್ಧಿ & ಉದ್ಯಮ ಸಚಿವಾಲಯದ ಅಡಿಯಲ್ಲಿ ನಿರ್ವಹಣಾ ಕಾರ್ಯವು ಅನುಷ್ಠಾನಗೊಳ್ಳುತ್ತಿದೆ.

## ದೀನ್ ದಯಾಳ್ ಉಪಾಧ್ಯಾಯ ಗ್ರಾಮ ಜ್ಯೋತಿ ಯೋಜನೆ ಚಾಲನೆ (DDU-GJY)

Deendayal Upadhyaya
Gram Jyoti
Yojana

- 2015 ಜುಲೈ 25 ರಂದು ಪ್ರಧಾನಿ ನರೇಂದ್ರ ಮೋದಿಯವರು ಈ ಯೋಜನೆಗೆ ಚಾಲನೆ ನೀಡಿದರು.
- ಗ್ರಾಮೀಣ ಭಾರತದ ಎಲ್ಲಾ ಮನೆಗಳಿಗೆ ಅಬಾಧಿತ

ವಿದ್ಯುಚ್ಛಕ್ತಿಯನ್ನು ಒದಗಿಸುವ ಗುರಿ ಹೊಂದಿದೆ. ಈ ಯೋಜನೆಯು 75,600ಕೋಟಿ ರೂ ಹೂಡಿಕೆಯ ಗ್ರಾಮೀಣ ವಿದ್ಯುದ್ದೀಕರಣ ಯೋಜನೆ ಇದಕ್ಕೂ ಮುನ್ನ ಅಸ್ತಿತ್ವದಲ್ಲಿದ್ದ **ರಾಜೀವ್‌ಗಾಂಧಿ ವಿದ್ಯುದೀಕರಣ ಯೋಜನೆಯನ್ನು** ಬದಲಿಸಿ ಜಾರಿಗೆ ತರಲಾಗಿದೆ.

✦ ಈ ಯೋಜನೆಯನ್ನು ಶಕ್ತಿ ಸಚಿವಾಲಯವು ನಿರ್ವಹಿಸುತ್ತದೆ. ಶಕ್ತಿ ಸಚಿವಾಲಯವು ಹೊಸ ಆಪ್ ಆದ Garv-2 ನ್ನು ಬಿಡುಗಡೆ ಮಾಡಿದೆ.

## ಸಾಗರ್ ಮಾಲಾ ಯೋಜನೆ




✦ 2015ರ ಜುಲೈ 31 ರಂದು ಬೆಂಗಳೂರಿನಲ್ಲಿ ಉದ್ಘಾಟಿಸಲಾಯಿತು.

✦ ಪ್ರಸ್ತುತವಾಗಿರುವ ಬಂದರುಗಳನ್ನು ಆಧುನಿಕವಾಗಿ ವಿಶ್ವ ದರ್ಜೆಯ ಮಟ್ಟಕ್ಕೆ ಆಧುನೀಕರಣಗೊಳಿಸುವುದಾಗಿದೆ. ಇದು ಸರಕುಗಳ ಸಾಗಣೆಯನ್ನು ಉತ್ತೇಜಿಸುತ್ತದೆ.

✦ ಈ ಯೋಜನೆಯ ಮುಖ್ಯ ಉದ್ದೇಶ 7,500 ಕಿ.ಮೀ ಕರಾವಳಿ ತೀರದ ಬಂದರು ಕೇಂದ್ರಿತ ಅಭಿವೃದ್ಧಿ ಹಾಗೂ ಅಂತರಾಷ್ಟ್ರೀಯ ನೌಕಾ ವ್ಯಾಪಾರ ಜಲಮಾರ್ಗವನ್ನು ಅಭಿವೃದ್ಧಿ ಪಡಿಸುವುದು.

✦ 1,000 ಕೋಟಿ ರೂ. ಮೂಲ ಬಂಡವಾಳದೊಂದಿಗೆ & 90 ಕೋಟಿ ರೂ. ಷೇರು ಬಂಡವಾಳದೊಂದಿಗೆ 2016 ಜುಲೈ 20 ರಂದು ಸಾಗರಮಾಲಾ ಅಭಿವೃದ್ಧಿ ಕಂಪನಿ ಕೇಂದ್ರ ಸರ್ಕಾರದಿಂದ ಸ್ಥಾಪನೆಗೊಂಡಿದ್ದು, ಬಂದರು ಕೇಂದ್ರಿತ ಪ್ರದೇಶಾಭಿವೃದ್ಧಿಯ ಉದ್ದೇಶ ಹೊಂದಿದೆ.

✦ 2016 ಏಪ್ರಿಲ್ 14 ರಂದು ಸಾಗರಮಾಲಾ ರಾಷ್ಟ್ರೀಯ ದೂರದೃಷ್ಟಿ ಯೋಜನೆಯನ್ನು ಯೋಜನಾ ಕಾರ್ಯಕ್ರಮ & ಅನುಷ್ಠಾನಕ್ಕಾಗಿ ರೂಪಿಸಲಾಗಿದೆ.

✦ ಕರ್ನಾಟಕದ ಬೇಲಿಕೇರಿ ನಗರವು ಈ ಯೋಜನೆಗೆ ಸೇರ್ಪಡೆಯಾದ ಬಂದರಾಗಿದೆ.

✦ ಇದನ್ನು ಭಾರತದ ಬಂದರು ಸಚಿವಾಲಯವು ನಿಯಂತ್ರಿಸುತ್ತದೆ.

## ಭಾರತ್ ಮಾಲಾ (Bharath mala)




✦ 2015 ಜುಲೈ 31 ರಂದು ಉದ್ಘಾಟನೆಯಾಯಿತು.

✦ ಇದು ಹೆದ್ದಾರಿ & ರಸ್ತೆ ಸಾರಿಗೆ ಸಚಿವಾಲಯದ ಕಾರ್ಯ ನಿರ್ವಹಿಸುತ್ತಿದೆ.

✦ ಈ ಯೋಜನೆಯು ದೇಶದ 100 ಜಿಲ್ಲಾ ಕೇಂದ್ರಗಳನ್ನು ಒಳಗೊಂಡ 25,000 ಕಿ.ಮೀ ದೂರದಲ್ಲಿ ರಸ್ತೆ ಕರಾವಳಿ ತೀರ, ಬಂದರು, ಗಡಿ ಪ್ರದೇಶ, ಧಾರ್ಮಿ & ಪ್ರವಾಸೋದ್ಯಮ ಸ್ಥಳಗಳನ್ನು ಸಂಪರ್ಕಿಸುವ ಬೃಹತ ಯೋಜನೆಯಾಗಿದೆ.

✦ ಇದು ಗುಜರಾತ್ & ರಾಜಸ್ಥಾನದಿಂದ ಪ್ರಾರಂಭವಾ ಪಂಜಾಬ್ ಮೂಲಕ ಹಿಮಾಲಯ ರಾಜ್ಯಗಳಾದ ಜಮ್ಮು ಕಾಶ್ಮೀರ, ಹಿಮಾಚಲ ಪ್ರದೇಶ, ಉತ್ತರಾಖಂಡ ನಂತ ಉ. ಪ್ರದೇಶ & ಬಿಹಾರದ ಗಡಿ ಪ್ರದೇಶಗಳ ಮೂಲ ಸಿಕ್ಕಿಂ, ಅಸ್ಸಾಂ, ಅರುಣಾಚಲಪ್ರದೇಶ & ಇಂಡೋ ಮಯನ್ಮಾರ್ ಗಡಿಯಾದ ಮಣಿಪುರ, ಮಿಜೋರಾ ಗಳನ್ನು ಸಂಪರ್ಕಿಸುತ್ತದೆ.

## ಏಕ ಶ್ರೇಣಿ ಏಕ ಪಿಂಚಣಿ ಯೋಜನೆ (One Rank One Pension Scheme - OROP)




✦ 2015 ಸೆಪ್ಟೆಂಬರ 5 ರಂದು ಘೋಷಣೆ.

✦ ಸೇನಾ ಸಿಬ್ಬಂ ಗಳಿಗೆ ಏಕ ಶ್ರೇಣಿ ಏ ಪಿಂಚಣಿ ಯೋಜನೆ ಯನ್ನು ಜಾರಿ ಮಾಡಲಾಯಿತು.

✦ ಈ ಯೋಜನೆಯಲ್ಲಿ ಒಂದೇ ಶ್ರೇಣಿ & ಒಂದೇ ಸೇವಾ ಅವಧಿ ಹೊಂದಿದವರಿಗೆ ನಿವೃತ್ತಿಯ ಅವಧಿಯನ್ನು ಪರಿಗಣಿಸದೇ ಏಕ ರೂಪದ ಪಿಂಚಣಿಯನ್ನು ನೀಡುವ ಯೋಜನೆಯಾಗಿದ್ದು, ಇದು ಅನೇಕ ದಿನಗಳ ಹೋರಾಟ ನಂತರ ಕೇಂದ್ರ ಸರ್ಕಾರವು 2015 ಸೆಪ್ಟೆಂಬರ್ 5 ರಂದು ಘೋಷಿಸಿತು.

✦ ಇದರಿಂದ 20 ಲಕ್ಷ ಸೇನಾ ಸಿಬ್ಬಂದಿಗಳು ಲಾಭ ಪಡೆದರು.

## ಪ್ರಧಾನ ಮಂತ್ರಿ ಖನಿಜ್ ಕ್ಷೇತ್ರ ಕಲ್ಯಾಣ್ ಯೋಜನೆ (PMKKKY)




- 2015ರ ಸೆಪ್ಟೆಂಬರ್ 17 ರಂದು ಜಾರಿ.
- ಈ ಯೋಜನೆಯು ಗಣಿ & ಗಣಿಗೆ ಸಂಬಂಧಿಸಿದ ಕಾರ್ಯಾಚರಣೆಯಿಂದ ಬಾಧಿತ ವ್ಯಕ್ತಿಗಳ ಕ್ಷೇಮಾಭಿವೃದ್ಧಿಗಾಗಿ ಕೈಗೊಂಡ ಕಾರ್ಯಕ್ರಮವಾಗಿದೆ.
- ಬುಡಕಟ್ಟು ಜನಾಂಗದ ಆರ್ಥಿಕ ಪರಿಸರ ಮತ್ತು ಆರೋಗ್ಯದ ಸಂರಕ್ಷಣೆ ಮಾಡುವುದಾಗಿದೆ.
- 2015 ಮಾರ್ಚ್ 26 ರಂದು ಖನಿಜ & ಲೋಹಗಳ ಅದಿರು ಅಭಿವೃದ್ಧಿ ನಿಯಂತ್ರಣ ಕಾಯ್ದೆ (1957) ಪರಿಷ್ಕರಣೆಗೊಂಡಿದ್ದು, 2015 ಆಗಸ್ಟ್ 18 ರಂದು ಜಿಲ್ಲಾ ಖನಿಜ ಫೌಂಡೇಷನ್ ನಿಯಮಗಳನ್ನು ರೂಪಿಸಿದ ಮೊಟ್ಟ ಮೊದಲ ರಾಜ್ಯ ಒಡಿಶಾ ಆಗಿದೆ.
- ಭಾರತದ ಗಣಿ & ಉಕ್ಕು ಪ್ರಾಧಿಕಾರ ನಿರ್ವಹಿಸುತ್ತದೆ.

## ಸಮಗ್ರ ಶಕ್ತಿ ಅಭಿವೃದ್ಧಿ ಯೋಜನೆ (IPDS)




- 2015 ಸೆಪ್ಟೆಂಬರ್ 18 ಜಾರಿ.
- 24x7 ಎಲ್ಲರಿಗೂ ವಿದ್ಯುತ್‌ನ್ನು ಒದಗಿಸುವುದಾಗಿದೆ.
- 2014–15 ರ ಬಜೆಟ್‌ನಲ್ಲಿ ಈ ಯೋಜನೆ ಘೋಷಣೆಯಾಯಿತು.
- 45,000 ಕೋಟಿ ರೂ. ಬಂಡವಾಳ ಹೊಂದಿದ ಯೋಜನೆ. 2022 ರ ವೇಳೆಗೆ ಗ್ರಾಮೀಣ ಪ್ರದೇಶದ ಪ್ರತಿಯೊಂದು ಮನೆಗೂ ವಿದ್ಯುತ್ ಒದಗಿಸುವುದಾಗಿದೆ.
- 2022 ಕ್ಕೆ ಭಾರತಕ್ಕೆ ಸ್ವಾತಂತ್ರ್ಯ ಬಂದು 75 ವರ್ಷಗಳಾಗುತ್ತವೆ.

## ಗ್ರಾಮ ವಿಕಾಸ ಯೋಜನೆ




- 2015ರ ಅಕ್ಟೋಬರ್ 2 ರಂದು ಗಾಂಧಿ ಜಯಂತಿಯಂದು "ಗ್ರಾಮ ವಿಕಾಸ ಯೋಜನೆ" ಗ್ರಾಮಗಳ ಸರ್ವತೋಮುಖ ಅಭಿವೃದ್ಧಿಗಾಗಿ ಜಾರಿಗೆ ತರಲಾಯಿತು. ಇದಕ್ಕಾಗಿ 750 ಕೋಟಿ ರೂ ಬಂಡವಾಳದೊಂದಿಗೆ ಜಾರಿ ಮಾಡಲಾಯಿತು.

## ವಿಕಲ್ಪ ಯೋಜನೆ




- 2015 ರ ನವೆಂಬರ್ 1 ರಂದು ಚಾಲನೆ ನೀಡಲಾಯಿತು..
- ರೈಲುಗಳಲ್ಲಿ ಕಾಯ್ದಿರಿಸುವ ಪ್ಯಾಸೆಂಜರ್‌ಗಾಗಿ ಪರ್ಯಾಯ ರೈಲನ್ನು ಒದಗಿಸುವ ಯೋಜನೆಯಾಗಿದೆ.
- ಈ ಯೋಜನೆಯು ದೆಹಲಿ-ಲಕ್ನೋ, ದೆಹಲಿ – ಜಮ್ಮು ನಡುವಿನ ರೈಲ್ವೆ ಸಂಪರ್ಕವನ್ನು ಮೊದಲು ಒದಗಿಸಲಾಯಿತು.

## ಚಿನ್ನದ ನಗದೀಕರಣ ಯೋಜನೆ (GMS)



- 2015ರ ನವೆಂಬರ್ 5 ರಂದು ಜಾರಿಗೊಳಿಸಿದೆ.
- ಮೂರು ಯೋಜನೆಗಳೆಂದರೆ: 1) ವಿಭಿನ್ನ ತೂಕದ ಚಿನ್ನದ ನಾಣ್ಯಗಳು 2) ಚಿನ್ನದ ಬಾಂಡ್ ಯೋಜನೆ 3) ಚಿನ್ನದ ನಗದೀಕರಣ ಯೋಜನೆ
- **ವಿಭಿನ್ನ ತೂಕದ ಚಿನ್ನದ ನಾಣ್ಯಗಳು:** ಒಂದು ಬದಿಯಲ್ಲಿ ರಾಷ್ಟ್ರೀಯ ಲಾಂಛನ ಅಶೋಕ ಚಕ್ರದ ಚಿಹ್ನೆ, ಮತ್ತೊಂದು ಬದಿಯಲ್ಲಿ ಮಹಾತ್ಮ ಗಾಂಧಿ

ಭಾವಚಿತ್ರವಿರುವ ಅಧಿಕೃತ ಚಿನ್ನದ ನಾಣ್ಯ ಮತ್ತು ಗಟ್ಟಿ (ಬುಲಿಯನ್) ಗಳನ್ನು ಬಿಡುಗಡೆ ಮಾಡಲಾಗಿದೆ.

+ ಆರಂಭಿಕ ಹಂತದಲ್ಲಿ ಚಿನ್ನದ ನಾಣ್ಯಗಳು 5, 10 ಗ್ರಾಂ. ಮುಖಬೆಲೆಯಲ್ಲಿ ಲಭ್ಯವಾಗಲಿವೆ. 20 ಗ್ರಾಂ ಚಿನ್ನದ ಗಟ್ಟಿ "ಎಂಎಂಟಿಸಿ"ಯ 125 ಚಿಲ್ಲರೆ ಮಾರಾಟ ಕೇಂದ್ರಗಳಲ್ಲಿ ದೊರೆಯಲಿವೆ..

**ಚಿನ್ನದ ಬಾಂಡ್ ಯೋಜನೆ (ಸವರನ್ ಗೋಲ್ಡ್ ಬಾಂಡ್ ಯೋಜನೆ)**

+ ಈ ಯೋಜನೆ ಚಿನ್ನದ ಠೇವಣಿ ಇಟ್ಟು ಖರೀದಿಸುವ ಪೇಪರ್ ಬಾಂಡ್‌ಗೆ ವಾರ್ಷಿಕ ಶೇ 2.75 ರಷ್ಟು ಬಡ್ಡಿ ಸಿಗುತ್ತದೆ. ಸವರನ್ ಗೋಲ್ಡ್ ಯೋಜನೆ ಕುರಿತು ಕೇಂದ್ರ ಸರ್ಕಾರವು ಆರ್.ಬಿ.ಐ ನೊಂದಿಗೆ ಸಮಾಲೋ... ಬಾಂಡ್‌ಗಳನ್ನು ಹೊರಡಿಸಿದೆ. 2 ಗ್ರಾಂ. ಚಿನ್ನದ ಯೋಗ್ಯವಾದ ಬಾಂಡ್‌ಗಳನ್ನು ಖರೀದಿಸಲು ಗರಿಷ್ಠ 500 ... ಚಿನ್ನಕ್ಕೆ ಬಾಂಡ್‌ಗಳನ್ನು ಖರೀದಿಸಬಹುದು. ಬಾಂಡ್‌ಗಳಿಗೆ 8 ವರ್ಷಗಳ ಅವಧಿ ನಿಗದಿ ಮಾಡಲಾಗಿದೆ. ... ವರ್ಷದಿಂದ ಯೋಜನೆಯಿಂದ ಹೊರಬರಲು ಅವಕಾಶವಿದೆ. ಭಾರತೀಯ ರಿಸರ್ವ್ ಬ್ಯಾಂಕ್ ಚಿನ್ನದ ಬಾಂಡ್ ... ಸಾರ್ವಜನಿಕ ನೀಡಿಕೆ ಬೆಲೆಯನ್ನು ಪ್ರತಿ ಗ್ರಾಂ. ಗೆ 2684 ರೂ. ನಿಗದಿ ಮಾಡಿದೆ.

+ **ಚಿನ್ನದ ನಗದೀಕರಣ ಯೋಜನೆ:-** ಭಾರತೀಯ ನಿವಾಸಿಗಳು ತಾವು ಹೊಂದಿರುವ ಚಿನ್ನವನ್ನು ಠೇವಣಿ ... ಅವಕಾಶ ಕಲ್ಪಿಸಿದ್ದು, ಇದಕ್ಕೆ ವಾರ್ಷಿಕ ಶೇ 2.5 ರಷ್ಟು ಬಡ್ಡಿದರ ಲಭ್ಯವಾಗುತ್ತದೆ. ಈ ಯೋಜನೆಯಡಿ ಬ್ಯಾಂಕ್ ಮತ್ತು ನಿಯೋಜಿತ ಅಂಚೆ ಕಛೇರಿಗಳು 15 ವರ್ಷಗಳ ಅವಧಿಗೆ ಚಿನ್ನದ ಠೇವಣಿ ಸಂಗ್ರಹಿಸಲಿವೆ.

## ಉಜ್ವಲ್ ಡಿಸ್ಕಾಂ ಅಶುರೆನ್ಸ್ ಯೋಜನೆ (UDAY - Ujjwal Discom Assurance Yojana)

+ 2015ರ ನವೆಂಬರ್ 20 ಜಾರಿ.




+ ಈ ಯೋಜನೆಯಡಿಯಲ್ಲಿ ರಾಜ್ಯ ಒಡೆತನದ ವಿದ್ಯುತ್ ವಿತರಣಾ ಕಂಪನಿಯನ್ನು ರಾಜ್ಯ ಸರ್ಕಾರಗಳು ತಮ್ಮದೇ ಆದ ಡಿಸ್ಕಾಂ ಹೊಂದಲು ಅವಕಾಶ ಕಲ್ಪಿಸುವುದು. ಈ ಯೋಜನೆಯನ್ನು ಕಲ್ಲಿದ್ದಲು & ನೂತನ ಹಾಗೂ ನವೀಕರಿಸಬಹುದಾದ ಶಕ್ತಿ ಸಚಿವಾಲಯವು ಜಾರಿಗೆ ತಂದಿದೆ. ಈ ಯೋಜನೆಯು ಕೇಂದ್ರ ಪ್ರಾಯೋಜಿತ ಕಾರ್ಯಕ್ರಮವಾಗಿದ್ದು Financial Term Around of a Power Distribution Companies ಅಡಿಯಲ್ಲಿ ಕಾರ್ಯ ನಿರ್ವಹಿಸುತ್ತದೆ. ಈ ಯೋಜನೆಯಡಿಯಲ್ಲಿ ದೇಶದ ಎಲ್ಲಾ ರಾಜ್ಯಗಳು ಕೇಂದ್ರಾಡಳಿತ ಪ್ರದೇಶಗಳು ಈ ಯೋಜನೆಗೆ ಸೇರ್ಪಡೆಗೊಳ್ಳಲು ಅವಕಾಶವಿದೆ.

+ ಈ ಯೋಜನೆಗೆ ಸೇರಿದ ಮೊದಲ ರಾಜ್ಯವೆಂದರೆ – ಆಂಧ್ರಪ್ರದೇಶ. 2017 ಮೇ ವರೆಗೂ ನಾಗಾಲ್ಯಾಂಡ್, ಪ. ಬಂಗಾ... ಹೊರತುಪಡಿಸಿ, 27 ರಾಜ್ಯಗಳು ಸೇರ್ಪಡೆಯಾಗಿವೆ.

## ಭಾರತದ ಸಂವಿಧಾನ ದಿನ (Indian Constitution Day) - ನವೆಂಬರ್ 26




+ 2015 ನವೆಂಬರ್ 26 ರಂದು ಭಾರತದ ಸಂವಿಧಾನ ದಿನವ... ಆಚರಿಸಲಾಯಿತು. ಇದು **ಡಾ|| ಬಿ.ಆರ್. ಅಂಬೇಡ್ಕರ್** ಅವರ 125 ನೇ ... ಶತಮಾನೋತ್ಸವದ ಆಚರಣೆ ಹಿನ್ನಲೆಯಲ್ಲಿ ನವೆಂಬರ್ 26 ನ್ನು ಸಂವಿ... ದಿನವಾಗಿ ಮೊದಲ ಬಾರಿಗೆ ಆಚರಿಸಲಾಯಿತು. ಈ ಹಿನ್ನಲೆಯಲ್ಲಿ ಸಂಸತ್... 2015ರ ವಿಶೇಷ ಅಧಿವೇಶನವನ್ನು ನಡೆಸಲಾಯಿತು. 1949 ನವೆಂಬರ್ ... ರಂದು ಭಾರತ ಸಂವಿಧಾನವು ರಚನಾ ಸಭೆಯಿಂದ ಅಂಗೀಕಾರಗೊಂಡ... 1950 ಜನವರಿ 26 ರಂದು ಜಾರಿಗೆ ಬಂದಿತು.

## ಪ್ರಧಾನಮಂತ್ರಿ ಆವಾಸ್ ಯೋಜನೆ (PMAY) (ನಗರ)




+ 2015 ಜೂನ್ 25 ರಂದು ಪ್ರಧಾನಿ ನರೇಂದ್ರ ಮೋದಿಯವರಿಂದ ಉದ್ಘಾಟನೆಗೊಂಡ ಈ ಯೋಜನೆಯು ದೇಶಾದ್ಯಂತ ಉತ್ತಮ ಜೀವನ ನಡೆಸಲು, ಪೂರಕವಾದ ವಸತಿ ಸೌಲಭ್ಯವನ್ನು ನಗರ ಬಡವರಿಗೆ ಕಲ್ಪಿಸುವ ಉದ್ದೇಶದಿಂದ ದೇಶದ 9 ರಾಜ್ಯಗಳ 305 ನಗರಗಳನ್ನು ಗುರುತಿಸಿ ಜಾರಿಗೆ ತರಲಾಯಿತು. ಆದರೆ ಪ್ರಸ್ತುತ 26 ರಾಜ್ಯಗಳ 2,508 ನಗರಗಳಲ್ಲಿ ಈ ಕಾರ್ಯಕ್ರಮ ಚಾಲ್ತಿಯಲ್ಲಿದೆ.

# 2016 ನೇ ಸಾಲಿನ ಯೋಜನೆಗಳು

## ಸ್ಟಾರ್ಟ್ ಅಪ್ ಇಂಡಿಯಾ




- 2016ರ ಜನವರಿ 16ರಂದು ನರೇಂದ್ರ ಮೋದಿ ಅವರು ಉದ್ಘಾಟಿಸಿದರು.
- ಉದ್ಯಮವನ್ನು ಸ್ಥಾಪಿಸಲು ಬ್ಯಾಂಕ್ ಮೂಲಕ ಆರ್ಥಿಕ ನೆರವನ್ನು ನೀಡಿ, ಉದ್ಯೋಗ ಸೃಷ್ಟಿಸುವುದಾಗಿದೆ.
- ಈ ಅಭಿಯಾನವನ್ನು ಕೈಗಾರಿಕಾ & ವಾಣಿಜ್ಯ ಸಚಿವಾಲಯದ **ಕೈಗಾರಿಕಾ ನೀತಿ & ಉತ್ತೇಜನಾ ಇಲಾಖೆಯು** ಅನುಷ್ಠಾನಗೊಳಿಸುತ್ತಿದೆ.
- ಮುದ್ರಾ ಬ್ಯಾಂಕ್, ಪ್ರಧಾನಮಂತ್ರಿ ಮುದ್ರಾ ಯೋಜನೆಯಡಿಯಲ್ಲಿ ಸೂಕ್ಷ್ಮ ಉದ್ಯಮಗಳಿಗೆ ಹಣಕಾಸು ಸೌಲಭ್ಯ ನೀಡುತ್ತವೆ.

## ಪ್ರಧಾನ ಮಂತ್ರಿ ಫಸಲ್ ಭಿಮಾ ಯೋಜನೆ (PMFBY)




- ಈ ಯೋಜನೆಗೆ ಪ್ರಧಾನ ಮಂತ್ರಿ ನೇತೃತ್ವದ ಸಚಿವ ಸಂಪುಟವು 2016 ಜನವರಿ 13 ರಂದು ಅಂಗೀಕಾರ ನೀಡಿತು. ಇದೊಂದು **ಬೆಳೆ ಪರಿಹಾರ ನಿಧಿಯಾಗಿದ್ದು,** 2016 ಫೆಬ್ರವರಿ 18 ರಂದು ಉದ್ಘಾಟನೆಯಾಯಿತು.
- One Nation, One Scheme ಎಂಬುದು ಇದರ ಧ್ಯೇಯವಾಕ್ಯವಾಗಿದೆ. ಈ ಯೋಜನೆಯನ್ನು ಅಸ್ತಿತ್ವದಲ್ಲಿದ್ದ **ರಾಷ್ಟ್ರೀಯ ಕೃಷಿ ವಿಮಾ ಯೋಜನೆಗಳನ್ನು** ಪರಿಷ್ಕರಿಸಿ ಜಾರಿಗೆ ತರಲಾಗಿದೆ.
- ಅಕಾಲಿಕ ಮಳೆ ಹಾಗೂ ಆಲಿಕಲ್ಲು ಮಳೆಯಿಂದ ಹಾನಿಗೊಳಗಾದ ರೈತರ ನೆರವಿಗಾಗಿ ಪರಿಹಾರ ಮೊತ್ತ ಹೆಚ್ಚಳ ಹಾಗೂ ಪರಿಹಾರ ನೀಡಲು ನಿಗದಿಪಡಿಸಲಾದ ಮಿತಿ ಹೆಚ್ಚಳ. ಬರ, ಅನಾವೃಷ್ಟಿ ಸೇರಿದಂತೆ ನೈಸರ್ಗಿಕ ವಿಕೋಪಗಳಿಂದ ಅಪಾರ ಹಾನಿ ಸಂಭವಿಸಿದ ಸಂದರ್ಭದಲ್ಲಿ ರೈತರಿಗೆ ನೆರವು ನೀಡುವ ಉದ್ದೇಶ ಹೊಂದಿದೆ. ಈ ಯೋಜನೆಯಲ್ಲಿ ಬೆಳೆ ವಿಮೆ ಕಂತಿನಲ್ಲಿ ಜಾರಿ ಏಕರೂಪತೆ ನೀಡಲಾಗಿದೆ. ಮುಂಗಾರಿನ ಬೆಳೆ (ಖಾರಿಫ್) ಗೆ ಒಟ್ಟು ಪ್ರೀಮಿಯಂನ ಶೇ 2 ರಷ್ಟು ಹಾಗೂ ಹಿಂಗಾರು ಬೆಳೆ (ರಬಿ)ಗೆ ಪ್ರೀಮಿಯಂನ ಶೇ 1.5 ರಷ್ಟು & ವಾಣಿಜ್ಯ ಬೆಳೆಗೆ ಶೇ 5 ರಷ್ಟನ್ನು ರೈತರು ಪಾವತಿಸಿದರೆ ಸಾಕು.
- ಬೆಳೆ ಹಾನಿಯಾದಾಗ ನೀಡಲಾಗುತ್ತಿದ್ದ ಪರಿಹಾರದ ಮೊತ್ತ ಒಂದೂವರೆ ಪಟ್ಟು ಹೆಚ್ಚಳ. ಈ ಹಿಂದೆ ಶೇ 50 ರಷ್ಟು ಬೆಳೆ ಹಾನಿಯಾದಲ್ಲಿ ಮಾತ್ರ ಪರಿಹಾರ ನೀಡಲಾಗುತ್ತಿತ್ತು, ಈಗ ಶೇ 33 ರಷ್ಟು ಬೆಳೆ ಹಾನಿಯಾದರೂ ಪರಿಹಾರ ನೀಡಲಾಗುತ್ತದೆ.

## ಶ್ಯಾಂ ಪ್ರಸಾದ್ ಮುಖರ್ಜಿ ರೂರ್ಬನ್ ಮಿಷನ್ (SPMRM)




- 2016ರ ಫೆಬ್ರವರಿ 21 ರಂದು **ಛತ್ತೀಸಘಡದ ಡೋಂಗ್ರಘಾರ್‌ನಲ್ಲಿ** ಉದ್ಘಾಟಿಸಲಾಯಿತು.
- ಈ ಯೋಜನೆಯನ್ನು ಕೇಂದ್ರ ಗ್ರಾಮೀಣಾಭಿವೃದ್ಧಿ ಸಚಿವಾಲಯದಿಂದ ಜಾರಿಗೆ ತರಲಾಗುತ್ತಿದೆ.
- ದೇಶಾದ್ಯಂತ 300 ಕ್ಲಸ್ಟರ್‌ಗಳನ್ನು ರಚಿಸಿ, ಗ್ರಾಮೀಣ ಭಾಗದಲ್ಲಿ ಆರ್ಥಿಕವಾಗಿ ಸಬಲತೆ, ವೃತ್ತಿಗಳನ್ನು ಸೃಜಿಸುವುದು & ಜೀವನ ಶೈಲಿಯ ಸೌಲಭ್ಯ ಒದಗಿಸುವುದಾಗಿದೆ.

## ಸೇತು ಭಾರತಂ ಯೋಜನೆ




- 2016ರ ಮಾರ್ಚ್ 4 ರಂದು ಜಾರಿ.
- ರಾಷ್ಟ್ರೀಯ ಹೆದ್ದಾರಿಗಳಲ್ಲಿರುವ **ರೈಲ್ವೆ ಲೆವೆಲ್ ಕ್ರಾಸಿಂಗ್ ಮುಕ್ತಗೊಳಿಸುವುದು** ಮತ್ತು 2019ರ ವೇಳೆಗೆ ರಾಷ್ಟ್ರೀಯ ಹೆದ್ದಾರಿಯಲ್ಲಿರುವ ಹಳೆಯ ಸೇತುವೆಗಳನ್ನು

ಬಡತನ ರೇಖೆಗಿಂತ ಕೆಳಮಟ್ಟದಲ್ಲಿರುವ ಕುಟುಂಬಗಳಿಗೆ ಉಚಿತವಾಗಿ ಎಲ್‌ಪಿಜಿ ಸಂಪರ್ಕ ಕಲ್ಪಿಸುವ "ಪ್ರಧಾನ ಮಂತ್ರಿ ಉಜ್ವಲ ಯೋಜನೆಗೆ ಪ್ರಧಾನಿ ನರೇಂದ್ರ ಮೋದಿ ಅವರು **ಉತ್ತರ ಪ್ರದೇಶದ ಬಲಿಯಾದಲ್ಲಿ** 2016ರ ಮೇ 1ರಂದು ಕಾರ್ಮಿಕರ ದಿನಾಚರಣೆ ದಿನ ಚಾಲನೆ ನೀಡಿದರು.

- **ಬಿಪಿಎಲ್ ಕುಟುಂಬದ ಫಲಾನುಭವಿ ಮಹಿಳೆಯರಿಗೆ** ಉಚಿತ ಎಲ್‌ಪಿಜಿ ಸಂಪರ್ಕ ವಿತರಿಸಲು ಬಡತನ ರೇಖೆಗಿಂತ ಕೆಳಗಿನ (ಬಿಪಿಎಲ್) 5ಕೋಟಿ ಕುಟುಂಬಗಳಿಗೆ ಎಲ್‌ಪಿಜಿ ಸಂಪರ್ಕಗಳನ್ನು ಉಚಿತವಾಗಿ ಒದಗಿಸುವ ಯೋಜನೆ ಇದಾಗಿದೆ.

### ವಿದ್ಯಾಂಜಲಿ ಯೋಜನೆ




- 2016ರ ಜೂನ್ 16 ಜಾರಿ.
- ಇದನ್ನು ಅಂದಿನ ಕೇಂದ್ರ ಮಾನವ ಸಂಪನ್ಮೂಲ ಸಚಿವರಾದ ಸ್ಮೃತಿ ಜುಬಿನ್ ಇರಾನಿ ಅವರು ನವದೆಹಲಿಯಲ್ಲಿ ಉದ್ಘಾಟಿಸಿದರು.
- ಸರ್ಕಾರಿ ಶಾಲೆಗಳ ಸಾಂಸ್ಕೃತಿಕ ಮತ್ತು ಸಾಮಾಜಿಕ ಕಾರ್ಯಕ್ರಮಗಳಲ್ಲಿ ಸಮುದಾಯವನ್ನು ತೊಡಗಿಸುವುದು.
- ಇದೊಂದು ಶಾಲೆಯಲ್ಲಿ ನಡೆಯುವ ಸ್ವಯಂ ಪ್ರೇರಿತ ಕಾರ್ಯಕ್ರಮವಾಗಿದೆ.

### ಆಪರೇಷನ್ ಸಂಕಟ್ ಮೋಚನ್

- 2016 ಜುಲೈ 14 ರಂದು ಆರಂಭ.
- ದಕ್ಷಿಣ ಸೂಡಾನ್‌ನಲ್ಲಿ ನಡೆದ ನಾಗರೀಕ ಯುದ್ಧದ ಸಂದರ್ಭದಲ್ಲಿ ಭಾರತದ ನಾಗರೀಕರನ್ನು ಸಂರಕ್ಷಿಸಲು ಭಾರತೀಯ ವಾಯುಪಡೆಯು ಕೈಗೊಂಡ ಕಾರ್ಯಾಚರಣೆಯಾಗಿದೆ. ಇದನ್ನು ಜನರಲ್ ವಿ.ಕೆ. ಸಿಂಗ್ ಅವರ ನೇತೃತ್ವದಲ್ಲಿ ಕೈಗೊಳ್ಳಲಾಯಿತು.
- ಇದಕ್ಕಾಗಿ ಭಾರತೀಯ ವಾಯುಪಡೆಯ ಎರಡು ಸಿ–17 ಗ್ಲೋಬ್ ಮಾಸ್ಟರ್ ವಿಮಾನ ಗಳನ್ನು ಬಳಕೆ ಮಾಡ ಲಾಗಿತ್ತು.



### ಸ್ಮಾರ್ಟ್ ಗಂಗಾ ಯೋಜನೆ




- 2016ರ ಆಗಸ್ಟ್ 13 ರಂದು ಗಂಗಾ ನದಿಯ ಅಭಿವೃದ್ಧಿ ಮತ್ತು ಪುನಶ್ಚೇತನಗೊಳಿಸುವುದಕ್ಕಾಗಿ ಆರಂಭ.
- ವೆಂಕಯ್ಯ ನಾಯ್ಡು & ಉಮಾಭಾರತಿ ಅವರು ಜಂಟಿಯಾಗಿ ಈ ಕಾರ್ಯಕ್ರಮವನ್ನು ಉದ್ಘಾಟಿಸಿದ್ದು, ಗಂಗಾ ನದಿ ದಡದಲ್ಲಿರುವ 10 ನಗರಗಳ ಕೊಳಚೆಯನ್ನು ನಿರ್ಮೂಲನೆ ಮಾಡಲು ಕೊಳಚೆ ಪರಿಷ್ಕರಣಾ ಘಟಕಗಳನ್ನು ಆರಂಭಿಸಿದರು.
- ಮೊದಲ ಹಂತದಲ್ಲಿ ಹರಿದ್ವಾರ, ಹೃಷಿಕೇಶ, ಮಥುರಾ, ವಾರಣಾಸಿ, ಕಾನ್ಪುರ, ಅಲಹಾಬಾದ್, ಲಖ್ನೋ, ಪಾಟ್ನಾ, ಸಾಹಿಬ್‌ಗಂಜ್, ಬ್ಯಾರಕ್‌ಪುರಗಳಲ್ಲಿ ಜಾರಿಗೊಳಿಸಲಾಯಿತು.
- ಇದು ನಮಾಮಿ ಗಂಗಾ ಯೋಜನೆಯ ಒಂದು ಭಾಗವಾಗಿದೆ.

### ರಾಷ್ಟ್ರೀಯ ಶಿಷ್ಯವೇತನ ಉತ್ತೇಜನಾ ಕಾರ್ಯಕ್ರಮ (NAPS)




- 2016 ಆಗಸ್ಟ್ 19 ರಂದು ಕಾನ್ಪುರದಲ್ಲಿ ನರೇಂದ್ರ ಮೋದಿ ಅವರು ಉದ್ಘಾಟಿಸಿದರು.
- ಈ ಯೋಜನೆಯು ಅತಿ ಹೆಚ್ಚು ಉದ್ಯೋಗ ಸೃಷ್ಟಿಸಲು 50 ಲಕ್ಷ ಯುವಕರಿಗೆ ಅಪ್ರೆಂಟಿಸ್ ಶಿಪ್ ತರಬೇತಿ ನೀಡುವುದು.

### ಪ್ರಧಾನ ಮಂತ್ರಿ ಯುವ ಯೋಜನೆ (Pradhanmantri Yuva Yojana)

- 2016ರ ನವೆಂಬರ್ 9 ರಂದು ಜಾರಿಗೊಳಿಸಲಾಯಿತು.



- ಯುವಕರಿಗೆ ಉದ್ಯಮ ವನ್ನು ಸೃಷ್ಟಿಸುವುದಾಗಿದೆ. ಈ ಯೋಜನೆಯು 5 ವರ್ಷದ

ಅವಧಿಯದ್ದಾಗಿದ್ದು, 2016–17ರಿಂದ 2020–21ರವರೆಗಿನ ಯೋಜನೆಯಾಗಿದೆ.

✦ ಭಾರತದ ಕೌಶಲ್ಯ ಅಭಿವೃದ್ಧಿ ಮತ್ತು ಉದ್ಯಮ ಸಚಿವಾಲಯವು ಈ ಕಾರ್ಯಕ್ರಮವನ್ನು ಉದ್ಘಾಟಿಸಿದೆ.

## ನೋಟು ಅಮಾನ್ಯೀಕರಣ (Demonetization)




✦ 2016ರ ನವೆಂಬರ್ 8ರಂದು ರಾತ್ರಿ 8ಗಂಟೆಗೆ ಪ್ರಧಾನಿ ಮೋದಿ ಅವರು ... ರದ್ದತಿಗೊಳಿಸಿ ರಾತ್ರಿ 12 ಗಂಟೆಯಿಂದ 500/– & 1000/– ಮುಖಬೆಲೆಯ ... ಚಲಾವಣೆಯನ್ನು ರದ್ದುಗೊಳಿಸಿದರು. ಹಳೆ ನೋಟುಗಳನ್ನು ಬದಲಿಸಲು ಡಿಸೆಂಬರ್ 3... ಗಡುವು ನೀಡಿದರು. ಈ ಸಂಬಂಧ ಕಾಯ್ದೆ ಮಾಡಿದ್ದು, 10 ಕ್ಕಿಂತ ಹೆಚ್ಚು 500 & 1000 ಮು... ನೋಟುಗಳನ್ನು ಸಂಗ್ರಹಿಸಿಡುವುದು ಅಪರಾಧವೆಂದು ಘೋಷಿಸಿತು.

✦ **ಆಪರೇಷನ್ ಕ್ಲೀನ್ ಮನಿ:-** ಕೇಂದ್ರ ನೇರ ತೆರಿಗೆ ಮಂಡಳಿ (CBDT) ಆದಾಯ ತೆರಿಗೆ ಇಲಾಖೆಯವರು 2016 ನವೆಂಬರ್ 9 ರಿಂದ ಡಿಸೆಂಬರ್ 30 ರವರೆಗೆ ಅಧಿಕ ನಗದು ಠೇವಣಿ ಮಾಡಿದ ಗ್ರಾಹಕರ ಬ್ಯಾಂಕ್ ಖಾತೆಗಳನ್ನು ವಿದ್ಯುನ್ಮಾನ ಪರಿಶೀಲನೆ ನಡೆಸುವ ಕಾರ್ಯಾಚರಣೆಯನ್ನು 2017 ಜನವರಿ 31 ರಂದು ಕೈಗೊಳ್ಳಲಾಗಿದೆ.

✦ **ಆಪರೇಷನ್ ಕ್ಲೀನ್ ಮನಿ-2:-** ಇದು ಅತಿ ಹೆಚ್ಚಿನ ಮೊತ್ತದ ಹಣವರ್ಗಾವಣೆ ಮಾಡಿದ ವ್ಯಕ್ತಿಗಳನ್ನು ಒಳಪಡಿಸುವುದು ಈ ಸಂಬಂಧ ಇಲಾಖೆಯು 60,000 ಕ್ಕೂ ಹೆಚ್ಚು ಮಂದಿಗಳನ್ನು ಗುರ್ತಿಸಿದೆ.

## ಪ್ರಧಾನ ಮಂತ್ರಿ ಗರೀಬ್ ಕಲ್ಯಾಣ ಯೋಜನೆ (PMGKY)




✦ 2016 ಡಿಸೆಂಬರ್ 16 ರಂದು ಅಧಿಸೂಚನೆ.

✦ ಇದನ್ನು ಬಡವರ ಕಲ್ಯಾಣಕ್ಕಾಗಿ ಜಾರಿಗೊಳಿಸಿದಂತಹ ಕಾರ್ಯಕ್ರಮ...

✦ ಈ ಯೋಜನೆಯಲ್ಲಿ ತೆರಿಗೆಯನ್ನು ಪ್ರತಿಯೊಬ್ಬ ವ್ಯಕ್ತಿಯು ಘೋಷ... ಪ್ರಧಾನಮಂತ್ರಿ ಗರೀಬ್ ಕಲ್ಯಾಣ ಯೋಜನೆಯ ಅಡಿಯಲ್ಲಿ ಮಾಡುವುದಾಗಿ...

✦ ಅಘೋಷಿತ ತೆರಿಗೆಯನ್ನು ಪ್ರಧಾನಮಂತ್ರಿ ಗರೀಬ್ ಕಲ್ಯಾಣ್ ಯೋಜ... ಹೂಡಿಕೆ ಮಾಡಿ, ಘೋಷಿಸಿಕೊಳ್ಳಬಹುದು.

# ಪ್ರಮುಖ ಅಂತರಾಷ್ಟ್ರೀಯ ಒಪ್ಪಂದಗಳು

### ಸಾರ್ಕ್ ರಾಷ್ಟ್ರಗಳಿಗೆ ಉಪಗ್ರಹ ಉಡಾವಣೆ:-

✦ ಭಾರತದ ಇಸ್ರೋ ಸಂಸ್ಥೆ ಮೂಲಕ ಪ್ರಧಾನಿ ನರೇಂದ್ರ ಮೋದಿ ಅವರು ದಕ್ಷಿಣ ಏಷ್ಯಾ ರಾಷ್ಟ್ರಗಳಿಗೆ ಉಪಯುಕ್ತವಾಗುವ ಉಪಗ್ರಹಗಳನ್ನು ಉಡಾವಣೆ ಮಾಡಿಸಿ ನೆರೆಯ ರಾಷ್ಟ್ರಗಳ ಅಭಿವೃದ್ಧಿಗೆ ಪ್ರಯತ್ನಿಸಿದ್ದಾರೆ. ದಕ್ಷಿಣ ಏಷ್ಯಾ ಸಂವಹನ ಉಪಗ್ರಹವಾದ **ಜಿ-ಸ್ಯಾಟ್ 9** ನ್ನು **ಜಿಎಸ್ಎಲ್‌ವಿ ಎಫ್–09** ಉಪಗ್ರಹ ಉಡಾವಣಾ ವಾಹಕದ ಮೂಲಕ 2017ರ ಮೇ 5ರಂದು ಆಂಧ್ರ ಪ್ರದೇಶದ ಶ್ರೀಹರಿಕೋಟಾದ ಸತೀಶ್‌ಧವನ ಉಡಾವಣಾ ಕೇಂದ್ರದಿಂದ ಉಡಾವಣೆ ಮಾಡಲಾಯಿತು. 450ಕೋಟಿ ರೂ ವೆಚ್ಚದಲ್ಲಿ ಭಾರತದ ಇಸ್ರೋ ಅಭಿವೃದ್ಧಿ ಪಡಿಸಿರುವ ಈ ಉಪಗ್ರಹವು ನೆರೆಯ ರಾಷ್ಟ್ರಗಳಾದ **ನೇಪಾಳ, ಭೂತಾನ್, ಆಫ್ಘಾನಿಸ್ತಾನ, ಮಾಲ್ಡೀವ್ಸ್, ಶ್ರೀಲಂಕಾ** ಮತ್ತು **ಬಾಂಗ್ಲಾದೇಶಗಳಿಗೆ** ನೆರವಾಗಲಿದೆ. ಭಾರತವು ಸೇರಿ ಒಟ್ಟು 7 ರಾಷ್ಟ್ರಗಳಿಗೆ ಉಪಯುಕ್ತವಾಗಲಿರುವ ಈ ಉಪಗ್ರಹವು ಸಂವಹನ ಕ್ಷೇತ್ರದಲ್ಲಿ ನೆರೆಯ ರಾಷ್ಟ್ರಗಳಿಗೆ ಸಹಕಾರಿಯಾಗಲಿದೆ.

### ಆಕ್ಟ್ ಈಸ್ಟ್ ನೀತಿ (Act East):-

✦ ಏಷ್ಯಾ ಫೆಸಿಫಿಕ್ ದೇಶಗಳಿಗೆ ಒತ್ತು ನೀಡು... ಈಸ್ಟ್ ನೀತಿಯನ್ನು ಜಾರಿಗೆ ತರಲಾಗಿದೆ.

### ಲಿಂಕ್ ವೆಸ್ಟ್ ನೀತಿ (Link west):-

✦ ಯೂರೋಪ್ ಮತ್ತು ಅಮೆರಿಕಾದ ... ಸಂಬಂಧಗಳನ್ನು ಮತ್ತಷ್ಟು ಗಾಢ... ಪಶ್ಚಿಮದೊಂದಿಗೆ ಸಂಪರ್ಕ ಕಲ್ಪಿಸುವ ಲಿಂ... ನೀತಿಯನ್ನು ಜಾರಿಗೆ ತರಲಾಗಿದೆ.

### ಪೌರಾತ್ಯ ದೇಶಗಳೊಂದಿಗೆ ಸಂಬಂಧದ ಸಚಿ...

✦ ಅರಬ್ ಸಂಯುಕ್ತ ಸಂಸ್ಥಾನ (ಯುಎಇ), ... ಅರೇಬಿಯಾ, ಕತ್ತರ್, ಇರಾನ್ ಮತ್ತು ... ದೇಶಗಳಿಗೆ ಮೋದಿ ಅವರು ಭೇಟಿ ನೀಡಿದ್ದು, ... ದೇಶಗಳ ನಡುವಿನ ಸಂಬಂಧವನ್ನು ನವೀಕರಿ...

### ಐರ್ಲೆಂಡ್‌ನೊಂದಿಗೆ ಸಂಬಂಧ:-

✦ 2015ರ ಸೆಪ್ಟೆಂಬರ್ 23ರಂದು ಐರ್ಲೆಂಡ್‌ಗೆ ...

ನೀಡಿದ್ದು, ಈ ಮೂಲಕ 59 ವರ್ಷಗಳ ನಂತರ ಭಾರತದ ಪ್ರಧಾನಿ ಐರ್ಲೆಂಡ್‌ಗೆ ಭೇಟಿ ನೀಡಿದಂತಾಗಿದೆ. ವಿಶ್ವ ಭದ್ರತಾ ಮಂಡಳಿಯ ಶಾಶ್ವತ ಸದಸ್ಯತ್ವ ಪಡೆಯಲು ಬೆಂಬಲ ಕೋರಲಾಗಿದೆ. ಎನ್‌ಎಸ್‌ಜಿ ಸದಸ್ಯತ್ವವನ್ನು ಪಡೆಯುವುದಕ್ಕೆ ಬೆಂಬಲವನ್ನು ಕೋರಲಾಯಿತು.

**ಜಪಾನ್‌ನೊಂದಿಗೆ ಸಂಬಂಧ:-**

- 2014ರ ಆಗಸ್ಟ್ 30 ರಿಂದ 2015ರ ಸೆಪ್ಟೆಂಬರ್ 3ರವರೆಗೆ 5 ದಿನಗಳ ಪ್ರವಾಸವನ್ನು ನರೇಂದ್ರ ಮೋದಿ ಅವರು ಜಪಾನ್‌ಗೆ ಕೈಗೊಂಡಿದ್ದರು. ಈ ಸಂದರ್ಭದಲ್ಲಿ ಭಾರತದಲ್ಲಿ ಜಪಾನ್ ದೇಶವು ಮುಂಬೈನಿಂದ ಅಹಮದಾಬಾದ್ ವರೆಗೆ ಬುಲೆಟ್ ರೈಲಿನ ಕಾಮಗಾರಿಯನ್ನು ಕೈಗೆತ್ತಿಕೊಂಡಿದೆ. 2016ರ ನವೆಂಬರ್ 10ರಂದು ಭಾರತ ಮತ್ತು ಜಪಾನ್ ದೇಶಗಳು ನಾಗರೀಕ ಪರಮಾಣು ಒಪ್ಪಂದಕ್ಕೆ ಸಹಿ ಹಾಕಿವೆ. ಜಪಾನ್ ದೇಶವು ಗುಜರಾತ್, ಕರ್ನಾಟಕ ಮತ್ತು ರಾಜಸ್ಥಾನಗಳಲ್ಲಿ ಕೌಶಲ ಅಭಿವೃದ್ಧಿ ಕಾರ್ಯಕ್ರಮಕ್ಕೆ ಒಪ್ಪಿಗೆ ಸೂಚಿಸಿದೆ.

**ಭಾರತ ಮತ್ತು ಅಮೆರಿಕಾ ಸಂಬಂಧ:-**

- ಭಾರತದ ಪ್ರಧಾನಿ ನರೇಂದ್ರ ಮೋದಿ ಅವರು 2014ರ ಸೆಪ್ಟೆಂಬರ್ 26ರಿಂದ 30ರವರೆಗೆ ಅಮೇರಿಕಾಕ್ಕೆ ಭೇಟಿ ನೀಡಿದ್ದು, ಅಧ್ಯಕ್ಷ ಬರಾಕ್ ಒಬಾಮ ಅವರ ಜತೆ ಮಾತುಕತೆ ನಡೆಸಿದರು.
- 2015ರ ಸೆಪ್ಟೆಂಬರ್ 24ರಿಂದ 30ರವರೆಗೆ ಬರಾಕ್ ಒಬಾಮ ನೇತೃತ್ವದಲ್ಲಿ ನಡೆದ ಶಾಂತಿ ಪಾಲನಾ ಪಡೆಗಳ ಸಭೆಯಲ್ಲಿ ಭಾಗವಹಿಸಿದ್ದರು. ಇದೇ ಸಂದರ್ಭದಲ್ಲಿ ಫೇಸ್ ಬುಕ್ ಸಿಇಒ ಮಾರ್ಕ್ ಝುಕರ್ ಬರ್ಗ್ ಕೂಡ ಸಂವಾದ ನಡೆಸಿದರು.
- 2016ರ ಮಾರ್ಚ್ 31ರಿಂದ ಏಪ್ರಿಲ್ 1ರವರೆಗೆ ಅಮೇರಿಕಾಕ್ಕೆ ಭೇಟಿ ನೀಡಿ, ಅಣು ಭದ್ರತಾ ಶೃಂಗಸಭೆಯಲ್ಲಿ ಭಾಗವಹಿಸಿದರು.

**ಬಾಂಗ್ಲಾದೊಂದಿಗೆ 22 ಒಪ್ಪಂದಗಳು:-**

- ಬಾಂಗ್ಲಾ ದೇಶದ ಪ್ರಧಾನಿ ಷೇಕ್ ಹಸೀನಾ ಅವರು ಭಾರತಕ್ಕೆ ಭೇಟಿ ನೀಡಿದ್ದು, ಈ ಸಂದರ್ಭದಲ್ಲಿ 2017ರ ಏಪ್ರಿಲ್ 8ರಂದು ಭಾರತದ ಪ್ರಧಾನಿ ಮತ್ತು ಬಾಂಗ್ಲಾ ಪ್ರಧಾನಿಯವರು ಮಹತ್ವದ 22 ಒಪ್ಪಂದಗಳಿಗೆ ಸಹಿ ಹಾಕಿದರು.

Good Governance Day

**ಉತ್ತಮ ಆಡಳಿತ ದಿನ:**

- ಅಟಲ್ ಬಿಹಾರಿ ವಾಜಪೇಯಿಯವರ ಜನ್ಮವಾದ ಡಿಸೆಂಬರ್ 25ನ್ನು ಉತ್ತಮ ಆಡಳಿತ ದಿನವನ್ನಾಗಿ ಆಚರಿಸಲು ಘೋಷಿಸಲಾಯಿತು.

National Unity Day
31st October

**ರಾಷ್ಟ್ರೀಯ ಏಕತಾ ದಿನಾಚರಣೆ:-** ಅಕ್ಟೋಬರ್31, 2014ರಂದು ಸರ್ದಾರ್ ವಲ್ಲಭಬಾಯಿ ಪಟೇಲ್‌ರವರ ಜನ್ಮದಿನಾಚರಣೆಯಂದು ರಾಷ್ಟ್ರೀಯ ಏಕತಾ ದಿನ ಆಚರಿಸಲಾಗುತ್ತಿದೆ.

**ಗುರುವಂದನಾ ಕಾರ್ಯಕ್ರಮ:** ಪ್ರತಿ ವರ್ಷ ಸರ್ವಪಲ್ಲಿ ರಾಧಾಕೃಷ್ಣರವರ ಹುಟ್ಟಿದ ದಿನವಾದ ಸೆಪ್ಟೆಂಬರ್ 5 ರಂದು ಶಿಕ್ಷಕರ ದಿನಾಚರಣೆಯಾಗಿ ಆಚರಿಸುತ್ತಿದ್ದು, ನರೇಂದ್ರ ಮೋದಿಯವರು ಸೆಪ್ಟೆಂಬರ್ 5ನ್ನು ಗುರುವಂದನಾ ಕಾರ್ಯಕ್ರಮವನ್ನಾಗಿ ಆಚರಿಸಲು ಸಂಪ್ರದಾಯವನ್ನು ಆರಂಭಿಸಿದರು. ಪ್ರಥಮವಾಗಿ ಸೆಪ್ಟೆಂಬರ್5, 2014ರಂದು ಗುರುವಂದನಾ ಕಾರ್ಯಕ್ರಮವನ್ನು ಆಚರಿಸಿ ಟೆಲಿ ನೇರ ಪ್ರಸಾರದ ಮೂಲಕ ವಿದ್ಯಾರ್ಥಿಗಳೊಂದಿಗೆ ಸಂವಾದ ನಡೆಸಿದರು.

## ಕೇಂದ್ರ ಸರ್ಕಾರದ 3 ವರ್ಷಗಳ ಅವಧಿಯಲ್ಲಿ ಜಾರಿಗೆ ತಂದ 6 ಆರ್ಥಿಕ ಸುಧಾರಣೆಗಳು

| | |
|---|---|
| ಸರಕು & ಸೇವಾ ತೆರಿಗೆ (ಜಿ.ಎಸ್.ಟಿ) | 2017 ಜುಲೈ 1 |
| ನೋಟು ಅಮಾನ್ಯೀಕರಣ | 2016 ನವೆಂಬರ್ 8 ಘೋಷಣೆ |
| ಪ್ರಧಾನಮಂತ್ರಿ ಜನಧನ್ ಯೋಜನೆ (ಹಣಕಾಸು ಸಮನ್ವಯತೆ) | 2014 ಆಗಸ್ಟ್ 28 |
| ಕೈಗೆಟುಕುವ ವಸತಿ ಯೋಜನೆ (ಸರ್ವರಿಗೂ ಸೂರು) | 2022 ರ ವೇಳೆ (75 ನೇ ಸ್ವಾತಂತ್ರ್ಯ ದಿನ) |
| ದೀನ್‌ದಯಾಳ್ ಉಪಾಧ್ಯಾಯ ಗ್ರಾಮ ಜ್ಯೋತಿ ಯೋಜನೆ | 2015 ಜುಲೈ 25 |
| ಪ್ರಧಾನಮಂತ್ರಿ ಉಜ್ವಲ್ ಯೋಜನೆ | 2016 ಮೇ1 |

# 2017 ನೇ ಸಾಲಿನ ಯೋಜನೆಗಳು

## ಪ್ರಧಾನ್ ಮಂತ್ರಿ ಕೌಶಲ್ ವಿಕಾಸ್ ಯೋಜನೆ




✦ 2017ರ ಜನವರಿ 8:

✦ ವಿದೇಶದಲ್ಲಿ ಉದ್ಯೋಗ ಪಡೆಯುವಂತೆ ಭಾರತೀಯ ಯುವಕರನ್ನು ತರಬೇತಿ ಗೊಳಿಸುವುದು.

## ಸಾವಯವ ಕೃಷಿಗೆ ಉತ್ತೇಜನ




✦ ಸಾವಯವ ಕೃಷಿಗೆ ಉತ್ತೇಜನ ನೀಡುವ ಉದ್ದೇಶದಿಂದ 2016–17ನೇ ಸಾಲಿನ ಬಜೆಟ್‌ನಲ್ಲಿ ಸರ್ಕಾರವು 412 ಕೋಟಿ ರೂಗಳ ಅನುದಾನವನ್ನು ಮೀಸಲಿಟ್ಟಿದೆ. ಮುಂದಿನ 3 ವರ್ಷಗಳಲ್ಲಿ 5 ಲಕ್ಷ ರೈತರನ್ನು ಸಾವಯವ ಕೃಷಿಗೆ ಒಳಪಡಿಸುವ ಗುರಿ ಹೊಂದಲಾಗಿದೆ.

## ಭೀಮ್ ಆಪ್ ಬಿಡುಗಡೆ




✦ 2017 ಏಪ್ರಿಲ್ 14 ರಂದು ಜಾರಿ

✦ ಇದೊಂದು ಆಧಾರ್ ಆಧಾರಿತ ಬಯೋಮೆಟ್ರಿಕ್ ಆಧಾರಿತ ವ್ಯವಸ್ಥೆಯಾಗಿದ್ದು, ಈ ಆ್ಯಪ್ ಬಳಕೆಗೆ ನಮ್ಮ **ಹೆಬ್ಬೆಟ್ಟು ಪಾಸ್‌ವರ್ಡ್** ಆಗಿದೆ.

✦ ಇದನ್ನು 2016 ಡಿಸೆಂಬರ್ 30 ರಂದು **ನವದೆಹಲಿಯ ಡಿಜಿಧನ್ ಮೇಳದಲ್ಲಿ** ಪ್ರಧಾನಿ ನರೇಂದ್ರ ಮೋದಿ ಅವರು ಅರ್ಪಣೆ ಮಾಡಿದರು.

✦ ಡಾ|| ಬಿ.ಆರ್. ಅಂಬೇಡ್ಕರ್ ಅವರ ಹೆಸರಿನಲ್ಲಿನ ಡಿಜಿಟಲ್ ಪೇಮೆಂಟ್, ನಗದು ರಹಿತ ವಹಿವಾಟು ಉತ್ತೇಜನಕಾರಿಯಾಗಿದೆ.

✦ ಭಾರತ ರಾಷ್ಟ್ರೀಯ ಪಾವತಿ ನಿಗಮ (N... ಇದನ್ನು ಅಭಿವೃದ್ಧಿಪಡಿಸಿದೆ.

✦ ಜನರು ತಮ್ಮ ಬ್ಯಾಂಕ್ ಖಾತೆಗೆ ... ಮೊಬೈಲ್ ಸಂಖ್ಯೆ ಮೂಲಕ ಹಣ ಪಾ... ಸ್ವೀಕರಿಸಲು ಸಾಧ್ಯವಾಗಿಸಿದೆ.

## ಉಡಾನ್ (UDAN-Ude Desh Ka A... Naagrik) ಯೋಜನೆ




✦ ಭಾರತದ ಪ್ರಧಾನಿ ನರೇಂದ್ರ ಮೋದಿ ... ಸಾಮಾನ್ಯರೂ ಕೂಡ ವಿಮಾನ ಪ್ರಯಾಣ... ಸಹಕಾರಿಯಾದ **'ಉಡಾನ್'** (Udan) ... 2017ರ ಏಪ್ರಿಲ್ 27 **ಹಿಮಾಚಲ ಪ್ರದೇ... ಬಳಿಯ ಜುಬ್ಬರಟ್ಟಿ ವಿಮಾನ ನಿಲ್ದಾಣ...** ನೀಡಿದರು.

✦ ಈ ಸಂದರ್ಭದಲ್ಲಿ 3 ಮಾರ್ಗಗಳಿಗೆ ... ಆರಂಭಗೊಂಡಿತು. ಶಿಮ್ಲಾದಲ್ಲಿ ಯೋಜ... ನಿಶಾನೆ ತೋರಿದ ಪ್ರಧಾನಿ ಅವರು ... ವಿಮಾನಯಾನ ಸೇವೆಗೆ ಚಾಲನೆ ನೀಡಿ...

✦ ಈ ವೇಳೆ ವಿಡಿಯೋ ಕಾನ್ಫರೆನ್ಸ್ ಮೂಲಕ **ಹೈದರಾಬಾದ್ & ಕಡಪ–ಹೈದರಾಬಾ...** ಕಲ್ಪಿಸುವ ವಿಮಾನಯಾನ ಸೇವೆಗೂ ... ತೋರಿಸಿದರು. 3 ಮಾರ್ಗದ ವಿಮಾನ... 19–78 ಆಸನಗಳಿಗೆ ವ್ಯವಸ್ಥೆ ಕಲ್ಪಿಸಲಾಗಿ...

## ಹಳೆಯ ಕಾನೂನುಗಳಿಗೆ ಮು...

✦ ಅಸ್ತಿತ್ವದಲ್ಲಿದ್ದು, ಚಾಲ್ತಿಯಲ್ಲಿ ಇಲ್ಲದ... ಕ್ಕೂ ಹೆಚ್ಚು ಕಾನೂನುಗಳಿಗೆ ಮುಕ್ತಿ... ಕಾರ್ಯ ಬರದಿಂದ ಸಾಗಿದೆ.

✦ ಪ್ರಸ್ತುತ ಕಾಲಘಟ್ಟಕ್ಕೆ ತಕ್ಕಂತೆ ಹೊಸ ಕಾ... ಸರ್ಕಾರ ಹೊಸದಾಗಿ ಜಾ... ಈಗಾಗಲೇ ಸಾವಿರಕ್ಕೂ ಹೆಚ್ಚು ಕಾ... ರದ್ದುಗೊಳಿಸಲಾಗಿದೆ.

## ಗಂಗಾ ಜಲ ಶುದ್ಧೀಕರಣ ಯೋಜನೆ




- ಗಂಗಾ ನದಿಯ ನೀರನ್ನು ಮಲಿನವಾಗದಂತೆ ತಡೆಯುವುದು ಮತ್ತು ಮಲಿನತೆಯನ್ನು ಹೋಗಲಾಡಿಸುವುದಾಗಿದೆ. ಈ ಯೋಜನೆಗೆ ಕೇಂದ್ರ ಬಜೆಟ್‌ನಲ್ಲಿ 2037 ಕೋಟಿಯನ್ನು ಬಿಡುಗಡೆ ಮಾಡಲಾಗಿದೆ.

## ಪ್ರಧಾನ ಮಂತ್ರಿ ಆವಾಸ್ ಯೋಜನೆ - (ಗ್ರಾಮೀಣ್)




- ಈ ಯೋಜನೆಯು ಗ್ರಾಮೀಣ ಬಡವರಿಗೆ ಮುಂದಿನ 3 ವರ್ಷಗಳಲ್ಲಿ ಒಂದು ಕೋಟಿ ಶಾಶ್ವತ ಮನೆಗಳನ್ನು ಸರ್ಕಾರದಿಂದ ನಿರ್ಮಿಸುವುದು. ಮೊದಲ ಹಂತ (2015–17), 2ನೇ ಹಂತ (2017–19), 3ನೇ ಹಂತ (2019–22). ಈ ಯೋಜನೆಯಲ್ಲಿ 1 ಲಕ್ಷದಿಂದ 2.30 ಲಕ್ಷ ಸಹಾಯಧನವಾಗಿರುತ್ತದೆ.

## ಪ್ರಧಾನ ಮಂತ್ರಿ ಸುರಕ್ಷಿತ ಮಾತೃತ್ವ ಅಭಿಯಾನ (PMSMA):




- 2016 ನವೆಂಬರ್ 4 ರಂದು ಕೇಂದ್ರ ಆರೋಗ್ಯ & ಕುಟುಂಬ ಕಲ್ಯಾಣ ಸಚಿವ ಜೆ.ಪಿ. ನಾಡಿಯಾ ಅವರು ನವದೆಹಲಿಯಲ್ಲಿ ಉದ್ಘಾಟಿಸಿದರು.
- ಇದರ ಪ್ರಮುಖ ಉದ್ದೇಶ ಸುರಕ್ಷಿತವಾಗಿ ಬಡ ಗರ್ಭಿಣಿ ಸ್ತ್ರೀಯರ ಆರೋಗ್ಯವನ್ನು, ರಕ್ಷಣೆ & ಹೆರಿಗೆಯನ್ನು ಕೈಗೊಳ್ಳುವುದು, ತಾಯಿಂದಿರ & ಶಿಶು ಮರಣವನ್ನು ಕಡಿಮೆ ಮಾಡುವುದಾಗಿದೆ.
- 19 ವರ್ಷ ಮೇಲ್ಪಟ್ಟ ಮಹಿಳೆಯರ ಮೊದಲ ಎರಡು ಹೆರಿಗೆಗೆ ಮಾತ್ರ ಅನ್ವಯ.
- ಪ್ರತಿ ತಿಂಗಳು 9 ನೇ ತಾರೀಖಿನಂದು ಉಚಿತ ವೈದ್ಯಕೀಯ ತಪಾಸಣೆ ನಡೆಸಲಾಗುತ್ತದೆ.

## ಜಾಮ್ ಯೋಜನೆ (JAM)




- ಸರ್ಕಾರದ ಯೋಜನೆಗಳು ಸಮರ್ಥವಾಗಿ ತಲುಪಲು ಭಾರತ ಸರ್ಕಾರವು ಜನಧನ್, ಆಧಾರ್, ಮೊಬೈಲ್ ಎಂಬ ಕಾರ್ಯಕ್ರಮ ಜಾರಿಗೆ ತಂದಿದ್ದು, ಇದೊಂದು ತ್ರಿವಳಿ ಯೋಜನೆಯಾಗಿದೆ. ಭಾರತ ಸರ್ಕಾರದ ಸಬ್ಸಿಡಿಗಳನ್ನು ಪಡೆಯುವವರಿಗೆ ಜನಧನ್ ಖಾತೆಯನ್ನು, ಮೊಬೈಲ್ ನಂಬರ್ ಮತ್ತು ಆಧಾರ್ ಕಾರ್ಡ್‌ಗೆ ಸಂಪರ್ಕ ನೀಡಲಾಗುತ್ತದೆ. ಈ ಯೋಜನೆಯು ಸಬ್ಸಿಡಿ ಹಣವು ಅಪವ್ಯಯವಾಗುವುದನ್ನು ತಡೆಯುತ್ತದೆ.

## 900 ಪಟ್ಟಣಗಳಲ್ಲಿ ಮೋದಿ ಉತ್ಸವ




- ಬಿಜೆಪಿ ನೇತೃತ್ವದಲ್ಲಿ ಎನ್‌ಡಿಎ ಸರ್ಕಾರದ 3ನೇ ವರ್ಷಾಚರಣೆ ಅಂಗವಾಗಿ ದೇಶದ ಸುಮಾರು 900 ಪಟ್ಟಣಗಳಲ್ಲಿ ಮೋದಿ ಉತ್ಸವಗಳಿಗೆ (Making of Developed India Festival-MODI) ಮೋದಿ ಅವರು ಚಾಲನೆ ನೀಡಿದರು. ಮೋದಿ ಉತ್ಸವಗಳು 2017 ಮೇ 26 ರಿಂದ ಜೂನ್ 15ರವರೆಗೂ ನಡೆದವು.
- ಇದರ ಮುಖ್ಯ ಉದ್ದೇಶ ನ್ಯೂ ಇಂಡಿಯಾ ಅಭಿಯಾನದ ಆರಂಭವಾಗಿತ್ತು.
- ಈ ಉತ್ಸವದಲ್ಲಿ ನರೇಂದ್ರ ಮೋದಿ ನೇತೃತ್ವದ ಎನ್.ಡಿ.ಎ ಸರ್ಕಾರವು 3 ವರ್ಷಗಳಲ್ಲಿ ಕೈಗೊಂಡ ಕಾರ್ಯಕ್ರಮಗಳ ಬಗ್ಗೆ ಜನರಿಗೆ ಮಾಹಿತಿ ನೀಡಲಾಯಿತು.
- ಈ ಕಾರ್ಯಕ್ರಮಕ್ಕೆ ಮೋದಿ ಅವರ ಹೆಸರು ಬರುವಂತೆ Making of Developed India - MODI ಎಂಬ ಶೀರ್ಷಿಕೆಯನ್ನು ನೀಡಲಾಗಿದೆ.
- ಮೋದಿ ಉತ್ಸವವನ್ನು ಪ್ರಧಾನಿ ನರೇಂದ್ರ ಮೋದಿ ಅವರು ಅಸ್ಸಾಂ ನ ಗೌಹಾತಿಯಲ್ಲಿ 2017 ಮೇ 26 ರಂದು ಚಾಲನೆ ನೀಡಿದರು.
- 500 ನಗರಗಳಲ್ಲಿ ಸಬ್‌ಕಾ ಸಾಥ್ ಸಬ್‌ಕಾ ವಿಕಾಸ್ ಕಾರ್ಯಕ್ರಮ ಆಯೋಜಿಸಲಾಗಿತ್ತು.

## ದೇಶದ ಅತೀ ಉದ್ದದ ಸೇತುವೆಯ ಲೋಕಾರ್ಪಣೆ




✦ ದೇಶದ ಅತೀ ಉದ್ದದ ಸೇತುವೆಯಾದ ಅಸ್ಸಾಂನ ಬ್ರಹ್ಮಪುತ್ರ ನದಿಯ ಉಪನದಿಯಾದ **ಲೋಹಿತ** ನದಿಗೆ ಅಡ್ಡಲಾಗಿ ಅಸ್ಸಾಂ ಮತ್ತು ಅರುಣಾಚಲ ಪ್ರದೇಶ ರಾಜ್ಯವನ್ನು ಸಂಪರ್ಕಿಸುವ 9.15 ಕಿಮೀ ಉದ್ದದ ಸೇತುವೆಗೆ ಧೋಲಾ-ಸಾದಿಯಾ ನಡುವಿನ ಸೇತುವೆಯನ್ನು ಅಧಿಕೃತವಾಗಿ ಚಾಲನೆ ನೀಡುವ ಮೂಲಕ ನರೇಂದ್ರ ಮೋದಿ ನೇತೃತ್ವದ ಎನ್‌ಡಿಎ ಸರ್ಕಾರಕ್ಕೆ 3 ವರ್ಷ ತುಂಬಿದ ಸಂದರ್ಭದಲ್ಲಿ 3ನೇ ವರ್ಷಾಚರಣೆಯನ್ನು ಮಾಡಿದರು. ಈ ಸೇತುವೆಯು ಚೀನಾ ಗಡಿಗೆ ಹತ್ತಿರವಾಗುತ್ತಿದ್ದು, ಇದರಿಂದ ಭಾರತದ ಸೇನಾ ಟ್ಯಾಂಕರ್‌ಗಳನ್ನು ಕೊಂಡೊಯ್ಯಲು ಸುಲಭವಾಗುತ್ತದೆ. ಈ ಸೇತುವೆಯು ಅಸ್ಸಾಂ & ಅರುಣಾಚಲ ಪ್ರದೇಶದ ನಡುವಿನ 4 ಗಂಟೆ ಅವಧಿಯನ್ನು ಕಡಿಮೆ ಮಾಡುತ್ತದೆ.

✦ ಈ ಸೇತುವೆಗೆ ಖ್ಯಾತ ಗಾಯಕ, ಚಿತ್ರ ನಿರ್ಮಾಪಕ **ಭೂಪೇನ್ ಹಜಾರಿಕಾ** ಅವರ ಹೆಸರನ್ನು ಇಡುವುದಾಗಿ ಮೋದಿ ಅವರು ಘೋಷಿಸಿದ್ದಾರೆ.

✦ ಭೂಪೇನ್ ಹಜಾರಿಕಾ ಅವರು ಭಾರತದ ಸಿನಿಮಾ ಜಗತ್ತಿನಲ್ಲಿ ಅಸ್ಸಾಂ ಚಿತ್ರಗಳಿಗೆ ಸ್ಥಾನ ಕಲ್ಪಿಸಿದವರ ಸಾಲಿನಲ್ಲಿ ಅವರ ಹೆಸರು ಮೊದಲಿನದು. ಇವರು 2011ರಲ್ಲಿ ಮೃತಪಟ್ಟಿದ್ದರು.

## ಏಮ್ಸ್‌ಗೆ ಶಿಲಾನ್ಯಾಸ - ಅಸ್ಸಾಂ




✦ **ಅಸ್ಸಾಂನ ಗುವಾಹಟಿಯ ಬಳಿಯ ಚಂಗ್‌ಸಾರಿ ಬಳಿ** ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆ (AIIMS-All India Institute of Medical Sciences) ಸ್ಥಾಪನೆಗೆ ಪ್ರಧಾನಿ ನರೇಂದ್ರ ಮೋದಿ ಅವರು 2017ರ ಮೇ 26ರಂದು ಶಿಲಾನ್ಯಾಸ ನೆರವೇರಿಸಿದರು. 1123ಕೋಟಿ ರೂ ವೆಚ್ಚದಲ್ಲಿ ಪ್ರಧಾನ ಮಂತ್ರಿ ಸ್ವಾಸ್ಥ್ಯ ಸುರಕ್ಷಾ ಯೋಜನೆಯ ಭಾಗವಾಗಿ ಆರಂಭಿಸಲಾಗುತ್ತಿದೆ.

✦ ಈ ಘಟಕವು ಮುಂದಿನ 4 ವರ್ಷಗಳಲ್ಲಿ ಪೂರ್ಣಗೊಳ್ಳಲಿದೆ. ಪ್ರತಿ ವರ್ಷ 100 ಎಂಬಿಬಿಎಸ್ ವಿದ್ಯಾರ್ಥಿಗಳು ಮತ್ತು 60 ನರ್ಸಿಂಗ್ ವಿದ್ಯಾರ್ಥಿಗಳು ವಿದ್ಯಾಭ್ಯಾಸ ಮಾಡುವ ವೈದ್ಯಕೀಯ ಕಾಲೇಜಾಗಿದ್ದು, 750 ಬೆಡ್‌ಗಳನ್ನು ಹೊಂದಿರುವ ಆಸ್ಪತ್ರೆಯಾಗಿದೆ.

✦ ಪ್ರಧಾನ ಮಂತ್ರಿ ಸ್ವಾಸ್ಥ್ಯ ಸುರಕ್ಷಾ ಯೋಜನೆ (PMSSY)ಯನ್ನು 2003ರಲ್ಲಿ ಘೋಷಿಸಲಾಗಿದ್ದು, ಸೂಕ್ತವಾದ ಆರೋಗ್ಯ ಸೇವೆಯನ್ನು ಒದಗಿಸುವ ಮೂಲಕ ಪ್ರಾದೇಶಿಕ ಅಸಮತೋಲವನ್ನು ಹೋಗಲಾಡಿಸಲು ಮತ್ತು ದೇಶಾದ್ಯಂತ ಗುಣಮಟ್ಟದ ವೈದ್ಯಕೀಯ ಶಿಕ್ಷಣದ ಸೌಲಭ್ಯವನ್ನು ಒದಗಿಸುವ ಉದ್ದೇಶದಿಂದ 2003ರಲ್ಲಿ ಈ ಯೋಜನೆ ಜಾರಿಗೊಳಿಸಲಾಗಿದೆ. ಇದರ ಪ್ರಮುಖ ಘಟಕಗಳೆಂದರೆ ಏಮ್ಸ್ (AIIMS)ನಂತಹ ಸಂಸ್ಥೆಗಳನ್ನು ಸ್ಥಾಪಿಸುವುದು ಮತ್ತು ಸರ್ಕಾರಿ ವೈದ್ಯಕೀಯ ಕಾಲೇಜುಗಳನ್ನು ಉನ್ನತೀಕರಿಸುವುದು

## ಸಂಪದ ಯೋಜನೆ




✦ ಕೇಂದ್ರ ಸರ್ಕಾರದ 'ಸಂಪದ' ಎನ್ನುವ ನೂತನ ಆಹಾರ ಸಂಸ್ಕರಣೆ ಯೋಜನೆಗೆ ಪ್ರಧಾನಿ ನರೇಂದ್ರ ಮೋದಿ ಅವರು 2017ರ ಮೇ 26ರಂದು ಚಾಲನೆ ನೀಡಿದರು. ಸಂಪದ ಎಂಬುದು ಸಾಗರ ಮತ್ತು ಕೃಷಿ ಉತ್ಪನ್ನಗಳ ಸಂಸ್ಕರಣೆ ಮತ್ತು ಕೃಷಿ ಉತ್ಪನ್ನ ಸಂಸ್ಕರಣಾ ಘಟಕಗಳ ಅಭಿವೃದ್ಧಿ ಯೋಜನೆ ಎಂಬುದರ ಇಂಗ್ಲಿಷ್ ರೂಪದ ಸಂಕ್ಷಿಪ್ತ ರೂಪವಾಗಿದೆ.

✦ ಇದಕ್ಕೆ 6 ಸಾವಿರ ಕೋಟಿ ರೂಗಳನ್ನು ನೆರವು ನೀಡಲು ಪ್ರಧಾನಿ ನರೇಂದ್ರ ಮೋದಿ ಅವರು ಘೋಷಣೆ ಮಾಡಿದ್ದು, ಈ ಹಣವನ್ನು ಆಹಾರೋತ್ಪನ್ನ ಸಂಸ್ಕರಣೆ ಉದ್ಯಮದ ಬೆಳವಣಿಗೆಗೆ ವಿನಿಯೋಗವಾಗಲಿದೆ. ಈ ಯೋಜನೆ 2022ರೊಳಗೆ ರೈತರ ಆದಾಯವನ್ನು ದ್ವಿಗುಣಗೊಳಿಸುವ ಮತ್ತು ಆಹಾರ ನಷ್ಟವಾಗುವುದನ್ನು ತಪ್ಪಿಸುವ ಉದ್ದೇಶ ಒಳಗೊಂಡ ಯೋಜನೆಯಾಗಿದೆ. ಆಹಾರ ಪೂರೈಕೆ ಕ್ಷೇತ್ರಕ್ಕೆ ಸಮಗ್ರ ಮೂಲ ಸೌಕರ್ಯವನ್ನು ಈ ಯೋಜನೆ ಒದಗಿಸಲಿದೆ. **"ಇದೊಂದು ಹಸಿರುಕ್ರಾಂತಿಯಲ್ಲ, ಸದಾ ಹಸಿರು ಕ್ರಾಂತಿ"** ಎಂದು ನರೇಂದ್ರ ಮೋದಿ ಅವರು ಹೇಳಿದ್ದಾರೆ.




### ಭಾರತೀಯ ಕೃಷಿ ಸಂಶೋಧನಾ ಸಂಸ್ಥೆಗೆ ಶಿಲಾನ್ಯಾಸ

✦ ಅಸ್ಸಾಂನ ಗೋಗಮುಖಿ ದಲ್ಲಿ ಭಾರತೀಯ ಕೃಷಿ ಸಂಶೋಧನಾ ಸಂಸ್ಥೆಗೆ ಪ್ರಧಾನಿ ನರೇಂದ್ರ ಮೋದಿ ಅವರು ಶಿಲಾನ್ಯಾಸ ನೆರವೇರಿಸಿದರು. ಭಾರತದ ಪ್ರಧಾನಿ ನರೇಂದ್ರ ಮೋದಿ ಅವರು ಭಾರತೀಯ ಕೃಷಿ ಸಂಶೋಧನಾ ಸಂಸ್ಥೆ (IARI) ಗೆ ಅಸ್ಸಾಂ ರಾಜ್ಯದ ಧೇಮಾಜಿ ಜಿಲ್ಲೆಯ ಗೋಗಾಮುಖ್ ನಲ್ಲಿ ಶಂಕು ಸ್ಥಾಪನೆ ಮಾಡಿದರು. ಇದು 3ನೇ ಭಾರತೀಯ ಕೃಷಿ ಸಂಶೋಧನಾ ಸಂಸ್ಥೆಯಾಗಿದೆ. ಈಗಾಗಲೇ ಇಂತಹ ಸಂಸ್ಥೆಗಳು ದೆಹಲಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, 2ನೇ IARI ಸಂಸ್ಥೆಯು ಜಾರ್ಖಂಡ್‌ನ ರಾಂಚಿಯಲ್ಲಿ ಕಾರ್ಯ ನಿರ್ವಹಿಸುತ್ತಿದೆ. ಪ್ರಸ್ತುತವಾಗಿ ಅಸ್ಸಾಂನಲ್ಲಿ ಆರಂಭವಾಗುತ್ತಿರುವ IARI ನ 3ನೇ ಸಂಸ್ಥೆಯಾಗಿದೆ. ನೂತನವಾಗಿ ಸ್ಥಾಪನೆಗೊಳ್ಳುತ್ತಿರುವ ಈ ಸಂಸ್ಥೆಯು ಈಶಾನ್ಯ ಭಾರತದ ಕೃಷಿ ವಲಯದ ಅಭಿವೃದ್ಧಿಗೆ ಸಹಕಾರಿಯಾಗಲಿದೆ.

✦ ಭಾರತದ ಪ್ರಧಾನಿ ನರೇಂದ್ರ ಮೋದಿ ಅವರು ಕಾರ್ಯಕ್ರಮಗಳನ್ನು ಉದ್ಘಾಟಿಸುವ ಸಂದರ್ಭದಲ್ಲಿ ಈಶಾನ್ಯ ಭಾರತದ ಅಭಿವೃದ್ಧಿ ಮತ್ತು ಸಂಪರ್ಕವನ್ನು ಉತ್ತೇಜಿಸಲು ಪಂಚತಂತ್ರವನ್ನು ಅಳವಡಿಸಿಕೊಳ್ಳುವ ಬಗ್ಗೆ ಪ್ರಸ್ತಾಪಿಸಿದರು. ಅಂತಹ ಪಂಚ ಮಾರ್ಗಗಳೆಂದರೆ

1) ಹೆದ್ದಾರಿಗಳು 2) ರೈಲ್ವೆ ಮಾರ್ಗ 3) ಜಲಮಾರ್ಗ 4) ವಾಯುಮಾರ್ಗ 5) ಆಪ್ಟಿಕಲ್ ಫೈಬರ್ ನೆಟ್‌ವರ್ಕ್

## ದೇಶದ ಬಯಲು ಬಹಿರ್ದೆಸೆ ಮುಕ್ತ ರಾಜ್ಯಗಳು (ODF-Open Defection Free States)

### ಸ್ವಚ್ಛ ಭಾರತ ಅಭಿಯಾನ




✦ ಸ್ವಚ್ಛ ಭಾರತ ಅಭಿಯಾನವನ್ನು ಪ್ರಧಾನಿ ನರೇಂದ್ರ ಮೋದಿ ಅವರು 2014ರ ಅಕ್ಟೋಬರ್ 2ರಂದು ನವದೆಹಲಿಯಲ್ಲಿ ಮಹಾತ್ಮ ಗಾಂಧೀಜಿ ಅವರ ಸಮಾಧಿ ಸ್ಥಳವಾದ **ರಾಜ್‌ಘಾಟ್**‌ನಲ್ಲಿ ಉದ್ಘಾಟಿಸಿದರು. ಇದು ಭಾರತ ಸರ್ಕಾರದ ರಾಷ್ಟ್ರೀಯ ಅಭಿಯಾನವಾಗಿದ್ದು, ಸ್ವಚ್ಛ ಭಾರತ ಯೋಜನೆಯಡಿಯಲ್ಲಿ ಸಂಪೂರ್ಣ ಬಹಿರ್ದೆಸೆ ಮುಕ್ತವನ್ನಾಗಿಸುವ ಗುರಿಯನ್ನು ಗಾಂಧೀಜಿ ಅವರ 150ನೇ ಜನ್ಮ ದಿನಾಚರಣೆಯಾದ **2019 ಅಕ್ಟೋಬರ್ 2ರ ವೇಳೆಗೆ** ಸಾಧಿಸುವ ಗುರಿಯನ್ನು ಹೊಂದಿದೆ. 2012ರ ಏಪ್ರಿಲ್ 1ರಂದ ನಿರ್ಮಲ್ ಭಾರತ್ ಯೋಜನೆಯಿಂದು ಜಾರಿಯಾಗಿದ್ದ ಯೋಜನೆಯನ್ನು ಸ್ವಚ್ಛ ಭಾರತ ಎಂದು ಮರುನಾಮಕರಣ ಮಾಡಲಾಗಿದೆ.

✦ **ಕೇಂದ್ರದ ಕುಡಿಯುವ ನೀರು ಮತ್ತು ನೈರ್ಮಲ್ಯ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯವು** ಸ್ವಚ್ಛ ಭಾರತ ಅಭಿಯಾನದಡಿಯಲ್ಲಿ ಬಯಲು ಬಹಿರ್ದೆಸೆ ಮುಕ್ತ ರಾಜ್ಯಗಳನ್ನು ಘೋಷಿಸುವ ಜವಾಬ್ದಾರಿ ಹೊಂದಿದೆ.

✦ ಬಹಿರ್ದೆಸೆ ಮುಕ್ತ ರಾಜ್ಯವೆಂದು ಮೊದಲ ಬಾರಿಗೆ **ಸಿಕ್ಕಿಂ** ರಾಜ್ಯವನ್ನು ಘೋಷಿಸಲಾಗಿತ್ತು.

✦ ಹಿಮಾಚಲ ಪ್ರದೇಶವನ್ನು ಬಹಿರ್ದೆಸೆ ಮುಕ್ತ (ODF-Open Defection Free)ರಾಜ್ಯವಾಗಿ **2016ರ ಅಕ್ಟೋಬರ್** 28ರಂದು ಅಧಿಕೃತವಾಗಿ ಘೋಷಿಸಲಾಗಿದೆ. **ದೇಶದ 2ನೇ ಬಹಿರ್ದೆಸೆ ಮುಕ್ತರಾಜ್ಯವಾಗಿದೆ.**

✦ ಕೇರಳ ರಾಜ್ಯದ **60 ನೇ ಸಂಸ್ಥಾಪನಾ** ದಿನ ಆಚರಣೆಯ ಸಂದರ್ಭವಾದ 2016 ನವೆಂಬರ್ 1ರಂದು ಕೇರಳ ರಾಜ್ಯವನ್ನು ದೇಶದ ಬಯಲು ಬಹಿರ್ದೆಸೆ ಮುಕ್ತ 3 ನೇ ರಾಜ್ಯವನ್ನಾಗಿ ಕೇರಳದ ಮುಖ್ಯಮಂತ್ರಿ ಪಿಣರಾಯಿ ವಿಜಯನ್ ಅವರು ಘೋಷಿಸಿದರು. ಕೇರಳ ರಾಜ್ಯವು ಅತಿ ಹೆಚ್ಚು ಜನಸಾಂದ್ರತೆ ಹೊಂದಿರುವ ರಾಜ್ಯವಾಗಿದ್ದು, ಆದರೂ **ಬಯಲು ಬಹಿರ್ದೆಸೆ ಮುಕ್ತ ರಾಜ್ಯ** ಎಂಬ ಹೆಸರು ಪಡೆದಿದೆ.

✦ **2017–18** ರ ಆರ್ಥಿಕ ವರ್ಷದಲ್ಲಿ ಹರಿಯಾಣ, ಉತ್ತರಾಖಂಡ, ಗುಜರಾತ್ & ಪಂಜಾಬ್ ರಾಜ್ಯಗಳು ಬಹಿರ್ದೆಸೆ ಮುಕ್ತ ರಾಜ್ಯಗಳೆಂದು ಘೋಷಿಸಿಕೊಳ್ಳುವ ವಿಶ್ವಾಸವಿದೆ.

✦ ಕರ್ನಾಟಕ ರಾಜ್ಯದಲ್ಲಿ **ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಉಡುಪಿ, ದ. ಕನ್ನಡ, ಕೊಡಗು** ಜಿಲ್ಲೆಗಳು 2016–17 ರಲ್ಲಿ ಬಯಲು ಬಹಿರ್ದೆಸೆ ಮುಕ್ತ ಜಿಲ್ಲೆಗಳಾಗಿ ಘೋಷಿಸಲ್ಪಟ್ಟಿವೆ.

✦ **2013 ನವೆಂಬರ್ 19 ವಿಶ್ವ ಶೌಚಾಲಯ ದಿನ**ದಂದು ಅಂತರಾಷ್ಟ್ರೀಯ ಮಟ್ಟದಲ್ಲಿ ಮೊದಲ ಬಾರಿಗೆ ಬಹಿರ್ದೆಸೆ ಮುಕ್ತ ಪರಿಕಲ್ಪನೆಯನ್ನು ಪ್ರಕಟಪಡಿಸಲಾಯಿತು. ಸುಸ್ಥಿರ ಅಭಿವೃದ್ಧಿ ಗುರಿಗಳ ಈಡೇರುವಿಕೆಯಲ್ಲಿ ವಿಶ್ವ ಆರೋಗ್ಯ ಸಂಸ್ಥೆ & ಯುನಿಸೆಫ್ ಸಂಸ್ಥೆಗಳು ಜಂಟಿಯಾಗಿ ಜಾಗತಿಕವಾಗಿ ಕುಡಿಯುವ ನೀರು & ಶೌಚಾಲಯ ನಿರ್ಮಾಣದ ಗುರಿಯನ್ನು ನಿರ್ಧರಿಸಿಕೊಂಡಿವೆ.

# ನೀತಿ ಆಯೋಗ

## National Institution for Transforming India

2014 ರ ಆಗಸ್ಟ್ 15 ರಂದು ಸ್ವಾತಂತ್ರ್ಯೋತ್ಸವದ ಭಾಷಣದ ಸಂದರ್ಭದಲ್ಲಿ ಭಾರತದ ಪ್ರಧಾನಿ ನರೇಂದ್ರ ಮೋದಿ ಅವರು ಯೋಜನಾ ಆಯೋಗದ ಬದಲಿಗೆ ನೀತಿ ಆಯೋಗವನ್ನು ರಚಿಸುವುದಾಗಿ ಘೋಷಿಸಿದ್ದರು. ಈ ಹಿನ್ನಲೆಯಲ್ಲಿ 2015 ಜನವರಿ 1 ರಂದು ನೀತಿ ಆಯೋಗವು ಅಸ್ಥಿತ್ವಕ್ಕೆ ಬಂದಿತು. ಈ ಮೂಲಕ 65 ವರ್ಷಗಳ ಸುದೀರ್ಘ ಇತಿಹಾಸ ಹೊಂದಿದ್ದ, 12 ಪಂಚವಾರ್ಷಿಕ ಯೋಜನೆಗಳ ಕರಡನ್ನು ರೂಪಿಸಿದ್ದ ರಾಷ್ಟ್ರೀಯ ಯೋಜನಾ ಆಯೋಗವು ರದ್ದಾಯಿತು. ಮುಂದಿನ ದಿನಗಳಲ್ಲಿ ದೇಶದ ಮಹತ್ವಾಕಾಂಕ್ಷಿ ಯೋಜನೆಗಳನ್ನು & ದೂರದೃಷ್ಟಿ ಯೋಜನೆಗಳನ್ನು ರೂಪಿಸುವ ಜವಾಬ್ದಾರಿಯನ್ನು ಸಂವಿಧಾನೇತರ ಸಂಸ್ಥೆಯಾದ ನೀತಿ ಆಯೋಗಕ್ಕೆ ವರ್ಗಾವಣೆಗೊಂಡಿದೆ. ನೀತಿ ಆಯೋಗದ ಪದನಿಮಿತ್ತ ಅಧ್ಯಕ್ಷರಾಗಿ ಭಾರತದ ಪ್ರಧಾನಮಂತ್ರಿಗಳಿರುತ್ತಾರೆ. ನೀತಿ ಆಯೋಗವು ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ವ್ಯಕ್ತಿಗಳನ್ನು ಸದಸ್ಯರುಗಳನ್ನು ಒಳಗೊಂಡಿದೆ.



**NITI Aayog**
(National Institution for Transforming India)
Government of India

- 2015ರ ಜನವರಿ 1ರಂದು ಯೋಜನಾ ಆಯೋಗ ನೀತಿ ಆಯೋಗ(NITI Aayog) ವಾಗಿ ಮರುನಾಮಕರಣಗೊಂಡಿದೆ.
- ಕೇಂದ್ರ ಕಚೇರಿ:– ನವದೆಹಲಿ
- ಆಯೋಗದ ಮೊದಲ ಹೆಸರು: ಭಾರತದ ಯೋಜನಾ ಆಯೋಗ
- ಸರ್ಕಾರದ ಥಿಂಕ್' ಟ್ಯಾಂಕ್ (Think Tank) ಸಂಸ್ಥೆಯಾಗಿ ಕಾರ್ಯ ನಿರ್ವಹಿಸುತ್ತಿದೆ.
- **ಅಧ್ಯಕ್ಷರು:–** ಭಾರತದ ಪ್ರಧಾನಿ ನರೇಂದ್ರ ಮೋದಿಯವರು ನೀತಿ ಆಯೋಗದ ಮೊದಲ ಪದನಿಮಿತ್ತ ಅಧ್ಯಕ್ಷರಾಗಿದ್ದಾರೆ.

**ಉಪಾಧ್ಯಕ್ಷರು:-**

- ನೀತಿ ಆಯೋಗದ ಉಪಾಧ್ಯಕ್ಷರಾಗಿ ಅರವಿಂದ್ ಪನಗರಿಯಾ ನೇಮಕ ಮಾಡುವುದರೊಂದಿಗೆ ನೀತಿ ಆಯೋಗಕ್ಕೆ 6 ಸದಸ್ಯರು ಮತ್ತು ಮೂವರು ವಿಶೇಷ ಆಹ್ವಾನಿತರನ್ನು ನೇಮಕ ಮಾಡಲಾಗಿದೆ. ಈ ಮೂಲಕ ನೀತಿ ಆಯೋಗ ಕಾರ್ಯಾಚರಣೆ ಆರಂಭವಾಗಿದೆ.

**ಪೂರ್ಣಕಾಲಿಕ ಸದಸ್ಯರಾಗಿ ನೇಮಕಗೊಂಡವರು:-**

- ನೀತಿ ಆಯೋಗದ ಪೂರ್ಣಕಾಲಿಕ ಸದಸ್ಯರಾಗಿ ಅರ್ಥಶಾಸ್ತ್ರಜ್ಞರಾದ ಬಿಬೇಕ್ ದೇಬ್ರಾಯ್, ರಮೇಶ್ ಚಾಂದ್ ಮತ್ತು ಡಿ.ಆರ್.ಡಿ.ಒ ನ ಮಾಜಿ ಮುಖ್ಯಸ್ಥ ವಿ.ಕೆ. ಸಾರಸ್ವತ್‌ರವರನ್ನು ನೇಮಕ ಮಾಡಲಾಗಿದೆ.

**ವಿಶೇಷ ಆಹ್ವಾನಿತರಾಗಿ ನೇಮಕಗೊಂಡವರು**

- ನೀತಿ ಆಯೋಗದ ವಿಶೇಷ ಆಹ್ವಾನಿತರಾಗಿ ಕೇಂ ಸಚಿವರಾದ ನಿತಿನ್ ಗಡ್ಕರಿ, ಸ್ಮೃತಿ ಇರಾನಿ ತವಾರ್‌ಚಂದ್ ಗೆಹ್ಲೋಟ್‌ರವರು ನೇಮಕಗೊಂಡಿದ್ದಾ

**ಪದನಿಮಿತ್ತ ಸದಸ್ಯರ (Ex-officio) ನೇಮಕ**

- ನೀತಿ ಆಯೋಗದ ಪದನಿಮಿತ್ತ ಸದಸ್ಯರಾಗಿ ಕೇಂ ಸಚಿವರಾದ ರಾಜನಾಥ್‌ಸಿಂಗ್, ಅರುಣ್‌ಜೇ ಸುರೇಶ್‌ಪ್ರಭು & ರಾಧಾಮೋಹನ್‌ಸಿಂ ನೇಮಕಗೊಂಡಿದ್ದಾರೆ.

**ಸಿ.ಇ.ಓ ನೇಮಕ:-**

- ನೀತಿ ಆಯೋಗದ ಮೊದಲ ಮು ಕಾರ್ಯನಿರ್ವಹಣಾಧಿಕಾರಿ (ಸಿ.ಇ.ಓ) ಆಗಿ ಸಿಂಧು ಕುಲ್ಲೂರು ರವರು ನೇಮಕಗೊಂಡಿದ್ದರು.
- ಪ್ರಸ್ತುತ ನೀತಿ ಆಯೋಗದ ಕಾರ್ಯ ನಿರ್ವಹಣಾಧಿಕಾರಿಯಾಗಿ ಅಮಿತಾಬ್ ಕಾಂತ್ ಅವ ಕಾರ್ಯನಿರ್ವಹಿಸುತ್ತಿದ್ದಾರೆ.
- ಸಹಕಾರಿ ಸಂಯುಕ್ತ ವ್ಯವಸ್ಥೆಯಾಗಿರುವ ನೀ ಆಯೋಗ ಆಡಳಿತ ಮಂಡಳಿಯನ್ನೂ ಹೊಂದಿದೆ.

**ಆಡಳಿತಾತ್ಮಕ ಮಂಡಳಿ**

- ಎಲ್ಲಾ ರಾಜ್ಯದ ಮುಖ್ಯಮಂತ್ರಿಗಳು ಹಾಗ ಕೇಂದ್ರಾಡಳಿತ ಪ್ರದೇಶದ ಲೆಪ್ಟಿನೆಂಟ್ ಗವರ್ನರ್‌ಗಳ ಆಡಳಿತ ಮಂಡಳಿಯು ಒಳಗೊಂಡಿದೆ.
- ದೇಶದ ಆರ್ಥಿಕ ಯೋಜನೆಗಳನ್ನು ರೂಪಿಸುವಲ್ಲಿ ಸ ರಾಜ್ಯಗಳ ಭಾಗವಹಿಸುವಿಕೆಗೆ ಇದು ಅವಕಾಶ ಕಲ್ಪಿಸ

### ನೀತಿ ಆಯೋಗದ ಮೊದಲ ಉಪಾಧ್ಯಕ್ಷ - ಅರವಿಂದ ಪನಗರಿಯಾ:



- ರಾಷ್ಟ್ರೀಯ ಯೋಜನಾ ಆಯೋಗದ ಬದಲಿಗೆ ಅಸ್ತಿತ್ವಕ್ಕೆ ಬಂದಿರುವ "ನೀತಿ ಆಯೋಗ"ಕ್ಕೆ ಮೊದಲ ಉಪಾಧ್ಯಕ್ಷರಾಗಿ **'ಅರವಿಂದ ಪನಗರಿಯಾ'** ರವರು ಜನವರಿ5. 2015 ರಂದು ನೇಮಕಗೊಂಡರು. ನೀತಿ ಆಯೋಗದ ಉಪಧ್ಯಕ್ಷರು **ಕ್ಯಾಬಿನೆಟ್ ದರ್ಜೆಯ ಸ್ಥಾನಮಾನ** ಹೊಂದಿರುತ್ತಾರೆ.

**ಅರವಿಂದ ಪನಗರಿಯಾರವರ ಸೇವಾ ವೃತ್ತಿ:-**

- ಅಮೇರಿಕಾದ ಕೊಲಂಬಿಯಾ ವಿ.ವಿ ಯಲ್ಲಿ ಅರ್ಥಶಾಸ್ತ್ರ ಪ್ರಾಧ್ಯಾಪಕರಾಗಿದ್ದರು. ಇವರು ಏಷಿಯನ್ ಡೆವಲಪ್‌ಮೆಂಟ್ ಬ್ಯಾಂಕ್‌ನ ಆರ್ಥಿಕ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿದ್ದಾರೆ. ಮೇರಿಲ್ಯಾಂಡ್ ವಿಶ್ವವಿದ್ಯಾಲಯದಲ್ಲಿ ಅಂತರಾಷ್ಟ್ರೀಯ ಆರ್ಥಿಕ ಕೇಂದ್ರದ ಸಹ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ.
- ರಾಜಸ್ಥಾನ ಮೂಲದ ಪನಗರಿಯಾರವರು ರಾಜಸ್ಥಾನ ವಿ.ವಿ. ಮತ್ತು ಪ್ರಿನ್ಸ್‌ಟನ್ ವಿ.ವಿ.ಗಳಲ್ಲಿ ಅರ್ಥಶಾಸ್ತ್ರ ಅಧ್ಯಯನ ಮಾಡಿದ್ದರು. ಇವರು India Policy Forum ಎಂಬ ನಿಯತಕಾಲಿಕೆಯ ಸಂಪಾದಕರಾಗಿದ್ದಾರೆ.
- ಇವರು ಬರೆದ ಇತ್ತೀಚಿನ ಗ್ರಂಥ "India: The Emerging Giant" ಈ ಗ್ರಂಥವನ್ನು ಆಕ್ಸ್‌ಫರ್ಡ್ ಪ್ರೆಸ್‌ನವರು ಪ್ರಕಟಿಸಿದ್ದಾರೆ. ಇವರು ಭಾರತದ ದಿನಪತ್ರಿಕೆ **'ದಿ ಎಕಾನಾಮಿಕ್ ಟೈಮ್ಸ್'** ನ ತಿಂಗಳ ಅಂಕಣಕಾರರಾಗಿಯೂ ಕಾರ್ಯನಿರ್ವಹಿಸುತ್ತಿದ್ದಾರೆ. ಇವರು ಫೈನಾನ್ಷಿಯಲ್ ಟೈಮ್ಸ್, ವಾಲ್‌ಸ್ಟ್ರೀಟ್ ಜರ್ನಲ್, ದಿ ಹಿಂದೂ, ಇಂಡಿಯಾ ಟುಡೇ ಮತ್ತು ಬಿಟ್‌ಲುಕ್‌ನಂತಹ ಪತ್ರಿಕೆಗಳಿಗೂ ಅಂಕಣಕಾರರಾಗಿದ್ದಾರೆ.

**ಆರ್ಥಿಕ ಚಿಂತನೆ:-** ಅರವಿಂದ ಪನಗರಿಯಾರವರು ಮುಕ್ತ ಮಾರುಕಟ್ಟೆಯ ಪ್ರತಿಪಾದಕರೆಂದು ಪ್ರಸಿದ್ಧರಾಗಿದ್ದು, ಭಾರತದಲ್ಲಿ ಮುಕ್ತ ಮಾರುಕಟ್ಟೆಯ ಪ್ರಗತಿಯ ಜತೆಗೆ ಬಡಜನತೆಯ ಅನುಕೂಲಕ್ಕಾಗಿ ಸಾಮಾಜಿಕ ವೆಚ್ಚಗಳಕೆಯೂ ಹೆಚ್ಚಳವಾಗಬೇಕಾದ ಅಗತ್ಯತೆ ಇದೆ ಎಂದು ಪ್ರತಿಪಾದಿಸಿದ್ದಾರೆ.

### ಅಮಿತಾಬ್ ಕಾಂತ್ - ನೀತಿ ಆಯೋಗದ ಪ್ರಸ್ತುತ ಸಿ.ಇ.ಒ




- ಅಮಿತಾಬ್ ಕಾಂತ್ ನೀತಿ ಆಯೋಗದ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯಾಗಿ ಸಿಂಧುಶ್ರೀ ಖುಲ್ಲರ್ ಅವರ ನಂತರ ಅವರು 2015 ರಿಂದ ಕಾರ್ಯನಿರ್ವಹಿಸುತ್ತಿದ್ದಾರೆ.
- 1980 ನೇ ಬ್ಯಾಚಿನ ಐ.ಎ.ಎಸ್ ಅಧಿಕಾರಿಯಾಗಿದ್ದು, Branding India - An Incredible Story ನ ಲೇಖಕರಾಗಿದ್ದರು. ಕೇಂದ್ರ ಸರ್ಕಾರದ ಮೇಕ್ ಇನ್ ಇಂಡಿಯಾ, ಸ್ಟಾರ್ಟ್‌ಅಪ್ ಇಂಡಿಯಾ, ಇನ್‌ಕ್ರೆಡಿಬಲ್ ಇಂಡಿಯಾ & ಪ್ರವಾಸೋದ್ಯಮ ಅಭಿವೃದ್ಧಿಗೆ ಸಂಬಂಧಿಸಿದ **ಅತಿಥಿದೇವೋಭವ** (Guest Is God), ಮುಂತಾದ ಪರಿಕಲ್ಪನೆಗಳನ್ನು ರೂಪಿಸುವಲ್ಲಿ ಪಾತ್ರ ವಹಿಸಿದ್ದಾರೆ.
- ಯು.ಎನ್.ಡಿ.ಪಿ ರೂಪಿಸಿದ ಗ್ರಾಮೀಣ ಪ್ರವಾಸೋದ್ಯಮ ಯೋಜನೆಯ ರಾಷ್ಟ್ರೀಯ ಯೋಜನಾ ನಿರ್ದೇಶಕರಾಗಿಯೂ ಕಾರ್ಯನಿರ್ವಹಿಸಿದ್ದಾರೆ. 2016 ಮಾರ್ಚ್ ವರೆಗೂ ಕೈಗಾರಿಕಾ ನೀತಿ & ಉತ್ತೇಜನಾ ಇಲಾಖೆಯ ರಾಷ್ಟ್ರೀಯ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸಿದ್ದು, ಕೈಗಾರಿಕೆ ವಲಯಗಳ ಅಭಿವೃದ್ಧಿಗೆ ಅಗತ್ಯವಾದ ಆರ್ಥಿಕ ನೀತಿಯನ್ನು ರೂಪಿಸುವಲ್ಲಿ ಹಾಗೂ ತಾಂತ್ರಿಕ ಸಹಕಾರದಿಂದ ಕೈಗಾರಿಕಾ ಕ್ಷೇತ್ರದ ಉತ್ಪಾದಕತೆ & ಗುಣಮಟ್ಟ ಸುಧಾರಿಸಲು ಅಗತ್ಯವಾದ ಕಾರ್ಯತಂತ್ರಗಳನ್ನು ರೂಪಿಸಲು ಇವರು ಶ್ರಮಿಸಿದ್ದಾರೆ.
- ವಿಶ್ವ ಆರ್ಥಿಕ ವೇದಿಕೆಯ ಭವಿಷ್ಯದ ಉತ್ಪಾದಕತೆ ವ್ಯವಸ್ಥೆಯ ರೂಪಿಸುವಿಕೆಯ ಮಂಡಳಿಯ ಸದಸ್ಯರಾಗಿ ಹಾಗೂ 21 ನೇ ಶತಮಾನದ ಬದಲಾವಣೆಗೊಂಡ ಆಡಳಿತದ ಕಾರ್ಯತಂತ್ರದ ನಾಯಕತ್ವಕ್ಕಾಗಿ 2016 ರ ಜಾಗತಿಕ ಪ್ರಶಸ್ತಿಯನ್ನು ಪಡೆದಿದ್ದಾರೆ. 2016 ರಲ್ಲಿ ಕೇಂದ್ರ ಸರ್ಕಾರ ಭಾರತದಲ್ಲಿ **ನಗದು ರಹಿತ ಆರ್ಥಿಕತೆ** ಪ್ರಕ್ರಿಯೆಯ ಕಾರ್ಯತಂತ್ರ ರೂಪಿಸಲು ಅಮಿತಾಬ್ ಕಾಂತ್ ಅವರ ನೇತೃತ್ವದಲ್ಲಿ ಸಮಿತಿ ನೇಮಿಸಲಾಗಿತ್ತು.
- ದೆಹಲಿ & ಮುಂಬೈ ಕೈಗಾರಿಕಾಭಿವೃದ್ಧಿ ಕಾರಿಡಾರ್ ನಿಗಮದ ಸಿ.ಇ.ಒ ಆಗಿ ವಿಶ್ವ ಮಟ್ಟದ ಮೂಲ ಸೌಕರ್ಯ ನಿರ್ಮಾಣದ ಮೂಲಕ ಸ್ಮಾರ್ಟ್ ಕೈಗಾರಿಕಾ ನಗರಗಳ ನಿರ್ಮಾಣಕ್ಕೆ ಅಗತ್ಯವಾದ ಹೊಸ ತಂತ್ರಜ್ಞಾನ ಅಳವಡಿಕೆಯೊಂದಿಗೆ ತಯಾರಿಕಾ ಕ್ಷೇತ್ರದ ಉತ್ತೇಜನದೊಂದಿಗೆ ಆರ್ಥಿಕ ಬೆಳವಣಿಗೆ ಸಾಧಿಸಲು ಶ್ರಮಿಸಿದ್ದಾರೆ.

## ನೀತಿ ಆಯೋಗದ ಪ್ರಮುಖ ಉದ್ದೇಶಗಳು

1) ರಾಜ್ಯ ಮತ್ತು ಕೇಂದ್ರ ಸರ್ಕಾರದ ಮಧ್ಯೆ ಆರ್ಥಿಕ ವಿಚಾರದಲ್ಲಿ ಸಹಕಾರ ವೃದ್ಧಿಸುವುದು
2) ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ಪಾಲಿಗೆ ಥಿಂಕ್‌ಟ್ಯಾಂಕ್ ಆಗಿ ಕಾರ್ಯನಿರ್ವಹಣೆ
3) ಪ್ರಮುಖ ನೀತಿಗಳು: ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಪ್ರಾಮುಖ್ಯತೆಯ ಆರ್ಥಿಕ ನೀತಿಗಳಿಗೆ ಸಂಬಂಧಿಸಿ ಸರ್ಕಾರ... ವ್ಯೂಹಾತ್ಮಕ ಮತ್ತು ತಾಂತ್ರಿಕ ಸಲಹೆ ನೀಡುವುದು
4) ದೀರ್ಘಕಾಲಿಕ ಯೋಜನೆ ರೂಪಿಸಿ ನಿರಂತರವಾಗಿ ಮೇಲ್ವಿಚಾರಣೆ ನಡೆಸುವುದು
5) ಗ್ರಾಮ ಮಟ್ಟದಲ್ಲಿ ಪರಿಣಾಮಕಾರಿಯಾಗಿ ಜಾರಿಗೊಳ್ಳುವಂತೆ ಯೋಜನೆ ರೂಪಿಸುವುದು
6) ದೇಶದ ಆರ್ಥಿಕತೆ ಮತ್ತು ಭದ್ರತೆಯನ್ನು ಗಮನದಲ್ಲಿರಿಸಿಕೊಂಡು ಯೋಜನೆಗಳನ್ನು ರೂಪಿಸುವುದು
7) ಇತರೆ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಥಿಂಕ್ ಟ್ಯಾಂಕ್ ಸಂಸ್ಥೆಗಳು ಶೈಕ್ಷಣಿಕ ಮತ್ತು ನೀತಿ ನಿರೂಪಣಾ ಸಂಶೋಧ... ಸಂಸ್ಥೆಗಳ ಜೊತೆಯಲ್ಲಿ ಸಂವಹನ ನಡೆಸುವುದು
8) ಇದು ಎಲ್ಲಾ ರಾಜ್ಯಗಳಿಗೂ ಒಂದೇ ರೀತಿಯ ನೀತಿ ರೂಪಿಸುವುದಿಲ್ಲ. ಅಂದರೆ ಹೊಸ ಸಂಸ್ಥೆಯು ದೇಶದ ವಿ... ಮತ್ತು ಪ್ರತ್ಯೇಕತೆಯನ್ನು ಗಮನದಲ್ಲಿಟ್ಟುಕೊಂಡು ಅದಕ್ಕೆ ತಕ್ಕಂತೆ ನೀತಿಗಳನ್ನು ರಚಿಸಲು ಸಲಹೆ ಸೂಚನೆ ನೀಡುತ್ತದೆ.

## ನೀತಿ ಆಯೋಗದ ಆಡಳಿತ ಮಂಡಳಿಯ ಸಭೆಗಳು

- ನೀತಿ ಆಯೋಗದ ಆಡಳಿತ ಮಂಡಳಿಯ ಮೊದಲ ಸಭೆಯು **2015ರ ಫೆಬ್ರವರಿ 8**ರಂದು ಮತ್ತು ಎರಡನೇ ಸಭೆಯು **2015ರ ಜುಲೈ 15**ರಂದು ನಡೆಯಿತು.
- ನೀತಿ ಆಯೋಗದ ಆಡಳಿತ ಮಂಡಳಿಯ ಮೂರನೇ ಸಭೆಯು **2017ರ ಏಪ್ರಿಲ್ 23** ರಂದು ನವದೆಹಲಿಯ ರಾಷ್ಟ್ರಪತಿ ಭವನದಲ್ಲಿ **ಪ್ರಧಾನಮಂತ್ರಿ ನರೇಂದ್ರ ಮೋದಿ** ಅವರ ಅಧ್ಯಕ್ಷತೆಯಲ್ಲಿ ನಡೆಯಿತು.
- ನೀತಿ ಆಯೋಗದ ಉಪಾಧ್ಯಕ್ಷರಾದ **ಡಾ. ಅರವಿಂದ್ ಪನಗಾರಿಯಾ** ಅವರು **15 ವರ್ಷದ ಮುನ್ನೋಟ ದಾಖಲೆ**ಯನ್ನು ಆಧರಿಸಿ ಭಾರತ ದೇಶವನ್ನು ಅಭಿವೃದ್ಧಿ ಪಡಿಸುವ ಬಗ್ಗೆ ನೀಲನಕ್ಷೆಯನ್ನು ಪ್ರಸ್ತಾಪಿಸಿದರು.
- ಪಶ್ಚಿಮ ಬಂಗಾಳದ ಮುಖ್ಯಮಂತ್ರಿ **ಮಮತಾ ಬ್ಯಾನರ್ಜಿ**, ಮೇಘಾಲಯದ ಮುಖ್ಯಮಂತ್ರಿ **ಮುಕುಲ್ ಸಂಗ್ಮಾ**, **ದೆಹಲಿಯ ಮುಖ್ಯಮಂತ್ರಿ ಅರವಿಂದ್ ಕೇಜ್ರಿವಾಲ್** ಹೊರತು ಪಡಿಸಿ ಎಲ್ಲಾ ರಾಜ್ಯಗಳ ಮುಖ್ಯಮಂತ್ರಿಗಳು ಸಭೆಯಲ್ಲಿ ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಮಧ್ಯಪ್ರದೇಶದ ಮುಖ್ಯಮಂತ್ರಿ **ಶಿವರಾಜ್ ಸಿಂಗ್ ಚೌಹಾಣ್** ಅವರು ರೈತರ ಆದಾಯವನ್ನು ದ್ವಿಗುಣಗೊಳಿಸುವ ಬಗ್ಗೆ ಚರ್ಚಿಸಿದರು. **ನವಭಾರತ ನಿರ್ಮಾಣಕ್ಕಾಗಿ** ರಾಜ್ಯಗಳು **ಟೀಂ ಇಂಡಿಯಾ** ಪರಿಕಲ್ಪನೆಯೊಂದಿಗೆ ಕೇಂದ್ರ ಸರ್ಕಾರದ ಜತೆಗೆ ಸಹಕರಿಸಬೇಕೆಂದು ನೀತಿ ಆಯೋಗದ ಆಡಳಿತ ಮಂಡಳಿಯ ಸಮಾರೋಪ ಭಾಷಣದಲ್ಲಿ ನರೇಂದ್ರ ಮೋದಿ ಅವರು ಮನವಿ ಮಾಡಿದರು.
- **ಏಕಕಾಲದಲ್ಲಿ ಚುನಾವಣೆ:-** **"ಒಂದೇ ದೇಶ, ಒಂದು ಚುನಾವಣೆ"** ಎಂಬ ನೀತಿಯಡಿಯಲ್ಲಿ ಏಕಕಾಲಕ್ಕೆ ಸಾರ್ವತ್ರಿಕ ಚುನಾವಣೆ ಅಂದರೆ ಸಂಸತ್ತು ಹಾಗೂ ಎಲ್ಲಾ ರಾಜ್ಯಗಳ ವಿಧಾನಸಭೆ, ಸ್ಥಳೀಯ ಸಂಸ್ಥೆಗಳ ಚುನಾವಣೆ ನಡೆಸುವ ಬಗ್ಗೆ ಚರ್ಚಿಸಲಾಯಿತು.
- **ಹಣಕಾಸು ವರ್ಷದ ಮರು ನಿಗದಿ:-** ಹಣಕಾ... ವರ್ಷವನ್ನು **ಜನವರಿ** ಯಿಂದ **ಡಿಸೆಂಬರ್**ವ... ಮರು ನಿಗದಿಗೆ ಸಂಬಂಧಿಸಿದಂತೆ ಚರ್ಚಿಸಲಾಯಿ... ಪ್ರಸ್ತುತವಾಗಿ ಹಣಕಾಸು ವರ್ಷವು **ಏಪ್ರಿಲ್ 1** ರಿಂದ **ಮಾರ್ಚ್ 31** ಇದ್ದು, ಇದರ ಬದಲಾವಣ... ನೀತಿ ಆಯೋಗದ ಆಡಳಿತ ಮಂಡಳಿ ಸಭೆಯ... ಚರ್ಚಿಸಲಾಯಿತು. ಇದಕ್ಕೆ ಸಂಬಂಧಿಸಿದಂತೆ **ಶಂಕ... ಆಚಾರ್ಯ ಸಮಿತಿ**ಯು ಶಿಫಾರಸ್ಸುಗಳನ್ನು ನೀಡಿದೆ.
- **ಜಿಎಸ್‌ಟಿಗೆ ಸಹಕಾರ:-** 2017ರ ಜುಲೈ ... ರಿಂದ **"ಒಂದು ದೇಶ, ಒಂದು ತೆರಿಗೆ"** ಎ... ಪರಿಕಲ್ಪನೆಯೊಂದಿಗೆ ಜಾರಿಗೆ ತರುತ್ತಿರುವ **4 ಹಂತ... ತೆರಿಗೆ ರಚನೆ (ಶೇ 5, ಶೇ 12, ಶೇ 18, ಶೇ 2...** ಹೊಂದಿರುವ ಜಿಎಸ್‌ಟಿಯನ್ನು ಜಾರಿಗೆ ತ... ಎಲ್ಲಾ ರಾಜ್ಯಗಳು ಸಹಕರಿಸಿ ದೇಶದಲ್ಲಿ ಏಕರೂಪ... ಪರೋಕ್ಷ ತೆರಿಗೆ ವಿಧಾನದ ಅನುಷ್ಠಾನವ... ಯಶಸ್ವಿಗೊಳಿಸಬೇಕೆಂದು ಪ್ರಧಾನಿ ಕೋರಿದ...
- **ಗವರ್ನಮೆಂಟ್ ಇ-ಮಾರ್ಕೆಟ್ ಪ್ಲೇಸ್ (GE...) ವೇದಿಕೆ ಬಳಕೆ:-** ಸರ್ಕಾರಿ ಕಾಮಗಾರಿಗ... ಭ್ರಷ್ಟಾಚಾರ ತಡೆದು, ಪಾರದರ್ಶಕತೆ ಕಾಪಾಡ... ಸರ್ಕಾರಿ ಖರೀದಿಯಲ್ಲಿ ರಾಜ್ಯಗಳು ಗವರ್ನಮೆ... ಇ-ಮಾರ್ಕೆಟ್ ಪ್ಲೇಸ್ ವೇದಿಕೆಯನ್ನು ... ಮಾಡುವುದರ ಬಗ್ಗೆ ಚರ್ಚಿಸಲಾಯಿತು.
- **ಜಮ್ಮು ಕಾಶ್ಮೀರದ ವಿದ್ಯಾರ್ಥಿಗಳ ರಕ್ಷಣೆ ಬ...** ತಮ್ಮ ರಾಜ್ಯದಲ್ಲಿ ಜಮ್ಮು ಕಾಶ್ಮೀರ ವಿದ್ಯಾರ್ಥಿ... ರಕ್ಷಣೆಗೆ ಸರ್ಕಾರಗಳು ಕ್ರಮ ಕೈಗೊಳ್ಳಬೇಕೆಂ... ಪ್ರಧಾನಿ ಅವರು ಮುಖ್ಯಮಂತ್ರಿಗಳಿಗೆ ಮನ... ಮಾಡಿದರು.

✦ **ಭೀಮ್ ಮತ್ತು ಆಧಾರ್ ತಂತ್ರಜ್ಞಾನ ಬಳಕೆ:-** ಭೀಮ್ ಮತ್ತು ಆಧಾರ್ ತಂತ್ರಜ್ಞಾನ ಬಳಸುವುದರಿಂದ ರಾಜ್ಯಗಳಿಗೆ ಹೆಚ್ಚು ಉಳಿತಾಯ ಆಗಲಿದೆ ಎಂಬುದನ್ನು ಪ್ರಧಾನಿ ಮನವರಿಕೆ ಮಾಡಿದರು.

✦ **ಮೂಲಸೌಕರ್ಯಕ್ಕೆ ಒತ್ತು ನೀಡುವ ಬಗ್ಗೆ ಚರ್ಚೆ:-** ತ್ವರಿತ ಆರ್ಥಿಕ ಅಭಿವೃದ್ಧಿಗಾಗಿ ಬಂಡವಾಳ ವೆಚ್ಚ ಮತ್ತು ಮೂಲ ಸೌಕರ್ಯ ಸೃಷ್ಟಿಗೆ ರಾಜ್ಯಗಳು ಮತ್ತಷ್ಟು ವೇಗ ನೀಡಬೇಕೆಂದು ತಿಳಿಸಿದ್ದಾರೆ. ದೇಶದಲ್ಲಿನ ಮೂಲಭೂತ ಸೌಕರ್ಯ ಕೊರತೆಯು ಆರ್ಥಿಕ ಅಭಿವೃದ್ಧಿಗೆ ಕೊರತೆಯಾಗಿದೆ. ರಸ್ತೆಗಳು, ಬಂದರು, ವಿದ್ಯುತ್ ಮತ್ತು ರೈಲುಗಳಂತಹ ಅಗತ್ಯ ಮೂಲ ಸೌಕರ್ಯಕ್ಕೆ ಹೆಚ್ಚು ವೆಚ್ಚ ಮಾಡುವುದರಿಂದ ಪ್ರಗತಿಯ ವೇಗ ಹೆಚ್ಚಾಗಲಿದೆ.

**ಭಾರತ - 2022ಕ್ಕೆ ಗುರಿಗಳನ್ನು ನಿರ್ಧರಿಸಿ:-**

✦ 75ನೇ ಸ್ವಾತಂತ್ರ್ಯ ವರ್ಷವಾದ **2022**ರಲ್ಲಿ ಭಾರತವು ಹೇಗಿರಬೇಕು ಮತ್ತು ಅದಕ್ಕಾಗಿ ನಿಗದಿ ಪಡಿಸಿರುವ ಗುರಿಗಳನ್ನು ಸಾಧಿಸಲು ಎಲ್ಲರೂ ಒಟ್ಟಾಗಿ ಶ್ರಮಿಸಬೇಕೆಂದು ಪ್ರಧಾನಿ ಕರೆ ನೀಡಿದರು.

**ಸುದೀರ್ಘ ಮುನ್ನೋಟ:-**

✦ ನವಭಾರತ ನಿರ್ಮಾಣಕ್ಕಾಗಿ 15 **ವರ್ಷಗಳ ಸುದೀರ್ಘ ಮುನ್ನೋಟ**ವನ್ನು ನೀತಿ ಆಯೋಗವು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಮುಂದಿಟ್ಟು ಸಭೆಯಲ್ಲಿ ಚರ್ಚಿಸಲಾಯಿತು.

✦ ದೇಶದ ಅಭಿವೃದ್ಧಿಗಾಗಿ ಮುಂದಿನ **7 ವರ್ಷದ ಅವಧಿಗೆ ಸರ್ಕಾರದ ಕಾರ್ಯತಂತ್ರ ಮತ್ತು 3 ವರ್ಷಗಳ ಅನುಷ್ಠಾನ ಕಾರ್ಯಸೂಚಿಯ** ಬಗ್ಗೆಯೂ ಸಭೆಯಲ್ಲಿ ಚರ್ಚಿಸಲಾಯಿತು.

✦ ದೇಶದ ಚಿಂತಕರ ಚಾವಡಿಯು ಸುದೀರ್ಘ, ಮಧ್ಯಮ ಮತ್ತು ಅಲ್ಪಾವಧಿಯ ಕ್ರಿಯಾ ಯೋಜನೆಯಿಂದ ಎಲ್ಲಾ ರಾಜ್ಯಗಳಿಗೆ ಅನುಕೂಲವಾಗಲಿದೆ ಎಂದು ನರೇಂದ್ರ ಮೋದಿ ಅವರು ಸಭೆಯಲ್ಲಿ ಪ್ರತಿಪಾದಿಸಿದರು.

**300 ಅಂಶಗಳ ಕ್ರಿಯಾ ಯೋಜನೆ:-**

✦ ದೇಶದ ಆರ್ಥಿಕ ಅಭಿವೃದ್ಧಿಗೆ ಮತ್ತಷ್ಟು ಉತ್ತೇಜನ ನೀಡುವ ಉದ್ದೇಶದಿಂದ ನೀತಿ ಆಯೋಗವು **300 ಅಂಶಗಳ ಕ್ರಿಯಾ ಯೋಜನೆ**ಯನ್ನು ಸಭೆಯ ಮುಂದಿಟ್ಟಿದೆ. ಈ ಅಂಶಗಳನ್ನು ನೀತಿ ಆಯೋಗದ ಉಪಾಧ್ಯಕ್ಷರಾದ **ಅರವಿಂದ ಪನಗಾರಿಯಾ** ಅವರು ಮಂಡಿಸಿದ್ದು, ಇದು 15 ವರ್ಷಗಳ ಸುದೀರ್ಘ ಮುನ್ನೋಟದ ಒಂದು ಭಾಗವಾಗಿತ್ತು.



## ರಾಷ್ಟ್ರೀಯ ಅಭಿವೃದ್ಧಿ ಕಾರ್ಯತಂತ್ರ / ನವಭಾರತ 2022 NDA:- National Development Agenda

➢ 2022 ರಲ್ಲಿ ಭಾರತ 75 ನೇ ಸ್ವಾತಂತ್ರ್ಯೋತ್ಸವವನ್ನು ಆಚರಿಸುವ ಹಿನ್ನಲೆಯಲ್ಲಿ ಮಾನ್ಯ ಪ್ರಧಾನಮಂತ್ರಿ ನರೇಂದ್ರ ಮೋದಿ ಅವರ ಅಧ್ಯಕ್ಷತೆಯ ಎಲ್ಲರ ಸಹಭಾಗಿತ್ವದ ಸಂಸ್ಥೆ ಎಂದೇ ಬಿಂಬಿತವಾದ ನೀತಿ ಆಯೋಗದ ಚರ್ಚೆಯಂತೆ ಬದಲಾಗುತ್ತಿರುವ ಜಾಗತಿಕ ಪ್ರವೃತ್ತಿಗಳಿಗೆ ದೇಶವನ್ನು ತಯಾರು ಮಾಡಲು ಅನುಸರಿಸಬೇಕಾದ ಮಾರ್ಗಗಳ ಬಗ್ಗೆ ಅಭಿವೃದ್ಧಿಯ ಮುನ್ನೋಟ ದಿಕ್ಸೂಚಿಯಂತಿದೆ.

➢ ಚಿಂತಕರ ಚಾವಡಿ ಎಂದು ಕರೆಯುವ ನೀತಿ ಆಯೋಗವು 15 ವರ್ಷಗಳ ಸುದೀರ್ಘ ಮುನ್ನೋಟ, 7 ವರ್ಷಗಳ ಮಧ್ಯಮಾವಧಿ ಕಾರ್ಯತಂತ್ರ ಹಾಗೂ 3 ವರ್ಷಗಳ ಅನುಷ್ಠಾನ ಕಾರ್ಯಸೂಚಿಯನ್ನು ಹೊಂದಿದ್ದು, ಆರ್ಥಿಕಾಭಿವೃದ್ಧಿಗೆ ಉತ್ತೇಜನ ನೀಡಲು ಸುದೀರ್ಘ ಮುನ್ನೋಟದ ಭಾಗವಾಗಿ ದೇಶದ ಎಲ್ಲಾ ರಾಜ್ಯಗಳೊಂದಿಗೆ ಸಮಾಲೋಚಿಸಿ 300 ಅಂಶಗಳ ಕ್ರಿಯಾ ಯೋಜನೆಯನ್ನು 208 ಪುಟಗಳಲ್ಲಿ ಸಿದ್ಧಪಡಿಸುವ ಜವಾಬ್ದಾರಿ ಉಪಾಧ್ಯಕ್ಷರಾದ ಅರವಿಂದ ಪನಗಾರಿಯಾ ಅವರು ನಿರ್ವಹಿಸುತ್ತಿದ್ದಾರೆ.

**15 ವರ್ಷಗಳ ಮುನ್ನೋಟ ದಾಖಲೆ–ವಿಷನ್ ಡಾಕ್ಯುಮೆಂಟ್**

↓ **ಅನುಷ್ಠಾನಕ್ಕಾಗಿ (ಅನುಷ್ಠಾನ 2017–18ರಿಂದ)**

**ಏಳು ವರ್ಷಗಳ ಕಾರ್ಯತಂತ್ರ (National Development Agenda)(2017–18 ರಿಂದ 2023–24 ರವರೆಗೆ)**

↓

**ಪ್ರತಿ ಮೂರು ವರ್ಷಕ್ಕೆ ಪುನರಾವರ್ಶೆ**

ಪಂಚವಾರ್ಷಿಕ ಯೋಜನೆ ಬದಲಿಗೆ ರಾಷ್ಟ್ರೀಯ ಅಭಿವೃದ್ಧಿ ಕಾರ್ಯತಂತ್ರ (National Development Agenda-NDA)ಎಂದು ಹೆಸರಿಡಲಾಗಿದೆ.

ನವ ಭಾರತಕ್ಕಾಗಿ-ನೀತಿ ಆಯೋಗ

➢ ಪಂಚವಾರ್ಷಿಕ ಯೋಜನೆಗಳಿಗೆ ಬದಲಾಗಿ 15 ವರ್ಷಗಳ ಮುನ್ನೋಟ ದಾಖಲೆ. (Vision Documnent-2017-18ರಿಂದ ಜಾರಿಯಾಗಿದ್ದು, 2023-24 ರವರೆಗೆ ಕಾರ್ಯಾಚರಣೆಯಲ್ಲಿರುತ್ತದೆ.

➢ **2017 ಏಪ್ರಿಲ್ 23** ರಂದು ನವದೆಹಲಿಯಲ್ಲಿ ನಡೆದ ನೀತಿ ಆಯೋಗದ ನಿರ್ವಹಣಾ ಮಂಡಳಿಯ 3 ನೇ ಸಭೆಯಲ್ಲಿ ಈ ಮುನ್ನೋಟ ದಾಖಲೆಯನ್ನು ಪ್ರಸ್ತಾಪಿಸಲಾಗಿದೆ.

**ಎನ್.ಡಿ.ಎ ಪ್ರಮುಖಾಂಶಗಳು**

➢ 2017-18 ರ ಆರ್ಥಿಕ ವರ್ಷದಿಂದ ಮುಂದಿನ 3 ವಿತ್ತೀಯ ವರ್ಷಗಳಲ್ಲಿ ದೇಶದ ಜಿ.ಡಿ.ಪಿ ಬೆಳವಣಿಗೆ ದರವನ್ನು ಶೇ 8 ರಷ್ಟು ಸಾಧಿಸುವುದು. ಕಾರ್ಪೋರೇಟ್ ತೆರಿಗೆಯನ್ನು ಶೇ 34 ರಿಂದ 25% ಕ್ಕೆ ತಗ್ಗಿಸುವುದು.

➢ 2022 ರ ವೇಳಗೆ ರೈತರ ಆದಾಯವನ್ನು ದ್ವಿಗುಣಗೊಳಿಸುವುದು, ಕೃಷಿ ಉತ್ಪನ್ನ ಮಾರುಕಟ್ಟೆ ಕಾಯ್ದೆ (ಎಪಿಎಂಸಿ) ಸುಧಾರಣೆ ತರುವುದು.

➢ ಇ-ಆಡಳಿತದ ಮೂಲಕ ನಾಗರೀಕ ಸೇವೆಗಳನ್ನು ಪೂರೈಸುವುದು.

➢ ಸುಸ್ಥಿರ ಅಭಿವೃದ್ಧಿ.

➢ ಸಾಮಾಜಿಕ ಅಭಿವೃದ್ಧಿ.

➢ ಮೂಲಸೌಕರ್ಯ.

➢ ವಾಣಿಜ್ಯ, ಶಿಕ್ಷಣ, ಆರೋಗ್ಯ ವಲಯಗಳ ಅಭಿವೃದ್ಧಿ ಜತೆಗೆ ಆಂತರಿಕ ಭದ್ರತೆ, ರಕ್ಷಣೆ, ವಿದೇಶಾಂಗ ವ್ಯವಹಾರ, ನಗದು ರಹಿತ ಅರ್ಥ ವ್ಯವಸ್ಥೆಯ ನಿರ್ಮಾಣ.

➢ ಭೀಮ್ & ಆಧಾರ್ ತಂತ್ರಜ್ಞಾನಗಳ ಹೆಚ್ಚಿನ ಬಳಕೆಗೆ ಉತ್ತೇಜನ.

➢ ಸರ್ಕಾರಿ ಖರೀದಿಯಲ್ಲಿ ಪಾರದರ್ಶಕತೆ ಹೆಚ್ಚಿಸಲು ಇ-ಮಾರ್ಕೆಟ್ ಪ್ಲಸ್ ಪೋರ್ಟಲ್ ಬಳಕೆ.

➢ ಜನವರಿಯಿಂದ ಡಿಸೆಂಬರ್ ವರೆಗೆ ಆರ್ಥಿಕ ವರ್ಷವನ್ನಾಗಿ ಪರಿಗಣಿಸುವ ಉದ್ದೇಶ, ಮುಂತಾದ ಅಭಿವೃದ್ಧಿಯ ಉದ್ದೇಶಗಳನ್ನು ಒಳಗೊಂಡಿರುತ್ತದೆ.

## ರಾಷ್ಟ್ರೀಯ ಅಭಿವೃದ್ಧಿ ಕಾರ್ಯಸೂಚಿಯ ಬಗ್ಗೆ ಮಾಹಿತಿ

**ದೀರ್ಘಾವಧಿ ಮುನ್ನೋಟ (15- Years Vision Document):-**

✦ 2017-18ರಿಂದ 2031-32 ಅವಧಿಯ 15 ವರ್ಷಗಳ ದೀರ್ಘಾವಧಿ ಮುನ್ನೋಟ ಆಗಿದ್ದು, ರಾಷ್ಟ್ರೀಯ ಸಾಮಾಜಿಕ ಗುರಿ ಮತ್ತು ಅಂತರಾಷ್ಟ್ರೀಯ ಸುಸ್ಥಿರ ಅಭಿವೃದ್ಧಿ ಗುರಿಗಳನ್ನು ಹೊಂದಿದೆ. **ಆಂತರಿಕ ಸುರಕ್ಷೆ, ರಕ್ಷಣೆ** ಇತ್ಯಾದಿಗಳನ್ನು ಒಳಗೊಂಡ ಸಾಂಪ್ರದಾಯಿಕ ಕಾರ್ಯ ಸೂಚಿ ಮೀರಿ ವಿಸ್ತರಿಸಲ್ಪಟ್ಟ ಯೋಜನೆಯಾಗಿದೆ.

**ಮಧ್ಯಮಾವಧಿ ಕಾರ್ಯತಂತ್ರ (7 Years Strategy)**

✦ 2017-18 ರಿಂದ 2023-24 ರ ಅವಧಿಯ 7 ವರ್ಷಗಳ ಅವಧಿಯ ಮಧ್ಯಮಾವಧಿ ಕಾರ್ಯತಂತ್ರದ ವಿಸ್ತೃತ ಮುನ್ನೋಟಗಳನ್ನು ಅನುಷ್ಠಾನಗೊಳಿಸುವುದಾಗಿದೆ.

**ಕ್ರಿಯಾ ಯೋಜನೆ (3 Years Action Plan):-**

✦ 2017-18 ರಿಂದ 2019-20 ರ ಅವಧಿಯ 3 ವರ್ಷಗಳ ಅಲ್ಪಾವಧಿಯ ಕ್ರಿಯಾ ಯೋಜನೆಯಾಗಿದ್ದು, ಹಣಕಾಸು ಸಂಪನ್ಮೂಲಗಳನ್ನು ಗ್ರಹಿಸಿ ಒಗ್ಗೂಡಿಸುವುದು 2019ರ ವೇಳೆಗೆ ನೀತಿಯನ್ನು ಕಾರ್ಯರೂಪಕ್ಕೆ ಇಳಿಸಲಾಗುವುದು.

**ರಾಷ್ಟ್ರೀಯ ಅಭಿವೃದ್ಧಿ ಕಾರ್ಯ ಸೂಚಿಯ ಅಂಶಗಳು**

✦ ಉತ್ತಮ ಆಡಳಿತ ನಿರ್ವಹಣೆ ಹಾಗೂ ಸಮಗ್ರ ಮತ್ತು ಸಮದರ್ಶಿತ್ವದ ಅಭಿವೃದ್ಧಿಯಲ್ಲಿ ಉತ್ತಮ ಅಭ್ಯಾಸ ಕಾಯ್ದುಕೊಳ್ಳುವುದು.

✦ ಅಭಿವೃದ್ಧಿ ಕಾರ್ಯಸೂಚಿಯನ್ನು ತ್ವರಿತಗೊಳಿಸುವ ವೇಳೆ ಉಂಟಾಗಬಹುದಾದ ಅಂತರ್ ಇಲಾಖೆ ಮತ್ತು ಅಂತರ್ ಕ್ಷೇತ್ರಗಳ ಸಮಸ್ಯೆಗಳಿಗೆ ಪರಿಹಾರ ಮಾದರಿಗಳನ್ನು ಒದಗಿಸುವುದು.

✦ ನೀತಿ ಆಯೋಗ ಮತ್ತು ಸರ್ಕಾರ ಉಲ್ಲೇಖಿಸುವ ಇತರೆ ಗುರಿಗಳನ್ನು ಈಡೇರಿಸುವುದು.

## SATH - Sustainable Action for Transforming Human Capital

ನೀತಿ ಆಯೋಗವು ಮೆಕೆನ್ಸಿ ಕಂಪನಿ & ಐ.ಪಿ.ಇ ಗ್ಲೋಬಲ್ ಕನ್ಸೋರ್ಟಿಯಂ ಸಹಭಾಗಿತ್ವದಲ್ಲಿ 2017 ಜೂನ್ 1 ರಂದು ಸಹಕಾರಿ ಒಕ್ಕೂಟ ತತ್ವದಡಿಯಲ್ಲಿ ಈ ಯೋಜನೆಯನ್ನು ರೂಪಿಸಿದೆ. ಆರೋಗ್ಯ ವಲಯದ ಸುಧಾರಣೆಗಳು, ರಾಜ್ಯಗಳ ಮಂಡನೆ, ಅವುಗಳ ಬಗೆಗಿನ ಹಿತಾಸಕ್ತಿಯ ಅಭಿವ್ಯಕ್ತಿ ಈ ಮೂರು ಕ್ಷೇತ್ರಗಳಿಗೆ ಸಂಬಂಧಿಸಿದ 3 ಮಾದರಿ ರಾಜ್ಯಗಳನ್ನು ಐ.ಎಂ.ಆರ್, ಎಂ.ಎಂ.ಆರ್, ವೈದ್ಯರು & ದಾದಿಯರ ಸಾಂದ್ರತೆ ಮುಂತಾದ ಮಾನದಂಡಗಳ ಮೇಲೆ ಆಯ್ಕೆ ಮಾಡುವ ಉದ್ದೇಶ ಹೊಂದಿದೆ. ಇದಕ್ಕಾಗಿ 16 ರಾಜ್ಯಗಳು ಆಸಕ್ತಿಯನ್ನು ತೋರಿಸಿದ್ದು, 14 ರಾಜ್ಯಗಳು ಯೋಜನಾ ಪ್ರಸ್ತಾಪಗಳನ್ನು ಸಲ್ಲಿಸಿದ್ದು, ಆಯೋಗವು 5 ರಾಜ್ಯಗಳನ್ನು ಆಯ್ಕೆ ಮಾಡಿದೆ. ಆದರೆ ಮುಂದಿನ ದಿನಗಳಲ್ಲಿ ಮಾದರಿ 3 ರಾಜ್ಯಗಳನ್ನು ಆಯ್ಕೆ ಮಾಡಲಿದೆ.

## ಪ್ರಧಾನಮಂತ್ರಿ ಆರ್ಥಿಕ ಸಲಹೆಗಾರರ ಮಂಡಳಿ

### (PMEAC-Prime minister`s Economic Advisory Council)

- ಸಂವಿಧಾನಾತ್ಮಕವಲ್ಲದ, ಶಾಶ್ವತವಲ್ಲದ & ಸ್ವತಂತ್ರ ಅಂಗಸಂಸ್ಥೆ.
- ದೇಶದ ಆರ್ಥಿಕತೆಯ ಆರ್ಥಿಕ ನೀತಿಗಳನ್ನು ರೂಪಿಸಲು ಸಹಾಯ ಮಾಡುವ ಸಂಸ್ಥೆ.
- 2004 ಡಿಸೆಂಬರ್ 29 ರಂದು ಸುರೇಶ್ ತೆಂಡೂಲ್ಕರ್ ಈ ಮಂಡಳಿಯ ಅಧ್ಯಕ್ಷರಾಗಿ ನೇಮಕಗೊಂಡಿದ್ದು, 2009 ಮೇ 21 ರಂದು ರಾಜೀನಾಮೆ ನೀಡಿದರು.
- 2014 ಮೇ 19 ರವರೆಗೆ **ಡಾ. ಸಿ. ರಂಗರಾಜನ್** ಈ ಮಂಡಳಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿ, ರಾಜೀನಾಮೆ ಸಲ್ಲಿಸಿದ ನಂತರ ಪ್ರಸ್ತುತ ಈ ಹುದ್ದೆ ಖಾಲಿ ಉಳಿದಿದೆ.
- ಅಟಲ್ ಬಿಹಾರಿ ವಾಜಪೇಯಿ ತಮ್ಮ ಅಧಿಕಾರಾವಧಿಯಲ್ಲಿ ಪ್ರಧಾನ ಮಂತ್ರಿಯಾಗಿಯೂ & ಈ ಮಂಡಳಿಯ ಅಧ್ಯಕ್ಷರಾಗಿಯೂ ಕಾರ್ಯನಿರ್ವಹಿಸಿದ ಏಕೈಕ ವ್ಯಕ್ತಿ.
- ಈ ಮಂಡಳಿಯ ನೋಡಲ್ ಏಜೆನ್ಸಿಯಾಗಿ ಭಾರತದ ಯೋಜನಾ ಆಯೋಗವನ್ನು ಗುರುತಿಸಲಾಗುತ್ತಿತ್ತು.

**ಕಾರ್ಯಗಳು:-**

- ಆರ್ಥಿಕ ಸಂಗತಿಗಳನ್ನು ವಿಶ್ಲೇಷಿಸುವುದು.
- ಭಾರತದ ಆರ್ಥಿಕತೆಯ ಪ್ರಸ್ತುತ ಸಮಗ್ರ ಆರ್ಥಿಕ ಸ್ಥಿತಿಗತಿಗಳ ಬಗ್ಗೆ ಪರಾಮರ್ಶಿಸವುದು.
- ಸಮಗ್ರ ಆರ್ಥಿಕ ಅಭಿವೃದ್ಧಿ & ಆರ್ಥಿಕ ನೀತಿಗಳಿಗೆ ಸಂಬಂಧಿಸಿದ ನಿಯತಕಾಲಿಕವಾಗಿ ವರದಿ ಸಲ್ಲಿಕೆ.
- ಪ್ರಧಾನಮಂತ್ರಿ ನಿರ್ದೇಶಿಸುವ ಆರ್ಥಿಕ ಜವಾಬ್ದಾರಿಗಳನ್ನು ನಿರ್ವಹಿಸುವುದು.
- ಆರ್ಥಿಕ ಅಭಿವೃದ್ಧಿಗೆ ಸಂಬಂಧಿಸಿದ ಮಾಸಿಕ ವರದಿಯನ್ನು ಸಿದ್ಧಪಡಿಸುವುದು.
- ದೇಶದ ನಿರೀಕ್ಷಿತ ಬೆಳವಣಿಗೆ ದರವನ್ನು ಸಾಧಿಸಲು ಅಗತ್ಯವಿರುವ ಸಮಗ್ರ ಆರ್ಥಿಕ ನೀತಿಗಳನ್ನು ರೂಪಿಸುವುದು.
- ಎಕನಾಮಿಕ್ ಔಟ್‌ಲುಕ್ & ರಿವ್ಯು ಆಫ್ ದ ಎಕಾನಮಿ ಆಫ್ ಇಂಡಿಯಾ ಎಂಬ ವರದಿಗಳನ್ನು ಪ್ರಕಟಪಡಿಸುವುದು.
- Review of THe Economy - 2010–11 ಇದು ಈ ಆರ್ಥಿಕ ಮಂಡಳಿಯ ಕೊನೆಯ ಸಮೀಕ್ಷೆಯಾಗಿದೆ.

## ಭಾರತ ಸರ್ಕಾರದ ಮುಖ್ಯ ಆರ್ಥಿಕ ಸಲಹೆಗಾರರು

### (CEA-Chief Economic Advisor to the Govt. of India):-

- ಕೇಂದ್ರ ಹಣಕಾಸು ಸಚಿವಾಲಯದಿಂದ ನೇಮಕ.
- ಭಾರತದ ಕೇಂದ್ರ ಸರ್ಕಾರಕ್ಕೆ ಆರ್ಥಿಕ ಸಲಹೆಗಾರರು ಇವರಾಗಿದ್ದು, ಐ.ಇ.ಎಸ್ ಕೇಡರ್ ನ Ex-Officio ಅಧಿಕಾರಿಗಳಾಗಿರುತ್ತಾರೆ.
- ಕೇಂದ್ರ ಹಣಕಾಸು ಸಚಿವರ ನೇರ ನಿಯಂತ್ರಣದಲ್ಲಿರುತ್ತಾರೆ.
- ಜೆ.ಜೆ. ಅಂಜಾರಿಯಾ (1956–61):– ಮೊದಲ ಮುಖ್ಯ ಆರ್ಥಿಕ ಸಲಹೆಗಾರರಾಗಿದ್ದರು.
- **ಈ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಿದ ಪ್ರಮುಖರೆಂದರೆ -**
- ಮನಮೋಹನ್ ಸಿಂಗ್ (1972–76) – 5ನೇ ಮುಖ್ಯ ಆರ್ಥಿಕ ಸಲಹೆಗಾರರಾಗಿ ಕಾರ್ಯನಿರ್ವಹಿಸಿದ್ದಾರೆ.
- ಕೌಶಿಕ್ ಬಸು (2009–12) – 14ನೇ ಮುಖ್ಯ ಆರ್ಥಿಕ ಸಲಹೆಗಾರರಾಗಿ ಕಾರ್ಯನಿರ್ವಹಿಸಿದ್ದಾರೆ.
- ರಘುರಾಂ ಜಿ. ರಾಜನ್ (2012–13) – 15ನೇ ಮುಖ್ಯ ಆರ್ಥಿಕ ಸಲಹೆಗಾರರಾಗಿ ಕಾರ್ಯನಿರ್ವಹಿಸಿದ್ದಾರೆ.
- ಅರವಿಂದ ಸುಬ್ರಮಣ್ಯನ್ (2014 ಅಕ್ಟೋಬರ್ 16 ರಿಂದ) – 16ನೇ ಭಾರತ ಸರ್ಕಾರದ ಮುಖ್ಯ ಆರ್ಥಿಕ ಸಲಹೆಗಾರರಾಗಿ ಕಾರ್ಯನಿರ್ವಹಿಸಿದ್ದಾರೆ.
- ಸಂಜೀವ್ ಸನ್ಯಾಲ್ 2017 ಫೆಬ್ರವರಿ 3 ರಂದು ಕ್ಯಾಬಿನೆಟ್ ನೇಮಕಾತಿ ಸಮಿತಿಯು ಹಣಕಾಸು ಸಚಿವಾಲಯದ ಮುಖ್ಯ ಆರ್ಥಿಕ ಸಲಹೆಗಾರರನ್ನಾಗಿ ನೇಮಕ ಮಾಡಿದೆ.

## ಅರವಿಂದ ಸುಬ್ರಮಣ್ಯನ್



2014 ಅಕ್ಟೋಬರ್ 16 ರಿಂದ ರಘುರಾಂ ಜಿ. ರಾಜನ್ ಅವರ ನಂತರ ಸರ್ಕಾರದ 16ನೇ ಮುಖ್ಯ ಆರ್ಥಿಕ ಸಲಹೆಗಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ

ವಾಷಿಂಗ್‌ಟನ್ ಡಿ.ಸಿ. ಯಲ್ಲಿರುವ ಸೆಂಟರ್ ಫಾರ್ ಗ್ಲೋಬಲ್ ಡೆವೆಲಪ್‌ಮೆಂಟ್ & ಪೀಟರ್ ಇನ್‌ಸ್ಟಿಟ್ಯೂಟ್ ಫಾರ್ ಇಂಟರ್‌ನ್ಯಾಷನಲ್ ಎಕನಾಮಿಕ್ಸ್ ಎಂಬ ಎರಡು ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿದ್ದು, ಐ.ಎಂ.ಎಫ್ ನ ಅರ್ಥಶಾಸ್ತ್ರಜ್ಞರಾಗಿ, ಸಂಶೋಧನೆ ವಿಭಾಗದ ಸಹಾಯಕ ನಿರ್ದೇಶಕರಾಗಿ, ರಘುರಾಂ ರಾಜನ್ ಅವರ ಸಹೋದ್ಯೋಗಿಯಾಗಿ ಕಾರ್ಯನಿರ್ವಹಿಸಿದ್ದಾರೆ.

2008 ರಲ್ಲಿ ಪ್ರಕಟಪಡಿಸಿದ **ಇಂಡಿಯಾ'ಸ್ ಟರ್ನ್ ಅಂಡರ್ ಸ್ಟಾಂಡಿಂಗ್ ದ ಎಕನಾಮಿಕ್ ಟ್ರಾನ್ಸ್‌ಫರ್ಮೇಷನ್** ಎಂ... ಕೃತಿಯ ಕರ್ತೃ ಆಗಿದ್ದು, 2011 ರ ಫಾರಿನ್ ಪಾಲಿಸಿ ನಿಯತಕಾಲಿಕೆಯ ವಿಶ್ವದ ಅಗ್ರಗಣ್ಯ 100 ಜಾಗತಿಕ ಚಿಂತಕರುಗಳ... ಇವರೂ ಒಬ್ಬರಾಗಿದ್ದಾರೆ.

ಗ್ಯಾಟ್‌ನ 8ನೇ ಉರುಗ್ವೆ ಸುತ್ತಿನ ಮಾತುಕತೆಯ ವ್ಯಾಪಾರಿ ಸಂಧಾನಗಳಲ್ಲೂ ಸೇವೆ ಸಲ್ಲಿಸಿದ್ದರು.

ಅಮೆರಿಕನ್ ಎಕನಾಮಿಕ್ ರಿವ್ಯೂ, ಜರ್ನಲ್ ಆಫ್ ಇಂಟರ್ ನ್ಯಾಷನಲ್ ಎಕನಾಮಿಕ್ಸ್, ಜರ್ನಲ್ ಆಫ್ ಎಕನಾಮಿ... ಗ್ರೋತ್, ಆಕ್ಸ್‌ಫರ್ಡ್ ರಿವ್ಯೂ ಆಫ್ ಎಕನಾಮಿಕ್ಸ್ ಪಾಲಿಸಿ, ಐ.ಎಂ.ಎಫ್ ಸ್ಟಾಫ್ ಪೇಪರ್ಸ್, ಎಕನಾಮಿಕ್ ಅಂ... ಪೊಲಿಟಿಕಲ್ ವೀಕ್ಲಿ ಮುಂತಾದವುಗಳಲ್ಲಿ ಹಲವಾರು ಆರ್ಥಿಕ ಲೇಖನಗಳನ್ನು ಪ್ರಕಟಿಸಿದ್ದಾರೆ.

ಭಾರತದ ಬ್ಯುಸಿನೆಸ್ ಸ್ಟಾಂಡರ್ಡ್ ಎಂಬ ಹಣಕಾಸು ದೈನಂದಿನ ಪತ್ರಿಕೆಗೆ ಪ್ರತಿ ನಿತ್ಯ ಲೇಖನಗಳನ್ನು ಬರೆಯುತ್ತಿದ್ದರು.

## ವಿಶ್ವ ಸಂಸ್ಥೆಯ ಸಹಸ್ರಮಾನದ 8 ಗುರಿಗಳು (MDG's - Millenium Development Goals)

2015ರ ವೇಳೆಗೆ ಎಂಟು ಗುರಿಗಳನ್ನು ಜಗತ್ತಿನಾದ್ಯಂತ ಸಾಧಿಸಲು ವಿಶ್ವಸಂಸ್ಥೆಯು ಎಂಟು ಪ್ರಮುಖ ಗುರಿಗಳ... 2000ರಲ್ಲಿ ನಡೆದ ಮಿಲೇನಿಯಂ ಸಭೆಯಲ್ಲಿ ಹಾಕಿಕೊಂಡಿತು. ಈ ಗುರಿಯನ್ನು ಸಾಧಿಸಲು ವಿಶ್ವಸಂಸ್ಥೆಯ 193 ದೇಶ... ಮತ್ತು 23 ಅಂತರಾಷ್ಟ್ರೀಯ ಸಂಸ್ಥೆಗಳ ಸಹಕಾರದೊಂದಿಗೆ ವಿಶ್ವಸಂಸ್ಥೆ ಪ್ರಯತ್ನಿಸುತ್ತಿದೆ.

**2015ರ ಸಹಸ್ರಮಾನದ 8 ಅಭಿವೃದ್ಧಿ ಗುರಿಗಳು-**

1) ಬಡತನ ಮತ್ತು ಹಸಿವು ನಿರ್ಮೂಲನೆ 2) ಪ್ರಾಥಮಿಕ ಶಿಕ್ಷಣ ಸಾರ್ವತ್ರೀಕರಣ ಸಾಧಿಸುವುದು 3) ಲಿಂಗ ಸಮಾನತೆ ಮ... ಸ್ತ್ರೀ ಸಬಲೀಕರಣ ಉತ್ತೇಜಿಸುವುದು 4) ಶಿಶು ಮರಣ ಕಡಿಮೆ ಮಾಡುವುದು 5) ತಾಯಿ ಆರೋಗ್ಯ ಸುಧಾರಿಸುವುದು (Improve Maternal Health) 6) ಹೆಚ್.ಐ.ವಿ/ಏಡ್ಸ್, ಮಲೇರಿಯಾ ಮತ್ತು ಇತರೆ ಮಾರಕ ರೋಗ ನಿರ್ಮೂ... 7) ಪರಿಸರ ಸುಸ್ಥಿರತೆ ಕಾಪಾಡುವುದು 8) ಅಭಿವೃದ್ಧಿಗೆ ಜಾಗತಿಕ ಸಹಭಾಗಿತ್ವ ಬೆಳೆಸುವುದು.

## SDG's - Sustainable Development Goals / Post Millenium Development Goals (ವಿಶ್ವ ಸಂಸ್ಥೆಯ ಸಹಸ್ರಮಾನದ ನಂತರದ ಗುರಿಗಳು) ಸುಸ್ಥಿರ ಅಭಿವೃದ್ಧಿಯ ಗುರಿಗಳು

- 2015ರ ಸೆಪ್ಟೆಂಬರ್‌ನಲ್ಲಿ ನಡೆದ ವಿಶ್ವ ಸಂಸ್ಥೆಯ ಸಾಮಾನ್ಯ ಸಭೆಯ 17ನೇ ಸಭೆಯಲ್ಲಿ MDG's (ಸಹಸ್ರ ಅಭಿವೃ... ಗುರಿಗಳು-2000-2015) ಬದಲಿಗೆ SDG's ಘೋಷಣೆ.
- 17 ಸುಸ್ಥಿರ ಅಭಿವೃದ್ಧಿ ಗುರಿಗಳು ಹಾಗೂ 169 ಉದ್ದೇಶಗಳನ್ನು ಮುಂದಿನ 15 ವರ್ಷಗಳಲ್ಲಿ (2016-2030) ಈಡೇರಿಸುವ ಸಂಕಲ್ಪ.

**ಪ್ರಮುಖ ಉದ್ದೇಶಗಳು:-**

- ಬಡತನ ನಿವಾರಣೆ, ಅಸಮಾನತೆ ನಿವಾರಣೆ, ಲಿಂಗ ಸಮಾನತೆಗೆ ಪ್ರೋತ್ಸಾಹ, ಮಹಿಳಾ ಸಬಲೀಕರಣ, ಸಾಮಾಜಿ... ಮತ್ತು ಆರ್ಥಿಕ ಆಯಾಮಗಳಲ್ಲಿ ಸುಸ್ಥಿರ ಅಭಿವೃದ್ಧಿ.
- 2016ರ ಸುಸ್ಥಿರ ಅಭಿವೃದ್ಧಿ ಸೂಚ್ಯಂಕದ ಪ್ರಕಾರ 149 ರಾಷ್ಟ್ರಗಳ ಪೈಕಿ ಭಾರತ 110ನೇ ಸ್ಥಾನ, (ಮೊದಲ 3 ಸ್ಥಾನ ಸ್ವೀಡನ್, ಡೆನ್ಮಾರ್ಕ್, ನಾರ್ವೆ)

**ಈ ಸೂಚ್ಯಂಕದ ಮಾನದಂಡಗಳು:-** ಆರ್ಥಿಕ ಅಭಿವೃದ್ಧಿ, ಪರಿಸರ ಸಂಬಂಧಿಸಿದ ವಿಚಾರ, ಉತ್ತಮ ಆಡಳಿತ, ಸಾಮಾಜಿಕ ಸಮನ್ವಯತೆ.

# ಕೇಂದ್ರ ಹಣಕಾಸು ಆಯೋಗ
## Union Finance Commission

**ಕೇಂದ್ರ ಮತ್ತು ರಾಜ್ಯಗಳ ನಡುವಿನ ಹಣಕಾಸು ಹಂಚಿಕೆಗೆ ಸಂಬಂಧಿಸಿದಂತೆ ನೀತಿ ನಿರ್ಧಾರಗಳನ್ನು ರೂಪಿಸುವ ಸಂವಿಧಾನಾತ್ಮಕವಾಗಿ ಸ್ಥಾಪಿಸಲ್ಪಟ್ಟ ಆಯೋಗವೇ ಕೇಂದ್ರ ಹಣಕಾಸು ಆಯೋಗ. ಈ ಆಯೋಗವು ಪ್ರತಿ 5 ವರ್ಷದ ಅವಧಿಗೆ ಕೇಂದ್ರದಿಂದ ರಾಜ್ಯಕ್ಕೆ ಅನುದಾನ ಯಾವ ಪ್ರಮಾಣದಲ್ಲಿ ಹಂಚಿಕೆಯಾಗಬೇಕೆಂದು ಶಿಫಾರಸ್ಸು ಮಾಡುತ್ತದೆ.**

✦ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವಿನ ಆದಾಯದ ಸಂಪನ್ಮೂಲವನ್ನು ಹಂಚಿಕೆ ಮಾಡುವ ಉದ್ದೇಶಕ್ಕಾಗಿ ಭಾರತದ ಸಂವಿಧಾನದ **280ನೇ** ವಿಧಿಯು **ರಾಷ್ಟ್ರಪತಿಗಳು** ಹಣಕಾಸು ಆಯೋಗವನ್ನು ಪ್ರತಿ **5 ವರ್ಷಗಳಿಗೊಮ್ಮೆ** ರಚಿಸಲು ಅವಕಾಶ ಕಲ್ಪಿಸಿದೆ.

✦ **280ನೇ ವಿಧಿ ಅನ್ವಯ** ಭಾರತ ಸರ್ಕಾರವು ನವೆಂಬರ್ 22, 1951ರಂದು ಭಾರತದ ಮೊದಲ ಹಣಕಾಸು ಆಯೋಗವನ್ನು ಕೆ.ಸಿ. ನಿಯೋಗಿ ಅವರ ನೇತೃತ್ವದಲ್ಲಿ ರಚಿಸಿತು.

✦ 1951ರ ಹಣಕಾಸು ಆಯೋಗದ ಕಾಯ್ದೆಯು ಆಯೋಗದ ಅರ್ಹತೆ, ಅಧಿಕಾರಗಳು ಹಾಗೂ ವಿಧಿ ವಿಧಾನಗಳನ್ನು ಸೂಚಿಸಿದೆ. ಹಾಗೂ **1908 ರ ಕೋಡ್ ಆಫ್ ಸಿವಿಲ್ ಪ್ರೊಸಿಜರ್‌**ಗೆ ಅನುಗುಣವಾಗಿ ಸಿವಿಲ್ ಕೋರ್ಟಿನ ಸ್ಥಾನಮಾನವನ್ನು ಹೊಂದಿದೆ.

✦ ಸಂಸತ್ತು ಕಾಲಕಾಲಕ್ಕೆ ಹಣಕಾಸು ಆಯೋಗದ ಸದಸ್ಯರುಗಳ ಅರ್ಹತೆ ಹಾಗೂ ಅವರ ಕಾರ್ಯವಿಧಾನಗಳಿಗೆ ಸಂಬಂಧಿಸಿದಂತೆ ಸೂಕ್ತವಾದ ಕಾನೂನನ್ನು ರೂಪಿಸುತ್ತದೆ.

### ಹಣಕಾಸು ಆಯೋಗದ ಸಂರಚನೆ:–

✦ ಹಣಕಾಸು ಆಯೋಗವು ಒಬ್ಬ ಅಧ್ಯಕ್ಷರನ್ನು ಸಾರ್ವಜನಿಕ ವಿದ್ಯಮಾನಗಳ ಬಗ್ಗೆ ಅನುಭವ ಇರುವವರು ಹಾಗೂ 4 ಜನ ಸದಸ್ಯರುಗಳನ್ನು ಈ ಕೆಳಕಂಡ ಅರ್ಹತೆಯನ್ನು ಆಧರಿಸಿ ರಾಷ್ಟ್ರಪತಿಗಳು ನೇಮಕ ಮಾಡುತ್ತಾರೆ.

1) ಹೈಕೋರ್ಟಿನ ನ್ಯಾಯಾಧೀಶರಾಗಿ ಆಯ್ಕೆ ಆಗುವಂತಹ ಅರ್ಹತೆ ಹೊಂದಿರಬೇಕು.
2) ಹಣಕಾಸು ವ್ಯವಹಾರದ ಬಗ್ಗೆ ಜ್ಞಾನ ಹೊಂದಿರಬೇಕು.
3) ಅರ್ಥಶಾಸ್ತ್ರದ ಜ್ಞಾನ ಹೊಂದಿರಬೇಕು.
4) ಹಣಕಾಸು ವಿದ್ಯಮಾನಗಳು ಹಾಗೂ ಆಡಳಿತದ ಬಗ್ಗೆ ವಿಸ್ತೃತವಾದ ಜ್ಞಾನ ಹೊಂದಿರಬೇಕು.

### ಅಧಿಕಾರಾವಧಿ:-

✦ ರಾಷ್ಟ್ರಪತಿಯವರು ನಿಗದಿಪಡಿಸಿದ ಅವಧಿವರೆಗೆ ಆಯೋಗದ ಪ್ರತಿಯೊಬ್ಬ ಸದಸ್ಯನ ಅಧಿಕಾರಾವಧಿ ಆಗಿರುತ್ತದೆ. ಇವರನ್ನು ಪುನರಾಯ್ಕೆ ಮಾಡಬಹುದು.

**ರಾಜೀನಾಮೆ:-** ಇವರು ತಮ್ಮ ರಾಜೀನಾಮೆಯನ್ನು ರಾಷ್ಟ್ರಪತಿಯವರಿಗೆ ತಲುಪಿಸಬೇಕಾಗುತ್ತದೆ.

### ವೇತನ & ಭತ್ಯೆಗಳು:-

✦ ರಾಷ್ಟ್ರಪತಿ ನಿರ್ಧರಿಸಿದಂತೆ ಪ್ರತಿಯೊಬ್ಬ ಸದಸ್ಯನು ಪೂರ್ಣಾವಧಿಯ ಅಥವಾ ಅಲ್ಪಾವಧಿಯ ಸೇವೆಯನ್ನು ಸಲ್ಲಿಸಬೇಕು. ಕೇಂದ್ರ ಸರ್ಕಾರ ನಿಗದಿಪಡಿಸಿದ ವೇತನವನ್ನು ಪಡೆಯಬೇಕು.

### ಅನರ್ಹತೆ

1) ಮಾನಸಿಕವಾಗಿ ಸ್ಥಿಮಿತತೆ ಕಳೆದುಕೊಂಡಾಗ.
2) ಕಾನೂನನ್ನು ಉಲ್ಲಂಘಿಸಿದಾಗ.
3) ಆಯೋಗದ ಕಾರ್ಯಗಳನ್ನು ನಿರ್ವಹಿಸಲು ಅಸಮರ್ಥನಾದಾಗ.

### ಹಣಕಾಸು ಆಯೋಗದ ಕಾರ್ಯಗಳು

✦ ಹಣಕಾಸು ಆಯೋಗವು ಕಾಲಕಾಲಕ್ಕೆ ರಾಷ್ಟ್ರಪತಿಗೆ ಈ ಕೆಳಕಂಡ ವಿಷಯಗಳಿಗೆ ಸಂಬಂಧಿಸಿದಂತೆ ಶಿಫಾರಸ್ಸನ್ನು ಮಾಡುವ ಕಾರ್ಯವನ್ನು ಹೊಂದಿದೆ.

1) ಕೇಂದ್ರ& ರಾಜ್ಯಗಳ ನಡುವೆ ತೆರಿಗೆಗಳ ವಿತರಣೆ ಬಗ್ಗೆ
2) ರಾಜ್ಯದಲ್ಲಿ ಸಂಚಿತ ನಿಧಿಯನ್ನು ಹೆಚ್ಚಿಸುವ ಬಗ್ಗೆ.
3) ರಾಜ್ಯಗಳ ಸಂಚಿತ ನಿಧಿಯನ್ನು ಹೆಚ್ಚಿಸಿ ಸ್ಥಳೀಯ ಸಂಸ್ಥೆಗಳಿಗೆ ನೀಡುವ ಬಗ್ಗೆ ಮಾಡಿದ ಮೌಲ್ಯಮಾಪನದ ವರದಿ ತಯಾರಿಸುವುದು.
4) ರಾಷ್ಟ್ರಪತಿಗಳು ಕಾಲಕಾಲಕ್ಕೆ ಆರ್ಥಿಕ ವಿಷಯಕ್ಕೆ ಸಂಬಂಧಿಸಿದಂತೆ ಸೂಚಿಸುವ ವಿಷಯಗಳಿಗೆ ಸಂಬಂದಿಸಿದಂತಹ ಕಾರ್ಯಗಳನ್ನು ಕೂಡ ನಿರ್ವಹಿಸಬೇಕು.

✦ **ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ** ಆಯೋಗದ ಶಿಫಾರಸ್ಸುಗಳ ಅನ್ವಯವಾಗುವುದಿಲ್ಲ.

### ಹಣಕಾಸು ಆಯೋಗದ ಅಧಿಕಾರಗಳು

- 1908ರ ಕೋಡ್ ಆಫ್ ಸಿವಿಲ್ ಪ್ರೊಸಿಜರ್‌ನಂತೆ ಆಯೋಗವು ಸಿವಿಲ್ ಕೋರ್ಟಿನ ಎಲ್ಲಾ ಅಧಿಕಾರಗಳನ್ನು ಹೊಂದಿದೆ.
- ಆಯೋಗವು ಯಾವುದೇ ನ್ಯಾಯಾಲಯ ಅಥವಾ ಕಛೇರಿಗಳಿಂದ ಸಾರ್ವಜನಿಕ ದಾಖಲೆಗಳನ್ನು ಒಪ್ಪಿಸುವಂತೆ ಕೇಳಬಹುದು ಹಾಗೂ ಸಾಕ್ಷ್ಯಗಳನ್ನು ಪಡೆಯಬಹುದು. ಯಾವುದೇ ವ್ಯಕ್ತಿಯನ್ನು ಸಾಕ್ಷ್ಯಗಳನ್ನು ಹಾಗೂ ಮಾಹಿತಿಯನ್ನು ನೀಡುವಂತೆ ಕೇಳುವ ಅಧಿಕಾರವಿದೆ. ಇದು ಸಿವಿಲ್ ಕೋರ್ಟಿನಂತೆ ಕಾರ್ಯನಿರ್ವಹಿಸುವ ಅಧಿಕಾರವನ್ನು ಹೊಂದಿದೆ.

**ಭಾರತದಲ್ಲಿ ಹಣಕಾಸು ಆಯೋಗಗಳು:–**

- 1951 ಕೆ.ಸಿ.ನಿಯೋಗಿ ಅವರ ಅಧ್ಯಕ್ಷತೆಯಲ್ಲಿ ಮೊದಲ ಹಣಕಾಸು ಆಯೋಗವನ್ನು ಸ್ಥಾಪಿಸಲಾಯಿತು. **ಪ್ರಸ್ತುತವಾಗಿ 14ನೇ ಹಣಕಾಸು ಆಯೋಗವು** ಡಾ|| ವೈ.ವಿ. ರೆಡ್ಡಿ ಅವರ ನೇತೃತ್ವದಲ್ಲಿ ಜಾರಿಯಲ್ಲಿದೆ.
- ನರೇಂದ್ರ ಮೋದಿ ಸರ್ಕಾರ 2017–18 ರ ಬಜೆಟ್‌ನಲ್ಲಿ 10 ಕೋಟಿ ರೂ. ಅನ್ನು 2020 ಏಪ್ರಿಲ್ 1 ರಿಂದ 2025 ರ ಮಾರ್ಚ್ 31 ರವರೆಗಿನ ಅವಧಿಗೆ 15 ನೇ ಹಣಕಾಸು ಆಯೋಗವನ್ನು ನೇಮಕ ಮಾಡುವ ಸಾಂವಿಧಾನಿಕ ಪ್ರಕ್ರಿಯೆಯನ್ನು ಆರಂಭಿಸಿದೆ.

**ಭಾರತದ 14 ಹಣಕಾಸು ಆಯೋಗಗಳು & ಅಧ್ಯಕ್ಷರು**

| ಆಯೋಗ | ಅಧ್ಯಕ್ಷರು | ಅವಧಿ |
|---|---|---|
| 1 | ಕೆ.ಸಿ. ನಿಯೋಗಿ | 1952–57 |
| 2 | ಕೆ. ಸಂತಾನಂ | 1957–62 |
| 3 | ಎ.ಕೆ. ಚಂದಾ | 1962–66 |
| 4 | ಪಿ. ವಿ. ರಾಜಮನ್ನಾರ್ | 1966–69 |
| 5 | ಮಹಾವೀರತ್ಯಾಗಿ | 1969–74 |
| 6 | ಬ್ರಹ್ಮಾನಂದ ರೆಡ್ಡಿ | 1974–79 |
| 7 | ಜೆ.ಎಂ. ಸೇಲಟ್ | 1979–84 |
| 8 | ವೈ.ಬಿ ಚೌಹಾಣ್ | 1984–89 |
| 9 | ಎನ್.ಕೆ. ಸಾಲ್ವೆ | 1989–95 |
| 10 | ಕೆ.ಸಿ. ಪಂತ್ | 1995–2000 |
| 11 | ಎಂ.ಎಂ. ಖುಸ್ರೋ | 2000–05 |
| 12 | ಸಿ. ರಂಗರಾಜನ್ | 2005–10 |
| 13 | ಡಾ|| ವಿಜಯ್ ಎಲ್ ಕೇಳ್ಕರ್ | 2010–15 |
| 14 | ಡಾ|| ವೈ.ವಿ. ರೆಡ್ಡಿ | 2015–2020 |

### 14ನೇ ಹಣಕಾಸು ಆಯೋಗ:-

- ಯು.ಪಿ.ಎ ಸರ್ಕಾರದ ಸಲಹೆ ಮೇರೆಗೆ ರಾಷ್ಟ್ರ... ಪ್ರಣಬ್ ಮುಖರ್ಜಿ 2013 ಜನವರಿ 2 ... ಸಾಂವಿಧಾನಿಕವಾಗಿ ವೈ.ವಿ. ರೆಡ್ಡಿ ಅವರ ನೇತೃ... **2015 ಏಪ್ರಿಲ್ 1 ರಿಂದ 2020 ಮಾರ್ಚ್** ... ರವರೆಗೆ ಅನ್ವಯವಾಗುವಂತೆ 14 ನೇ ಹಣ... ಆಯೋಗವನ್ನು ನೇಮಕ ಮಾಡಿದರು.
- ಈ ಆಯೋಗವು 2014 ಡಿಸೆಂಬರ್ 15 ... ರಾಷ್ಟ್ರಪತಿಯವರಿಗೆ ತನ್ನ ವರದಿಯನ್ನು ಸಲ್ಲಿಸಿ... ವರದಿಯ ಶಿಫಾರಸ್ಸುಗಳು 2015 ಏಪ್ರಿಲ್ 1 ... ಜಾರಿಗೆ ಬಂದವು.

**ಸದಸ್ಯರು:-** ಡಾ ಎಂ ಗೋವಿಂದ ರಾವ್, ಸುಷ್ಮಾ... ಪ್ರೊ. ಅಭಿಜಿತ್ ಸೇನ್, ಡಾ. ಸುದೀಪ್ತೊ ಮುಂಡ್ಲೆ

- **ಕಾರ್ಯದರ್ಶಿ:-** ಅಜಯ್ ನಾರಾಯಣ್ ಜಾ
- **ಪ್ರಕ್ರಿಯೆ:-** ರಾಷ್ಟ್ರಪತಿಯವರಿಂದ ಚಾಲ್ತಿಯಲ್ಲಿ... ಹಣಕಾಸು ಆಯೋಗದ ಕಾರ್ಯಾಚರಣೆ ... ಮುಗಿಯುವ 2 ವರ್ಷದ ಮುನ್ನ ಸಾಂವಿಧಾನಿ... ನಿಗದಿತ ಅರ್ಹತೆ ಹೊಂದಿದ ವ್ಯಕ್ತಿಯ ಅಧ್ಯಕ್ಷ... ಸದಸ್ಯರನ್ನೊಳಗೊಂಡ ಆಯೋಗ ನೇಮಕ.
- ಆಯೋಗ ನೇಮಕಗೊಂಡ ಅವಧಿಯಿಂದ ... ವರ್ಷದ ಒಳಗೆ ಹಿಂದಿನ ಆಯೋಗದ ಶಿಫಾರ... ಪರಿಶೀಲನೆಯೊಂದಿಗೆ ಮುಂದಿನ ಕಾರ್ಯಾಚ... ಅನುಕೂಲವಾಗುವ ಶಿಫಾರಸ್ಸುಗಳನ್ನು ಒಳಗೆ... ವರದಿ ತಯಾರಿಕೆ.
- ಆಯೋಗದ ಅಧ್ಯಕ್ಷರಿಂದ ರಾಷ್ಟ್ರಪತಿಯವರಿಗೆ ... ಸಲ್ಲಿಕೆ ಹಾಗೂ ರಾಷ್ಟ್ರಪತಿ & ಕೇಂದ್ರ ಸರ್ಕಾ... ಹಣಕಾಸು ಸಚಿವಾಲಯದಿಂದ ಪರಿಶೀಲನೆ... ಅನುಮೋದನೆ.
- ಆಯೋಗ ನೇಮಕಗೊಂಡ ನಿಗದಿತ ಆರ್ಥಿಕ ವ... ಪ್ರಾರಂಭದ ದಿನದಿಂದ ಶಿಫಾರಸ್ಸುಗಳು ಅನ್ವಯ...
- **ಅನುದಾನ ಶಿಫಾರಸ್ಸು:-** 14ನೇ ಹಣಕಾಸು ಆಯೋ... ಕೇಂದ್ರ ಸರ್ಕಾರವು **ರಾಜ್ಯಗಳಿಗೆ ಶೇ42** ... ಅನುದಾನವನ್ನು ನೀಡಬೇಕೆಂದು ಶಿಫಾರಸ್ಸು ಮಾ...
- ಹಿಂದಿನ **13ನೇ ಹಣಕಾಸು ಆಯೋಗವು** ... ಎಲ್. ಕೇಲ್ಕರ್ ಅವರ ನೇತೃತ್ವದಲ್ಲಿ ರಚನೆಗೊಂ... ಅದು ಕೇಂದ್ರವು ರಾಜ್ಯಗಳಿಗೆ **ಶೇ 32ರಷ್ಟು** ಅನು... ಒದಗಿಸಬೇಕೆಂದು ಶಿಫಾರಸ್ಸು ಮಾಡಿತು.
- **14ನೇ ಹಣಕಾಸು ಆಯೋಗವು** ತನ್ನ ಶಿಫಾರ... **ಅನುದಾನವನ್ನು 32% ರಿಂದ 42 %ಕ್ಕೆ** ... **ಮೂಲಕ ಕಳೆದ 13ನೇ ಹಣಕಾಸು ಆಯೋಗಕ್ಕಿಂತ 10ರಷ್ಟು ಹೆಚ್ಚಳ ಮಾಡಿತು.**

## ರಾಜ್ಯಗಳಿಗೆ ಪಾಲು ನೀಡುವ ಮಾನದಂಡಗಳು

| ಕ್ರ. ಸಂಖ್ಯೆ | ಮಾನದಂಡಗಳು | ಶೇಕಡಾವಾರು |
|---|---|---|
| 1) | ರಾಜ್ಯಗಳ ಜನಸಂಖ್ಯೆ | (ಶೇ 27.5) |
| 2) | ಭೂ ಪ್ರದೇಶ (Area) | (ಶೇ 15) |
| 3) | ಅರಣ್ಯ ಪ್ರದೇಶ | (ಶೇ7.5) |
| 4) | ವಿತ್ತೀಯ ಶಿಸ್ತು | (ಶೇ 50) |

✦ ಇನ್ನಿತರ ಮಾಹಿತಿ ಆಧರಿಸಿ ವರಮಾನವನ್ನು ಹಂಚಿಕೆ ಮಾಡುತ್ತದೆ. ರಾಜ್ಯವೊಂದರಲ್ಲಿ ಬಡವರ ಸಂಖ್ಯೆ ಹೆಚ್ಚಾಗಿದ್ದರೆ, ತೆರಿಗೆಯಲ್ಲಿನ ಅದರ ಪಾಲನ್ನು ಕೂಡ ಹೆಚ್ಚಾಗಿ ದೊರೆಯುತ್ತದೆ.

| ಹಣಕಾಸು ಆಯೋಗ | ರಾಜ್ಯ-ಕ್ಕೆ ನೀಡಬೇಕಾದ ಶೇಕಡಾವಾರು | ಅವಧಿ |
|---|---|---|
| 12 | ಶೇ 30.5 | 2005 ಏ.1 –2010ಮಾ31 |
| 13 | ಶೇ 32 | 2010 ಏ.1 –2015ಮಾ.31 |
| 14 | ಶೇ 42 | 2015 ಏ.1 –2020 ಮಾ.31 |

## 14ನೇ ಹಣಕಾಸು ಆಯೋಗದಿಂದ ರಾಜ್ಯಕ್ಕೆ ಅನುದಾನ

✦ 14ನೇ ವರದಿಯಂತೆ ಒಟ್ಟು ರಾಜ್ಯಕ್ಕೆ 16,520 ಕೋಟಿ ರೂಗಳು ಅನುದಾನ ದೊರೆಯಲಿದೆ. ಅನುದಾನವನ್ನು ರಾಜ್ಯಗಳ ಮೂಲಕ ಸ್ಥಳೀಯ ಆಡಳಿತ ಸಂಸ್ಥೆಗಳಿಗೆ 2011ರ ಜನಗಣತಿ ಆಧಾರದ ಮೇಲೆ ವಿತರಿಸಲಾಗುವುದು. ನಗರಾಡಳಿತ ಮತ್ತು ಗ್ರಾಮ ಪಂಚಾಯಿತಿಗಳಿಗೆ ಅನುದಾನವನ್ನು ಅನುಕ್ರಮವಾಗಿ 80:20 ಮತ್ತು 90:10 ರ ಅನುಪಾತದಲ್ಲಿ ಹಂಚಿಕೆ ಮಾಡಲಿದೆ.

✦ **ರಾಜ್ಯದಲ್ಲಿ ಜಿಲ್ಲಾ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ & ಗ್ರಾಮ ಪಂಚಾಯಿತಿ 10:20:70 ರ ಅನುಪಾತದಲ್ಲಿ** ಅನುದಾನಗಳು ಬಳಕೆಯಾಗಲಿವೆ.

**ಪಂಚಾಯಿತಿಗಳಿಗೆ ಮೊತ್ತ ಜಮಾ ಮಾಡುವ ವಿಧಾನ:-**

✦ ಪಂಚಾಯತ್ ರಾಜ್‌ಗಳಿಗೆ ನೀಡಲಾಗುವ ಹಣವನ್ನು ಸರ್ಕಾರದ ಅಧೀನ ಕಾರ್ಯದರ್ಶಿ (ಜಿಲ್ಲಾ ಪಂಚಾಯತ್) ಗ್ರಾಮೀಣಾಭಿವೃದ್ಧಿ & ಪಂಚಾಯತ್ ರಾಜ್ ಇಲಾಖೆ ಇವರು ರಾಜ್ಯ ಹಜೂರ್ ಖಜಾನೆಯಿಂದ ಪೇಯೀಸ್ ರಶೀದಿಯ ಮೇಲೆ ಡ್ರಾ ಮಾಡಿ ನಂತರ RTGS ಮುಖಾಂತರ 14ನೇ ಹಣಕಾಸು ಆಯೋಗದ ಸ್ಟೇಟ್ ಬ್ಯಾಂಕ್ ಮೈಸೂರ್-ಬೆಂಗಳೂರು ಶಾಖೆಗೆ ಉಳಿತಾಯ ಖಾತೆಗೆ ಬಿಡುಗಡೆಗೊಳಿಸಿ, ನಂತರ ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್ ಖಾತೆಯಿಂದ ಇಂಟರ್‌ನೆಟ್ ಬ್ಯಾಂಕಿಂಗ್ ಮುಖಾಂತರ ರಾಜ್ಯದ ಎಲ್ಲ ಗ್ರಾಮಪಂಚಾಯಿತಿಗಳಿಗೆ ಸರ್ಕಾರವು ನಿಗದಿಗೊಳಿಸಿರುವ ಮೊತ್ತದ ಅನುಸಾರ ಬಿಡುಗಡೆ ಮಾಡಲಾಗಿದೆ.

✦ ಅನುದಾನವು ಗ್ರಾಮ ಪಂಚಾಯಿತಿಗೆ ತಲುಪಿರುವುದು ಆಯಾ ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು & ಮುಖ್ಯ ಲೆಕ್ಕಾಧಿಕಾರಿಗಳು ದೃಢೀಕರಿಸಿ ಸರ್ಕಾರಕ್ಕೆ ಸಲ್ಲಿಸುವುದು. ಇದರಲ್ಲಿ ಯಾವುದೇ ಲೋಪದೋಷವಿದ್ದಲ್ಲಿ ಸಂಬಂಧಪಟ್ಟವರಿಂದ ಬಡ್ಡಿ ವಸೂಲು ಮಾಡಲು ಆಯಾ ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು ಕ್ರಮ ವಹಿಸತಕ್ಕದ್ದು.

**ರಾಜ್ಯಕ್ಕೆ ಬಿಡುಗಡೆಯಾಗಿರುವ ಅನುದಾನದ ಸಂಕ್ಷಿಪ್ತ ಮಾಹಿತಿ:**

1) **ರಾಜ್ಯಕ್ಕೆ ಬಿಡುಗಡೆಯಾಗಿರುವ ಸಾಮಾನ್ಯ ಮೂಲ ಅನುದಾನ** (5 ವರ್ಷಗಳಿಗೆ) – **8,359.79 ಕೋಟಿ ರೂಗಳು**

2) **ಸಾಮಾನ್ಯ ಮೂಲ ಅನುದಾನ ಬಿಡುಗಡೆಯಾಗಿರುವ 5 ವರ್ಷದ ಅವಧಿ:– 2015–16 ರಿಂದ 2019–20ರವರೆಗೆ**

3) **ಸಾಮಾನ್ಯ ಮೂಲ ಅನುದಾನದ ಮೊದಲ ಕಂತಿನ ಮೊತ್ತ:–** 2015–16ನೇ ಸಾಲಿಗೆ **684ಕೋಟಿ 16ಲಕ್ಷದ 6ಸಾವಿರ ರೂಪಾಯಿಗಳ (6,84,16,06,000 ರೂಗಳು)**

4) **ಪಂಚಾಯಿತಿಗಳಿಗೆ ಅನುದಾನವು ಬಿಡುಗಡೆಯಾಗುವ ವಿಧಾನ:– ಅಂತರ್ಜಾಲ ಬ್ಯಾಂಕಿಂಗ್ (Internet Banking)**

5) **ಪಂಚಾಯಿತಿಗಳ ESCOM ಖಾತೆಗೆ ಬಿಡುಗಡೆ ಮಾಡಿದ ಹಣ:–** 171 ಕೋಟಿ 4ಲಕ್ಷದ 1ಸಾವಿರದ 500 ರೂಗಳ (171,04,01,500 ರೂಗಳು) (ಶೇ 25)

6) **ಗ್ರಾಮ ಪಂಚಾಯಿತಿ ಅಭಿವೃದ್ಧಿ ಕಾರ್ಯಗಳಿಗೆ ಬಿಡುಗಡೆಯಾಗಿರುವ ಮೊತ್ತ:– 513ಕೋಟಿ 12ಲಕ್ಷದ 4,500 ರೂಪಾಯಿ(513,12,04,500 ರೂ)**

7) **ಅನುದಾನವನ್ನು ವಿನಿಯೋಗಿಸುವ ಕ್ಷೇತ್ರಗಳು:–** ನಾಗರೀಕ ಸೇವೆ, ನೀರು ಸರಬರಾಜು, ನೈರ್ಮಲ್ಯ, ಒಳಚರಂಡಿ, ಘನತ್ಯಾಜ್ಯ ವಸ್ತು ನಿರ್ವಹಣೆ, ಮಳೆನೀರಿನ ಒಳಚರಂಡಿ, ಸಮುದಾಯ ಸ್ವತ್ತು ನಿರ್ವಹಣೆ, ಬೀದಿ ದೀಪಗಳು, ಪಾದಚಾರಿ ಹಾಗೂ ರಸ್ತೆಗಳು, ಸ್ಮಶಾನ & ರುದ್ರ ಭೂಮಿಗಳ ನಿರ್ವಹಣೆ.

# ಕೇಂದ್ರ ಹಣಕಾಸು ಆಯೋಗದ ಅಧ್ಯಕ್ಷರುಗಳು

## ಕೆ.ಸಿ. ನಿಯೋಗಿ (ಕ್ಷಿತೀಶ್‌ಚಂದ್ರನಿಯೋಗಿ)(1952-57)

✦ ಸ್ವಾತಂತ್ರ್ಯ ಭಾರತದ ಮೊದಲ ಕ್ಯಾಬಿನೆಟ್‌ನ ಸದಸ್ಯರಾಗಿದ್ದು, ಸ್ವತಂತ್ರ ಭಾರತದ ಮೊದಲ ಹಣಕಾಸು ಆಯೋಗ (1951 ನವೆಂಬರ್ 22) ದ ಅಧ್ಯಕ್ಷರಾಗಿ, ಆರ್.ಕೆ. ಷಣ್ಮುಗಂ ಚೆಟ್ಟಿ ಯ ನಂತರ ದೇಶದ 2ನೇ ಹಣಕಾಸು ಸಚಿವರಾಗಿ ಕಾರ್ಯನಿರ್ವಹಿಸಿದ್ದಾರೆ. ಆದರೆ ಯಾವುದೇ ಬಜೆಟ್‌ನ್ನು ಮಂಡಿಸಿಲ್ಲ. ಕಾರಣ ಕೇವಲ 35 ದಿನಗಳವರೆಗೆ ಅಧಿಕಾರದಲ್ಲಿದ್ದರು.

## ಕೆ. ಸಂತಾನಂ (1957-62)



✦ 2ನೇ ಹಣಕಾಸು ಆಯೋಗದ ಅಧ್ಯಕ್ಷರಾಗಿ, 1962 ರಲ್ಲಿ ಲಾಲ್ ಬಹದ್ದೂರ್ ಶಾಸ್ತ್ರಿ ನೇಮಕ ಮಾಡಿದ **ಭ್ರಷ್ಟಾಚಾರ ನಿರ್ಮೂಲನ ಸಮಿತಿಯ** ಅಧ್ಯಕ್ಷತೆಯನ್ನು ಸಂತಾನಂ ಹೊಂದಿದ್ದರು.

## ಪಿ.ವಿ. ರಾಜಮನ್ನಾರ್ (1966-69)

✦ 4ನೇ ಹಣಕಾಸು ಆಯೋಗದ ಅಧ್ಯಕ್ಷರಾಗಿ, 4 ನೇ ಕಾನೂನು ಆಯೋಗ & ಬ್ಯಾಂಕಿಂಗ್ ಕಾನೂನುಗಳ ಸಮಿತಿಯ ಮುಖ್ಯಸ್ಥರಾಗಿ ಕರ್ತವ್ಯ ನಿರ್ವಹಿಸಿದ್ದಾರೆ. 1948 ರಲ್ಲಿ ಮದ್ರಾಸ್ ಹೈ ಕೋರ್ಟ್‌ನ ಮುಖ್ಯ ನ್ಯಾಯಾಧೀಶರಾಗಿ ಆಯ್ಕೆಯಾದ ಮೊದಲ ಭಾರತೀಯರಾಗಿದ್ದಾರೆ.



✦ 1969 ರಲ್ಲಿ ರಾಜ್ಯ ಸ್ವಾಯತ್ತತೆಯ & ಕೇಂದ್ರ ರಾಜ್ಯ ಸಂಬಂಧಗಳ ಪರಿಶೀಲನೆಗೆ ನೇಮಕವಾದ 3 ಜನ ಸದಸ್ಯರ ಮುಖ್ಯಸ್ಥರಾಗಿ ಕರ್ತವ್ಯ ನಿರ್ವಹಿಸಿದ್ದಾರೆ.

## ಕೆ.ಸಿ. ಪಂತ್ (1995-2000)



✦ ಭಾರತದ ಯೋಜನಾ ಆಯೋಗದ 23 ನೇ ಉಪಾಧ್ಯಕ್ಷರಾಗಿ 1999 ರಿಂದ 2004 ರವರೆಗೆ ಕಾರ್ಯನಿರ್ವಹಿಸಿದ್ದು, 1995 ರಿಂದ 2000 ದವರೆಗೆ ಹಣಕಾಸು ಆಯೋಗದ 10ನೇ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದಾರೆ.

## ಎಂ.ಎಂ. ಖುಸ್ರೋ (2000-2005)

✦ 11ನೇ ಹಣಕಾಸು ಆಯೋಗದ ಅಧ್ಯಕ್ಷರಾಗಿ 2000 ರಿಂದ 2005 ರವರೆಗೆ ಕಾರ್ಯನಿರ್ವಹಿಸಿದ ಇವರು ಅಲಿಘರ್ ಮುಸ್ಲಿಂ ವಿಶ್ವವಿದ್ಯಾ... ಉಪಕುಲಪತಿಗಳಾಗಿ, ಆಗಾಖಾನ್ ಫೌಂಡೇ... ಮುಖ್ಯಸ್ಥರಾಗಿ ಕಾರ್ಯನಿರ್ವಹಿಸಿದ್ದಾರೆ.

## ಡಾ॥ ವಿಜಯ್ ಎಲ್ ಕೇಳ್ಕರ್ (2010-15)



✦ 13ನೇ ಹಣಕಾಸು ಆಯೋಗದ ಅಧ್ಯಕ್ಷರಾಗಿ 2010 ರಿಂದ 2015 ರವರೆಗೆ ಕಾರ್ಯನಿರ್ವಹಿಸಿದ್ದಾರೆ. 1998–99 ರಲ್ಲಿ ಭಾರತದ ಹಣಕಾಸು ಕಾರ್ಯದರ್ಶಿಯಾಗಿ, ಐ.ಎಂ. ಎಫ್ ನ ಕಾರ್ಯಕಾರಿ ನಿರ್ದೇಶಕರಾಗಿ, ಭಾ... ರಾಷ್ಟ್ರೀಯ ಷೇರು ಮಾರುಕಟ್ಟೆ ಮುಖ್ಯಸ್... 1997–98 ರ ತೆರಿಗೆ ಸುಧಾರಣೆಗಳ ಸ... ಅಧ್ಯಕ್ಷರಾಗಿ, 1985–88 ರಲ್ಲಿ ಪ್ರಧಾನಮಂತ್ರಿ ಆ... ಸಲಹಾಗಾರ ಮಂಡಳಿಯ ಕಾರ್ಯದರ್ಶಿ... ಕಾರ್ಯನಿರ್ವಹಿಸಿದ್ದಾರೆ.

✦ 2011 ರಲ್ಲಿ ಪದ್ಮವಿಭೂಷಣ ಪ್ರಶಸ್ತಿ ಲಭಿಸಿದೆ.

| ಅಂಶಗಳು | ಯೋಜನಾ ಆಯೋಗ | ಹಣಕಾಸು ಆಯೋಗ |
|---|---|---|
| ಸಂಸ್ಥೆ | ಶಾಸನಬದ್ಧವಲ್ಲದ/ ಸಾಂವಿಧಾನಿಕವಲ್ಲದ | ಸಂವಿಧಾನಾತ್ಮ... (280 ನೇ ವಿಧಿ...) |
| ಅಧ್ಯಕ್ಷರು | ಪ್ರಧಾನಮಂತ್ರಿ ಪದನಿಮಿತ್ತ | ರಾಷ್ಟ್ರಪತಿ ಯವರಿಂದ ನೇಮಕ |
| ಅವಧಿ | ಶಾಶ್ವತ | ತಾತ್ಕಾಲಿಕ ಅ... ಪ್ರತಿ 5 ವರ್ಷ... |
| ರಚನೆ | ಸರ್ಕಾರದ ಭಾಗವಾಗಿ ರಾಜಕೀಯ ಸಂಸ್ಥೆ | ರಾಜಕೀಯೇತ... ಅರೆ ನ್ಯಾಯಿಕ... ಸ್ವತಂತ್ರ |
| ಅನುದಾನ ಹಂಚಿಕೆ | ಯೋಜನಾ/ ಯೋಜನೇತರ ಅನುದಾನ 280 ನೇ ವಿಧಿ ಪ್ರಕಾರ ಹಂಚಿಕೆ | ಯೋಜನೇತ... ಶಾಸನಬದ್ಧ... ಅನುದಾನಗಳ... 275/1 ಪ್ರಕಾರ... ಹಂಚಿಕೆ |
| ಮೊದಲ ಅಧ್ಯಕ್ಷರು | ಜವಾಹರ್ ಲಾಲ್ ನೆಹರೂ | ಕೆ.ಸಿ. ನಿಯೋ... |
| ಸ್ಥಾಪನೆ | 1950 ಮಾರ್ಚ್ 15 | 1951 ನ. 2... |

# ಕರ್ನಾಟಕ ರಾಜ್ಯ ಹಣಕಾಸು ಆಯೋಗ (KSFC)

+ ಸಂವಿಧಾನದ 73 & 74 ನೇ ತಿದ್ದುಪಡಿಯಲ್ಲಿ ಕ್ರಮವಾಗಿ, 243-I (ಗ್ರಾಮೀಣ ಸ್ಥಳೀಯ ಸಂಸ್ಥೆ) & 243-Y (ನಗರ ಸ್ಥಳೀಯ ಸಂಸ್ಥೆ) ವಿಧಿಯಲ್ಲಿ ರಾಜ್ಯ ಹಣಕಾಸು ಆಯೋಗವನ್ನು ನೇಮಕ ಮಾಡಲಾಗುತ್ತದೆ.
+ ರಾಜ್ಯ ಸರ್ಕಾರ ಮತ್ತು ಸ್ಥಳೀಯ ಸಂಸ್ಥೆಗಳ ನಡುವೆ ಅನುದಾನವನ್ನು ಹಂಚಿಕೆ ಮಾಡಲು, ಹಣಕಾಸಿನ ಸುಧಾರಣೆ ಮಾಡಲು ರಾಜ್ಯ ಹಣಕಾಸು ಆಯೋಗವನ್ನು ಸ್ಥಾಪಿಸಬೇಕೆಂದು ಹೇಳಲಾಗಿದೆ.
+ ಕರ್ನಾಟಕ ಪಂಚಾಯತ್‌ರಾಜ್ ಕಾಯಿದೆ 1993ರಲ್ಲಿ ರಾಜ್ಯ ಸರ್ಕಾರವು ರಾಜ್ಯ ಹಣಕಾಸು ಆಯೋಗವನ್ನು ಪ್ರತಿ 5 ವರ್ಷಗಳಿಗೊಮ್ಮೆ ಸ್ಥಾಪಿಸಲು 267 ನೇ ಪ್ರಕರಣದಲ್ಲಿ ಅವಕಾಶ ಕಲ್ಪಿಸಲಾಗಿದೆ.
+ ರಾಜ್ಯ ಹಣಕಾಸು ಆಯೋಗವು ಗ್ರಾಮೀಣ ಸ್ಥಳೀಯ ಸಂಸ್ಥೆಗಳು ಮತ್ತು ನಗರ ಸ್ಥಳೀಯ ಸಂಸ್ಥೆಗಳಿಗೆ ರಾಜ್ಯ ಸರ್ಕಾರವು ನೀಡಬೇಕಾದ ಅನುದಾನದ ಬಗ್ಗೆ ಕಾಲಕಾಲಕ್ಕೆ ಶಿಫಾರಸ್ಸು ನೀಡುತ್ತದೆ.
+ ರಾಜ್ಯ ಹಣಕಾಸು ಆಯೋಗದ ಅಧ್ಯಕ್ಷ & ಸದಸ್ಯರ ನೇಮಕ:- ರಾಜ್ಯ ಹಣಕಾಸು ಆಯೋಗದ ಅಧ್ಯಕ್ಷರು ಮತ್ತು ಸದಸ್ಯರುಗಳನ್ನು ರಾಜ್ಯದ ರಾಜ್ಯಪಾಲರು ನೇಮಿಸುತ್ತಾರೆ.

**ಹಣಕಾಸು ಆಯೋಗದ ಅಧ್ಯಕ್ಷರು ಮತ್ತ ಸದಸ್ಯರುಗಳ ಅರ್ಹತೆಗಳು**

+ 2010 ರ ರಾಜ್ಯ ಹಣಕಾಸು ಆಯೋಗದ ಮುಖ್ಯಸ್ಥರ ಮತ್ತು ಸದಸ್ಯರ ಅರ್ಹತೆಗೆ ಸಂಬಂಧಿಸಿದಂತೆ ನಿಯಮಗಳನ್ವಯ ಅಧ್ಯಕ್ಷರ ಮತ್ತು ಸದಸ್ಯರುಗಳು ಈ ಕೆಳಕಂಡ ಅರ್ಹತೆಗಳನ್ನು ಒಳಗೊಂಡಿರಬೇಕು.
+ ಹಣಕಾಸಿನ ವಿಷಯ ಮತ್ತು ಆಡಳಿತಕ್ಕೆ ಸಂಬಂಧಿಸಿದಂತೆ ವಿಸ್ತೃತವಾದ ಮತ್ತು ವಿಶೇಷವಾದ ಜ್ಞಾನ ಹೊಂದಿರಬೇಕು
+ ರಾಜ್ಯಸರ್ಕಾರ ಮತ್ತು ಸ್ಥಳೀಯ ಸರ್ಕಾರಗಳ ಹಣಕಾಸು ಮತ್ತು ಲೆಕ್ಕಪತ್ರಗಳ ಬಗ್ಗೆ ವಿಶೇಷ ಜ್ಞಾನವನ್ನು ಹೊಂದಿರಬೇಕು
+ ಅರ್ಥಶಾಸ್ತ್ರದಲ್ಲಿ ವಿಶೇಷ ಜ್ಞಾನವನ್ನು ಹೊಂದಿರಬೇಕು ಅಥವಾ ಪಂಚಾಯಿತಿ ಅಥವಾ ಮುನ್ಸಿಪಾಲಿಟಿ ವಿದ್ಯಮಾನಗಳ ಬಗ್ಗೆ ಅನುಭವ ಮತ್ತು ಪಾಂಡಿತ್ಯವನ್ನು ಹೊಂದಿರಬೇಕು.

**ಕಾರ್ಯಗಳು:-**

+ ರಾಜ್ಯ ಮತ್ತು ಸ್ಥಳೀಯ ಸಂಸ್ಥೆಗಳ ನಡುವೆ ರಾಜ್ಯ ಸರ್ಕಾರದ ತೆರಿಗೆ ಮತ್ತು ಸುಂಕಗಳನ್ನು ಹಂಚಿಕೆ & ನಿಗದಿ ಮಾಡುವ ಜವಾಬ್ದಾರಿಯನ್ನು ಹೊಂದಿದೆ.
+ ರಾಜ್ಯದ ಸಂಚಿತ ನಿಧಿಯಿಂದ ಸ್ಥಳೀಯ ಸಂಸ್ಥೆಗಳಿಗೆ ನೀಡಲಾಗುವ ಅನುದಾನವನ್ನು ನಿರ್ಧರಿಸುತ್ತದೆ.
+ ಸ್ಥಳೀಯ ಸಂಸ್ಥೆಗಳು ಲಭ್ಯವಿರುವ ಸಂಪನ್ಮೂಲಗಳನ್ನು ಬಳಕೆ ಮಾಡಿಕೊಂಡು ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸಿಕೊಳ್ಳುವ ಬಗ್ಗೆ ವರದಿ ನೀಡುತ್ತದೆ.
+ ಕರ್ನಾಟಕ ರಾಜ್ಯದಲ್ಲಿ ಇದುವರೆಗೂ 4 ಹಣಕಾಸು ಆಯೋಗಗಳನ್ನು ಸ್ಥಾಪಿಸಲಾಗಿದೆ.

**ಮೊದಲ ಹಣಕಾಸು ಆಯೋಗ:-**

+ ಮೊದಲ ಹಣಕಾಸು ಆಯೋಗವನ್ನು 1994ರ ಜೂನ್ 10 ರಂದು ನೇಮಿಸಲಾಗಿತ್ತು.
+ ಅಧ್ಯಕ್ಷರು: ಡಾ. ಜಿ. ತಿಮ್ಮಯ್ಯ
+ ಸದಸ್ಯರುಗಳು:- ಅಬ್ದುಲ್ ಅಜೀಜ್
+ ಸದಸ್ಯ ಕಾರ್ಯದರ್ಶಿ: ಎ.ಕೆ.ಅಗರವಾಲ್

**2ನೇ ಹಣಕಾಸು ಆಯೋಗ:-**

+ ಈ ಆಯೋಗವನ್ನು 2002 ಡಿಸೆಂಬರ್ 23 ರಂದು ನೇಮಿಸಲಾಗಿತ್ತು.
+ ಅಧ್ಯಕ್ಷರು: ಡಾ. ಕೆ.ಪಿ. ಸುರೇಂದ್ರ ನಾಥ
+ ಸದಸ್ಯರುಗಳು:- ಪ್ರೊ. ಗೋವಿಂದರಾವ್

**3ನೇ ಹಣಕಾಸು ಆಯೋಗ:-**

+ ಈ ಆಯೋಗವನ್ನು 2006ರ ಆಗಸ್ಟ್ 28 ರಂದು ನೇಮಿಸಲಾಗಿತ್ತು.
+ ಅಧ್ಯಕ್ಷರು: ಎ.ಜಿ. ಕೊಡ್ಗಿ
+ ಸದಸ್ಯರುಗಳು: ಟಿ. ತಿಮ್ಮೇಗೌಡ, ಡಾ.ಎಸ್.ಮಹೇಂದ್ರ ಕಂಟಿ

**4ನೇ ರಾಜ್ಯ ಹಣಕಾಸು ಆಯೋಗ:-**

+ ಕರ್ನಾಟಕದ ರಾಜ್ಯಪಾಲರು 2015ರ ಡಿಸೆಂಬರ್ 21ರಂದು 4ನೇ ಹಣಕಾಸು ಆಯೋಗದಲ್ಲಿ ಸಿ.ಜಿ. ಚಿನ್ನಸ್ವಾಮಿ ಅವರ ಅಧ್ಯಕ್ಷತೆಯಲ್ಲಿ ನೇಮಕ ಮಾಡಲಾಗಿದೆ. ಹೆಚ್.ಡಿ. ಅಮರನಾಥನ್ ಮತ್ತು ಡಾ. ಹೆಚ್ ಶಶಿಧರ್ ಅವರುಗಳನ್ನು ಸದಸ್ಯರುಗಳನ್ನಾಗಿ ನೇಮಕ ಮಾಡಲಾಗಿದೆ.

## ಭಾರತದಲ್ಲಿ ವಿತ್ತೀಯ ವರ್ಷ/ಹಣಕಾಸು ವರ್ಷ (Financial Year)

- 1867ಕ್ಕಿಂತ ಮುಂಚಿತವಾಗಿ ವಿತ್ತ ವರ್ಷವು ಭಾರತದಲ್ಲಿ **ಮೇ 1ರಿಂದ ಏಪ್ರಿಲ್ 30**ರ ವರೆಗೆ ಜಾರಿಯಲ್ಲಿತ್ತು.
- 1867ರ ನಂತರ ಬ್ರಿಟಿಷ್ ಸರ್ಕಾರವು ಭಾರತ ದೇಶದಲ್ಲಿ ವಿತ್ತ ವರ್ಷವನ್ನು **ಏಪ್ರಿಲ್ 1 ರಿಂದ ಮಾರ್ಚ್ 31**ರವ... ಜಾರಿ ಮಾಡಿತ್ತು.
- 1984ರಲ್ಲಿ **ಎಲ್.ಕೆ. ಝಾ ಸಮಿತಿಯು** ಭಾರತದ ವಿತ್ತ ವರ್ಷವನ್ನು **ಜನವರಿ 1 ರಿಂದ ಡಿಸೆಂಬರ್ 31**ರವ... ಜಾರಿಗೊಳಿಸಬೇಕೆಂದು ಶಿಫಾರಸ್ಸು ಮಾಡಿತ್ತು.
- ಇತ್ತೀಚೆಗೆ ನೀತಿ ಆಯೋಗವು ನೇಮಕ ಮಾಡಿದ್ದ **ಪಿ.ಕೆ. ಸಿನ್ಹಾ** ಅವರ ನೇತೃತ್ವದ ಸಮಿತಿಯು ರೈಲ್ವೆ ಬಜೆಟ್... ಸಾಮಾನ್ಯ ಬಜೆಟ್‌ನೊಂದಿಗೆ ವಿಲೀನಗೊಳಿಸಬೇಕು ಮತ್ತು ವಿತ್ತೀಯ ವರ್ಷದ ಬದಲಾವಣೆ ಬಗ್ಗೆ ಪ್ರಸ್ತಾಪಿಸಲಾಗಿ...
- 2016ರ ಜುಲೈ 6ರಂದು ಸರ್ಕಾರವು ಮಾಜಿ **ಮುಖ್ಯ ಆರ್ಥಿಕ ಸಲಹೆಗಾರ ಶಂಕರ್ ಆಚಾರ್ಯ** ಅವರ ನೇತೃತ್ವದ... ಪಿ.ವಿ. ರಾಜಾರಾಮನ್, ಕೆ.ಎಂ. ಚಂದ್ರಶೇಖರ್, ಡಾ॥ ರಾಜೀವ್ ಕುಮಾರ್ ಸದಸ್ಯರ ಸಮಿತಿಯನ್ನು ಭಾರತ... **ವಿತ್ತ ವರ್ಷದ ಬದಲಾವಣೆ**ಗೆ ಸಂಬಂಧಿಸಿದ ಸಾಧ್ಯತೆ & ಅಪೇಕ್ಷತೆಯನ್ನು ಪರಿಶೀಲಿಸಲು ನೇಮಿಸಿತು. 20... ಡಿಸೆಂಬರ್ 31 ರಂದು ತನ್ನ ವರದಿಯನ್ನು ಸಲ್ಲಿಸಿತು.
- ವಿತ್ತೀಯ ವರ್ಷವನ್ನು **ಜನವರಿ 1 ರಿಂದ ಡಿಸೆಂಬರ್ 31**ಕ್ಕೆ ನಿಗದಿಗೊಳಿಸಲು ಶಿಫಾರಸ್ಸು ಮಾಡಿದ ಹಿನ್ನೆಲೆಯ... ವಿತ್ತ ವರ್ಷವನ್ನು ಬದಲಿಸಲು ನೀತಿ ಆಯೋಗದ 3ನೇ ಆಡಳಿತ ಸಭೆಯಲ್ಲಿ ಪ್ರಧಾನಿಯವರು ಎಲ್ಲಾ ರಾಜ್ಯ... ಮುಖ್ಯಮಂತ್ರಿಗಳಿಗೆ ಸಲಹೆ ನೀಡಿದ್ದರು. ಅಂತಹ ಸಲಹೆಯನ್ನು ದೇಶದಲ್ಲೇ ಮೊದಲ ಬಾರಿಗೆ **ಮಧ್ಯಪ್ರದೇ...** ಸರ್ಕಾರ ಜಾರಿಗೆ ತಂದಿದೆ.

### ಹಣಕಾಸು ವರ್ಷ ಬದಲಾವಣೆ ಮಾಡಿದ ದೇಶದ ಮೊದಲ ರಾಜ್ಯ – ಮಧ್ಯಪ್ರದೇಶ

- 2017ರ ಏಪ್ರಿಲ್ 23 ರಂದು **ನೀತಿ ಆಯೋಗದ 3ನೇ ಆಡಳಿತ ಮಂಡಳಿಯ ಸಭೆ**ಯಲ್ಲಿ ಪ್ರಧಾನಿ ನರೇಂದ್ರ ಮೋ... ಸಲಹೆ ಮೇರೆಗೆ **ಮಧ್ಯಪ್ರದೇಶದ ಮುಖ್ಯಮಂತ್ರಿ ಶಿವರಾಜ್ ಸಿಂಗ್ ಚೌಹಾಣ್** ಅವರ ನೇತೃತ್ವದ ಸರ್ಕಾರವು 20... ಮೇ 2 ರಂದು ಸಚಿವ ಸಂಪುಟದ ಸಭೆಯಲ್ಲಿ ಪ್ರಸ್ತುತವಿದ್ದ ಏಪ್ರಿಲ್ 1 ರಿಂದ ಮಾರ್ಚ್ 31 ರವರೆಗಿನ ವಿತ್ತೀ... ವರ್ಷವನ್ನು **ಜನವರಿ 1 ರಿಂದ ಡಿಸೆಂಬರ್ 31**ಕ್ಕೆ ಬದಲಿಸಲು ತೀರ್ಮಾನಿಸಿದೆ.
- **ಮಧ್ಯಪ್ರದೇಶ**:– ದೇಶದಲ್ಲೇ **ವಿತ್ತ ವರ್ಷವನ್ನು ಬದಲಿಸಿದ ಮೊದಲ ರಾಜ್ಯ**ವಾಗಿದೆ. ಈ ಮೂಲಕ ಮಧ್ಯಪ್ರದೇ... ರಾಜ್ಯದಲ್ಲಿ ವಿತ್ತ ವರ್ಷವು **ಜನವರಿ 1ರಿಂದ ಡಿಸೆಂಬರ್ 31** ಆಗಲಿದೆ. ಮಧ್ಯಪ್ರದೇಶವು ರಾಜ್ಯದ ನೂತನ ಬಜೆಟ್... ಪ್ರಸ್ತುತ ವರ್ಷದ ಡಿಸೆಂಬರ್ ತಿಂಗಳಲ್ಲೇ ಮಂಡಿಸಲು ತೀರ್ಮಾನಿಸಿದೆ.
- ಜನವರಿ–ಡಿಸೆಂಬರ್ ಆರ್ಥಿಕ ವರ್ಷಕ್ಕೆ ಸಂಬಂಧಿಸಿದಂತೆ ಮಾಜಿ ಮುಖ್ಯ ಹಣಕಾಸು ಸಲಹೆಗಾರ **ಶಂ... ಆಚಾರ್ಯ ನೇತೃತ್ವದ ಉನ್ನತ ಸಮಿತಿ** ಈಗಾಗಲೇ ಕೇಂದ್ರ ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಿದೆ.
- **ಜಾರ್ಖಂಡ್**:– 2017 ಮೇ 6 ರಂದು ಜಾರ್ಖಂಡ್‌ನ ಮುಖ್ಯಮಂತ್ರಿ ರಘುಬರ್‌ದಾಸ್ ನೇತೃತ್ವದಲ್ಲಿ ನ... ಸಚಿವ ಸಂಪುಟದಲ್ಲಿ ಪ್ರಸ್ತುತವಿದ್ದ ಏಪ್ರಿಲ್–ಮಾರ್ಚ್ ಹಣಕಾಸು ವರ್ಷವನ್ನು 2018 ರ ಜನವರಿ 1 ರಿಂದ 2... ಡಿಸೆಂಬರ್ 31 ರವರೆಗೆ ಬದಲಿಸಲು ತೀರ್ಮಾನಿಸಿದ 2ನೇ ರಾಜ್ಯ ಎನಿಸಿದೆ. 2017 ರ ಜನವರಿಯಲ್ಲಿ ಬ... ಮಂಡಿಸಿದ **ಮೊಟ್ಟ ಮೊದಲ ರಾಜ್ಯ** ಎಂಬ ಕೀರ್ತಿಗೂ ಪಾತ್ರವಾಗಿದೆ.

**ಶಂಕರ್ ಆಚಾರ್ಯ**:– ಭಾರತದ ಪ್ರಮುಖ ಅರ್ಥಶಾಸ್ತ್ರಜ್ಞರಲ್ಲಿ ಒಬ್ಬರಾದ ಡಾ॥ ಶಂಕರ್ ಆಚಾರ್ಯ ಕೋ... ಮಹೀಂದ್ರ ಬ್ಯಾಂಕ್‌ನ ನಿರ್ದೇಶಕರ ಮಂಡಳಿಯ ಅರೆ ಕಾಲಿಕ ಮುಖ್ಯಸ್ಥರಾಗಿದ್ದು, 1971 ರಿಂದ ವಿಶ್ವ ಬ್ಯಾಂಕ್... ಬೇರೆ ಬೇರೆ ಹುದ್ದೆಗಳಲ್ಲಿ ಕಾರ್ಯನಿರ್ವಹಿಸಿದ್ದು, 1993 ರಿಂದ 2001 ರವರೆಗೆ ಭಾರತ ಸರ್ಕಾರದ ಮುಖ್ಯ ಆ...



ಸಲಹೆಗಾರರಾಗಿ ಕಾರ್ಯನಿರ್ವಹಿಸಿದ್ದಾರೆ. ಇದೇ ಅವಧಿಯಲ್ಲಿ ಸೆಬಿ & ಎಕ್ಸಿಮ್ ಬ್ಯಾಂಕ್... ಮಂಡಳಿಯಲ್ಲಿ ಸದಸ್ಯರಾಗಿದ್ದು, 2001 ರಿಂದ 2003 ರವರೆಗೆ ಪ್ರಧಾನಮಂತ್ರಿ ಆರ್ಥಿಕ ಸಲಹಾ... ಮಂಡಳಿಯ ಸದಸ್ಯರಾಗಿ, 12ನೇ ಹಣಕಾಸು ಆಯೋಗದ ಸದಸ್ಯರಾಗಿ, 1985 ರಿಂದ 1990 ರವ... ಹಣಕಾಸು ಸಚಿವಾಲಯದ ಕಾರ್ಯದರ್ಶಿಯಾಗಿ, ಪ್ರಸ್ತುತ ಭಾರತೀಯ ರಿಸರ್ವ್ ಬ್ಯಾಂಕ್... ಹಣಕಾಸು ಸಲಹಾ ಸಮಿತಿಯ ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ. ಇವರ ನೇತೃತ್ವದಲ್ಲಿ ಕೇಂ... ಸರ್ಕಾರ **ಆರ್ಥಿಕ ವರ್ಷ ಬದಲಾವಣೆಗೆ ಸಂಬಂಧಿಸಿದ ಸಮಿತಿ** ನೇಮಿಸಿತು.

# ಅಂತರಾಷ್ಟ್ರೀಯ ಒಕ್ಕೂಟಗಳು

ರಾಷ್ಟ್ರ ರಾಷ್ಟ್ರಗಳ ನಡುವೆ ವಾಣಿಜ್ಯ, ಆರ್ಥಿಕ ಸಹಕಾರ ನೀಡಲು ಜಾಗತಿಕ ಮಟ್ಟದ & ಪ್ರಾದೇಶಿಕ ಮಟ್ಟದ ಅನೇಕ ಒಕ್ಕೂಟಗಳು ಅಸ್ತಿತ್ವದಲ್ಲಿವೆ. ಇಂತಹ ಒಕ್ಕೂಟಗಳು ಸಾಮಾಜಿಕ & ಸಾಂಸ್ಕೃತಿಕವಾದ ಸಹಕಾರ ನೀಡುವುದು ಮಾತ್ರವಲ್ಲದೇ ಸದಸ್ಯ ರಾಷ್ಟ್ರಗಳ ನಡುವೆ ಆರ್ಥಿಕ ಅಭಿವೃದ್ಧಿಗೂ ಕೂಡ ಸಹಕಾರಿಯಾಗಿವೆ. ಕೈಗಾರಿಕೆಗಳು, ಆಮದು-ರಫ್ತು ನೀತಿಗಳಿಗೆ ಸಂಬಂಧಿಸಿದಂತೆ ಸಹಕಾರ ನೀಡುತ್ತಿವೆ. ಅಂತಹ ಒಕ್ಕೂಟಗಳಲ್ಲಿ ಪ್ರಮುಖವಾದವುಗಳೆಂದರೆ ಬ್ರಿಕ್ಸ್, ಬಿಮ್‌ಸ್ಟೆಕ್, ಸಾರ್ಕ್, ನ್ಯಾಮ್, ಜಿ-7 ರಾಷ್ಟ್ರಗಳ ಒಕ್ಕೂಟ, ಜಿ-20 ರಾಷ್ಟ್ರಗಳ ಒಕ್ಕೂಟ, ಜಿ-4 ರಾಷ್ಟ್ರಗಳ ಒಕ್ಕೂಟ, ಆಸಿಯಾನ್, ಪೂರ್ವ ಏಷ್ಯಾ ರಾಷ್ಟ್ರಗಳ ಒಕ್ಕೂಟಗಳು. ಇವುಗಳು ನೀಡುತ್ತಿರುವ ಆರ್ಥಿಕ ಸಹಕಾರ ಮತ್ತು ಸಂಬಂಧಗಳ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ.

## ಬ್ರಿಕ್ಸ್ (BRICS)




ಬ್ರಿಕ್ಸ್ ರಾಷ್ಟ್ರಗಳು: **ಬ್ರೆಜಿಲ್, ರಷ್ಯಾ, ಭಾರತ, ಚೀನಾ, ದಕ್ಷಿಣ ಆಫ್ರಿಕಾ.**

"Building Better Global Economic BRICs" ಎಂಬ ಪ್ರಕಟಣೆಯಲ್ಲಿ ಯು.ಕೆ.ಯ ಅರ್ಥಶಾಸ್ತ್ರಜ್ಞ & ಗೋಲ್ಡ್ ಸ್ಯಾಚ್‌ಮ್ಯಾನ್ ಸಂಸ್ಥೆ ಮುಖ್ಯಸ್ಥರಾದ **ಸರ್.ಜಿಮ್.** ಓ. ನೀಲ್ ಮೊದಲ ಬಾರಿಗೆ ಬ್ರಿಕ್ಸ್ ಪದವನ್ನು ಬಳಕೆ ಮಾಡಲಾಯಿತು.

ಶೇ 26ರಷ್ಟು ವಿಶ್ವದ ಒಟ್ಟು **ಭೂಭಾಗ,** ಶೇ 22 ವಿಶ್ವದ ಒಟ್ಟು **ಜಿಡಿಪಿಯಲ್ಲಿ** ಪಾಲು, ಶೇ 15ರಷ್ಟು **ಜಾಗತಿಕ ವ್ಯಾಪಾರದ** ಭಾಗ, ಶೇ 40 ರಷ್ಟು ವಿಶ್ವದ ಒಟ್ಟು **ಜನಸಂಖ್ಯೆಯಲ್ಲಿ** ಈ ಸಂಘಟನೆ ಪಾಲು ಹೊಂದಿದೆ. **ವಿಶ್ವ ಬ್ಯಾಂಕಿನ** ಪ್ರಕಾರ ಈ ಸಂಘಟನೆಯ ರಾಷ್ಟ್ರಗಳ ಸರಾಸರಿ ಬೆಳವಣಿಗೆ ದರ 4.6% (2016) & 5.3% (2017) ಎಂದು ಅಂದಾಜಿಸಲಾಗಿದೆ.

### ಮೊದಲ ಸಭೆ - ರಷ್ಯಾದ ಯಕಟರೀನ್ ಬರ್ಗ್




✦ ಬ್ರಿಕ್‌ನ ಮೊದಲ ಶೃಂಗಸಭೆಯು ರಷ್ಯಾದಲ್ಲಿ 2009 ರ ಜೂನ್ 16 ರಂದು ಬ್ರೆಜಿಲ್, ರಷ್ಯಾ, ಭಾರತ, ಚೀನಾ ದೇಶಗಳ ಸಹಭಾಗಿತ್ವದಲ್ಲಿ ಜರುಗಿತು.

✦ ಈ ಸಂದರ್ಭದಲ್ಲಿ ಭಾರತದ ಪ್ರಧಾನಿ ಮನಮೋಹನ್ ಸಿಂಗ್ ಭಾಗವಹಿಸಿದ್ದರು. ಈ 4 ರಾಷ್ಟ್ರಗಳನ್ನು 2050 ರ ವೇಳೆಯ ಮೊದಲ 5 ಪ್ರಭಾವಶಾಲಿ ರಾಷ್ಟ್ರಗಳ ಪಂಕ್ತಿಯಲ್ಲಿವೆ.

✦ ಪ್ರಸ್ತುತ ಜಾಗತಿಕ ಆರ್ಥಿಕ ಹಿಂಜರಿತ, ಜಾಗತಿಕ ಆರ್ಥಿಕಾಭಿವೃದ್ಧಿ & ಬ್ರಿಕ್ ರಾಷ್ಟ್ರಗಳ ಸಂಘಟನೆಯ ಬಲಪಡಿಸುವಿಕೆಯ ಬಗ್ಗೆ ವಿಚಾರಗಳನ್ನು ಚರ್ಚಿಸಲಾಯಿತು.

### ಎರಡನೇ ಸಭೆ - ಬ್ರೆಜಿಲ್‌ನ ಬ್ರೆಸಿಲಿಯಾ




✦ 2010 ಏಪ್ರಿಲ್ 16 ರಂದು ಬ್ರಿಕ್‌ನ 2ನೇ ಶೃಂಗಸಭೆಯು 4 ರಾಷ್ಟ್ರಗಳ ಸಹಭಾಗಿತ್ವದಲ್ಲಿ ಜರುಗಿತು.

✦ ಆಹಾರ ಭದ್ರತೆ, ಶಕ್ತಿ ಉತ್ಪಾದನೆ, ವ್ಯಾಪಾರ ಹೂಡಿಕೆ, ವಿಜ್ಞಾನ & ತಂತ್ರಜ್ಞಾನ, ಮೂಲ ಸೌಕರ್ಯ ನಿರ್ಮಾಣದೊಂದಿಗೆ ಅಂತರ್ಗತ ಪ್ರಗತಿಯ ವಿಚಾರಗಳನ್ನು ಚರ್ಚಿಸಲಾಯಿತು.

✦ ಈ ಸಭೆಯಲ್ಲಿ ದ. ಆಫ್ರಿಕಾವನ್ನು ಅತಿಥಿ ರಾಷ್ಟ್ರವನ್ನಾಗಿ ಆಹ್ವಾನಿಸಲಾಯಿತು.

### ಮೂರನೇ ಸಭೆ - ಚೀನಾದ ಸಾನ್ಯ




✦ 2011 ಏಪ್ರಿಲ್ 14 ರಂದು ಚೀನಾದ ಸಾನ್ಯದಲ್ಲಿ ದ. ಆಫ್ರಿಕಾವನ್ನು ಒಳಗೊಂಡ ಬ್ರಿಕ್ಸ್ ರಾಷ್ಟ್ರಗಳ 3ನೇ ಸಭೆ ಜರುಗಿತು. ಈ ಸಭೆಯಲ್ಲಿ ದ. ಆಫ್ರಿಕಾವು ಬ್ರಿಕ್ ರಾಷ್ಟ್ರದ ಪೂರ್ಣ ಸದಸ್ಯತ್ವವನ್ನು ಪಡೆದಿದ್ದರಿಂದ ಬ್ರಿಕ್ಸ್ ಒಕ್ಕೂಟವಾಗಿ ಮಾರ್ಪಟ್ಟಿತು. ಈ ಸಭೆಯಲ್ಲಿ 21 ನೇ ಶತಮಾನದ ಶಾಂತಿ, ಸಹಕಾರ, ಸೌಹಾರ್ದತೆ & ವೈಜ್ಞಾನಿಕ ಅಭಿವೃದ್ಧಿಯ ಸಮಗ್ರ ದೃಷ್ಟಿ & ಸಮೃದ್ಧತೆಯ ಪಾಲು ಎಂಬ ದೂರದೃಷ್ಟಿ ವಿಚಾರಗಳನ್ನು ಚರ್ಚಿಸಲಾಯಿತು.

## ನಾಲ್ಕನೇ ಸಭೆ - ಭಾರತದ ನವದೆಹಲಿ




✦ 2012 ರ ಮಾರ್ಚ್ 29 ರಂದು ಭಾರತದ ನವದೆಹಲಿಯಲ್ಲಿ ಬ್ರಿಕ್ಸ್ ರಾಷ್ಟ್ರಗಳ 4ನೇ ಶೃಂಗಸಭೆ ಜರುಗಿದ್ದು, ಭಾರತದಲ್ಲಿ ನಡೆದ ಮೊದಲ ಬ್ರಿಕ್ಸ್ ಶೃಂಗಸಭೆ ಎಂಬ ಕೀರ್ತಿಗೆ ಪಾತ್ರವಾಗಿದೆ.

✦ ಜಾಗತಿಕ ಸ್ಥಿರತೆ, ಭದ್ರತೆ, ಸಮೃದ್ಧತೆಯಲ್ಲಿ ಬ್ರಿಕ್ಸ್ ಭಾಗವಹಿಸುವಿಕೆ. ಈ ಸಭೆಯ ಮುಖ್ಯ ಚರ್ಚಿತ ವಿಷಯವಾಗಿದೆ.

✦ ಈ ಸಭೆಯಲ್ಲಿ ಬ್ರಿಕ್ಸ್ ಮುಂದಾಳತ್ವದ ದಕ್ಷಿಣ-ದಕ್ಷಿಣ ರಾಷ್ಟ್ರಗಳ ಅಭಿವೃದ್ಧಿ ಬ್ಯಾಂಕ್ ಸ್ಥಾಪಿಸಲು ಚರ್ಚಿಸಲಾಯಿತು.

✦ ಭಾರತ ಚೀನಾ ಸ್ನೇಹತ್ವ ಸಹಕಾರ ವರ್ಷವನ್ನು 2012 ರ ಬ್ರಿಕ್ಸ್ ಶೃಂಗಸಭೆಯ ನಂತರ ಭಾರತ-ಚೀನಾ ರಾಷ್ಟ್ರಗಳ ಹಲವು ದ್ವಿಪಕ್ಷೀಯ ಮಾತುಕತೆ ನಂತರ ಘೋಷಿಸಲಾಯಿತು.

## ಐದನೇ ಸಭೆ - ದಕ್ಷಿಣ ಆಫ್ರಿಕಾದ ಡರ್ಬಾನ್




✦ 201[illegible] ಮಾರ್ಚ್ [illegible] & 27 [illegible] ದ. ಆಫ್ರಿ[illegible] ಡರ್ಬಾನ್ [illegible] ನಡೆದ [illegible] ಬ್ರಿಕ್ಸ್ ರಾಷ್ಟ್ರ[illegible] ಸಭೆಯಲ್ಲಿ [illegible] ಡೆವೆಲಪ್‌ಮೆಂ[illegible] ಬ್ಯಾಂಕ್ ಸ್ಥಾಪಿಸಲು ಬ್ರಿಕ್ಸ್ ನಾಯ[illegible] ಅಧಿಕೃತವಾಗಿ ಚರ್ಚಿಸಿದರು.

✦ ಇದು ಮೂಲ ಸೌಕರ್ಯ ಸೃಷ್ಟಿಯ ಕೇಂದ್ರೀ[illegible] ಬ್ಯಾಂಕ್ ಹಾಗೂ ಐ.ಎಂ.ಎಫ್ & ಐ.ಬಿ.ಆ[illegible] ರೀತಿಯಲ್ಲಿ ಬ್ರಿಕ್ಸ್ ರಾಷ್ಟ್ರಗಳ ಅಭಿವೃ[illegible] ಹಣಕಾಸು ನೆರವು ನೀಡುವ ಉದ್ದೇಶದಿ[illegible] ಸ್ಥಾಪಿಸಲು ತೀರ್ಮಾನಿಸಲಾಯಿತು.

## ಆರನೇ ಸಭೆ - ಬ್ರೆಜಿಲ್‌ನ ಫೋರ್ಟಲೇಜಾ




✦ 2014 ಜುಲೈ 15 ರಿಂದ 17 ರವರೆಗೆ ಬ್ರಿಕ್ಸ್‌ನ 6 ನೇ ಶೃಂಗಸಭೆ ಜರುಗಿದ್ದು, ಬ್ರಿ[illegible] ರಾಷ್ಟ್ರಗಳ ಬಹುಪಕ್ಷೀಯ ಅಭಿವೃದ್ಧಿ ಬ್ಯಾಂಕ್ ಎಂದೇ ಕರೆಯುವ ಎನ್.ಡಿ.ಬಿ ಅಧಿಕೃತವಾ[illegible] ಈ ಸಭೆಯಲ್ಲಿ ಉದ್ಘಾಟನೆಗೊಂಡಿತು.

✦ ಈ ಸಭೆಯಲ್ಲಿ ಭಾರತದ ಪ್ರಧಾನಿ ನರೇಂದ್ರ ಮೋದಿ ಅವರು ಪ್ರಧಾನಿಯಾಗಿ ಭಾಗವಹಿ[illegible] ಮೊದಲ ಬ್ರಿಕ್ಸ್ ಶೃಂಗಸಭೆಯಾಗಿದೆ.

✦ ಈ ಸಭೆಯಲ್ಲಿ ಶಾಂಘೈ ಸಹಕಾರ ಸಂಘಟನೆಯನ್ನು ವಿಸ್ತರಿಸಿ, ಭಾರತಕ್ಕೆ ಪೂ[illegible] ಸದಸ್ಯತ್ವವನ್ನು ಕೊಡಲು ಸಂಬಂಧಿಸಿದ ಒಪ್ಪಂದಗಳೇರ್ಪಟ್ಟವು.

✦ ಈ ಸಭೆಯಲ್ಲಿ ಬ್ರಿಕ್ಸ್ ರಾಷ್ಟ್ರಗಳ ಜೊತೆ ಯು.ಎನ್.ಎ.ಎಸ್.ಯು.ಆರ್ ಅಂದರೆ ಉರು[illegible] ಅರ್ಜೆಂಟೈನಾ, ಬೊಲಿವಿಯಾ, ಚಿಲಿ, ಕೊಲಂಬಿಯಾ, ಈಕ್ವೆಡಾರ್, ಪೆರುಗ್ವೆ, ಪೆರು, ವೆನಿಜುವೆಲಾ ಮುಂತಾದ ದೇಶ[illegible] ನಾಯಕರುಗಳ ಸಭೆಯೂ ಕೂಡ ಜರುಗಿತು.

## ಏಳನೇ ಸಭೆ - ರಷ್ಯಾದ ಯುಫಾ




✦ 2015 ಜುಲೈ 8 & 9 ರಂದು 7ನೇ ಬ್ರಿಕ್ಸ್ ಶೃಂಗಸಭೆಯು ರಷ್ಯಾದ ಯುಫಾದಲ್ಲಿ ಜರುಗಿತು.

✦ 2015 ಜುಲೈ 20 ರಂದು ಎನ್.ಡಿ.ಬಿ ಅಧಿಕೃತವಾಗಿ ಚೀನಾದ ಶಾಂಘೈ ನಲ್ಲಿ ಸ್ಥಾಪನೆಗೊಂಡಿತು. ಹಾಗೂ ಬ್ರಿಕ್ಸ್ ರಾಷ್ಟ್ರಗಳೊಂದಿಗೆ ಮುಂದಿನ ದಿನಗಳಲ್ಲಿ ಸದಸ್ಯೇತರ ರಾಷ್ಟ್ರಗಳಿಗೂ ಸದಸ್ಯತ್ವ ಕೊಡಲು ತೀರ್ಮಾನಿಸಲಾಯಿತು.

✦ ಈ ಅಧಿವೇಶನದ ಸಂದರ್ಭದಲ್ಲಿ ಶಾಂಘೈ ಸಹಕಾರ ಸಂಘಟನೆ & ಯುರೇಷಿಯಾ ಆರ್ಥಿಕ ಒಕ್ಕೂಟದ ಜಂಟಿ ಸಮ್ಮೇಳನವು ಯುಫಾದಲ್ಲಿ ಜರುಗಿತು.

✦ ಬ್ರೆಜಿಲ್‌ನ ಡಿಲ್ಮಾ ರೂಸೆಫ್, ರಷ್ಯಾದ ವ್ಲಾಡಿಮಿರ್ ಪುಟಿನ್, ಭಾರತದ ನರೇಂದ್ರ ಮೋದಿ, ಚೀನಾದ ಕ್ಸಿ ಜಿನ್ ಪಿಂ[illegible] ದ. ಆಫ್ರಿಕಾದ ಜಾಕೋಬ್ ಜುಮ್ಮಾ ಅವರು ಉಪಸ್ಥಿತರಿದ್ದರು.

## ಎಂಟನೇ ಸಭೆ - ಭಾರತದ ಗೋವಾದ ಬೆನಾಲಿಯಂ




✦ 2016 ಅಕ್ಟೋಬರ್ 15 & 16 ರಂದು 8ನೇ ಬ್ರಿಕ್ಸ್ ಶೃಂಗಸಭೆಯು ಭಾರತದ ಗೋವಾದಲ್ಲಿ ಬೆನಾಲಿಯಂ ನಲ್ಲಿ ಜರುಗಿತು. ಈ ಸಭೆಯೊಂದಿಗೆ ಗೋವಾದ ಬೆನಾಲಿಯಂ ನಲ್ಲಿ 4ನೇ ಬಿಮ್‌ಸ್ಟೆಕ್ ಶೃಂಗಸಭೆಯು ಜೊತೆಗೆ ಜರುಗಿತು.

✦ 2012 ರಲ್ಲಿ ಭಾರತದ ನವದೆಹಲಿಯಲ್ಲಿ ನಡೆದ ಬ್ರಿಕ್ಸ್‌ನ 4ನೇ ಶೃಂಗಸಭೆ ನಂತರ ಭಾರತ ದೇಶದಲ್ಲಿ ನಡೆದ 2ನೇ & ಒಟ್ಟಾರೆ 8ನೇ ಸಮ್ಮೇಳನ ಗೋವಾದಲ್ಲಿ 2016 ರಲ್ಲಿ ಜರುಗಿತು.

✦ ಭಾರತದ ಪ್ರಧಾನಿ **ನರೇಂದ್ರ ಮೋದಿ** ಮತ್ತು ರಷ್ಯಾದ ಅಧ್ಯಕ್ಷ **ವ್ಲಾಡಿಮಿರ್ ಪುಟಿನ್**, ಚೀನಾದ ಅಧ್ಯಕ್ಷರಾದ **ಕ್ಸಿ-ಜಿನ್-ಪಿಂಗ್**, ಬ್ರೆಜಿಲ್‌ನ ಅಧ್ಯಕ್ಷ **ಮೈಕೆಲ್ ಟೆಮರ್** ಮತ್ತು ದಕ್ಷಿಣ ಆಫ್ರಿಕಾದ ಅಧ್ಯಕ್ಷ **ಜಾಕೋಬ್ ಜುಮ್ಮಾ** ಅವರು ಭಾಗವಹಿಸಿದ್ದರು. ಈ ಸಮ್ಮೇಳನದಲ್ಲಿ ಜಗತ್ತಿನಾದ್ಯಂತ ಹರಡಿರುವ ಭಯೋತ್ಪಾದನೆ ಬಗ್ಗೆ ಚರ್ಚಿಸಲಾಯಿತು. ಪಾಕ್‌ನ್ನು **"ಭಯೋತ್ಪಾದನೆಯ ತವರು"** ಎಂದು ಭಾರತದ ಪ್ರಧಾನಿ ನರೇಂದ್ರ ಮೋದಿ ಅವರು ತಮ್ಮ ಭಾಷಣದಲ್ಲಿ ಪ್ರತಿಪಾದಿಸಿದರು.

✦ ಈ ಶೃಂಗದಲ್ಲಿ ಭಯೋತ್ಪಾದನೆ, ತೀವ್ರವಾದ, ಪ್ರಾದೇಶಿಕ ಸುರಕ್ಷತೆ, ಜಾಗತಿಕ ಶಾಂತಿ ಮತ್ತು ಆರ್ಥಿಕ ಸುಧಾರಣೆಯ ಸವಾಲುಗಳು, ಜಾಗತಿಕ ಅರ್ಥ ವ್ಯವಸ್ಥೆಯ ಸುಧಾರಣೆ ಬಗ್ಗೆ ಚರ್ಚೆ ನಡೆಯಿತು.

**ಪ್ರಮುಖ ಒಪ್ಪಂದಗಳೆಂದರೆ:** 1) **ಬ್ರಿಕ್ಸ್ ಕೃಷಿ ಸಂಶೋಧನಾ ವೇದಿಕೆ ಸ್ಥಾಪನೆ** 2) **ಸದಸ್ಯ ರಾಷ್ಟ್ರಗಳ ನಡುವೆ ರಾಜತಾಂತ್ರಿಕ ಸಹಕಾರ** 3) **ಸೀಮಾ ಸುಂಕ ಸಂಗ್ರಹ ವಿಚಾರದಲ್ಲಿ ಪರಸ್ಪರ ಸಹಕಾರಕ್ಕೆ ಸಮ್ಮತಿ.**

## 8ನೇ ಬ್ರಿಕ್ಸ್ ಶೃಂಗಸಭೆಯಲ್ಲಿ ಮಾಡಲಾದ ಘೋಷಣೆಗಳು

✦ ಸುದೀರ್ಘವಾಗಿ ಸಮಾಲೋಚನೆ ನಡೆಸಿದ ನಂತರ 5 ರಾಷ್ಟ್ರಗಳ ರಾಜ ತಾಂತ್ರಿಕರು ಗೋವಾ ಘೋಷಣೆಯನ್ನು ಸಿದ್ದಪಡಿಸಿದರು.

✦ ಭಾರತ 1996ರಲ್ಲಿ ವಿಶ್ವಸಂಸ್ಥೆಯಲ್ಲಿ ಮಂಡಿಸಿರುವ ಅಂತರಾಷ್ಟ್ರೀಯ ಭಯೋತ್ಪಾದನೆಯ ಬಗೆಗಿನ ಸಮಗ್ರ ಒಪ್ಪಂದ (ಸಿಸಿಐಟಿ)ವನ್ನು ಶೀಘ್ರವಾಗಿ ಜಾರಿಗೆ ತರಲು ಎಲ್ಲಾ ರಾಷ್ಟ್ರಗಳು ಸಹಕರಿಸಬೇಕೆಂಬ ಭಾರತದ ಬೇಡಿಕೆಯನ್ನು ಒಳಗೊಂಡಿತ್ತು.

✦ ತಮ್ಮ ಭೂಪ್ರದೇಶದೊಳಗೆ ಭಯೋತ್ಪಾದನೆ ಚಟುವಟಿಕೆಯನ್ನು ತಡೆಗಟ್ಟುವುದು ಆಯಾ ದೇಶದ ಜವಾಬ್ದಾರಿ ಎಂದು 5 ರಾಷ್ಟ್ರಗಳ ಮುಖಂಡರು ಘೋಷಿಸಿದರು.

✦ ಬ್ರಿಕ್ಸ್‌ನ ಕೆಲವು ದೇಶಗಳ ವಿರುದ್ಧ ಇತ್ತೀಚೆಗೆ ನಡೆದ ದಾಳಿಗಳನ್ನ ವಿರೋಧಿಸುವುದಾಗಿ ಮತ್ತು ಯಾವುದೇ ರೂಪದಲ್ಲಿ ವ್ಯಕ್ತವಾಗುವ ಭಯೋತ್ಪಾದನೆಯನ್ನು ಬಲವಾಗಿ ಖಂಡಿಸುವುದಾಗಿ ನಿರ್ಣಯವನ್ನು ಸದಸ್ಯ ರಾಷ್ಟ್ರಗಳು ತೆಗೆದುಕೊಳ್ಳಲಾಯಿತು.

✦ ಸಿದ್ಧಾಂತ, ಧರ್ಮ ಅಥವಾ ಮತ್ಯಾವುದೇ ಹೆಸರಿನಲ್ಲಿ ಉಗ್ರವಾದಕ್ಕೆ ಸಮರ್ಥನೆ ನೀಡಲು ಸಾಧ್ಯವಿಲ್ಲ ಎಂದು ಬ್ರಿಕ್ಸ್ ಸದಸ್ಯ ರಾಷ್ಟ್ರಗಳು ಒಗ್ಗಟ್ಟಿನಿಂದ ಪ್ರತಿಪಾದಿಸಿದವು.

✦ ಭಯೋತ್ಪಾದನೆ ತಡೆಗೆ ಸಹಕಾರ ಇನ್ನಷ್ಟು ಗಟ್ಟಿಗೊಳಿಸಲು ಒಪ್ಪಿದ್ದೇವೆ ಎಂದು 112ರ ಪ್ಯಾರಾಗಳ ಘೋಷಣೆಯಲ್ಲಿ ಹೇಳಲಾಗಿದೆ.

✦ ಆರ್ಥಿಕ ಸಹಕಾರ ಇನ್ನಷ್ಟು ಬಲಪಡಿಸಲು ಜಿ-20 ಸದಸ್ಯ ರಾಷ್ಟ್ರಗಳ ಜತೆ ನಿಕಟ ಕಾರ್ಯಾಚರಣೆ ನಡೆಸಲು ಸದಸ್ಯ ರಾಷ್ಟ್ರಗಳು ಸಮ್ಮತಿ ಸೂಚಿಸಿದವು.

✦ ಬ್ರಿಕ್ಸ್‌ನ ರೈಲ್ವೆ ಸಂಶೋಧನಾ ಜಾಲ ಹಾಗೂ ಬ್ರಿಕ್ಸ್ ಕ್ರೀಡಾ ಸಮಿತಿಗಳನ್ನು ರಚಿಸಲು ಈ ಹಿಂದೆ ನಿರ್ಧರಿಸಲಾಗಿತ್ತು. ಭಾರತ ಈ ಸಂಬಂಧ ಒಪ್ಪಂದಕ್ಕೆ ಸಹಿ ಹಾಕಿದ್ದು ಇತರೆ ದೇಶಗಳು ಕೂಡ ಇದಕ್ಕೆ ಸಮ್ಮತಿ ವ್ಯಕ್ತಪಡಿಸಿವೆ.

## ಒಂಭತ್ತನೇ ಸಭೆ - ಚೀನಾದ ಜಿಯಾಮೆನ್




✦ 2017 ರ ಸೆಪ್ಟೆಂಬರ್ 3 ರಿಂದ 5 ರವರೆಗೆ ಚೀನಾದ ಜಿಯಾಮೆನ್ ನಲ್ಲಿ ಬ್ರಿಕ್ಸ್‌ನ 9ನೇ ಶೃಂಗಸಭೆ ಜರುಗಲಿದೆ. ಬ್ರಿಕ್ಸ್ ಸಮ್ಮೇಳನ-2017ರ ಧ್ಯೇಯವಾಕ್ಯವಾದ **"BRICS: Stronger Partnership for a Brighter Future"** ನ್ನು ಚೀನಾ ದೇಶವು ಬಿಡುಗಡೆ ಮಾಡಿದೆ. ಈ ಸಮ್ಮೇಳನವು ಪ್ರಮುಖವಾಗಿ 5 ಆದ್ಯತೆಗಳನ್ನು ಒಳಗೊಂಡಿದೆ.

**1) ಸಹಕಾರವನ್ನು ಬಲಿಷ್ಟಗೊಳಿಸುವುದು. 2) ಜಾಗತಿಕ ಆಡಳಿತವನ್ನು ಬಲಿಷ್ಟಗೊಳಿಸುವುದು. 3) ಜನ & ಜನರ ನಡುವೆ ಪರಸ್ಪರ ವಿನಿಮಯ ತರುವುದು. 4) ಸಾಂಸ್ಥಿಕ ಸುಧಾರಣೆ ಮಾಡುವುದು. 5) ವಿಶಾಲವಾದ ಸಹಭಾಗಿತ್ವವನ್ನು ಬೆಳೆಸುವುದು.**

| ಶೃಂಗಸಭೆ | ಅವಧಿ | ಸ್ಥಳ | ವಿಶೇಷತೆ |
|---|---|---|---|
| 1 | 2009ರ ಜೂನ್ 16 | ರಷ್ಯಾದ ಯಕಟರೀನ್ ಬರ್ಗ್ | ಮೊದಲ ಶೃಂಗಸಭೆ |
| 2 | 2010ರ ಏಪ್ರಿಲ್ 16 | ಬ್ರೆಜಿಲ್‌ನ ಬ್ರೆಸಿಲಿಯಾ | ದಕ್ಷಿಣ ಆಫ್ರಿಕಾಗೆ ಸದಸ್ಯತ್ವಕ್ಕೆ ಆಹ್ವಾನ |
| 3 | 2011ರ ಏಪ್ರಿಲ್ 14 | ಚೀನಾದ ಸಾನ್ಯ | ದಕ್ಷಿಣ ಆಫ್ರಿಕಾ ಸೇರ್ಪಡೆ |
| 4 | 2012ರ ಮಾರ್ಚ್ 29 | ಭಾರತದ ನವದೆಹಲಿ | ಭಾರತದಲ್ಲಿನ ಮೊದಲ ಶೃಂಗಸಭೆ |
| 5 | 2013ರ ಮಾರ್ಚ್ 26 & 27 | ದಕ್ಷಿಣ ಆಫ್ರಿಕಾದ ಡರ್ಬನ್ | NDB ಸ್ಥಾಪನೆಗೆ ಮೊದಲ ಬಾರಿ ಚರ್ಚೆ |
| 6 | 2014ರ ಜುಲೈ 15 ರಿಂದ 17 | ಬ್ರೆಜಿಲ್‌ನ ಪೋರ್ಟಲೇಜಾ | NDB ಸ್ಥಾಪನೆಗೆ ಒಪ್ಪಂದ |
| 7 | 2015ರ ಜುಲೈ 8, 9 | ರಷ್ಯಾದ ಯುಫಾ | NDB ಅಧಿಕೃತ ಕಾರ್ಯಾರಂಭ |
| 8 | 2016ರ ಅಕ್ಟೋಬರ್ 15 | ಭಾರತದ ಗೋವಾ | ಭಾರತದ 2ನೇ ಸಭೆ |
| 9 | 2017 ಸೆಪ್ಟೆಂಬರ್ 3 – 5 | ಚೀನಾದ ಜಿಯಾಮೆನ್ | ಮುಂದಿನ ಸಭೆ |

## 2016 ರಲ್ಲಿ ಭಾರತದಲ್ಲಿ ಜರುಗಿದ ಬ್ರಿಕ್ಸ್ ರಾಷ್ಟ್ರಗಳ ಸಭೆಗಳು

| ಸಭೆಗಳು | ಸ್ಥಳ | ದಿನಾಂಕ |
|---|---|---|
| ಚಲನಚಿತ್ರೋತ್ಸವ | ನವದೆಹಲಿ | 2016 ಸೆಪ್ಟೆಂಬರ್ 2 ರಿಂದ ಸೆ. 6 |
| ಪ್ರವಾಸೋದ್ಯಮ ಸಭೆ | ಮಧ್ಯಪ್ರದೇಶದ ಖಜುರಾಹೊ | 2016 ಸೆ. 1 & 2 |
| ಪರಿಸರ ಸಚಿವರ ಸಮ್ಮೇಳನ | ಗೋವಾ | 2016 ಸೆ. 16 |
| ಕೃಷಿ ಸಚಿವರ ಸಮ್ಮೇಳನ | ನವದೆಹಲಿ | 2016 ಸೆಪ್ಟೆಂಬರ್ 23 |
| ಮೊದಲ ವ್ಯಾಪಾರ ಉತ್ಸವ | ನವದೆಹಲಿ | 2016 ಅಕ್ಟೋಬರ್ 12 ರಿಂದ 14 |
| ಯು–17 ಫುಟ್ಬಾಲ್ ಕಪ್ | ಗೋವಾ | 2016 ಅ.5 –15 (ಬ್ರೆಜಿಲ್ ಚಾಂಪಿಯನ್) |
| ಆರ್ಥಿಕ ವೇದಿಕೆ | ಗೋವಾ | 2016 ಅಕ್ಟೋಬರ್ 13 ರಿಂದ 14 |
| ಯುವ ಸಮ್ಮೇಳನ | ಗೌಹಾತಿ | 2016 ಜುಲೈ 1 ರಿಂದ 3 |
| ಮಹಿಳಾ ಸಂಸದೀಯರ ಸಮ್ಮೇಳನ | ಜೈಪುರ | 2016 ಆಗಸ್ಟ್ 20 ರಿಂದ 21 |
| ದೂರಸಂಪರ್ಕ ಸಚಿವ ಸಮ್ಮೇಳನ | ಬೆಂಗಳೂರು | 2016 ನವೆಂಬರ್ 11 |
| 8ನೇ ಸಚಿವರ ಸಮ್ಮೇಳನ | ಗೋವಾ | 2016 ಅಕ್ಟೋಬರ್ 15 & 16 |
| ಶಿಕ್ಷಣ ಸಮ್ಮೇಳನ, ಮಾಧ್ಯಮ ವೇದಿಕೆ, | ನವದೆಹಲಿ | 2016 |
| ನಗರವೇದಿಕೆ, ಇಂಧನ ಉಳಿತಾಯ & ದಕ್ಷತೆ ಮೇಲಿನ ಕಾರ್ಯಾಚರಣೆ ಸಭೆ | ವಿಶಾಖಪಟ್ಟಣ | 2016 |
| ವಿಪತ್ತು ನಿರ್ವಹಣಾ ಸಭೆ | ರಾಜಸ್ಥಾನದ ಉದಯಪುರ | 2016 |

**ಬ್ರಿಕ್ಸ್ ರಾಷ್ಟ್ರಗಳ ಮಾಧ್ಯಮ ಸಹಕಾರ ಏಜೆನ್ಸಿ (Media Co-operation Agency of Brics):-** 2017 ಜೂನ್ 8 ರಂದು ಚೀನಾದ ಬೀಜಿಂಗ್‌ನಲ್ಲಿ ಬ್ರಿಕ್ಸ್‌ನ 5 ರಾಷ್ಟ್ರಗಳು 1 ಮಿಲಿಯನ್ ಡಾಲರ್ ಮೂಲ ಬಂಡವಾಳದೊಂದಿಗೆ ಮಾಧ್ಯಮ ಸಹಕಾರ ಏಜೆನ್ಸಿಯನ್ನು ಸ್ಥಾಪಿಸಲು ತೀರ್ಮಾನಿಸಿದೆ. ಇದರಲ್ಲಿ ಭಾರತದ ಹಿಂದೂ ಗ್ರೂಪ್ ಮಾಧ್ಯಮ ಏಜೆನ್ಸಿ ಭಾಗವಹಿಸಿತ್ತು. ಹಣಕಾಸು ಮಾಹಿತಿ ಸೇವೆ ಜನರಿಂದ ಜನರಿಗೆ ಸಂಪರ್ಕ ಉತ್ತೇಜನ, ಬ್ರಿಕ್ಸ್ ಡಿಜಿಟಲ್ ಮಾಧ್ಯಮದ ಅಭಿವೃದ್ಧಿ, ವರದಿ ಸಮತೋಲನ ನೀಡುವುದು. ಮುಂತಾದ ಉದ್ದೇಶಗಳನ್ನು ಹೊಂದಿದೆ.

# ಬ್ರಿಕ್ಸ್ ಅಭಿವೃದ್ಧಿ ಬ್ಯಾಂಕ್ (NDB- New Development Bank)




✦ ಬ್ರಿಕ್ಸ್ ರಾಷ್ಟ್ರಗಳ ಅಭಿವೃದ್ಧಿಗೆ ಪೂರಕವಾದ ಹಣಕಾಸು ನೆರವು ನೀಡಲು ಬ್ರಿಕ್ಸ್ ರಾಷ್ಟ್ರಗಳ ಸಹಭಾಗಿತ್ವದಲ್ಲಿ ಬಹುಪಕ್ಷೀಯ ಅಭಿವೃದ್ಧಿ ಬ್ಯಾಂಕ್ ಆಗಿ ಹಾಗೂ ಅಂತರಾಷ್ಟ್ರೀಯ ಸಂಘಟನೆಗಳಾದ ಐ.ಎಂ.ಎಫ್, ಐ.ಬಿ.ಆರ್.ಡಿಗಳ ಪರ್ಯಾಯವಾಗಿ ಬ್ರಿಕ್ಸ್ ರಾಷ್ಟ್ರಗಳ ಅಭಿವೃದ್ಧಿ ಉದ್ದೇಶದಿಂದ ಸ್ಥಾಪಿತವಾದ ಹಣಕಾಸು ಸಂಸ್ಥೆಯಾಗಿದೆ.

✦ **ಸ್ಥಾಪನೆ:** 2014ರ ಬ್ರೆಜಿಲ್‌ನ ಸಭೆಯಲ್ಲಿ ಪ್ರಸ್ತಾಪ. ಅಧಿಕೃತವಾಗಿ **2015ರ ಜುಲೈ 20 ರಷ್ಯಾದ ಶೃಂಗಸಭೆ**

✦ **ಕೇಂದ್ರ ಕಚೇರಿ: ಚೀನಾದ ಶಾಂಘೈ,** ಪ್ರಾದೇಶಿಕ ಕಚೇರಿ: **ದಕ್ಷಿಣ ಆಫ್ರಿಕಾದ ಜೋಹಾನ್ಸ್ ಬರ್ಗ್**

✦ **ಅಧ್ಯಕ್ಷರು:** ಭಾರತದ ಕೆ.ವಿ.ಕಾಮತ್ (2015ರ ಮೇ 11 ರಲ್ಲಿ ನೇಮಕ)

✦ **NDB ಎಂದು ನಾಮಕರಣ ಮಾಡಿದವರು: ನರೇಂದ್ರ ಮೋದಿ.** ಮಿನಿ IMF ಎಂದು ಬಣ್ಣನೆ

✦ **ಸಂಘಟನೆ:**– ಗೌರ್‍ನರ್ ಮಂಡಳಿ (ರಷ್ಯಾ ಅಧ್ಯಕ್ಷತೆ), ನಿರ್ದೇಶಕರ ಮಂಡಳಿ (ಬ್ರೆಜಿಲ್ ಅಧ್ಯಕ್ಷತೆ) & ಓರ್ವ ಉಪಾಧ್ಯಕ್ಷ & ಅಧ್ಯಕ್ಷರು.

✦ **ಉದ್ದೇಶಗಳು:**- ಸದಸ್ಯ ರಾಷ್ಟ್ರಗಳ ಮೂಲ ಸೌಕರ್ಯ & ಸುಸ್ಥಿರ ಅಭಿವೃದ್ಧಿ ಯೋಜನೆಗಳಿಗೆ ಉತ್ತೇಜನ ನೀಡುವುದು

✦ ಜಾಗತಿಕ & ರಾಷ್ಟ್ರೀಯ ಅಭಿವೃದ್ಧಿ ಬ್ಯಾಂಕುಗಳಿಗೆ ಪೂರಕವಾದ ಹಣಕಾಸು ನೆರವು ನೀಡುವ ಜಾಲವನ್ನು ಹೊಂದಿರುವುದು.

✦ ಭೌಗೋಳಿಕ ಅಗತ್ಯತೆಗನುಗುಣವಾದ ಯೋಜನೆಗಳಿಗೆ ಹಣಕಾಸು ನೆರವು ಒದಗಿಸುವುದು.

✦ ಬ್ರಿಕ್ಸ್ ರಾಷ್ಟ್ರಗಳು ತಲಾ ಶೇ 20 ರಷ್ಟು ಮತ ಚಲಾಯಿಸುವ ಹಕ್ಕು & ಷೇರು ಪ್ರಮಾಣ. ತಲಾ 10 ಬಿಲಿಯನ್ ಅಮೆರಿಕನ್ ಡಾಲರ್ ಅಧಿಕೃತ ಬಂಡವಾಳ ಹಾಗೂ 50% ರಷ್ಟು ಹಂಚಿಕೆಯಾಗದ ಷೇರುಗಳು ಹೊಂದಿದೆ.

## ಕುಂದಾಪುರ ವಾಮನ ಕಾಮತ್ (ಕೆ.ವಿ. ಕಾಮತ್)



✦ ಎನ್.ಡಿ.ಬಿ ಯ ಮೊದಲ ಅಧ್ಯಕ್ಷತೆಯನ್ನು ಭಾರತದ ಕೆ.ವಿ. ಕಾಮತ್ ಹೊಂದಿದ್ದಾರೆ.

✦ 1996 ಮೇ 1 ರಿಂದ 2009 ಏಪ್ರಿಲ್ ವರೆಗೆ ಐ.ಸಿ.ಐ.ಸಿ.ಐ ಬ್ಯಾಂಕ್‌ನ ಕಾರ್ಯನಿರ್ವಾಹಕ ಮುಖ್ಯಸ್ಥರಾಗಿ ಹಾಗೂ ಇನ್ಫೋಸಿಸ್‌ನ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿದ್ದಾರೆ.

✦ 1988 ರಲ್ಲಿ ಎಡಿಬಿ ಯ ಖಾಸಗಿ ವಲಯ ವಿಭಾಗದ ವಿವಿಧ ಕಾರ್ಯಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದರು.

✦ 2005 ರ ಬ್ಯುಸಿನೆಸ್ ಇಂಡಿಯಾದ ಬ್ಯುಸಿನೆಸ್ ಮ್ಯಾನ್ ಆಫ್ ದ ಇಯರ್, 2007 ರ ದ ಎಕನಾಮಿಕ್ ಟೈಮ್ಸ್‌ನ ಬ್ಯುಸಿನೆಸ್ ಲೀಡರ್ ಅವಾರ್ಡ್ ಆಫ್ ದ ಇಯರ್, ಏಷ್ಯಾದ ಫೋರ್ಬ್ಸ್ ನಿಂದ ಬ್ಯುಸಿನೆಸ್ ಮ್ಯಾನ್ ಆಫ್ ದ ಇಯರ್ 2008 ರಲ್ಲಿ ಭಾರತ ಸರ್ಕಾರದಿಂದ ಪದ್ಮಭೂಷಣ ಪ್ರಶಸ್ತಿ ನೀಡಲಾಗಿದೆ.

## ಬ್ರಿಕ್ಸ್ ರಾಷ್ಟ್ರಗಳ ಸಂಘಟನೆಯ ಹಣಕಾಸು ಸಂಪನ್ಮೂಲ - ಒಂದು ರಾಷ್ಟ್ರ ಒಂದು ಮತ

ಮೂಲ ಬಂಡವಾಳ 50 ಶತಕೋಟಿ ಡಾಲರ್ ತುರ್ತು ಮೀಸಲು ನಿಧಿ 100 ಶತಕೋಟಿ ಡಾಲರ್

| ರಾಷ್ಟ್ರಗಳು | ಬ್ರೆಜಿಲ್ | ರಷ್ಯಾ | ಭಾರತ | ಚೀನಾ | ದ. ಆಫ್ರಿಕಾ |
|---|---|---|---|---|---|
| ಮೂಲ ಬಂಡವಾಳ (50 ಶತಕೋಟಿ ಡಾಲರ್ ಅಥವಾ 3.19ಲಕ್ಷ ಕೋಟಿ ರೂ) | 10 | 10 | 10 | 10 | 10 |
| ತುರ್ತು ಮೀಸಲು ನಿಧಿ 100ಶತಕೋಟಿ ಡಾಲರ್‌ಅಥವಾ 6.3ಲಕ್ಷ ಕೋಟಿ ರೂ | 1800 (1.1ಲಕ್ಷ ಕೋಟಿ) | 1800 (1.1ಲಕ್ಷ ಕೋಟಿ) | 1800 (1.1ಲಕ್ಷ ಕೋಟಿ) | 4100 (2.6ಲಕ್ಷ ಕೋಟಿ) | 500 (32ಸಾವಿರ ಕೋಟಿ) |

## ನ್ಯೂ ಡೆವಲಪ್‌ಮೆಂಟ್ ಬ್ಯಾಂಕ್‌ನಿಂದ ಭಾರತದ ಸಾಲ

ಮಧ್ಯಪ್ರದೇಶದ ರಸ್ತೆ ಯೋಜನೆಗಳನ್ನು ಉನ್ನತೀಕರಿಸಲು ಭಾರತವು ನ್ಯೂ ಡೆವಲಪ್‌ಮೆಂಟ್ ಬ್ಯಾಂಕ್‌ನಿಂದ 350ಮಿಲಿಯನ್ ಯುಎಸ್ ಡಾಲರ್‌ನ್ನು ಸಾಲವಾಗಿ ಪಡೆಯುವ ಒಪ್ಪಂದಕ್ಕೆ 2017ರ ಮಾರ್ಚ್ 30 ರಂದು ಸಹಿ ಹಾಕಿದೆ. ಭಾರತ ಸರ್ಕಾರದ ಪರವಾಗಿ **ಆರ್ಥಿಕ ವಿದ್ಯಮಾನ ಇಲಾಖೆ ಜಂಟಿ ಕಾರ್ಯದರ್ಶಿ ರಾಜ್‌ಕುಮಾರ್** ಮತ್ತು ನ್ಯೂ ಡೆವಲಪ್‌ಮೆಂಟ್ ಬ್ಯಾಂಕ್‌ನ ಉಪಾಧ್ಯಕ್ಷ & **ಮುಖ್ಯ ಕಾರ್ಯನಿರ್ವಹಣಾಧಿಕಾರಿ ಜಿಯಾನ್ ಜು** ಸಹಿ ಹಾಕಿದ್ದಾರೆ.

## ಬಿಮ್‌ಸ್ಟೆಕ್ (BIMSTEC - Bay of Bengal Initiative for Multi-Sectoral Technical and Economic Co-operation)




ಸ್ಥಾಪನೆ: 1997ರ ಜೂನ್ 6, ಕೇಂದ್ರ ಕಚೇರಿ: ಬಾಂಗ್ಲಾದ ಢಾಕಾ

✦ ಬಹುವಲಯ ತಾಂತ್ರಿಕ ಮತ್ತು ಆರ್ಥಿಕ ಸಹಕಾರಕ್ಕಾಗಿ ಬಂಗಾಳ ಕೊಲ್ಲಿ ಸುತ್ತಲಿನ ರಾಷ್ಟ್ರಗಳ ಒಕ್ಕೂಟ. ಬಿಮ್‌ಸ್ಟೆಕ್ ಒಕ್ಕೂಟದಲ್ಲಿ 7 ರಾಷ್ಟ್ರಗಳಾದ **ಭಾರತ, ಬಾಂಗ್ಲಾದೇಶ, ಮ್ಯಾನ್ಮಾರ್, ಶ್ರೀಲಂಕಾ, ಥಾಯ್ಲೆಂಡ್, ಭೂತಾನ್ ಮತ್ತು ನೇಪಾಳ** ದೇಶಗಳು ಸೇರಿ ಒಕ್ಕೂಟ ರಚಿಸಿಕೊಂಡಿವೆ. (ಮಿನಿ ಸಾರ್ಕ್ ಎಂದು ಕರೆಯಲಾಗಿದೆ. ಕಾರಣ ಸಾರ್ಕ್‌ನ 5 ರಾಷ್ಟ್ರಗಳು & ಇತರೆ 2 ರಾಷ್ಟ್ರಗಳು ಸೇರಿವೆ.)

✦ ಈ ಒಕ್ಕೂಟದಲ್ಲಿ ಸಾರ್ಕ್‌ನ ಸದಸ್ಯ ರಾಷ್ಟ್ರಗಳಾದ ಪಾಕಿಸ್ತಾನ, ಅಫ್ಘಾನಿಸ್ತಾನ & ಮಾಲ್ಡೀವ್ಸ್ ರಾಷ್ಟ್ರಗಳು ಸೇರಿಲ್ಲ. ಇವುಗಳ ಬದಲಿಗೆ ಸಾರ್ಕ್ ಒಕ್ಕೂಟದ ರಾಷ್ಟ್ರಗಳಲ್ಲದ ಮಯನ್ಮಾರ್ & ಥಾಯ್ಲೆಂಡ್ ರಾಷ್ಟ್ರಗಳು ಸೇರಿವೆ.

✦ **ಉದ್ದೇಶ:** ವಾಣಿಜ್ಯ, ಹೂಡಿಕೆ, ತಂತ್ರಜ್ಞಾನ, ಪ್ರವಾಸೋದ್ಯಮ, ಮಾನವ ಸಂಪನ್ಮೂಲ ಅಭಿವೃದ್ಧಿ, ಕೃಷಿ, ಮೀನುಗಾರಿಕೆ, ಸಾರಿಗೆ & ಸಂಪರ್ಕ, ಜವಳಿ ಉದ್ಯಮ, ಚರ್ಮ ಇತ್ಯಾದಿಗೆ ಸಂಬಂಧಿಸಿದ ಸಹಕಾರಗಳನ್ನು ಒಳಗೊಂಡಿದೆ.

✦ **ಹಿನ್ನಲೆ:**- 1997 ಜೂನ್ 6 ರಂದು ಬ್ಯಾಂಕಾಕ್‌ನಲ್ಲಿ ಬಾಂಗ್ಲಾ ದೇಶ, ಭಾರತ, ಶ್ರೀಲಂಕಾ, ಥಾಯ್ಲೆಂಡ್ (BIST-EC)ಈ 4 ದೇಶಗಳು ಸೇರಿ ಉಪ ಪ್ರಾದೇಶಿಕ ಆರ್ಥಿಕ ಸಹಕಾರ ಒಕ್ಕೂಟವನ್ನು ರಚಿಸಿಕೊಂಡವು.

✦ 1997 ಡಿಸೆಂಬರ್ 22 ರಂದು ಬ್ಯಾಂಕಾಕ್‌ನ ವಿಶೇಷ ಸಚಿವರ ಸಮ್ಮೇಳನದಲ್ಲಿ ಮಯನ್ಮಾರ್ ಪೂರ್ಣಕಾಲಿಕ ಸದಸ್ಯತ್ವ ಪಡೆದಿತ್ತು. ನಂತರ BIMST-EC ಆಗಿ ರೂಪುಗೊಂಡಿತು.

✦ 1998 ರಲ್ಲಿ ನೇಪಾಳ, 2004 ರಲ್ಲಿ ಭೂತಾನ್ ಈ ಒಕ್ಕೂಟದ ಸದಸ್ಯತ್ವ ಪಡೆದವು.

✦ 2004 ಜುಲೈ 31 ರಂದು ಈ ಒಕ್ಕೂಟಕ್ಕೆ **'ಬಿಮ್‌ಸ್ಟೆಕ್'** ಎಂಬ ಹೊಸ ಹೆಸರು ನೀಡಲಾಯಿತು.

### ಬಿಮ್‌ಸ್ಟೆಕ್ ಒಕ್ಕೂಟದ ಆದ್ಯತಾ ವಲಯಗಳು:-

✦ 1998 ನವೆಂಬರ್ 19 ರಂದು ಢಾಕಾದಲ್ಲಿ ನಡೆದ ಒಕ್ಕೂಟದ ಆ ಸಚಿವರ ಸಭೆಯಲ್ಲಿ 6 ಆದ್ಯತಾ ವಲಯಗಳನ್ನುಗುರುತಿಸಿದೆ. ವ್ಯಾಪಾರ & ಹೂಡಿಕೆ (ಬಾಂಗ್ಲಾ ದೇಶ), ಸಾರಿಗೆ ಸಂಪರ್ಕ, ಪ್ರವಾಸೋದ್ಯಮ (ಭಾರತ), ಶಕ್ತಿ (ಮಯನ್ಮಾರ್), ತಂತ್ರಜ್ಞಾನ (ಶ್ರೀಲಂಕಾ) ಮತ್ಸ್ಯೋದ್ಯಮ (ಥಾಯ್ಲೆಂಡ್) ದೇಶಗಳು ಮುನ್ನಡೆಸುವ ಜವಾಬ್ದಾರಿ ಹೊಂದಿವೆ. ಆದರೆ 2005 ರ ನಂತರ ಈ ಆದ್ಯತಾ ವಲಯಗಳ ಸಂಖ್ಯೆ 14 ಕ್ಕೆ ಹೆಚ್ಚಾಗಿವೆ. ಕೃಷಿ, ಸಾರ್ವಜನಿಕ ಆರೋಗ್ಯ, ಬಡತನ ನಿವಾರಣೆ, ಭಯೋತ್ಪಾದನೆ ನಿಯಂತ್ರಣ, ಪರಿಸರ & ನೈಸರ್ಗಿಕ ವಿಪತ್ತು ನಿರ್ವಹಣೆ (ಭಾರತ), ಸಂಸ್ಕೃತಿ, ಹವಾಮಾನ ಬದಲಾವಣೆ, ಜನರಿಂದ ಜನರಿಗೆ ಸಂಪರ್ಕ ಮುಖ್ಯವಾಗಿ...

✦ 2005 ರಿಂದ ಬಿಮ್‌ಸ್ಟೆಕ್ ದೇಶಗಳ ಅಭಿವೃದ್ಧಿಗೆ ಪೂರಕವಾದ ಸಹಕಾರ ನೀಡಲು ಏಷ್ಯಾ ಅಭಿವೃದ್ಧಿ ಬ್ಯಾಂಕ್ ಒಕ್ಕೂಟದ ಅಭಿವೃದ್ಧಿ ಪಾಲುದಾರಿಕೆಯಾಗಿದೆ.

### ಬಿಮ್‌ಸ್ಟೆಕ್ ಶೃಂಗಸಭೆಗಳು (ಮುಖ್ಯಸ್ಥರ ಸಮ್ಮೇಳನ)

| ಶೃಂಗಸಭೆ | ವರ್ಷ | ಸ್ಥಳ |
|---|---|---|
| ಮೊದಲ ಶೃಂಗಸಭೆ: | 2004 ಜುಲೈ 31 | ಬ್ಯಾಂಕಾಕ್ (ಥಾಯ್ಲೆಂಡ್) |
| ಎರಡನೇ ಶೃಂಗಸಭೆ | 2008 ನವೆಂಬರ್ 13 | ನವದೆಹಲಿ (ಭಾರತ) |
| ಮೂರನೇ ಶೃಂಗಸಭೆ | 2014 ಮಾರ್ಚ್ 4 | ನೈಪೈತಾವ್ (ಮಯನ್ಮಾರ್) |
| ಇತ್ತೀಚಿನ & ನಾಲ್ಕನೇ ಶೃಂಗಸಭೆ | 2016 ಅಕ್ಟೋಬರ್ 16 | ಗೋವಾದ ಬೆನಾಲಿಯಂ (ಭಾರತ) |

### ಬಿಮ್‌ಸ್ಟೆಕ್‌ನ ಇತ್ತೀಚಿನ & 4ನೇ ಶೃಂಗಸಭೆ- 2016

ಇತ್ತೀಚಿನ ಸಭೆ: 2016ರ ಅಕ್ಟೋಬರ್ 15 & 16 ಗೋವಾದ ಬೆನಾಲಿಯಂ.

ವಿಶೇಷತೆ:- ಬಿಮ್‌ಸ್ಟೆಕ್ ನ 4ನೇ ಶೃಂಗಸಭೆಯು 8ನೇ ಬ್ರಿಕ್ಸ್ ಸಮ್ಮೇಳನದೊಂದಿಗೆ ಗೋವಾದ ಬೆನಾಲಿಯಂ ನಲ್ಲಿ ನಡೆಯಿತು.

ಈ ಶೃಂಗಸಭೆಯಲ್ಲಿ ಭಾವಹಿಸಿದವರು: ಭಾರತದ ಪ್ರಧಾನಿ ನರೇಂದ್ರ ಮೋದಿ, ನೇಪಾಳದ ಪ್ರಧಾನ ಪ್ರಚಂಡ, ಭೂತಾನ್ ಪ್ರಧಾನಿ ಶೇರಿಂಗ್, ಲಂಕಾದ ಅಧ್ಯಕ್ಷ ಮೈತ್ರಿಪಾಲ್ ಸಿರಿಸೇನಾ, ಬಾಂಗ್ಲಾ ಪ್ರಧಾನಿ ಷೇಕ್ ಹಸೀನಾ, ಮ್ಯಾನ್ಮಾರ್‌ನ ನಾಯಕಿ ಆಂಗ್ ಸಾನ್ ಸೂಕಿ ಮತ್ತು ಥಾಯ್ಲೆಂಡ್‌ನ ಉಪಸಚಿವ-ವಿರಾಸಕ್ತಿ ಪುತ್ರಕುಲ್

**ಈ ಸಭೆಯಲ್ಲಿ ಕೈಗೊಂಡ ನಿರ್ಣಯಗಳು:** ಭಯೋತ್ಪಾದನೆ ನಿಯಂತ್ರಣ, ಹವಾಮಾನ ಬದಲಾವಣೆಯ ಸವಾಲ್ ನಿಯಂತ್ರಿಸುವ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳುವುದು.

# ಭಾರತದಲ್ಲಿ ಆರ್ಥಿಕ ದತ್ತಾಂಶ ಪ್ರಕಟಪಡಿಸುವ ಸಂಸ್ಥೆಗಳು

## ಸಾಂಖ್ಯಿಕ & ಯೋಜನಾ ಅನುಷ್ಠಾನ ಇಲಾಖೆ (MOSPI)



Government of India
Ministry of Statistics and Programme Implementation

- ಸ್ಥಾಪನೆ: 1999 ಅಕ್ಟೋಬರ್ 15

**ವಿಭಾಗಗಳು:-**

1) **ಸಾಂಖ್ಯಿಕ ವಿಭಾಗ ಅಥವಾ ರಾಷ್ಟ್ರೀಯ ಸಾಂಖ್ಯಿಕ ಕಚೇರಿ (NSO)**
   (ಎ) ಇದರಲ್ಲಿ CSO ಕೇಂದ್ರೀಯ ಸಾಂಖ್ಯಿಕ ಕಚೇರಿ
   (ಬಿ) NSSO ರಾಷ್ಟ್ರೀಯ ಮಾದರಿ ಸಮೀಕ್ಷಾ ಕಚೇರಿ

2) **ಯೋಜನಾ ಅನುಷ್ಠಾನ ವಿಭಾಗ**
- 20 ಅಂಶಗಳ ಕಾರ್ಯಕ್ರಮ ವಿಭಾಗ
- ಮೂಲ ಸೌಕರ್ಯ & ಯೋಜನಾ ನಿರ್ವಹಣಾ ವಿಭಾಗ
- ಸಂಸತ್ ಸದಸ್ಯರ & ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆ

## NSC – ರಾಷ್ಟ್ರೀಯ ಸಾಂಖ್ಯಿಕ ಆಯೋಗ

- ಸ್ಥಾಪನೆ:– 2005ರ ಜೂನ್ 1 (2001ರ ರಂಗರಾಜನ್ ಸಮಿತಿ ಶಿಫಾರಸ್ಸು)
- ಶಾಸನ ಬದ್ಧ ಸಂಸ್ಥೆಯಾಗಿ 2006ರ ಜುಲೈ 12ರಂದು ಸ್ಥಾಪನೆ
- ಕೇಂದ್ರ ಕಚೇರಿ: **ನವದೆಹಲಿ**
- ಪ್ರಸ್ತುತ ಅಧ್ಯಕ್ಷರು: **ಡಾ. ರಾದಾ ಬಿನೋದ್ ಬರ್ಮಾರ್**
- ಸದಸ್ಯರುಗಳು:– **ರಾಜೀವ್ ಮೆಹ್ತಾ & ಮನೋಜ್ ಪಾಂಡಾ**
- ಕಾರ್ಯದರ್ಶಿ: **ಟಿಸಿಎ ಅನಂತ್**
- ಪ್ರಮುಖ ಕಾರ್ಯ: ಭಾರತೀಯ ಸಾಂಖ್ಯಿಕ ವಿಭಾಗದ ಸಂಯೋಜನೆ ಚಟುವಟಿಕೆಗಳ ಪರಿಷ್ಕರಣೆ ಮೇಲ್ವಿಚಾರಣೆ ಮಾಡುವ ನೋಡಲ್ ಸಂಸ್ಥೆ

## ISI – ಭಾರತೀಯ ಸಾಂಖ್ಯಿಕ ಸಂಸ್ಥೆ




INDIAN STATISTICAL INSTITUTE, KOLKATA

- P C ಮಹನೋಬಿಸ್ (Prashanta Chandra Mahalanobis) ಅವರಿಂದ **1931 ಡಿಸೆಂಬರ್ 17** ರಂದು ಸ್ಥಾಪನೆ, ಕೇಂದ್ರ ಕಚೇರಿ: ಕೋಲ್ಕತ್ತ
- ಪ್ರಾದೇಶಿಕ ಕಚೇರಿ:– ಬೆಂಗಳೂರು, ದೆಹಲಿ, ಚೆನ್ನೈ
- ಪ್ರಸ್ತುತ ಅಧ್ಯಕ್ಷರು: **ವಿಜಯ್ ಎಲ್. ಕೇಲ್ಕರ್**
- ಸಾಂಖ್ಯಿಕ ವಿಭಾಗದ ಸಂಶೋಧನಾ ತಾಂತ್ರಿಕ ಮಾಹಿತಿ ಒದಗಿಸುವ ಸಂಸ್ಥೆ.

## ಕೃಷಿ ವೆಚ್ಚ ಮತ್ತು ಬೆಲೆಗಳ ಮೇಲಿನ ಆಯೋಗ (CACP - Commission for Agricultural Cost and Prices)

- ಸ್ಥಾಪನೆ: **ಜನವರಿ 1, 1965**
- ಕೇಂದ್ರ ಕಛೇರಿ: **ನವದೆಹಲಿ**
- ಮೊದಲ ಹೆಸರು: ಕೃಷಿ ಬೆಲೆ ಆಯೋಗ (ಮರು ನಾಮಕರಣವಾಗಿ CACP ಆಗಿ 1985)
- ಅಧ್ಯಕ್ಷರು: **ವಿಜಯ್ ಪಾಲ್ ಶರ್ಮಾ**
- ಉದ್ದೇಶ: ಎ) ದೇಶದ ಕೃಷಿ ಉತ್ಪನ್ನಗಳಿಗೆ ಕನಿಷ್ಠ ಬೆಂಬಲ ಬೆಲೆ (MSP) ನಿಗದಿ. ಬಿ) ಕೃಷಿಯಲ್ಲಿ ನೂತನ ತಂತ್ರಜ್ಞಾನ ಅಳವಡಿಕೆಗೆ ಉತ್ತೇಜನ ಸಿ) ಕೃಷಿ ಉತ್ಪಾದನೆ ಮತ್ತು ಉತ್ಪಾದಕತೆಗೆ ಒತ್ತು

## ಕರ್ನಾಟಕ ಕೃಷಿ ಬೆಲೆ ಆಯೋಗ

**ಸ್ಥಾಪನೆ:-** 2014 ಜೂನ್, **ಅಧ್ಯಕ್ಷರು:-** **ಪ್ರೊ॥ ಟಿ.ಎನ್. ಪ್ರಕಾಶ್ ಕಮ್ಮರಡಿ**

- 2015 ಡಿಸೆಂಬರ್ 26 ರಂದು 2014–15 ನೇ ಸಾಲಿನ ಕೃಷಿ ಬೆಲೆ ವರದಿಯನ್ನು ಅಧ್ಯಕ್ಷ ಪ್ರಕಾಶ್ ಕಮ್ಮರಡಿ ಅವರು ಮುಖ್ಯಮಂತ್ರಿಗಳಿಗೆ ಸಲ್ಲಿಸಿದರು.

**ಕಾರ್ಯಗಳು:-** ಎ) ಕೃಷಿ ಮತ್ತು ತೋಟಗಾರಿಕೆ ಬೆಳೆಗಳಿಗೆ ಲಾಭದಾಯಕ ಬೆಲೆ ನಿರ್ಧಾರ ಬಿ) ಕರ್ನಾಟಕ ಸರ್ಕಾರದ ಕೃಷಿ ನೀತಿ ಮತ್ತು ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಸಲಹೆ ನೀಡಿಕೆ.




# ಕೇಂದ್ರೀಯ ಸಾಂಖ್ಯಿಕ ಕಚೇರಿ
# CSO - Central Statistical Office

**ಭಾರತದ ಆರ್ಥಿಕತೆಗೆ ಸಂಬಂಧಿಸಿದ ಸಾಂಖ್ಯಿಕ ದತ್ತಾಂಶಗಳನ್ನು ಪ್ರಕಟಪಡಿಸುವ ಕೇಂದ್ರೀಯ ಸಾಂಖ್ಯಿಕ ಕಛೇರಿಯನ್ನು ಭಾರತ ಸರ್ಕಾರದ ಸಾಂಖ್ಯಿಕ & ಕಾರ್ಯಕ್ರಮ ಅನುಷ್ಠಾನ ಸಚಿವಾಲಯದ ಅಧೀನದಲ್ಲಿ 19.. ಮೇ 2 ರಂದು ಸ್ಥಾಪಿಸಲಾಗಿದೆ.**

✦ ಇದರ ಕೇಂದ್ರ ಕಛೇರಿ ನವದೆಹಲಿಯಲ್ಲಿದ್ದು, ಕೈಗಾರಿಕೆಗೆ ಸಂಬಂಧಿಸಿದ ವಾರ್ಷಿಕ ಸಮೀಕ್ಷೆಯ ದತ್ತಾಂಶವನ್ನು ಕೋಲ್ಕತ್ತ ಕಛೇರಿಯ ಮೂಲಕ ಪ್ರಕಟಿಸಲಾಗುತ್ತದೆ.

**ಸಂರಚನೆ:-**

✦ ಸಿ.ಎಸ್.ಓ ಒಬ್ಬ ಡೈರೆಕ್ಟರ್ ಜನರಲ್, 5 ಜನ ಹೆಚ್ಚುವರಿ ಡೈರೆಕ್ಟರ್ ಜನರಲ್‌ಗಳು, 4 ಜನ ಡೆಪ್ಯುಟಿ ಡೈರೆಕ್ಟರ್ ಜನರಲ್, 6 ಜನ ಜಂಟಿ ನಿರ್ದೇಶಕರು, 7 ಜನ ವಿಶೇಷ ಕಾರ್ಯಪಡೆ, 30 ಜನ ಉಪ ನಿರ್ದೇಶಕರು & 48 ಸಹಾಯಕ ನಿರ್ದೇಶಕರುಗಳನ್ನು ಒಳಗೊಂಡಿದೆ.

**ವಿಭಾಗಗಳು**

✦ ಸಿ.ಎಸ್.ಓ 4 ಮುಖ್ಯ ವಿಭಾಗಗಳನ್ನು ಹೊಂದಿದೆ.

1. ಮಾನವ ಶಕ್ತಿ ಸಂಶೋಧನಾ ವಿಭಾಗ,
2. ಜನಸಂಖ್ಯಾ ವಿಭಾಗ,
3. ರಾಷ್ಟ್ರೀಯ ವರಮಾನ
4. ಕೈಗಾರಿಕಾ ಅಂಕಿ ಅಂಶ ವಿಭಾಗ

**ಕಾರ್ಯಚಟುವಟಿಕೆಗಳು:-**

✦ ಸಿ.ಎಸ್.ಓ ಭಾರತದ ಪ್ರಮುಖ ಆರ್ಥಿಕ ಸೂಚಕಗಳಿಗೆ ಸಂಬಂಧಿಸಿದ ಸಾಂಖ್ಯಿಕ ದತ್ತಾಂಶದ ಸಂಯೋಜ–ಕ & ಪ್ರಕಟಣ ಸಂಸ್ಥೆಯಾಗಿದ್ದು, ಈ ಕೆಳಗಿನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸುತ್ತದೆ.

✦ ಕೈಗಾರಿಕಾ ಉತ್ಪಾದನಾ ಸೂಚ್ಯಂಕ(IIP) ಪ್ರಕಟ

✦ ನಗರ, ಗ್ರಾಮೀಣ & ದೇಶದ ಸರಾಸರಿ ಗ್ರಾಹಕ ಬೆಲೆ ಸೂಚ್ಯಂಕ (CPI) ಪ್ರಕಟ

✦ ಭಾರತದ ಮಾನವ ಅಭಿವೃದ್ಧಿ ವರದಿ (HDR) ಪ್ರ...

✦ ಲಿಂಗ ಸಂಬಂಧಿ ಅಭಿವೃದ್ಧಿ ವರದಿ

✦ ರಾಷ್ಟ್ರೀಯ ವರಮಾನ ಲೆಕ್ಕಾಚಾರ

✦ ಕೈಗಾರಿಕಾ ವಾರ್ಷಿಕ ಸಮೀಕ್ಷೆ ಕೈಗೊಳ್ಳುವುದು.

✦ ವ್ಯಾಪಾರ & ರಾಷ್ಟ್ರೀಯ ಕೈಗಾರಿಕಾ ವರ್ಗೀಕರಣ ಪರಿಶೀಲನೆಗೆ ಸಂಬಂಧಿಸಿದ ಮಾಹಿತಿ ಪ್ರಕಟ.

✦ ಪರಿಸರ, ಸಾಮಾಜಿಕ, ಶಕ್ತಿಸಂಪನ್ಮೂಲಗಳ ಸಾಂಖ್ಯಿಕ ಮ...

✦ ಆರ್ಥಿಕ ಗಣತಿಯನ್ನು ದೇಶದ ಆರ್ಥಿಕ ವ್ಯವಸ್ಥೆ... ದೀರ್ಘಾವಧಿ ಬದಲಾವಣೆಯನ್ನು ತಿಳಿಸಲು 19... 1980, 1990, 1998, 2005 & 2013 ರಲ್ಲಿ ಒ... 6 ಬಾರಿ ಸಮೀಕ್ಷೆ ಮಾಡಿ ಮಾಹಿತಿ ಪ್ರಕಟ ಪಡಿಸಿ...

✦ ಸಿ.ಎಸ್.ಓ 2011–12 ನ್ನು ಪ್ರಸ್ತುತ ಮೂಲ ವರ್ಷವಾ... ಲೆಕ್ಕಾಚಾರದಲ್ಲಿ ಬಳಕೆ ಮಾಡುತ್ತಿದೆ.

**ಇದುವರೆಗೂ ದೇಶದಲ್ಲಿ ಬಳಕೆಯಾಗುತ್ತಿದ್ದ ಆಧಾರ ವರ್ಷಗ...**

✦ ಆಧಾರ ವರ್ಷ ಎಂದರೆ, ಆರ್ಥಿಕ ದತ್ತಾಂಶವನ್ನು ವಿ... ಅವಧಿಗಳಿಗೆ ಹೋಲಿಕೆ ಮಾಡಲು ಪರಿಗಣಿಸ... ಸಾಮಾನ್ಯ ಆರ್ಥಿಕ ವ್ಯವಸ್ಥೆ ಹೊಂದಿದ ಆ... ಆರ್ಥಿಕ ಮುಗ್ಗಟ್ಟು ಅಥವಾ ಶೃಂಗ, ಪ್ರಕೃತಿ ವಿಕೋ... ಇನ್ನಿತರ ಆರ್ಥಿಕ ಏರುಪೇರುಗಳನ್ನು ಹೊಂದಿ... ವರ್ಷವಾಗಿದೆ.

✦ 1948–49, 1960–61, 1970–71, 1980–81, 19... 94, 2004–05 ಹಾಗೂ ಪ್ರಸ್ತುತ 2011–12 ... ಆಧಾರ ವರ್ಷವನ್ನಾಗಿ ಬಳಕೆ ಮಾಡುತ್ತಿದೆ.

**ಕೇಂದ್ರೀಯ ಅಂಕಿ ಸಂಖ್ಯೆಗಳ ಸಂಸ್ಥೆ 2016-17 ರ ಆರ್ಥಿಕ ವರ್ಷದಲ್ಲಿ ಅಂದಾಜಿಸಿದ ದೇಶದ ಆರ್ಥಿಕ ಬೆಳವಣಿಗೆ ದ...**

| ವರ್ಷ | ಸ್ಥಿರಬೆಲೆ (2011-12) | ಪ್ರಸ್ತುತ ವರ್ಷ (2016-17) |
|---|---|---|
| 2016–17 | 7.1 | 11.5 |
| ಏಪ್ರಿಲ್ – ಜೂನ್ | 7.2 | 10.8 |
| ಜುಲೈ– ಸೆಪ್ಟೆಂಬರ್ | 7.4 | 11.8 |
| ಅಕ್ಟೋಬರ್ – ಡಿಸೆಂಬರ್ | 7.0 | 10.6 |

# ರಾಷ್ಟ್ರೀಯ ಮಾದರಿ ಸಮೀಕ್ಷಾ ಸಂಘಟನೆ
## (National Sample Survey Organization-NSSO)




- ಸ್ಥಾಪನೆ:- 1950
- ಅಖಿಲ ಭಾರತೀಯ ಮಟ್ಟದ ಸಾಮಾಜಿಕ ಆರ್ಥಿಕ ಸಮೀಕ್ಷೆ ಕೈಗೊಳ್ಳುವ ಸಂಸ್ಥೆ.
- ತ್ರೈಮಾಸಿಕವಾಗಿ **"ಸರ್ವೇಕ್ಷಣಾ"** ವರದಿ ಪ್ರಕಟ ಆದರೆ **"ಜಮ್ಮು & ಕಾಶ್ಮೀರ"** ರಾಜ್ಯದಲ್ಲಿ ಸಮೀಕ್ಷೆ ನಡೆಸುವಂತಿಲ್ಲ.
- ದೇಶದ ಬಡತನ, ನಿರುದ್ಯೋಗ, ಸಾರ್ವತ್ರಿಕ ದಾಖಲಾತಿ, ಸಾಕ್ಷರತಾದರ, ಶೈಕ್ಷಣಿಕ ಸೇವೆ, ಉದ್ಯೋಗ, ಸೇವಾ ವಲಯದ ಬಳಕೆಗೆ ಸಂಬಂಧಿಸಿದಂತೆ ಮಾಹಿತಿ ಪ್ರಕಟ.
- ಎನ್.ಎಸ್.ಎಸ್.ಒ ಅಧಿಕಾರಿಗಳನ್ನು ಕೇಂದ್ರ ಲೋಕ ಸೇವಾ ಆಯೋಗ ಮತ್ತು ಸಂಬಂಧಿಸಿದ ಸಂಖ್ಯಾಶಾಸ್ತ್ರೀಯ ಸೇವೆ (ಸಿಬ್ಬಂದಿ ಆಯ್ಕೆ ಆಯೋಗದ ಮೂಲಕ ನೇಮಕ) ಯಿಂದ ನೇಮಕಗೊಂಡಿರುತ್ತಾರೆ.
- ಇದು ಭಾರತದ ಅಂಕಿ ಅಂಶಗಳ ಸಚಿವಾಲಯದ ಒಂದು ಸಂಘಟನೆಯಾಗಿದೆ.

**ಎನ್.ಎಸ್.ಎಸ್.ಒ. ಒಳಗೊಂಡಿರುವ 4 ವಿಭಾಗಗಳು:-**

1) ಸಮೀಕ್ಷೆ ವಿನ್ಯಾಸ ಮತ್ತು ಸಂಶೋಧನಾ ವಿಭಾಗ (SDRD)
2) ಕ್ಷೇತ್ರ ಕಾರ್ಯಾಚರಣೆ
3) ದತ್ತಾಂಶ ಪ್ರಕ್ರಿಯೆ ವಿಭಾಗ (Data Process Division)
4) ಸಂಯೋಜನೆ ಮತ್ತು ಪ್ರಕಟಣೆ ವಿಭಾಗ (Co-ordination and Publication Division)

**1) ಎಸ್.ಡಿ.ಆರ್.ಡಿ:-**

- **ಕೇಂದ್ರ ಕಛೇರಿ: ಕೊಲ್ಕತ್ತಾದಲ್ಲಿದೆ.**
- ವಿಭಾಗದ ಮುಖ್ಯಸ್ಥರು: **ಹೆಚ್ಚುವರಿ ಮಹಾನಿರ್ದೇಶಕರು**
- ಎನ್‌ಎಸ್‌ಎಸ್‌ಒನ ವೃತ್ತಿಪರ ಅಂಗವಾಗಿದೆ. ನಾಲ್ಕು ವಿಭಾಗಗಳಲ್ಲಿ ಒಂದಾಗಿದೆ. ಇದರ ಪ್ರಮುಖ ಕಾರ್ಯಗಳೆಂದರೆ

1) ಸಮೀಕ್ಷೆಯ ಯೋಜನೆ ರೂಪಿಸುವುದು
2) ಸಮೀಕ್ಷೆ ವಿನ್ಯಾಸ ರೂಪಿಸುವುದು
3) ಪರಿಕಲ್ಪನೆಯನ್ನು ರೂಪಿಸುವುದು ಮತ್ತು ವ್ಯಾಖ್ಯಾನಿಸುವುದು.
4) ಸಮೀಕ್ಷೆಯ ವರದಿ ರೂಪಿಸುವುದು
5) ಸಮೀಕ್ಷೆಯ ಫಲಿತಾಂಶವನ್ನು ವಿಶ್ಲೇಷಿಸುವುದು ಮತ್ತು ಮಂಡಿಸುವುದು
6) ಸಮೀಕ್ಷೆ ವಿಧಾನ ಸುಧಾರಿಸಲು ಅಧ್ಯಯನ ಕೈಗೊಳ್ಳುವುದು

**2) ಕ್ಷೇತ್ರ ಕಾರ್ಯಾಚರಣೆ ವಿಭಾಗ: (FOD)**

ಇದು ನಾಲ್ಕು ವಿಭಾಗಗಳಲ್ಲಿ ಒಂದಾಗಿದೆ.

- ಸಾಮಾಜಿಕ-ಆರ್ಥಿಕ ಕೈಗಾರಿಕಾ ಸಂಖ್ಯಾಶಾಸ್ತ್ರೀಯ, ಕೃಷಿ ಅಂಕಿಅಂಶ ಬೆಲೆಗಳು ಸಂಬಂಧಿಸಿದ ಕ್ಷೇತ್ರಗಳ ಸಮೀಕ್ಷೆ ಕೈಗೊಳ್ಳುವ ಜವಾಬ್ದಾರಿ ಹೊಂದಿದೆ.
- ನಗರ ಪ್ರದೇಶದ ಸಾಮಾಜಿಕ-ಆರ್ಥಿಕ ಸಮೀಕ್ಷೆಯನ್ನು ಪರಿಷ್ಕರಿಸುವುದು ಇದರ **ಕೇಂದ್ರ ಕಛೇರಿ ನವದೆಹಲಿ ಮತ್ತು ಫರೀದಾಬಾದ್**ನಲ್ಲಿದೆ. 6 ವಲಯ ಕಛೇರಿ, 49 ಪ್ರಾದೇಶಿಕ ಕಛೇರಿಗಳು ಮತ್ತು 116 ಉಪ ಪ್ರಾದೇಶಿಕ ಕಛೇರಿ ಹೊಂದಿದೆ
- ಹೆಚ್ಚುವರಿ ಮಹಾನಿರ್ದೇಶಕರು (ADG)ರವರು ಈ ವಿಭಾಗದ ಮುಖ್ಯಸ್ಥರು.

**3) ದತ್ತಾಂಶ ಪರಿಷ್ಕರಣೆ ವಿಭಾಗ (DPD)**

- **ಕೇಂದ್ರ ಕಛೇರಿ: ಕೊಲ್ಕತ್ತಾ**
- ದತ್ತಾಂಶ ಸಂಸ್ಕರಣೆ ವಿಭಾಗವು ದತ್ತಾಂಶವನ್ನು ಎನ್‌ಎಸ್‌ಎಸ್‌ಒ ಕೈಗೊಂಡ ಸಮೀಕ್ಷೆಯ ದತ್ತಾಂಶವನ್ನು ವರ್ಗೀಕರಿಸುವ ವಿನ್ಯಾಸಗೊಳಿಸುವ ಕಾರ್ಯ ನಿರ್ವಹಿಸುತ್ತದೆ. ದತ್ತಾಂಶದ ಸಂಪೂರ್ಣ ಸಂಸ್ಕರಣೆ ನಡೆಯುತ್ತದೆ.
- ಕೊಲ್ಕತ್ತಾದ ಹೊರಗೆ ಐದು ದತ್ತಾಂಶ ಸಂಸ್ಕರಣಾ ಘಟಕಗಳಿವೆ.

1) ಅಹಮದಾಬಾದ್ 2) ಬೆಂಗಳೂರು
3) ದೆಹಲಿ 4) ಗಿರಿದಿಹಾ (Giridiha) 5) ನಾಗ್ಪುರ

**4) ಸಂಯೋಜನೆ ಮತ್ತು ಪ್ರಕಟಣೆ ವಿಭಾಗ (Co-ordination and Publication Division)**

**ಪ್ರಕಟಣೆಗಳು (Publication):-** ಪ್ರಕಟಣೆ ವಿಭಾಗವು ನವದೆಹಲಿಯಲ್ಲಿದೆ. ಎನ್.ಎಸ್.ಎಸ್.ಒನ ಎಲ್ಲಾ ವಿಭಾಗದ ಚಟುವಟಿಕೆಗಳನ್ನು ಸಮನ್ವಯಗೊಳಿಸುವುದು. ಸಮೀಕ್ಷೆಯ ಫಲಿತಾಂಶ ಮತ್ತು ವಿಶ್ಲೇಷಣೆಯನ್ನು ದ್ವೈವಾರ್ಷಿಕ ತಾಂತ್ರಿಕ ಜರ್ನಲ್ "Sarvekshna" (ಸರ್ವೇಕ್ಷಣಾ) ಮತ್ತು ರಾಷ್ಟ್ರೀಯ ವಿಚಾರಗೋಷ್ಠಿ (National Seminars) ಮೂಲಕ ಪ್ರಕಟಿಸಲಾಗುತ್ತದೆ.

# ರಾಷ್ಟ್ರೀಯ ಕೃಷಿ & ಗ್ರಾಮೀಣಾಭಿವೃದ್ಧಿ ಬ್ಯಾಂಕ್

## (NABARD - National Bank for Agriculture and Rural Developmen

**ಭಾರತ ಕೃಷಿ ಪ್ರಧಾನ & ಹೆಚ್ಚು ಹಳ್ಳಿಗಳಿಂದ ಕೂಡಿದ ರಾಷ್ಟ್ರವಾಗಿದ್ದು, ಗ್ರಾಮೀಣ ಭಾಗದ ಪ್ರಮುಖ ವೃತ್ತಿಯಾದ ಕೃಷಿ & ಅದಕ್ಕೆ ಸಂಬಂಧಿಸಿದ ಆರ್ಥಿಕ ಚಟುವಟಿಕೆಗಳಿಗೆ ಪೂರಕವಾದ ನೀತಿ, ಯೋಜನೆಗಳನ್ನು ರೂಪಿಸಲು & ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರಲು ಅಗತ್ಯವಾದ ಸಾಲ ಸೌಲಭ್ಯ ನೀಡುವ ಉದ್ದೇಶದಿಂದ ಹಣಕಾಸು ಸಮನ್ವಯತೆ ಸಾಧಿಸಲು ಕೈಗೊಂಡ ಮುಖ್ಯ ಕ್ರಮಗಳಲ್ಲಿ ನಬಾರ್ಡ್ ಸ್ಥಾಪನೆಯೂ ಕೂಡ ಒಂದಾಗಿದೆ.**



- ಮಾಜಿ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿ ಅವರು 1982 ಜುಲೈ 12 ರಂದು ಡಾ. ಬಿ. ಶಿವರಾಮನ್ ಸಮಿತಿ ಶಿಫಾರಸ್ಸಿನ ಮೇರೆಗೆ 1981 ರ ಸಂಸತ್ತಿನ ಕಾಯ್ದೆಗೆ ಅನುಗುಣವಾಗಿ ರಾಷ್ಟ್ರೀಯ ಕೃಷಿ & ಗ್ರಾಮೀಣಾಭಿವೃದ್ಧಿ ಬ್ಯಾಂಕ್‌ನ್ನು ಸ್ಥಾಪಿಸಿದರು.
- ಇದು ಆರ್.ಬಿ.ಐನ ಕೃಷಿ ಸಾಲವಿಭಾಗ & ಗ್ರಾಮೀಣ ಯೋಜನೆ ಪತ್ತು ಕೋಶ ಹಾಗೂ ಕೃಷಿ ಮರುಹಣಕಾಸು & ಅಭಿವೃದ್ಧಿ ನಿಗಮ (ARDC) ದ ಬದಲಾಗಿ ಸ್ಥಾಪನೆಗೊಂಡ ಕೃಷಿ ಹಣಕಾಸು ಸಂಸ್ಥೆಯಾಗಿದೆ.
- ನಬಾರ್ಡ್ ಪ್ರಾರಂಭಿಕವಾಗಿ ಆರ್.ಬಿ.ಐ & ಭಾರತ ಸರ್ಕಾರದ ಸಹಭಾಗಿತ್ವದಲ್ಲಿ 100 ಕೋಟಿ ಪ್ರಾರಂಭಿಕ ಬಂಡವಾಳದೊಂದಿಗೆ ಸ್ಥಾಪನೆಗೊಂಡಿತು.
- 2015 ಮಾರ್ಚ್ 31 ರ ವೇಳೆಗೆ ಒಟ್ಟು ಬಂಡವಾಳ 5,000 ಕೋಟಿ ರೂ. ಆಗಿದ್ದು, ಇದರಲ್ಲಿ ಭಾರತ ಸರ್ಕಾರ 4,980 ಕೋಟಿ ರೂ. ಅಂದರೆ ಶೇ 99.60 ಹಾಗೂ ಆರ್.ಬಿ.ಐ ಕೇವಲ 20 ಕೋಟಿ (ಶೇ 0.40) ಭಾಗವನ್ನು ಹೊಂದಿದ್ದು, ಪ್ರಸ್ತುತ ನಬಾರ್ಡ್ ಕೇಂದ್ರ ಸರ್ಕಾರದ ಭಾಗವಾಗಿ ಏರ್ಪಟ್ಟಿದೆ.

### ಆರ್ಥಿಕಾಭಿವೃದ್ಧಿಯಲ್ಲಿ ನಬಾರ್ಡ್:-

- ಗ್ರಾಮೀಣ & ಸಾಮಾಜಿಕ ತಳಹಂತದಿಂದ ಆರ್ಥಿಕಾಭಿವೃದ್ಧಿಗೆ ಪೂರಕವಾದ ಸ್ವ ಸಹಾಯ ಸಂಘಟನೆಗಳ ಕಾರ್ಯಕ್ರಮ, ಬುಡಕಟ್ಟು ಸಮುದಾಯದ ಅಭಿವೃದ್ಧಿ, ಮಣ್ಣು & ಜಲ ಸಂರಕ್ಷಣೆ, ಕೃಷಿ ಉತ್ಪಾದಕತೆ ವೃದ್ಧಿ ಮುಂತಾದವುಗಳಿಗೆ ಹಣಕಾಸು ಸಹಾಯ ಮಾಡುವ ಸಂಸ್ಥೆಯಾಗಿದೆ.
- ಕಳೆದ ಮೂರೂವರೆ ದಶಕಗಳಲ್ಲಿ ಗ್ರಾಮೀಣ ಭಾಗದ ಸಣ್ಣ & ಗುಡಿ ಗ್ರಾಮೀಣ ಕೈಗಾರಿಕೆಗಳ ಅಭಿವೃದ್ಧಿ, ಕೃಷಿ ಸಂಬಂಧಿ ಚಟುವಟಿಕೆಗಳ ಸಮಗ್ರ ಅಭಿವೃದ್ಧಿ, ಗ್ರಾಮೀಣ ಆರ್ಥಿಕತೆಗೆ ಸಂಬಂಧಿಸಿದ ಹಣಕಾಸು ಸಂಸ್ಥೆಗಳಿಗೆ ನೆರವು, ಸಹಕಾರಿ & ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ನಿಯಂತ್ರಣ & ನಿರ್ವಹಣೆಯ ಜವಾಬ್ದಾರಿ ಹೊಂದಿದೆ.
- ನಬಾರ್ಡ್ ಮಹಾರಾಷ್ಟ್ರದ ಮುಂಬೈ ನಲ್ಲಿ ಕೇಂದ್ರ ಕಛೇರಿ ಹೊಂದಿದ್ದು, ದೇಶಾದ್ಯಂತ 336 ಕ್ಕೂ ಹೆಚ್ಚು ಜಿಲ್ಲಾ ಕಛೇರಿಗಳನ್ನು ಹೊಂದಿದೆ. ಶ್ರೀನಗರದಲ್ಲಿ ವಿಶೇಷ ಕಛೇರಿಯನ್ನು ಹೊಂದಿದೆ.
- 2007–08 ರ ನೈಸರ್ಗಿಕ ಸಂಪನ್ಮೂಲಗಳ ನಿರ್ವಹಣೆಯ ಛತ್ರಿ ಕಾರ್ಯಕ್ರಮದ ಮೂಲಕ ಕಡಿಮೆ ಬಡ್ಡಿದರದಲ್ಲಿ ಸಾಲ ನೀಡುವ ಯೋಜನೆ ರೂಪಿಸಿದೆ.
- ಇದು ವಿಶ್ವ ಬ್ಯಾಂಕ್‌ನೊಂದಿಗೆ ಮಾನ್ಯತೆ ಪಡೆದಿರುವ ಕೃಷಿ & ಗ್ರಾಮೀಣಾಭಿವೃದ್ಧಿಗೆ ಸಂಬಂಧಿಸಿದ ಸಂಸ್ಥೆಗಳೊಂದಿಗೆ ಸಹವರ್ತಿಯಾಗಿ ಕೆಲಸ ಮಾಡುತ್ತದೆ.
- ಪ್ರಸ್ತುತ ಮುಖ್ಯಸ್ಥರು:- **ಡಾ॥ ಹರ್ಷಕುಮಾರ್ ಬನ್ವಾಲ್ (2017 ಜೂನ್)**

- ಕೃಷಿ ಮತ್ತು ಗ್ರಾಮೀ... ಅಭಿವೃದ್ಧಿಗೆ ಹಣಕಾ... ಸೌಲಭ್ಯ ನೀಡುವ ಅಪ... ಮತ್ತು ಪುನರ್ ಹಣಕಾ... ಅಭಿವೃದ್ಧಿ ಬ್ಯಾಂಕ್

### ಡಾ. ಬಿ. ಶಿವರಾಮನ್ ಸಮಿ...

- ಭಾರತ ಸರ್ಕಾ... ಗ್ರಾಮೀಣ ಆರ್ಥಿಕತೆಯ... ಉತ್ತೇಜಿಸಲು ಅಗತ್ಯವಾ... ಸಾಂಸ್ಥಿಕ ಸಾಲವ... ಪೂರೈಸುವ ಉದ್ದೇಶದಿ... ರೂಪಿಸಿದ ಯೋಜನೆಗಳ... 1979 ಮಾರ್ಚ್ 30 ರಂದು ಕೃಷಿ ... ಗ್ರಾಮೀಣಾಭಿವೃದ್ಧಿ... ಸಾಂಸ್ಥಿಕ ಸಾಲದ ಮೇ... ಹೊಂದಾಣಿಕಾ ಪರಿಶೀ... ಸಮಿತಿಯನ್ನು ಯೋಜ... ಆಯೋಗದ ... ಸದಸ್ಯರಾದ ಡಾ. ... ಶಿವರಾಮನ್ ನೇತೃತ್ವ... ರಚಿಸಿತು.
- ಈ ಸಮಿತಿಯು 19... ನವೆಂಬರ್ 28 ರಂದು ... ವರದಿಯನ್ನು ಸಲ್ಲಿಸ... ಇದರ ಶಿಫಾರಸ್ಸಿನ ಅನ್ವ... ನಬಾರ್ಡ್ ಸ್ಥಾಪಿಸಲಾಯಿತ...

# ಭಾರತದ ಆಹಾರ ನಿಗಮ

## FCI - Food Corporation of India

ಭಾರತದ ಆರ್ಥಿಕತೆಯಲ್ಲಿ ರೈತರ ಹಿತಾಸಕ್ತಿಯನ್ನು ಕಾಪಾಡುವ ಹಾಗೂ ಕೃಷಿ ಉತ್ಪನ್ನಗಳ ಬೆಲೆ ಸ್ಥಿರತೆಯನ್ನು ಉತ್ತೇಜನ ನೀಡುವ, ಸಾರ್ವಜನಿಕ ವಿತರಣಾ ವ್ಯವಸ್ಥೆ ಮೂಲಕ ದೇಶಾದ್ಯಂತ ಆಹಾರ ಧಾನ್ಯಗಳ ಸಮರ್ಪಕ ಹಂಚಿಕೆ ಉಸ್ತುವಾರಿ ನೋಡಿಕೊಳ್ಳುವ ಹಾಗೂ ರಾಷ್ಟ್ರೀಯ ಆಹಾರ ಭದ್ರತಾ ಕಾರ್ಯಾಚರಣೆಗಾಗಿ ಆಹಾರದ ಕಾಪು ದಾಸ್ತಾನು ನಿರ್ವಹಣಾ ಸಂಸ್ಥೆಯಾಗಿ ಭಾರತದ ಆಹಾರ ನಿಗಮವನ್ನು ರಚಿಸಲಾಯಿತು.

- ✦ ಭಾರತದ ಆಹಾರ ನಿಗಮವು 1964 ರ ಭಾರತ ಆಹಾರ ಭದ್ರತಾ ಕಾಯ್ದೆಗೆ ಅನುಗುಣವಾಗಿ 1965 ಜನವರಿ 14 ರಂದು ಸ್ಥಾಪನೆಯಾಯಿತು.
- ✦ ಇದರ ಮೊದಲ ಜಿಲ್ಲಾ ಕಛೇರಿಯು ತಮಿಳುನಾಡಿನ ತಂಜಾವೂರಿನಲ್ಲಿ ಸ್ಥಾಪನೆಗೊಂಡಿತು. ಹಾಗೂ ಈ ಸಂಸ್ಥೆಯ **ಕೇಂದ್ರ ಕಛೇರಿ ನವದೆಹಲಿ**ಯಲ್ಲಿದೆ.
- ✦ ಏಷ್ಯಾದಲ್ಲಿ ಅತ್ಯಂತ ದೊಡ್ಡ ಆಹಾರ ಪೂರೈಕೆ ನಿರ್ವಹಣಾ ವ್ಯವಸ್ಥೆಯನ್ನು ಹೊಂದಿರುವ ಹಾಗೂ ವಿಶ್ವದಲ್ಲಿ ಈ ವ್ಯವಸ್ಥೆಯಲ್ಲಿ 2 ನೇ ಸ್ಥಾನದಲ್ಲಿರುವ ಭಾರತದ ಆರ್ಥಿಕತೆಯಲ್ಲಿ ಉಸ್ತುವಾರಿಯನ್ನು ಹೊಂದಿರುವ ಸಂಸ್ಥೆ ಇದಾಗಿದೆ.
- ✦ ಈ ನಿಗಮವು ದೇಶಾದ್ಯಂತ 5 ವಲಯ ಕಛೇರಿಗಳು, 24 ಪ್ರಾದೇಶಿಕ ಕಛೇರಿಗಳನ್ನು ಹೊಂದಿದೆ.

**ಕಾರ್ಯಗಳು:-**

- ✦ ಭಾರತದ ಕೃಷಿ ವೆಚ್ಚ & ಬೆಲೆಗಳ ಆಯೋಗ ನಿರ್ಧರಿಸಿದ ಕೃಷಿ ಉತ್ಪನ್ನಗಳ ಕನಿಷ್ಠ ಬೆಂಬಲ ಬೆಲೆಗನುಗುಣವಾಗಿ ರೈತರಿಂದ ಕೃಷಿ ಉತ್ಪನ್ನಗಳನ್ನು ಕೊಂಡುಕೊಳ್ಳುತ್ತದೆ. ಇದು ದೇಶದ ಕೃಷಿ ಉತ್ಪನ್ನಗಳ ಬೆಲೆ ಕಡಿಮೆಗೊಂಡ ಸಂದರ್ಭದಲ್ಲಿ ರೈತರ ಹಿತಾಸಕ್ತಿ ಕಾಪಾಡುವ ಉದ್ದೇಶವನ್ನು ಇದು ಹೊಂದಿದೆ.
- ✦ [illegible] ಸಂಗ್ರಹಣೆ ಮಾಡಲು, ಸಾಗಣೆ ಮಾಡುವ ಜವಾಬ್ದಾರಿ ಹೊಂದಿದೆ.
- ✦ ಕೃಷಿ ಉತ್ಪನ್ನಗಳನ್ನು ಕೆಡದಂತೆ ಸಂರಕ್ಷಿಸುವ ಉದ್ದೇಶದಿಂದ ವೈಜ್ಞಾನಿಕವಾಗಿ ಸಂಗ್ರಹಣೆ ಮಾಡುವ & ಕಾಪು ದಾಸ್ತಾನು ಕಾರ್ಯನಿರ್ವಹಿಸುತ್ತದೆ.
- ✦ ಉದಾ:- ಉ. ಪ್ರದೇಶದ ಹಾಪೂರ್ ನಲ್ಲಿ ಭಾರತೀಯ ಆಹಾರ ಸಂಗ್ರಹಣಾ ಕೇಂದ್ರ ಹಾಗೂ ತಮಿಳುನಾಡಿನ ಏಲಾಪೂರ್ ನಲ್ಲಿ ವೈಜ್ಞಾನಿಕ ಸಂಗ್ರಹಣಾ ಕೇಂದ್ರಗಳಿವೆ.
- ✦ ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿಯಲ್ಲಿ ಆಹಾರ & ನಾಗರೀಕ ಸರಬರಾಜು ಇಲಾಖೆಯ ಮೂಲಕ ವಿವಿಧ ಪ್ರಮಾಣಗಳಲ್ಲಿ ಕಡು ಬಡವರಿಗೆ ವಿತರಿಸುವ ಜವಾಬ್ದಾರಿಯನ್ನು ಹೊಂದಿದ **ನೋಡಲ್** ಸಂಸ್ಥೆಯಾಗಿದೆ.
- ✦ 2014 ರಲ್ಲಿ ಭಾರತದ ಕೇಂದ್ರ ಸರ್ಕಾರವು **ಶಾಂತಕುಮಾರ್** ನೇತೃತ್ವದಲ್ಲಿ ಭಾರತದ ಆಹಾರ ನಿಗಮದ ಪುನರ್‌ರಚನೆ & ಪುನರ್ ಕೇಂದ್ರೀಕೃತದ ಬಗ್ಗೆ ಅಧ್ಯಯನ ನಡೆಸಿ ಶಿಫಾರಸ್ಸು ನೀಡಲು ಸಮಿತಿಯನ್ನು ನೇಮಕ ಮಾಡಲಾಗಿತ್ತು.

**FCI - ಭಾರತದ ಆಹಾರ ನಿಗಮ:-**

- ✦ ಸ್ಥಾಪನೆ:- 1965 ಜನವರಿ 14(1964ರ ಆಹಾರ ನಿಗಮ ಕಾಯ್ದೆ ಅನ್ವಯ ಸ್ಥಾಪನೆ)
- ✦ ಕೇಂದ್ರ ಕಛೇರಿ:- ನವದೆಹಲಿ
- ✦ ಅಧ್ಯಕ್ಷರು:- ಯೋಗೀಂದ್ರ ತ್ರಿಪಾಠಿ
- ✦ ಪ್ರಮುಖ ಕಾರ್ಯ:- ದೇಶದ ಸಾರ್ವಜನಿಕ ವಿತರಣಾ ವ್ಯವಸ್ಥೆಗೆ ಆಹಾರ ಧಾನ್ಯ ಪೂರೈಕೆ ಮಾಡುವ ನೋಡಲ್ ಸಂಸ್ಥೆ, ಕಾಪು ದಾಸ್ತಾನು ಸೌಲಭ್ಯ

**ಕೇಂದ್ರೀಯ ಆಹಾರ ತಾಂತ್ರಿಕ ಸಂಶೋಧನಾ ಸಂಸ್ಥೆ CFTRI - Central Food and Technological Research Institute**




ಕರ್ನಾಟಕದ **ಮೈಸೂರಿನಲ್ಲಿ** 1950 ಅಕ್ಟೋಬರ್ 21 ರಂದು ಕೇಂದ್ರೀಯ ಆಹಾರ ತಾಂತ್ರಿಕ ಸಂಶೋಧನಾ ಸಂಸ್ಥೆಯನ್ನು ಕೇಂದ್ರೀಯ ವೈಜ್ಞಾನಿಕ & ಕೈಗಾರಿಕಾ ಸಂಶೋಧನಾ ಸಂಸ್ಥೆಯ ಅಧೀನ ಸಂಸ್ಥೆಯಾಗಿ ಸ್ಥಾಪಿಸಲಾಯಿತು. ಇದು ಭಾರತದ 40 ರಾಷ್ಟ್ರೀಯ ಸಂಶೋಧನಾ ಪ್ರಯೋಗಾಲಯಗಳಲ್ಲಿ ಒಂದಾಗಿದ್ದು, ಹೈದರಾಬಾದ್, ಲಖ್ನೋ & ಮುಂಬೈಗಳಲ್ಲಿ ತನ್ನ ಸಂಪನ್ಮೂಲ ಕೇಂದ್ರಗಳನ್ನು ಹೊಂದಿದೆ.

ಆಹಾರ ಸುರಕ್ಷತೆ, ಆಹಾರೋತ್ಪನ್ನಗಳ ಹೊಸ ಮೂಲಗಳು, ಆಹಾರೋತ್ಪನ್ನ ಕೈಗಾರಿಕೆಗಳ ಆಧುನೀಕರಣ & ವೆಚ್ಚ ನಿಯಂತ್ರಣ, ಆಹಾರ ಸಂಸ್ಕರಣೆ, ವಿನ್ಯಾಸ ಮುಂತಾದವುಗಳ ಬಗ್ಗೆ ತಾಂತ್ರಿಕ ಸಲಹೆಯನ್ನು ನೀಡುವ ಸಂಸ್ಥೆಯಾಗಿದೆ.

# ಭಾರತೀಯ ಕೃಷಿ ಸಂಶೋಧನಾ ಮಂಡಳಿ
## ICAR - (Indian Council on Agricultural Research)

ಭಾರತದಲ್ಲಿ ಕೃಷಿ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಸಂಶೋಧನೆ & ಶಿಕ್ಷಣವನ್ನು ಸಂಯೋಜಿಸುವ ಜವಾಬ್ದಾರಿ... ಸ್ವಾಯತ್ತ ಸಂಸ್ಥೆ ಭಾರತೀಯ ಕೃಷಿ ಸಂಶೋಧನಾ ಮಂಡಳಿ. ಈ ಸಂಸ್ಥೆಯು ಕೇಂದ್ರ ಕೃಷಿ ಸಚಿವಾಲಯ... ಕೃಷಿ ಸಂಶೋಧನೆ & ಶಿಕ್ಷಣದ ಮೇಲಿನ ವರದಿಯನ್ನು ಸಲ್ಲಿಸುತ್ತದೆ. ಭಾರತದ ಕೇಂದ್ರ ಕೃಷಿ ಸಚಿವರು ... ಸಂಸ್ಥೆಯ ಮುಖ್ಯಸ್ಥರಾಗಿರುತ್ತಾರೆ.

- 1929ರ ಜುಲೈ 16ರಂದು ಸ್ಥಾಪನೆಗೊಂಡ ಈ ಸಂಸ್ಥೆಯ ಕೇಂದ್ರ ಕಚೇರಿ ನವದೆಹಲಿಯಲ್ಲಿದೆ.
- ಈ ಸಂಸ್ಥೆಯಡಿಯಲ್ಲಿ 4 ಡೀಮ್ಡ್ ವಿಶ್ವವಿದ್ಯಾಲಯಗಳು, ಅನೇಕ ಸಂಸ್ಥೆಗಳು, ರಾಷ್ಟ್ರೀಯ ಸಂಶೋಧನಾ ಕೇಂದ್ರಗಳು ಕಾರ್ಯ ನಿರ್ವಹಿಸುತ್ತವೆ.
- 2009ರ ಯಶ್‌ಪಾಲ್ ಸಮಿತಿಯ ಶಿಫಾರಸ್ಸಿನ ಮೇರೆಗೆ ದೇಶದ ಉನ್ನತ ಶಿಕ್ಷಣ & ಸಂಶೋಧನೆಯ ಉತ್ತೇಜನಕ್ಕಾಗಿ ಕೃಷಿ ವಲಯದಲ್ಲಿ ಆಧುನಿಕ ವಿಜ್ಞಾನ & ತಂತ್ರಜ್ಞಾನದ ಬೆಳವಣಿಗೆಗಳ ಬಗ್ಗೆ ಸಂಶೋಧನೆ ಕೈಗೊಳ್ಳಲು ಪ್ರೇರೇಪಣೆ ನೀಡುವ ಸಂಸ್ಥೆ ಇದಾಗಿದೆ.
- ಈ ಸಂಸ್ಥೆಯ ಮುಖ್ಯಸ್ಥರಾಗಿ ಕೇಂದ್ರ ಕೃಷಿ ಸಚಿವರು ಕಾರ್ಯ ನಿರ್ವಹಿಸುತ್ತಾರೆ. ಈ ಸಂಸ್ಥೆಯು ಭಾರತದಲ್ಲಿ ಕೃಷಿ ಸಂಶೋಧನೆ ಮತ್ತು ಕೃಷಿ ಶಿಕ್ಷಣ ಸಂಸ್ಥೆಗಳನ್ನು ನಿರ್ವಹಿಸುವ ಜವಾಬ್ದಾರಿ ಹೊಂದಿದೆ.

**ಭಾರತೀಯ ಕೃಷಿ ಸಂಶೋಧನಾ ಮಂಡಳಿ (ICAR - Indian Council on Agricultural Research)**

ಸ್ಥಾಪನೆ:– 1929 ಜುಲೈ 16

ಕೇಂದ್ರ ಕಛೇರಿ:– ನವದೆಹಲಿ

ಅಧ್ಯಕ್ಷರು:– ರಾಧಾ ಮೋಹನ್ ಸಿಂಗ್

ಕಾರ್ಯ:– ಭಾರತದ ಕೃಷಿ ಕ್ಷೇತ್ರದ ಶಿಕ್ಷಣ & ಸಂಶೋಧನೆ ಸಂಯೋಜಕನಾಗಿ ಕಾರ್ಯನಿರ್ವಹಣೆ.

**ಈ ಸಂಸ್ಥೆಯಡಿ ಕಾರ್ಯ ನಿರ್ವಹಿಸುವ ಡೀಮ್ಡ್ ವಿಶ್ವವಿದ್ಯಾಲಯಗಳು:-**

ಇಂಡಿಯನ್ ಅಗ್ರಿಕಲ್ಚರ್ ರೀಸರ್ಚ್ ಇನ್‌ಸ್ಟಿಟ್ಯೂಟ್ – ನವದೆಹ...

ಇಂಡಿಯನ್ ವೆಟರ್ನರಿ (ಪಶುವೈದ್ಯ) ಸಂಶೋಧನಾ ಸಂಸ್ಥೆ – ಉ. ಪ್ರದೇಶದ ಬರೇಲಿ

ನ್ಯಾಷನಲ್ ಡೈರಿ ರೀಸರ್ಚ್ ಇನ್‌ಸ್ಟಿಟ್ಯೂಟ್ – ಹರಿಯಾಣ... ಕರ್ನಾಲ್

ಕೇಂದ್ರೀಯ ಮೀನುಗಾರಿಕೆ ಶಿಕ್ಷಣ ಸಂಸ್ಥೆ – ಮುಂ...

## ICAR ಸಂಸ್ಥೆಯಡಿ ಕಾರ್ಯ ನಿರ್ವಹಿಸುವ ಸಂಸ್ಥೆಗಳು

- ನ್ಯಾಷನಲ್ ಅಕಾಡೆಮಿ ಆಫ್ ಅಗ್ರಿಕಲ್ಚರ್ ರೀಸರ್ಚ್ ಅಂಡ್ ಮ್ಯಾನೇಜ್‌ಮೆಂಟ್ (National Academy of Agricultural Research & Management) – ಹೈದರಾಬಾದ್
- ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ರೈಸ್ ರೀಸರ್ಚ್ (Indian Institute of Rice Research) – ಹೈದರಾಬಾದ್
- ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಆಯಿಲ್ ಸೀಡ್ಸ್ ರೀಸರ್ಚ್ (Indian Institute of Oilseeds Research) – ಹೈದರಾಬಾದ್
- ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮಿಲೆಟ್ಸ್ ರೀಸರ್ಚ್ (Indian Institute of Millets Research) – ಹೈದರಾಬಾದ್
- ಸೆಂಟ್ರಲ್ ದ್ವೀಪ ಕೃಷಿ ಸಂಶೋಧನಾ ಸಂಸ್ಥೆ (Central Island Agricultural Research Institute) – ಪೋರ್ಟ್‌ಬ್ಲೇರ್
- ಸೆಂಟ್ರಲ್ ಆರಿಡ್ ಜೋನ್ ರೀಸರ್ಚ್ ಇನ್‌ಸ್ಟಿ... (Central Arid Zone Research Insti...) – ಜೋಧ್‌ಪುರ್
- ಸೆಂಟ್ರಲ್ ಏವಿಯನ್ ರೀಸರ್ಚ್ ಇನ್‌ಸ್ಟಿ... (Central Avian Research Institute) ಇಜಾತ್‌ನಗರ
- ಕೇಂದ್ರೀಯ ದ್ವೀಪ ಮೀನುಗಾರಿಕೆ ಸಂಶೋಧನಾ ...

(Central Inland Fisheries Research Institute) – ಬಾರಕ್‌ಪುರ್ (ಕೊಲ್ಕತ್ತ)

+ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಬ್ರಾಕಿಶ್ ವಾಟರ್ ಅಕ್ವಕಲ್ಚರ್ (Central Institute of Brackish Water Aquaculture) – ಚನ್ನೈ (ತಮಿಳುನಾಡು)

+ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ರೀಸರ್ಚ್ & ಬೊಫೆಲೋಸ್ (Central Institute for Research on Buffaloes) –ಹರಿಯಾಣದ ಹಿಸ್ಸಾರ್

+ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ರೀಸರ್ಚ್ ಆನ್ ಗೋಟ್ಸ್ (Central Institute for Research on Goats)– ಮಕ್‌ದೂಮ್ (ಉತ್ತರ ಪ್ರದೇಶ)

+ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಅಗ್ರಿಕಲ್ಚರಲ್ ಎಂಜಿನಿಯರಿಂಗ್ (CentralInstituteofAgricultural Engineering)– ಭೂಪಾಲ್(ಮಧ್ಯಪ್ರದೇಶ)

+ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಆರಿದ್ ಹಾರ್ಟಿಕಲ್ಚರ್ (Central Institute of Arid Horticulture) – ಬಿಕಾನೇರ್ (ರಾಜಸ್ಥಾನ)

+ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಕಾಟನ್ ರೀಸರ್ಚ್ (Central Institute of Cotton Research) – ನಾಗ್ಪುರ್ (ಮಹಾರಾಷ್ಟ್ರ)

+ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಫಿಷರೀಸ್ ಟೆಕ್ನಾಲಜಿ (Central Institute of Fisheries Technology) – ಕೊಚಿನ್ (ಕೇರಳ)

+ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಫ್ರೆಶ್ ವಾಟರ್ ಅಕ್ವಾಕಲ್ಚರ್ (Central Institute of Freshwater Aquaculture) – ಭುವನೇಶ್ವರ್ (ಒಡಿಶಾ)

+ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಆನ್ ಕಾಟನ್ ಟೆಕ್ನಾಲಜಿ (Central Institute of Research on Cotton Technology)– ಮುಂಬೈ(ಮಹಾರಾಷ್ಟ್ರ)

+ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಸಬ್ ಟ್ರೋಫಿಕಲ್ ಹಾರ್ಟಿಕಲ್ಚರ್ (Central Institute of Sub Tropical Horticulture) – ಲಕ್ನೋ(ಉ.ಪ್ರದೇಶ)

+ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಟೆಂಪರೇಚರ್ ಹಾರ್ಟಿಕಲ್ಚರ್ (Central Institute of Temperate Horticulture) – ಶ್ರೀನಗರ

+ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆನ್ ಪೋಸ್ಟ್ ಹಾರ್ವೆಸ್ಟ್ ಇಂಜಿನಿಯರಿಂಗ್ ಅಂಡ್ ಟೆಕ್ನಾಲಜಿ (Central Institute on Post harvest Engineering and Technology) – ಲೂಧಿಯಾನ (ಪಂಜಾಬ್)

+ ಸೆಂಟ್ರಲ್ ಮರೈನ್ ಫಿಷರೀಸ್ ರೀಸರ್ಚ್ ಇನ್‌ಸ್ಟಿಟ್ಯೂಟ್ (Central Marine Fisheries Research Institute) – ಕೊಚ್ಚಿ (ಕೇರಳ)

+ ಸೆಂಟ್ರಲ್ ಪ್ಲಾಂಟೇಷನ್ ಕ್ರಾಪ್ಸ್ ರೀಸರ್ಚ್ ಇನ್‌ಸ್ಟಿಟ್ಯೂಟ್ (Central Plantation Crops Research Institute) – ಕಾಸರಗೋಡು(ಕೇರಳ)

+ ಕೇಂದ್ರೀಯ ಆಲೂಗಡ್ಡೆ ಸಂಶೋಧನಾ ಕೇಂದ್ರ (Central Potato Research Institute) – ಶಿಮ್ಲಾ

+ ಕೇಂದ್ರೀಯ ಸೆಣಬು & ಅಲೈಡ್ ಫೈಬರ್ಸ್ ಸಂಶೋಧನಾ ಕೇಂದ್ರ (Central Research Institute for Jute and Allied Fibres) – ಬಾರಕ್‌ಪುರ ಕೋಲ್ಕತ್ತಾ (ಪಶ್ಚಿಮ ಬಂಗಾಳ)

+ ಕೇಂದ್ರೀಯ ಅಕ್ಕಿ ಸಂಶೋಧನಾ ಕೇಂದ್ರ (Central Rice Research Institute) – ಕಟಕ್ (ಒಡಿಶಾ)

+ ಕೇಂದ್ರೀಯ ಕುರಿ & ಉಣ್ಣೆ ಸಂಶೋಧನಾ ಕೇಂದ್ರ (Central Sheep and Wool Research Institute) – ಅವಿಕಾನಗರ, ರಾಜಸ್ಥಾನ

+ ಐ.ಸಿ.ಎ.ಆರ್ – ಭಾರತೀಯ ಮಣ್ಣು ಮತ್ತು ಜಲ ಸಂರಕ್ಷಣೆ ಕೇಂದ್ರ (ICAR-Indian Institute of Soil and Water Conservation)– ಡೆಹರಾಡೂನ್(ಉತ್ತರಾಖಂಡ)

+ ಕೇಂದ್ರೀಯ ಮಣ್ಣಿನ ಲವಣಾಂಶ ಸಂಶೋಧನಾ ಸಂಸ್ಥೆ (Central Soil Salinity Research Institute) – ಕರ್ನಾಲ್ (ಆಂಧ್ರಪ್ರದೇಶ)

+ ಕೇಂದ್ರೀಯ ತಂಬಾಕು ಸಂಶೋಧನಾ ಕೇಂದ್ರ (Central Tobacco Research Institute) – ರಾಜಮಂಡ್ರಿ (ಆಂಧ್ರಪ್ರದೇಶ)

+ ಕೇಂದ್ರೀಯ ಟ್ಯೂಬರ್ ಕ್ರಾಪ್ಸ್ ಸಂಶೋಧನಾ ಸಂಸ್ಥೆ (Central Tuber Crops Research Institute) – ತ್ರಿವೆಂಡಂ (ಕೇರಳ)

+ ಐ.ಸಿ.ಎ.ಆರ್. ರೀಸರ್ಚ್ ಕಾಂಪ್ಲೆಕ್ಸ್ ಫಾರ್ ಈಸ್ಟರ್ನ್ ರಿಜಿಯನ್ (ICAR Research Complex for Eastern Region) – ಪಾಟ್ನಾ (ಬಿಹಾರ)

+ ಐ.ಸಿ.ಎ.ಆರ್ ರೀಸರ್ಚ್ ಕಾಂಪ್ಲೆಕ್ಸ್ ಫಾರ್ ಎನ್.ಇ.ಹೆಚ್ ರಿಜಿಯನ್ (ICAR Research Complex for NEH Region) – ಬರಪಾನಿ (ಮೇಘಾಲಯ)

+ ಕೇಂದ್ರೀಯ ಕರಾವಳಿ ಕೃಷಿ ಸಂಶೋಧನಾ ಸಂಸ್ಥೆ (Cen-

tral Coastal Agricultural Research Institute) – ಎಲಾ, (ಗೋವಾ)

+ ಭಾರತೀಯ ಕೃಷಿ ಅಂಕಿ ಅಂಶಗಳ ಸಂಶೋಧನಾ ಕೇಂದ್ರ (Indian Agricultural Statistics Research Institute) – ನವದೆಹಲಿ

+ ಭಾರತೀಯ ಹುಲ್ಲುಗಾವಲು & ಮೇವು ಸಂಶೋಧನಾ ಸಂಸ್ಥೆ (Indian Grassland and Fodder Research Institute) – ಝಾನ್ಸಿ (ಉತ್ತರಪ್ರದೇಶ)

+ ಭಾರತೀಯ ಕೃಷಿ ಬಯೋತಂತ್ರಜ್ಞಾನ ಸಂಸ್ಥೆ (Indian Institute of Agricultural Biotechnology) – ರಾಂಚಿ (ಜಾರ್ಖಂಡ್)

+ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಹಾರ್ಟಿಕಲ್ಚರ್ ರೀಸರ್ಚ್ (Indian Institute of Horticultural Research) – ಬೆಂಗಳೂರು (ಕರ್ನಾಟಕ)

+ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ನ್ಯಾಚುರಲ್ ರೆಸಿನ್ಸ್ & ಗಮ್ಸ್ (Indian Institute of Natural Resins and Gums) – ರಾಂಚಿ (ಜಾರ್ಖಂಡ್)

+ ಭಾರತೀಯ ದ್ವಿದಳ ಧಾನ್ಯ ಸಂಶೋಧನೆ ಸಂಸ್ಥೆ (Indian Institute of Pulses Research) – ಕಾನ್ಪುರ (ಉತ್ತರಪ್ರದೇಶ)

+ ಭಾರತೀಯ ಮಣ್ಣಿನ ವಿಜ್ಞಾನ ಸಂಶೋಧನಾ ಸಂಸ್ಥೆ (Indian Institute of Soil Sciences,) – ಭೂಪಾಲ್ (ಮಧ್ಯಪ್ರದೇಶ)

+ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸ್ಪೈಸಸ್ ರೀಸರ್ಚ್ (Indian Institute of Spices Research) – ಕಾಲಿಕಟ್ (ಕೇರಳ)

+ ಭಾರತೀಯ ಕಬ್ಬು ಸಂಶೋಧನಾ ಸಂಸ್ಥೆ (Indian Institute of Sugarcane Research) – ಲಖ್ನೋ (ಉತ್ತರಪ್ರದೇಶ)

+ ಭಾರತೀಯ ತರಕಾರಿ ಸಂಶೋಧನಾ ಸಂಸ್ಥೆ (Indian Institute of Vegetable Research) – ವಾರಣಾಸಿ (ಉತ್ತರಪ್ರದೇಶ)

+ ರಾಷ್ಟ್ರೀಯ ಜೈವಿಕ ಒತ್ತಡ ನಿರ್ವಹಣೆ ಸಂಸ್ಥೆ (National Biotic Stress Management Institute) – ರಾಯಪುರ (ಛತ್ತೀಸಘಡ)

+ ರಾಷ್ಟ್ರೀಯ ಅಜೈವಿಕ ಒತ್ತಡ ನಿರ್ವಹಣೆ (National Institute of Abiotic Stress Management) ಸಂಸ್ಥೆ – ಮಾಲೆಗಾಂವ್ (ಮಹಾರಾಷ್ಟ್ರ)

+ ರಾಷ್ಟ್ರೀಯ ಪ್ರಾಣಿಗಳ ನ್ಯೂಟ್ರಿಷನ್ & ಶರೀರ ... ಸಂಸ್ಥೆ (National Institute of Animal Nutrition & Physiology,) – ಬೆಂಗಳೂರು

+ ರಾಷ್ಟ್ರೀಯ ಸೆಣಬು ಮತ್ತು ಅಲೈಡ್ ಫೈಬರ್ ತಂತ್ರ... ಸಂಶೋಧನಾ ಸಂಸ್ಥೆ (National Institute Research on Jute & Allied Fibre Technology) – ಕೋಲ್ಕತ್ತಾ (ಪಶ್ಚಿಮ ಬಂಗಾಳ)

+ ರಾಷ್ಟ್ರೀಯ ಪಶುವೈದ್ಯ ಸೋಂಕುಶಾಸ್ತ್ರ ಮತ್ತು ರೋ... ಮಾಹಿತಿ ಸಂಸ್ಥೆ (National Institute of Veterinary Epidemiology and Disease Informatics) – ಹೆಬ್ಬಾಳ (ಬೆಂಗಳೂರು)

+ ಕಬ್ಬು ಸಂತಾನೋತ್ಪತ್ತಿ ಸಂಶೋಧನಾ ಸಂಸ್ಥೆ (Sugarcane Breeding Research Institute) ಕೊಯಮತ್ತೂರ್ (ತಮಿಳುನಾಡು)

+ ವಿವೇಕಾನಂದ ಪಾರ್ವತೀಯ ಕೃಷಿ ಅನುಸಂ... ಸಂಸ್ಥಾನ (Vivekananda Parvatiya Kri... Anusandhan Sansthan) – ಅಲಮೋ... (ಉತ್ತರಾಖಂಡ)

+ ಭಾರತೀಯ ಗೋಧಿ & ಬಾರ್ಲಿ ಸಂಶೋಧನಾ ... (Indian Institute of Wheat and Barley Research) – ಕರ್ನಾಲ್ (ಆಂಧ್ರಪ್ರದೇಶ)

+ ಇಂಡಿಯನ್ ಮೆಕ್ಕೆಜೋಳ ಸಂಶೋಧನಾ ಸಂಸ್ಥೆ (Indian Institute of Maize Research) ನವದೆಹಲಿ

+ ಭಾರತೀಯ ತೈಲ ಪಾಮ್ ಸಂಶೋಧನಾ ಸಂಸ್ಥೆ (Indian Institute of Oil Palm Research) ಪೆಡವೆಗಿ (ಪಶ್ಚಿಮ ಗೋದಾವರಿ)

+ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಫಾರ್ಮಿಂ... ಸಿಸ್ಟಮ್ಸ್ ರೀಸರ್ಚ್ (Indian Institute of Farming Systems Research) – ಮೋದಿಪು... (ಉತ್ತರಪ್ರದೇಶ)

+ ಕೇಂದ್ರೀಯ ಜಾನುವಾರು ಸಂಶೋಧನಾ ಸಂಸ್ಥೆ (Central Institute for Research on Cattle) ಮೀರತ್ (ಉತ್ತರಪ್ರದೇಶ)

+ ಕೇಂದ್ರೀಯ ಮಹಿಳಾ ಕೃಷಿ ಕೇಂದ್ರ (Central Institute for Women in Agriculture) ಭುವನೇಶ್ವರ (ಒಡಿಶಾ)

## ವಿಶ್ವಸಂಸ್ಥೆಯ ಆಹಾರ & ಕೃಷಿ ಸಂಘಟನೆ (FAO-Food and Agriculture Organization)




**ಸ್ಥಾಪನೆ:** ಅಕ್ಟೋಬರ್ 16, 1945, **ಕೇಂದ್ರ ಕಛೇರಿ:-** ಇಟಲಿ ದೇಶದ ರೋಮ್ ಸ್ಥಾಪನೆ ದಿನವಾದ **ಅಕ್ಟೋಬರ್ 16** ನ್ನು **ವಿಶ್ವ ಆಹಾರ** ದಿನವಾಗಿ ಆಚರಿಸಲಾಗುತ್ತಿದೆ.

**ಧ್ಯೇಯ ವಾಕ್ಯ:-** **"Let there be Bread"**

- ಎಫ್.ಎ.ಒ ಸಂಘಟನೆಯು 194 ರಾಷ್ಟ್ರಗಳ ಸದಸ್ಯತ್ವವನ್ನು ಹೊಂದಿದ್ದು, 1945 ಅಕ್ಟೋಬರ್ 16 ರಿಂದ ನವೆಂಬರ್ 1 ರವರೆಗೆ ಈ ಸಂಘಟನೆಯ ಮೊದಲ ಸಮ್ಮೇಳನ ಕೆನಡಾ ದೇಶದ ಕ್ಯುಬೆಕ್‌ನಲ್ಲಿ ಜರುಗಿತು.
- ಈ ಸಂಘಟನೆಯ 39 ನೇ ಸಮ್ಮೇಳನವು 2015 ಜೂನ್6 ರಿಂದ 13 ರವರೆಗೆ ಇಟಲಿಯ ರೋಮ್‌ನಲ್ಲಿ ಜರುಗಿತು.
- 40 ನೇ ಸಭೆಯು 2017 ಜುಲೈ 3 ರಿಂದ 8 ರವರೆಗೆ ಇಟಲಿಯ ರೋಮ್ ನಲ್ಲಿ ಜರುಗಲಿದೆ.
- 1951 ರಲ್ಲಿ ಎಫ್.ಎ.ಒ ನ ಕೇಂದ್ರ ಕಛೇರಿಯು **ವಾಷಿಂಗ್‌ಟನ್ ಡಿಸಿ** ಯಿಂದ **ಇಟಲಿಯ ರೋಮ್** ಗೆ ವರ್ಗಾವಣೆಯಾಯಿತು.
- ಎಫ್.ಎ.ಒ ಮುಖ್ಯವಾಗಿ ಕೃಷಿ & ಗ್ರಾಹಕ ರಕ್ಷಣಾ ವಿಭಾಗ, ಆರ್ಥಿಕ & ಸಾಮಾಜಿಕ ಅಭಿವೃದ್ಧಿ ವಿಭಾಗ, ಮೀನುಗಾರಿಕೆ & ಮತ್ಸ್ಯೋದ್ಯಮ, ಅರಣ್ಯ ವಿಭಾಗ, ತಾಂತ್ರಿಕ ಸಹಕಾರ & ಕಾರ್ಯಕ್ರಮ ನಿರ್ವಹಣಾ ವಿಭಾಗಗಳನ್ನು ಹೊಂದಿದೆ.

**ಉದ್ದೇಶಗಳು:-**

- ವಿಶ್ವವನ್ನು ಹಸಿವಿನಿಂದ ಮುಕ್ತಗೊಳಿಸುವುದು.
- ವಿಶ್ವಾದ್ಯಂತ ಕೃಷಿ, ಅರಣ್ಯ, ಮೀನುಗಾರಿಕೆಯನ್ನು ಆಧುನೀಕರಣ ಮತ್ತು ಅಭಿವೃದ್ಧಿಗೊಳಿಸುವುದು.
- ಉತ್ತಮ ಪೋಷಕಾಂಶ ನೀಡುವುದು ಮತ್ತು ಸರ್ವರಿಗೂ ಆಹಾರ ಭದ್ರತೆ ಒದಗಿಸುವುದು
- ಸ್ವಾಭಾವಿಕ ಸಂಪನ್ಮೂಲಗಳನ್ನು ರಕ್ಷಿಸುವುದು.

## ವಿಶ್ವ ಆಹಾರ ಪ್ರಶಸ್ತಿ (World Food Prize)



- ವಿಶ್ವ ಆಹಾರ ಪೂರೈಕೆ, ಗುಣಮಟ್ಟ, ಆಹಾರ ಲಭ್ಯತೆ, ಆಹಾರ & ಕೃಷಿ, ವಿಜ್ಞಾನ & ತಂತ್ರಜ್ಞಾನ, ಮಾರುಕಟ್ಟೆ, ಪೌಷ್ಟಿಕತೆ ಮುಂತಾದ ಕ್ಷೇತ್ರಗಳಲ್ಲಿ ಗಣನೀಯ ಸಾಧನೆ ಮಾಡಿದ ಅಗ್ರಗಣ್ಯರಿಗೆ 1987 ರಿಂದ ಅಂತರಾಷ್ಟ್ರೀಯ ಪ್ರಶಸ್ತಿಯಾದ ವಿಶ್ವ ಆಹಾರ ಪ್ರಶಸ್ತಿಯನ್ನು ನೀಡಲಾಗುತ್ತಿದೆ.
- ವಿಶ್ವ ಆಹಾರ ಪ್ರಶಸ್ತಿಯ ಫೌಂಡೇಷನ್ ಸಂಸ್ಥೆಯನ್ನು ಪ್ರಸ್ತುತ ಕಾಂಬೋಡಿಯಾದ **ಯು.ಎಸ್.** ರಾಯಭಾರಿ ಕೆನ್ನೆತ್ ಎಂ. ಕ್ವಿನ್ ಮುನ್ನಡೆಸುತ್ತಿದ್ದಾರೆ.

**ವಿಶ್ವ ಆಹಾರ ಪ್ರಶಸ್ತಿ ಪಡೆದ ಭಾರತೀಯರು:-** 1987 ರಲ್ಲಿ ಭಾರತದ **ಎಂ.ಎಸ್. ಸ್ವಾಮಿನಾಥನ್** ಅವರು ಸಂಸ್ಥಾಪಕ ಪ್ರಶಸ್ತಿಯನ್ನು ಅಧಿಕ ಇಳುವರಿ ಕೊಡುವ ಭತ್ತ & ಗೋಧಿ ಬಿತ್ತನೆ ಬೀಜಗಳ ಸಂಶೋಧನೆಗಾಗಿ ಪಡೆದಿದ್ದಾರೆ. ಇವರನ್ನು **ಭಾರತದ ಹಸಿರು ಕ್ರಾಂತಿಯ ಪಿತಾಮಹ** ಎಂದು ಕೂಡ ಕರೆಯುತ್ತಾರೆ.

- 1989 ರಲ್ಲಿ ಭಾರತದ **ವರ್ಗೀಸ್ ಕುರಿಯನ್** ಹೈನುಗಾರಿಕಾ ಕ್ಷೇತ್ರದಲ್ಲಿ ಮಾಡಿದ ಸಾಧನೆಗಾಗಿ ವಿಶ್ವ ಆಹಾರ ಪ್ರಶಸ್ತಿಯನ್ನು ಪಡೆದಿದ್ದಾರೆ. ಇವರನ್ನು **ಭಾರತದ ಶ್ವೇತ ಕ್ರಾಂತಿಯ ಪಿತಾಮಹ** ಎಂದು ಕೂಡ ಕರೆಯುತ್ತಾರೆ.
- 1996 ರಲ್ಲಿ **ಡಾ॥ ಗುರುದೇವ್ ಖುಷ್** ಅವರು ಭತ್ತದ ಬೆಳೆಯ ಸಂಶೋಧನೆಗಾಗಿ ಪ್ರಶಸ್ತಿ ಪಡೆದಿದ್ದಾರೆ.
- 1998 ರಲ್ಲಿ **ಡಾ॥ ಬಿ.ಆರ್. ಬರ್‌ವಾಲೆ** ಅವರು ಸ್ವತಂತ್ರ ಭಾರತದ **ಮಹೈಕೊ** ಎಂಬ ಬಿತ್ತನೆ ಬೀಜದ ಕಂಪನಿಯನ್ನು ದೇಶಾದ್ಯಂತ ಸದೃಢಗೊಳಿಸಿದ್ದಕ್ಕಾಗಿ ವಿಶ್ವ ಆಹಾರ ಪ್ರಶಸ್ತಿಯನ್ನು ಪಡೆದರು.
- 2000 ರಲ್ಲಿ **ಡಾ॥ ಸುರೀಂದರ್ ಕೆ. ವಸಾಲ್** ಅವರು ಮೆಕ್ಕೆಜೋಳದ ಸಂಶೋಧನೆಗಾಗಿ.
- 2005ರಲ್ಲಿ **ಡಾ॥ ಎಂ. ವಿಜಯ ಗುಪ್ತಾ** ಅವರು ಮೀನುಗಾರಿಕಾ ಕ್ಷೇತ್ರದ ಸಂಶೋಧನೆಗಾಗಿ.
- 2014 ರಲ್ಲಿ **ಡಾ॥ ಸಂಜಯ್ ರಾಜಾರಾಂ** ಅವರು **ಗೋಧಿಯ ರೋಗ ನಿಯಂತ್ರಕ** ಸಂಶೋಧನೆಗಾಗಿ.
- 2016 ರ ವಿಜೇತರು ಡಾ॥ ಮರಿಯಾ ಅಂಡ್ರಾಡೆ, ಡಾ॥ ರಾಬರ್ಟ್ ಮ್ವಾಂಗ, ಡಾ॥ ಜಾನ್ ಲೋ, ಡಾ॥ ಹೌರತ್ ಬೋಯಿಸ್

## ಅಂತರಾಷ್ಟ್ರೀಯ ಆಹಾರ ನೀತಿ ಸಂಶೋಧನಾ ಸಂಸ್ಥೆ

(IFPRI- International Food Policy Research Institute)




✦ ವಿಶ್ವದಲ್ಲಿ ಹಸಿವು & ಬಡತನವನ್ನು ನಿಯಂತ್ರಿಸುವ, ಆಹಾರ ಭ... ಒದಗಿಸುವ, ಕೃಷಿ ನೈಸರ್ಗಿಕ ಸಂಪನ್ಮೂಲಗಳು, ಪೌಷ್ಠಿಕತೆಗೆ ಸಂಬಂಧ... ನೀತಿಗಳ ವಿಶ್ಲೇಷಣೆಗಾಗಿ 1975 ರಲ್ಲಿ **ಅಮೆರಿಕದ ವಾಷಿಂಗ್ಟನ್ ಡಿ.ಸಿ.**ಯಲ್ಲಿ ಈ ಸಂಸ್ಥೆಯನ್ನು ಸ್ಥಾಪಿಸಲಾಗಿದೆ.

✦ ಇದೊಂದು ಸಾಮಾಜಿಕ ಸಂಶೋಧನಾ ಸಂಸ್ಥೆಯಾಗಿದ್ದು, 19.. ಮಾರ್ಚ್ 5 ರಂದು ಕೊಲಂಬಿಯಾದಲ್ಲಿ ಮೊದಲು ಸಂಘಟನೆಗೊಂ... 1976 ಫೆಬ್ರವರಿಯಲ್ಲಿ ತನ್ನ **ಮೊದಲ ಸಂಶೋಧನಾ ಬುಲ್ಲೆ...** ಪತ್ರಿಕೆಯನ್ನು ಪ್ರಕಟಿಸಿತು.

✦ ಭಾರತ, ಚೀನಾ, ಇಥಿಯೋಪಿಯಾ ರಾಷ್ಟ್ರಗಳನ್ನು ಒಳಗೊಂಡಂತೆ ವಿಶ್ವದ ಬೇರೆ ಬೇರೆ ರಾಷ್ಟ್ರಗಳಲ್ಲಿ ತನ್ನ ಕಛೇರಿಗ... ಹೊಂದಿದೆ.

✦ ವಿಶ್ವ ವ್ಯಾಪಾರ ಸಂಘಟನೆಯು ರೂಪಿಸುವ ಕೃಷಿ ಕ್ಷೇತ್ರಕ್ಕೆ ಸಂಬಂಧಿಸಿದ ನೀತಿ ಸಂಶೋಧನೆಗಳನ್ನು ಐ.ಎಫ್.ಪಿ.ಆರ್... ವಿಶ್ಲೇಷಿಸುತ್ತದೆ.

✦ ಸಹಸ್ರಾಬ್ದ ಅಭಿವೃದ್ಧಿ ಗುರಿಗಳ ಅನುಷ್ಠಾನಕ್ಕಾಗಿ ಸರ್ಕಾರಗಳು ರೂಪಿಸುವ ಅಭಿವೃದ್ಧಿ ಕಾರ್ಯತಂತ್ರಗಳ ಅನುಷ್ಠಾ... ಪೂರಕವಾದ ಯೋಜನೆಗಳ ನೆರವನ್ನು ನೀಡುತ್ತದೆ.

✦ ಐ.ಎಫ್.ಪಿ.ಆರ್.ಐ ಜಾಗತಿಕ ಮಟ್ಟದಲ್ಲಿ **ಜಾಗತಿಕ ಆಹಾರ ನೀತಿ** ವರದಿಯನ್ನು ವಾರ್ಷಿಕವಾಗಿ ಪ್ರಕಟಿಸುತ್ತಿದ್ದು, ... ಆಹಾರ ಭದ್ರತೆ & ಪೌಷ್ಠಿಕತೆಗೆ ಸಂಬಂಧಿಸಿದ ನೀತಿಗಳನ್ನು ಆಧಾರವಾಗಿಟ್ಟುಕೊಂಡಿದೆ.

✦ 1993 ರಲ್ಲಿ ಈ ಸಂಸ್ಥೆಯು **ವಿಷನ್ – 2020** ರೂಪಿಸಿದ್ದು, 2020 ರವೇಳೆಗೆ ಜಾಗತಿಕವಾಗಿ ಸರ್ವರಿಗೂ ಗುಣಮ... ಆಹಾರ ಒದಗಿಸುವುದಾಗಿದೆ.

✦ 2006 ರಿಂದ ವಾರ್ಷಿಕವಾಗಿ **ಜಾಗತಿಕ ಹಸಿವು ಸೂಚ್ಯಂಕ (GHI - Global Hunger Index)** ಪ್ರಕಟ ಪಡಿಸು... ಇದು ರಾಷ್ಟ್ರಗಳ ಹಸಿವಿನ ಸ್ಥಿತಿಗತಿಯ ಬಗ್ಗೆ ತಿಳಿಸುವ ಬಹು ಆಯಾಮಗಳ ಸೂಚ್ಯಂಕವಾಗಿದ್ದು, 2016 ವರದಿ ಪ್ರಕಾರ ವಿಶ್ವ ಸಂಸ್ಥೆಯ **ಸುಸ್ಥಿರ ಅಭಿವೃದ್ಧಿಯ ಗುರಿಗಳು 2030** ರ ವೇಳೆಗೆ ಜಾಗತಿಕ ಮಟ್ಟದಲ್ಲಿ ಹಸಿ... ಶೂನ್ಯಗೊಳಿಸುವ ಮುಖ್ಯ ಉದ್ದೇಶ ಹೊಂದಿದೆ.

✦ 2016 ರ ಪ್ರಕಾರ ಭಾರತ ದೇಶ 118 ವಿಕಾಸ ಶೀಲ ರಾಷ್ಟ್ರಗಳಲ್ಲಿ **97 ನೇ ಸ್ಥಾನ** ಪಡೆದಿದೆ.

✦ 2008 ರಲ್ಲಿ ಭಾರತದ ರಾಜ್ಯಗಳ ಹಸಿವು ಸೂಚ್ಯಂಕ (ISHI - Hunger Index for the States of Ind... ಪ್ರಕಟ ಪಡಿಸುತ್ತದೆ.

---

### ನಿಮಗಿದು ತಿಳಿದಿರಲಿ:

**'ವಿಶ್ವ ಹಸಿವಿನ ಸೂಚ್ಯಂಕ'ದ ರಚನೆ:** ಈ ಕೆಳಗಿನ ಆಯಾಮಗಳ ಮೌಲ್ಯಗಳನ್ನು ಒಟ್ಟುಗೂಡಿಸಿ ಅದನ್ನು ರಚಿಸಲಾಗ...

**ಅಪೌಷ್ಠಿಕತೆ :** ಒಟ್ಟು ಜನಸಂಖ್ಯೆಯಲ್ಲಿ ಅಪೌಷ್ಠಿಕತೆಯಿಂದ ಬಳಲುತ್ತಿರುವವರ ಪ್ರಮಾಣ;

**ಮಕ್ಕಳ ಪೋಲು ಪ್ರಮಾಣ :** ಎತ್ತರಕ್ಕೆ ತಕ್ಕದಲ್ಲದ ಕಡಿಮೆ ತೂಕ ಹೊಂದಿದ ಐದು **ವರ್ಷಗಳೊಳಗಿನ** ಮಕ್ಕಳ ಪ್ರ... ಪ್ರಮಾಣ;

**ಕುಬ್ಜ ಮಕ್ಕಳ ಪ್ರಮಾಣ :** ವಯಸ್ಸಿಗೆ ತಕ್ಕದಲ್ಲದ ಕಡಿಮೆ ಎತ್ತರ ಹೊಂದಿದ ಐದು **ವರ್ಷಗಳೊಳಗಿನ** ಮಕ್ಕಳ ಪ್ರ... ಪ್ರಮಾಣ; ಹಾಗೂ

**ಮಕ್ಕಳ ಮರಣ ದರ :** ಐದು ವರ್ಷಗಳೊಳಗಿನ ಮಕ್ಕಳ ಮರಣ ಪ್ರಮಾಣ

**ಉತ್ಪಾದಕರ ಬೆಲೆ ಸೂಚ್ಯಂಕ (PPI-Producer Price Index):-** ಉತ್ಪಾದಕರ ದೃಷ್ಟಿಯಿಂದ ಬೆಲೆಯಲ್ಲಿ... ಬದಲಾವಣೆಯನ್ನು ಅಳತೆ ಮಾಡುವ ಸೂಚ್ಯಂಕವಾಗಿದ್ದು, ತೆರಿಗೆ, ವ್ಯಾಪಾರ, ಸಾರಿಗೆ ವೆಚ್ಚದ ಬೆಲೆಗಳನ್ನು ... ಬೆಲೆಗಳಾಗಿ ಬಳಸುತ್ತದೆ. ಸಗಟು ಬೆಲೆ ಸೂಚ್ಯಂಕದ ಪರಿಷ್ಕರಣಾ ಸಮಿತಿ ಅನೇಕ ರಾಷ್ಟ್ರಗಳಲ್ಲಿ WPI ಗೆ ಬದಲಾ... ಸೂಚ್ಯಂಕವನ್ನು ಬೆಲೆ ಏರಿಳಿತಗಳನ್ನು ಅಳತೆ ಮಾಡಲು ಬಳಸುತ್ತಿದ್ದಾರೆ.

## ಪರಿಸರದ ಮೇಲಿನ ವಿಶ್ವ ವ್ಯಾಪಿ ನಿಧಿ (WWF-World Wide Fund for Nature)




- ಇದೊಂದು **ಸರ್ಕಾರೇತರ ಸಂಘಟನೆಯಾಗಿದ್ದು**, ಇದರ ಕೇಂದ್ರ ಕಚೇರಿಯು ಸ್ವಿಟ್ಜರ್ಲೆಂಡ್ ನಲ್ಲಿದೆ.
- ಇವರ ಮೊದಲ ಕಛೇರಿಯು 1961 ಸೆಪ್ಟೆಂಬರ್ 11 ರಂದು ಸ್ವಿಟ್ಜರ್ಲೆಂಡ್‌ನ ಮೋರ್ಗಸ್ ನಲ್ಲಿ ಸ್ಥಾಪನೆಗೊಂಡಿತ್ತು.
- ಈ ಸಂಸ್ಥೆಯು **1961 ಏಪ್ರಿಲ್ 29 ರಂದು** ಸ್ಥಾಪನೆಗೊಂಡಿದೆ.
- ಇದರ ಸಂಕೇತವು **'ಪಾಂಡಾ'** ಆಗಿದ್ದು,
- ಇದು ಜಗತ್ತಿನಲ್ಲಿ ಪರಿಸರ ಸಂರಕ್ಷಿಸುವ ದೊಡ್ಡ ಸಂಘಟನೆಯಾಗಿದೆ.
- ಪ್ರಸ್ತುತ 100 ಕ್ಕೂ ಅಧಿಕ ರಾಷ್ಟ್ರಗಳಲ್ಲಿ 1,300 ಪರಿಸರ ಸಂರಕ್ಷಣಾ ಯೋಜನೆಗಳನ್ನು ಕೈಗೊಂಡಿದ್ದು, ಇದಕ್ಕೆ ಅಗತ್ಯವಾದ ವೆಚ್ಚದಲ್ಲಿ ಶೇ 55 ರಷ್ಟನ್ನು ವೈಯಕ್ತಿಕವಾಗಿ ದಾನಿಗಳು ಹಾಗೂ ಶೇ 19 ರಷ್ಟನ್ನು ವಿಶ್ವಬ್ಯಾಂಕ್ ಅಥವಾ ಇನ್ನಿತರೆ ಸರ್ಕಾರಿ ಮೂಲಗಳಿಂದ ಶೇ 8 ರಷ್ಟನ್ನು ನಿಗಮಗಳು ಪೂರೈಸಿವೆ.
- ಈ ಸಂಸ್ಥೆಯು ಸ್ಥಾಪನೆಗೊಳ್ಳುವುದಕ್ಕಿಂತ ಮುಂಚಿತವಾಗಿ ನ್ಯೂಯಾರ್ಕ್‌ನಲ್ಲಿ 1947 ರಲ್ಲಿ The Conservation Foundation ಸ್ಥಾಪನೆಗೊಂಡಿದ್ದು, ಪರಿಸರ ಸ್ನೇಹಿ ಕ್ರಮಗಳಿಗೆ ಬೆಂಬಲವನ್ನು ನೀಡುವ ಸಂಸ್ಥೆಯಾಗಿತ್ತು. 1990 ರಲ್ಲಿ ಇದು WWF ನೊಂದಿಗೆ ವಿಲೀನಗೊಂಡಿದೆ.
- ಇದರ ಪ್ರಮುಖ ಉದ್ದೇಶಗಳು ಪರಿಸರದ ಸಮತೋಲನ, ಪರಿಸರ ಸಂರಕ್ಷಣೆ ಕಾಪಾಡುವುದಾಗಿದೆ.
- WWF ಸಂಸ್ಥೆಯು ಒಂದು ದೇಶದ ಜೀವ ಪರಿಸರದ ಹೆಜ್ಜೆ ಗುರುತನ್ನು **"ಆ ದೇಶವು ಬಳಸುವ ಆಹಾರ, ಬಟ್ಟೆ ಹಾಗೂ ಕಟ್ಟಿಗೆಯನ್ನು ಉತ್ಪಾದಿಸಲು ಬೇಕಾಗುವ ಎಲ್ಲಾ ಕೃಷಿ, ಜಾನುವಾರು ಮೇಯಿಸುವ, ಅರಣ್ಯ ಮತ್ತು ಮೀನುಗಾರಿಕೆಗೆ ಲಭ್ಯವಿರುವ ಭೂಮಿಯ ಪ್ರಮಾಣವಲ್ಲದೇ; ಇಂಧನ ಬಳಸಿದಾಗ ಹೊರಹೊಮ್ಮುವ ತ್ಯಾಜ್ಯಗಳನ್ನು ಹೀರಿಕೊಳ್ಳಲು ಬೇಕಾದ ಜಮೀನು; ಮತ್ತು ಮೂಲ ಸೌಕರ್ಯಗಳನ್ನು ಕಲ್ಪಿಸಲು ಬೇಕಾದ ಒಟ್ಟು ಜಮೀನಿನ ಪ್ರಮಾಣ"** ಎಂದು ವ್ಯಾಖ್ಯಾನಿಸಿದೆ.

## ಅರ್ಥ್ ಅವರ್ – ಮಾರ್ಚ್ 25

- ವರ್ಲ್ಡ್ ವೈಲ್ಡ್ ಫಂಡ್ ಫಾರ್ ನೇಚರ್ (WWF)ಎಂಬ ಸಂಸ್ಥೆಯು ಪ್ರತಿ ವರ್ಷ ಮಾರ್ಚ್ ತಿಂಗಳ 3ನೇ ಶನಿವಾರದಂದು ಅರ್ಥ್ ಅವರ್ ನ್ನು ಆಚರಣೆ ಮಾಡುತ್ತಿದ್ದು, ಅದೇ ರೀತಿ **2017ರ ಮಾರ್ಚ್ 25 ರಂದು ರಾತ್ರಿ 8:30 ರಿಂದ 9:30ರ ಒಂದು ಗಂಟೆ ಅವಧಿ ಅರ್ಥ್ ಅವರ್**‌ನ್ನು ಆಚರಣೆ ಮಾಡುವ ಮೂಲಕ ಜನರಿಗೆ ಪರಿಸರದ ಬಗ್ಗೆ ಜಾಗೃತಿಯನ್ನು ಮೂಡಿಸಲಾಯಿತು.
- ರಾತ್ರಿ 8:30 ರಿಂದ 9:30ರವರೆಗೆ ಅರ್ಥ್ ಅವರ್‌ನ್ನು ಆಚರಿಸುವ ಸಂದರ್ಭದಲ್ಲಿ ಅನಗತ್ಯವಾಗಿ ಬಳಕೆ ಮಾಡುವ ವಿದ್ಯುತ್ ದೀಪಗಳನ್ನು ಆರಿಸಲಾಗುತ್ತದೆ. ಈ ಮೂಲಕ ತಾಪಮಾನವನ್ನು ತಗ್ಗಿಸುವ ಪ್ರಯತ್ನ ಮಾಡಲಾಗುತ್ತದೆ.

## Living Planet Index

- WWF 1998 ರಿಂದ ಪ್ರತಿ 2 ವರ್ಷಗಳಿಗೊಮ್ಮೆ ಲಂಡನ್‌ನ ಜಿಯೋಲಾಜಿಕಲ್ ಸೊಸೈಟಿ ಸಹಭಾಗಿತ್ವದಲ್ಲಿ ಈ ಸೂಚ್ಯಂಕವನ್ನು ಪ್ರಕಟಪಡಿಸುತ್ತಿದ್ದು, ವಿಶ್ವದ ಪರಿಸರದ ಮೇಲೆ ಮಾನವ ಚಟುವಟಿಕೆಗಳ ಪರಿಣಾಮದ ಮೇಲೆ ಈ ವರದಿಯು ಬೆಳಕು ಚೆಲ್ಲುತ್ತದೆ.

Living Planet Index

- ಭೂಮಿಯ ಧಾರಣ ಸಾಮರ್ಥ್ಯವನ್ನು ಮೀರಿ ಮಾನವನ ಚಟುವಟಿಕೆಗಳು ತೀವ್ರವಾಗುತ್ತಿದ್ದು, ಪೃಥ್ವಿಯ ನೈಸರ್ಗಿಕ ವಿಕೋಪಗಳಿಗೆ ಪ್ರತ್ಯಕ್ಷವಾಗಿ & ಪರೋಕ್ಷವಾ. ಪರಿಣಾಮವನ್ನು ಬೀರುತ್ತಿದ್ದು, ಇದನ್ನು ನಿಯಂತ್ರಿಸುವ ಜವಾಬ್ದಾರಿ ನಮ್ಮ ಕೈಲಿದೆ. ಇತ್ತೀಚಿನ ವರದಿ 2016 ರ ಅಕ್ಟೋಬರ್‌ನಲ್ಲಿ ಪ್ರಕಟಗೊಂಡಿದೆ.
- ಪ್ರಸ್ತುತ ಜೈವಿಕ ವೈವಿಧ್ಯತಾ ಸಂರಕ್ಷಣೆಯನ್ನು ತೀವ್ರವಾಗಿ & ಪರಿಣಾಮಕಾರಿಯಾಗಿ ಮಾಡುವ ಕ್ರಮಗಳನ್ನು ಕೈಗೊಳ್ಳಬೇಕೆಂಬುದು 2016 ರ ವರದಿಯ ಮುಖ್ಯಾಂಶವಾಗಿದೆ.

# ದೇಶದ ಆರ್ಥಿಕ ಸೂಚ್ಯಂಕವಾಗಿ ಬೆಲೆ ಸೂಚ್ಯಂಕಗಳು (Price Indices)

ಮಾರುಕಟ್ಟೆಯಲ್ಲಿ ವಸ್ತುಗಳನ್ನು ಕೊಳ್ಳುವ & ಮಾರಾಟ ಮಾಡುವ ವ್ಯಾಪಾರಿ ಪ್ರಕ್ರಿಯೆಯಲ್ಲಿ ಅನುಭೋಗಿಗಳು & ಉತ್ಪಾದಕರ ನಡುವೆ ಸಮನ್ವಯತೆ ತರುವ ಮುಖ್ಯ ಅಂಶ ಆ ವಸ್ತುವಿನ ಬೆಲೆ ಆಗಿರುತ್ತದೆ. ಸರಕು & ಸೇ... ಗಳ ಬೆಲೆಗಳು ಆ ಮಾರುಕಟ್ಟೆಯ ಬೇಡಿಕೆ & ಪೂರೈಕೆಗಳಿಂದ ನಿರ್ಧರಿಸಲ್ಪಡುತ್ತವೆ. ಆರ್ಥಿಕತೆಯಲ್ಲಿ ಹಣವು ಆಂತರಿಕ ಮೌಲ್ಯ & ಬಾಹ್ಯ ಮೌಲ್ಯ ಎಂಬ ಎರಡು ವಿಧದ ಮೌಲ್ಯಗಳನ್ನು ಹೊಂದಿರುತ್ತದೆ. ಹಣದ ಆಂತರಿ... ಮೌಲ್ಯ ಎಂದರೆ, ಹಣದ ನೈಜ ಕೊಂಡುಕೊಳ್ಳುವ ಸಾಮರ್ಥ್ಯ. ಇದು ಮಾರುಕಟ್ಟೆಯಲ್ಲಿ ಅಸ್ತಿತ್ವದಲ್ಲಿರುವ ಬೆಲೆ... ಮೇಲೆ ನಿರ್ಧಾರವಾಗಿರುತ್ತದೆ. ಅಂದರೆ ಬೆಲೆಯು ಹೆಚ್ಚಾದಾಗ ಹಣದ ಮೌಲ್ಯ ಕುಸಿಯುತ್ತದೆ ಅಥವಾ ಬೆಲೆ ಕಡಿಮೆಯಾದಾಗ ಹಣದ ಮೌಲ್ಯ ಹೆಚ್ಚಾಗುತ್ತದೆ. ಹಾಗಾದರೆ ಹಣದ ಪೂರೈಕೆ & ಬೆಲೆಗಳ ಏರಿಳಿತಗಳ ನಡುವೆ ಸಂಬಂಧವನ್ನು ಅರಿಯಲು ಆಧಾರವರ್ಷ & ಚಾಲ್ತಿ ವರ್ಷಗಳ ನಡುವೆ ಹೋಲಿಕೆ ಮಾಡಬೇಕಾಗುತ್ತದೆ. ಈ ಹಿನ್ನಲೆಯಲ್ಲಿ ಭಾರತದ ಮುಖ್ಯ ಬೆಲೆ ಸೂಚ್ಯಂಕಗಳೆನಿಸಿದ ಸಿ.ಪಿ.ಐ & ಡಬ್ಲ್ಯು.ಪಿ.ಐಗಳನ್ನು ವಿಶ್ಲೇಷಿಸಲಾಗಿ...




ಬೆಲೆಯ ಸೂಚ್ಯಂಕಗಳು (Index Numbers)

- ಸಗಟು ವ್ಯಾಪಾರ ಬೆಲೆ ಸೂಚ್ಯಂಕ (Whole sale Price Index (WPI)
- ಗ್ರಾಹಕರ ಬೆಲೆ ಸೂಚ್ಯಂಕ (Consumers Price Index (CPI)




## ಸಗಟು ವ್ಯಾಪಾರ ಬೆಲೆ ಸೂಚ್ಯಂಕ (Whole sale Price Index (WPI)

- ಸಗಟು ವ್ಯಾಪಾರ ಬೆಲೆ ಸೂಚ್ಯಂಕವು ಅರ್ಥವ್ಯವಸ್ಥೆಯ ವಿವಿಧ ವಲಯಗಳಲ್ಲಿ ಬೆಲೆಗಳ ಸ್ಥಿತಿಯನ್ನು ಅಳೆಯುವ ಮಾಪನವಾಗಿದೆ.
- ನಿರ್ಧಿಷ್ಟ ವಸ್ತುಗಳ ಮತ್ತು ಸೇವೆಗಳ ಸಾಮಾನ್ಯ ಸಗಟು ಮಾರುಕಟ್ಟೆ ಬೆಲೆಗಳಲ್ಲಾದ ಬದಲಾವಣೆಗಳನ್ನು ಸೂಚಿಸುತ್ತದೆ. ಇದನ್ನು ಭಾರತದಲ್ಲಿ **"ಹಣದುಬ್ಬರದ ಸೂಚ್ಯಂಕ"** ವಾಗಿ ಬಳಸುತ್ತಾರೆ.

### ಸಗಟು ಬೆಲೆ ಸೂಚ್ಯಂಕ ಕಂಡು ಕೊಳ್ಳುವ ಉದ್ದೇಶ:-

- ಸಾಮಾನ್ಯ ಬೆಲೆಗಳ ಚಲನವಲನಗಳನ್ನು ನಿರ್ದೇಶಿಸಿ ಬೇಡಿಕೆ ಮತ್ತು ಬೇಡಿಕೆಯ ಮೇಲಾಗುವ ಬದಲಾವಣೆಗಳನ್ನು ನಿಯಂತ್ರಿಸುವುದಾಗಿದೆ.
- ಭಾರತದಲ್ಲಿ ಸಗಟು ವ್ಯಾಪಾರ ಬೆಲೆ ಸೂಚ್ಯಂಕವನ್ನು ಆಧರಿಸಿ ಸರ್ಕಾರವು **"ಹಣಕಾಸು ಮತ್ತು ವಿತ್ತೀಯ ನೀತಿ"**ಗಳನ್ನು ರೂಪಿಸುತ್ತದೆ.

### ಸಗಟು ವ್ಯಾಪಾರ ಬೆಲೆ ಸೂಚ್ಯಂಕದ ಉಪಯೋಗಗಳು

- ಸಗಟು ವ್ಯಾಪಾರ ಬೆಲೆ ಸೂಚ್ಯಂಕವನ್ನು ಸರ್... ಬ್ಯಾಂಕುಗಳು, ವ್ಯಾಪಾರ ಮಳಿಗೆಗಳು, ಉದ್ಯಮಿ... ಉಪಯೋಗಿಸುತ್ತಾರೆ.

### ಸಗಟು ವ್ಯಾಪಾರ ಬೆಲೆ ಸೂಚ್ಯಂಕ ಬಿಡುಗಡೆ:-

- ಸಗಟು ವ್ಯಾಪಾರ ಬೆಲೆಸೂಚ್ಯಂಕವನ್ನು ನಿರಂತರವಾ... 1939 ರಿಂದ ಬಿಡುಗಡೆ ಮಾಡಲಾಗುತ್ತಿದೆ. 1... ರಿಂದ ಇದನ್ನು ಮುದ್ರಣ ರೂಪದಲ್ಲಿ ತರಲಾಗಿದೆ.

### ಸಗಟು ವ್ಯಾಪಾರ ಬೆಲೆ ಸೂಚ್ಯಂಕ ಪ್ರಕಟಿಸುವವರು

- ರಾಷ್ಟ್ರ ಮಟ್ಟದಲ್ಲಿ ಈ ಸೂಚ್ಯಂಕವನ್ನು "ಪ್ರತಿ... "ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ... ಕೈಗಾರಿಕಾ ನೀತಿ ಮತ್ತು ಉತ್ತೇಜನ ಇಲಾಖೆ... ಆರ್ಥಿಕ ಸಲಹೆಗಾರರ ಕಛೇರಿಯಿಂದ ರಚಿಸಿ ಮು... ಬಿಡುಗಡೆ ಮಾಡಲಾಗುತ್ತಿದೆ.

**ಆಧಾರ ವರ್ಷ:-**

- ಪ್ರಸ್ತುತವಾಗಿ 2011-12 ನ್ನು ಸಗಟು ವ್ಯಾಪಾರ ಬೆಲೆ ಸೂಚ್ಯಂಕ ಕಂಡು ಹಿಡಿಯಲು ಆಧಾರವರ್ಷವನ್ನಾಗಿರಿಸಲಾಗಿದೆ.

**ಸಗಟು ವ್ಯಾಪಾರ ಬೆಲೆ ಸೂಚ್ಯಂಕ ಕಂಡು ಹಿಡಿಯಲು ಬಳಸುವ ಪದಾರ್ಥಗಳು:-**

- ಸಗಟು ವ್ಯಾಪಾರ ಬೆಲೆ ಸೂಚ್ಯಂಕ ಕಂಡು ಹಿಡಿಯಲು 676 ಪದಾರ್ಥಗಳನ್ನು ಸೇರಿಸಲಾಗಿದ್ದು, ಈ ಪದಾರ್ಥಗಳನ್ನು ಮೂರು ವಿಭಾಗಗಳಾಗಿ ವಿಂಗಡಿಸಲಾಗಿದೆ.

**ಸಗಟು ವ್ಯಾಪಾರ ಬೆಲೆ ಸೂಚ್ಯಂಕ ಅಳೆಯಲು ನೀಡುವ ಆದ್ಯತೆ**

| ಕ್ರಮ ಸಂಖ್ಯೆ | ಸರಕುಗಳು | ಆದ್ಯತೆ (ಶೇಕಡಾವಾರು) |
|---|---|---|
| 1 | ಪ್ರಾಥಮಿಕಪದಾರ್ಥಗಳು (102) | ಶೇ 20.1 |
| 2 | ಉತ್ಪಾದಿತ ಪದಾರ್ಥ (555) | ಶೇ 65 |
| 3 | ಇಂಧನ ಮತ್ತು ಶಕ್ತಿ ಪದಾರ್ಥಗಳು (19) | ಶೇ 14.9 |
| | ಒಟ್ಟು (676) | 100% |

**ಸಗಟು ವ್ಯಾಪಾರ ಬೆಲೆ ಸೂಚ್ಯಂಕ ಕಂಡು ಹಿಡಿಯುವ ಸೂತ್ರ:-**

ಸಗಟು ಬೆಲೆ ಸೂಚ್ಯಂಕ = $\frac{\text{ಚಾಲ್ತಿ ವರ್ಷದ ಸಗಟು ಬೆಲೆ } (P_1) - \text{ಆಧಾರ ವರ್ಷದ ಸಗಟು ಬೆಲೆ } (P_0)}{\text{ಆಧಾರ ವರ್ಷದ ಸಗಟು ಬೆಲೆ } (P_0)}$

$$WPI = \frac{\Sigma WP_1 - \Sigma WP_0}{\Sigma WP_0}$$

WPI = ಸಗಟು ವ್ಯಾಪಾರ ಬೆಲೆ ಸೂಚ್ಯಂಕ

$\Sigma WP_1$ = ಒಟ್ಟು ಚಾಲ್ತಿ ವರ್ಷದ ಭಾರ(ತೂಕ) ಸಹಿತ ಸಗಟು ಬೆಲೆಗಳು

$\Sigma WP_0$ = ಒಟ್ಟು ಆಧಾರ ವರ್ಷದ ಭಾರ (ತೂಕ) ಸಹಿತ ಸಗಟು ಬೆಲೆಗಳು

**ರಾಷ್ಟ್ರೀಯ ಆದಾಯ (National Income) ದ ಪ್ರಮುಖ ಲೆಕ್ಕಾಚಾರ:**

ಸಾಮಾಜಿಕ ಲೆಕ್ಕಾಚಾರ:- ಜೆ.ಆರ್. ಹಿಕ್ಸ್ – 1942

ಆದಾನ ಉತ್ಪನ್ನ ವಿಧಾನ:- ಲಿಯಾಂಟಿಫ್ – 1939

ನಿಧಿ ಪ್ರವಾಹ ವಿಧಾನ:- ಮೊರಿಸ್ ಕೋಪ್‌ಲ್ಯಾಂಡ್ – 1952

ಸಂದಾಯ ಶಿಲ್ಕು ವಿಧಾನ:- ಬಿ.ಜೆ. ಕೋಹೆನ್ – 1969

**ಅಸೋಚಾಂ (ASSOCHAM - The Associated Chambers of Commerce & Industry of India)**




- ಭಾರತದ ವ್ಯಾಪಾರಿ ಸಂಘಟನೆಗಳಲ್ಲಿ ಮುಖ್ಯವಾದ ಸಂಸ್ಥೆಗಳಲ್ಲಿ ಅಸೋಚಾಂ (ASSOCHAM) ಒಂದಾಗಿದ್ದು, ವ್ಯಾಪಾರ & ವಾಣಿಜ್ಯ ವಲಯದ ಹಿತಾಸಕ್ತಿಯನ್ನು ರಕ್ಷಿಸುವುದು, ಕೈಗಾರಿಕೆ, ಸರ್ಕಾರ & ಉದ್ದಿಮೆದಾರ ನಡುವೆ ಸೂಕ್ತ ನೀತಿಗಳನ್ನು ರೂಪಿಸುವ ದೇಶೀಯ & ವಿದೇಶಿ ವ್ಯಾಪಾರವನ್ನು ಉತ್ತೇಜಿಸುವುದು, ಭಾರತದ ವ್ಯಾಪಾರ ಬೆಳವಣಿಗೆ ದೃಷ್ಟಿಯಿಂದ ವ್ಯಾಪಾರಿ ನಿಯಂತ್ರಣಗಳನ್ನು ಕಡಿಮೆಗೊಳಿಸುವ ಸರ್ಕಾರೇತರ ವ್ಯಾಪಾರ ಸಂಘಟನೆಯಾಗಿದೆ.
- 1920 ರಲ್ಲಿ ಇದು ಸ್ಥಾಪನೆಯಾಗಿದ್ದು, ನವದೆಹಲಿಯಲ್ಲಿ ಕೇಂದ್ರ ಕಛೇರಿ ಹೊಂದಿದೆ.
- ಇದರ ಪ್ರಾದೇಶಿಕ ಕಛೇರಿಗಳು ಬೆಂಗಳೂರು, ಕೋಲ್ಕತ್ತಾ, ಅಹಮದಾಬಾದ್‌ಗಳಲ್ಲಿವೆ.
- ಈ ಮಂಡಳಿಯ ಸದಸ್ಯರುಗಳು ವ್ಯಾಪಾರ, ಕೈಗಾರಿಕೆ ವಲಯದಿಂದ ಹಾಗೂ ವೃತ್ತಿಪರರಾಗಿರುತ್ತಾರೆ.

**ಫಿಕ್ಕಿ (FICCI - Federation of Indian Chambers of Commerce & Industry)**




- 1927 ರಲ್ಲಿ ಮಹಾತ್ಮ ಗಾಂಧೀಜಿಯವರ ಸಲಹೆ ಮೇರೆಗೆ ಜಿ.ಡಿ. ಬಿರ್ಲಾ, ಪುರುಷೋತ್ತಮ್ ದಾಸ್ & ಠಾಕೂರ್ ದಾಸ್ ಈ ಸಂಸ್ಥೆಯನ್ನು ಸ್ಥಾಪಿಸಿದ್ದು, ಭಾರತದ ಅತ್ಯಂತ ಹಳೆಯ, ದೊಡ್ಡ & ಅಪೆಕ್ಸ್ ವ್ಯವಹಾರ ಸಂಘಟನೆಯಾಗಿದೆ.
- ಇದು ಒಂದು ಸರ್ಕಾರೇತರ ಲಾಭ ರಹಿತ ಉದ್ದೇಶಿತ ಸಂಘಟನೆಯಾಗಿದ್ದು, ಭಾರತದ ವ್ಯವಹಾರ ಸಂಸ್ಥೆಗಳ ಸಂಘಟನೆಯಾಗಿದೆ.
- ಇದರ ಕೇಂದ್ರ ಕಛೇರಿ ನವದೆಹಲಿಯಲ್ಲಿದೆ. ಭಾರತದ 12 ರಾಜ್ಯಗಳಲ್ಲಿ & ವಿಶ್ವದ 8 ರಾಷ್ಟ್ರಗಳಲ್ಲಿ ತನ್ನ ಪ್ರಾದೇಶಿಕ ಕಛೇರಿಗಳನ್ನು ಹೊಂದಿದೆ.

# ಗ್ರಾಹಕ ಬೆಲೆ ಸೂಚ್ಯಂಕ (Consumer Price Index)

✦ ನಿರ್ದಿಷ್ಟ ಗುಂಪಿನ ಜನರು ಬಳಸುವ ಆಯ್ಕೆಯಾದ ಸರಕು ಮತ್ತು ಸೇವೆಗಳ ಚಿಲ್ಲರೆ ಮಾರುಕಟ್ಟೆ ಬೆಲೆಗಳಲ್ಲಿ ಆಗುವ ಬದಲಾವಣೆಗಳನ್ನು ಅಧ್ಯಯನ ಮಾಡಲು ಗ್ರಾಹಕ ಬೆಲೆ ಸೂಚ್ಯಂಕಗಳನ್ನು **"ಪ್ರತಿ ತಿಂಗಳು"** ರಚಿಸಲಾಗುತ್ತದೆ.

✦ ಗ್ರಾಹಕ ಬೆಲೆ ಸೂಚ್ಯಂಕ (CPI)ವು ಸಮಯ ಬದಲಾವಣೆಯಂತೆ, ಒಂದು ನಿರ್ದಿಷ್ಟ ಗುಂಪಿನ ಗ್ರಾಹಕರು, ನಿರ್ದಿಷ್ಟ ಪ್ರಕಾರದ **"ಸರಕು ಮತ್ತು ಸೇವೆಗಳ ಮೇಲೆ ಮಾಡಿದ ವೆಚ್ಚದಲ್ಲಾದ ಬದಲಾವಣೆಯನ್ನು ಅಳತೆ ಮಾಡಲು ರೂಪಿಸಿದ ಒಂದು ಸಮಗ್ರ ಆರ್ಥಿಕ ಸೂಚ್ಯಂಕವಾಗಿದೆ".**

### ಗ್ರಾಹಕರ ಬೆಲೆ ಸೂಚ್ಯಂಕ – ಜೀವನ ಮಟ್ಟದ ಸೂಚ್ಯಂಕ

✦ ಗ್ರಾಹಕ ಬೆಲೆ ಸೂಚ್ಯಂಕವು ಒಂದು ನಿರ್ದಿಷ್ಟ ಪ್ರಮಾಣದ ಸರಕು ಮತ್ತು ಸೇವೆಗಳ ಮೇಲೆ ಗ್ರಾಹಕರು ಮಾಡುವ ಚಾಲ್ತಿ ಬೆಲೆಯಲ್ಲಿರುವ ಖರ್ಚನ್ನು, ಆಧಾರ ಬೆಲೆಯ ಖರ್ಚಿನೊಂದಿಗೆ ಹೋಲಿಸುತ್ತದೆ. ಇದು ನೈಜ ಜೀವನಮಟ್ಟದ ವೆಚ್ಚವನ್ನು ಅಳೆಯುತ್ತದೆ. ಆದುದ್ದರಿಂದ ಇದನ್ನು **"ಜೀವನ ಮಟ್ಟದ ಸೂಚ್ಯಂಕ"** ಎಂದು ಕರೆಯುತ್ತಾರೆ.

### ಗ್ರಾಹಕರ ಬೆಲೆ ಸೂಚ್ಯಂಕ – ಜನ ಸಾಮಾನ್ಯರ ಸೂಚ್ಯಂಕ

✦ ಇದು ಗ್ರಾಹಕರು ಬಳಸುವ, ನಿರ್ದಿಷ್ಟ ಪ್ರಕಾರದ ಸೇವೆ ಮತ್ತು ನಿರ್ದಿಷ್ಟ ಪ್ರಕಾರದ ಸರಕುಗಳನ್ನು ಮಾತ್ರ ಒಳಗೊಂಡಿದೆ. ಆದುದ್ದರಿಂದ ಇದನ್ನು **ಜನ ಸಾಮಾನ್ಯರ ಸೂಚ್ಯಂಕ** ಎಂದು ಕರೆಯುತ್ತಾರೆ.

### ಗ್ರಾಹಕರ ಬೆಲೆ ಸೂಚ್ಯಂಕದ ಉಪಯೋಗ:-

✦ ಕಾರ್ಮಿಕರ ವೇತನವನ್ನು ನಿರ್ಧರಿಸಲು, ಹಣದುಬ್ಬರದ ಪರಿಣಾಮವನ್ನು ವಿಶ್ಲೇಷಿಸಲು ಉಪಯೋಗಿಸಲಾಗುತ್ತದೆ.

✦ ಸರ್ಕಾರಿ ನೌಕರರಿಗೆ ತುಟ್ಟಿ ಭತ್ಯೆ ಲೆಕ್ಕಾಚಾರ ಮಾಡಲು ಬಳಸಲಾಗುತ್ತದೆ.

✦ ನರೇಗಾ ಕಾರ್ಯಕ್ರಮದಡಿಯಲ್ಲಿ ಕನಿಷ್ಠ ಕೂಲಿ ನಿರ್ಧಾರ ಮಾಡಲು 2011 ಸೆಪ್ಟೆಂಬರ್ 23 ರ ನಂತರ ಬಳಸಲಾಗುತ್ತಿದೆ.

### ಗ್ರಾಹಕರ ಬೆಲೆ ಸೂಚ್ಯಂಕ ಅಳೆಯುವ ಆಧಾರ ವರ್ಷ:-

✦ ಕೇಂದ್ರೀಯ ಸಂಖ್ಯಾಶಾಸ್ತ್ರೀಯ ಸಂಘಟನೆ(ಸಿ.ಎಸ್.ಓ) ಯವರು ಜನವರಿ 2015 ರಿಂದ ಜಾರಿಗೆ ಬರುವಂತೆ **2011–12** ನ್ನು ಆಧಾರವರ್ಷವನ್ನಾಗಿ ಪರಿಷ್ಕರಿಸಿದ್ದಾರೆ. ಪ್ರತಿ ತಿಂಗಳ 12 ನೇ ತಾರೀಖು CPI ಗ್ರಾಮೀಣ, CPI ನಗರ ಹಾಗೂ CPI ಅಖಿಲ ಭಾರತ ... ಸಿದ್ಧಪಡಿಸುತ್ತದೆ.

✦ ಕರ್ನಾಟಕ ರಾಜ್ಯದಲ್ಲಿ **ಆರ್ಥಿಕ & ಸಂ... ನಿರ್ದೇಶನಾಲಯ** ಸಿ.ಪಿ.ಐ ನ್ನು ಪ್ರಕಟ... ಸಂಸ್ಥೆಯಾಗಿದೆ.

### ಗ್ರಾಹಕರ ಬೆಲೆ ಸೂಚ್ಯಂಕ ಕಂಡು ಹಿಡಿಯ... ದತ್ತಾಂಶ ಸಂಗ್ರಹಣೆ ವಿಧಾನ

✦ ಪ್ರತಿ ತಿಂಗಳ ಬೆಲೆ ದತ್ತಾಂಶವನ್ನು ಎನ್ಎಸ್... ಕ್ಷೇತ್ರ ಕಾರ್ಯಾಚರಣೆ ವಿಭಾಗದ ಮತ್ತು ಆರ್ಥಿಕ... ಸಂಖ್ಯಾಶಾಸ್ತ್ರ ನಿರ್ದೇಶನಾಲಯ ಮೂಲಕ ಆಯ್ದ... ನಗರಗಳ **1114** ಮಾರುಕಟ್ಟೆಯಿಂದ ಸಂಗ್ರಹಿಸಲಾ... 1181 ಆಯ್ದ ಹಳ್ಳಿಗಳಿಂದ ಅಂಚೆ ಇಲಾಖೆ ಮ... ಮಾಹಿತಿ ಸಂಗ್ರಹಿಸಲಾಗುತ್ತದೆ. ವೆಬ್ ಪೋ... ಮೂಲಕ ಬೆಲೆಗಳನ್ನು ಸಂಗ್ರಹಿಸಲಾಗುತ್ತದೆ. ಗ್ರಾ... ಬೆಲೆಗಳ ಪೋರ್ಟಲ್‌ನ್ನು ಎನ್ಐಸಿ ಯ... ಅಭಿವೃದ್ಧಿ ಪಡಿಸಿದರೆ, ನಗರ ಬೆಲೆಗಳ ಪೋರ್ಟ... ಎಂಬಿಎಸ್‌ಪಿಐ ನ ಕಂಪ್ಯೂಟರ್ ಸೆಂಟರ್... ಅಭಿವೃದ್ಧಿಪಡಿಸುವರು.

### ಗ್ರಾಹಕರ ಬೆಲೆ ಸೂಚ್ಯಂಕ ಕಂಡು ಹಿಡಿ... ಪದಾರ್ಥಗಳ ಆದ್ಯತೆ:-

✦ 200 ಪದಾರ್ಥಗಳನ್ನು ಬಳಸಿ ಗ್ರಾಹಕರ ಬೆಲೆ ಸೂ... ಕಂಡು ಹಿಡಿಯಲಾಗುತ್ತದೆ.

| ಕ್ರ. ಸಂ. | ಪದಾರ್ಥಗಳ ವಿವರ | ಆದ್ಯತೆ (Weightage) |
|---|---|---|
| 1 | ಆಹಾರ | 50% |
| 2 | ಮನೆ | 10% |
| 3 | ಇಂಧನ ಮತ್ತು ವಿದ್ಯುಚ್ಛಕ್ತಿ | 10% |
| 4 | ಬಟ್ಟೆ | 5% |
| 5 | ಇತರೆ | 25% |
| | ಒಟ್ಟು | 100% |

### ಗ್ರಾಹಕರ ಸೂಚ್ಯಂಕ ಕಂಡು ಹಿಡಿಯಲು ಬಳ... ಸೂತ್ರ

$$CPI = \frac{\Sigma WP}{\Sigma W}$$

W=100 (ಆದ್ಯತೆ)

| ಸೂಚಿಗಳು | ಗ್ರಾಹಕ ಬೆಲೆ ಸೂಚ್ಯಂಕ | ಸಗಟು ಬೆಲೆ ಸೂಚ್ಯಂಕ |
|---|---|---|
| ಮಾರುಕಟ್ಟೆ | ಚಿಲ್ಲರೆ | ಸಗಟು |
| ಪ್ರಕಟಪಡಿಸುವವರು | ಕೇಂದ್ರೀಯ ಸಾಂಖ್ಯಿಕ ಸಂಸ್ಥೆ | ಕೈಗಾರಿಕಾ ನೀತಿ & ಉತ್ತೇಜನಾ ಇಲಾಖೆ |
| ಪ್ರಕಟಣೆ | 1 ತಿಂಗಳಿಗೊಮ್ಮೆ | ವಾರಕ್ಕೊಮ್ಮೆ |
| ಆಧಾರವರ್ಷ | 2011–12 | 2011–12 |
| ಪರಿಗಣಿಸುವ ಸರಕುಗಳು | 200 | 676 |
| ಸೂತ್ರ | $CPI = \frac{\Sigma WP}{\Sigma W}$ W=100 (ಆದ್ಯತೆ) | $WPI = \frac{\Sigma WP_1 - \Sigma WP_0}{\Sigma WP_0}$ |
| ಮುಖ್ಯ ಉಪಯೋಗ | ತುಟ್ಟಿಭತ್ಯೆ ಲೆಕ್ಕಾಚಾರ, ಜೀವನ ವೆಚ್ಚ ಸೂಚ್ಯಂಕ | ಸರ್ಕಾರ ವಿತ್ತೀಯ ನೀತಿ, ಹಣಕಾಸು ನೀತಿ ರೂಪಿಸಲು |

## ಕೈಗಾರಿಕಾ ಉತ್ಪಾದನಾ ಸೂಚ್ಯಂಕ (Index of Industrial Production):-

- ಭಾರತದ ಆರ್ಥಿಕತೆಯ ಗಣಿಗಾರಿಕೆ, ವಿದ್ಯುಚ್ಛಕ್ತಿ, ತಯಾರಿಕಾ ಕ್ಷೇತ್ರದ ಬೆಳವಣಿಗೆಯ ವಿವರಗಳನ್ನು ತಿಳಿಸಲು ಕೈಗಾರಿಕಾ ಉತ್ಪಾದನಾ ಸೂಚ್ಯಂಕವನ್ನು ಬಳಸುತ್ತಾರೆ.
- ಇದೊಂದು ಸಂಯುಕ್ತ ಸೂಚಿಯಾಗಿದ್ದು, ನಿರ್ಧಿಷ್ಟ ಅವಧಿಯಲ್ಲಿ ಆಧಾರವರ್ಷಕ್ಕೆ ಹೋಲಿಸಿದರೆ, ಕೈಗಾರಿಕಾ ಉತ್ಪನ್ನಗಳ ಉತ್ಪಾದನೆಯಲ್ಲಾದ ಅಲ್ಪಾವಧಿ ಬದಲಾವಣೆಗಳನ್ನು ಅಳೆಯಲು ಬಳಸಲಾಗುತ್ತದೆ.
- ಪ್ರತಿ ತಿಂಗಳು **ಕೇಂದ್ರೀಯ ಸಾಂಖ್ಯಿಕ ಸಂಸ್ಥೆ**ಯು 1950 ರ ನಂತರ ಭಾರತ ದೇಶದಲ್ಲಿ ಈ ಸೂಚ್ಯಂಕವನ್ನು ಪ್ರಸ್ತುತ 2011–12 ರ ಆಧಾರ ವರ್ಷದಲ್ಲಿ ಪ್ರಕಟಪಡಿಸುತ್ತಿದೆ.
- ಈ ಸೂಚ್ಯಂಕದಲ್ಲಿ ವಿದ್ಯುಚ್ಛಕ್ತಿ, ಉಕ್ಕು, ರೀಫೈನರಿ ಉತ್ಪನ್ನಗಳು, ಕಚ್ಚಾ ತೈಲ, ಕಲ್ಲಿದ್ದಲು, ಸಿಮೆಂಟ್, ನೈಸರ್ಗಿಕ ಅನಿಲ & ರಸಗೊಬ್ಬರದಂತಹ 8 ಮೂಲ ಕೈಗಾರಿಕೆಗಳ ಶೇ 38 ರಷ್ಟು ವಸ್ತುಗಳ ತೂಕಾಂಕವನ್ನು ಬಳಸಲಾಗುತ್ತದೆ.
- 1937 ರ ಆಧಾರವರ್ಷದಲ್ಲಿ ಭಾರತದ ಕೈಗಾರಿಕೆ & ವಾಣಿಜ್ಯ ಸಚಿವಾಲಯದ ಆರ್ಥಿಕ ಸಲಹೆಗಾರರ ಕಛೇರಿ ದೇಶದಲ್ಲಿ ಮೊದಲ ಬಾರಿ 15 ಕೈಗಾರಿಕೆಗಳ ಶೇ 90 ರಷ್ಟು ಉತ್ಪನ್ನವನ್ನು ಆಧಾರವಾಗಿರಿಸಿಕೊಂಡು 1950 ಕ್ಕಿಂತ ಮುನ್ನ ಈ ಸೂಚ್ಯಂಕವನ್ನು ಲೆಕ್ಕಾಚಾರ ಮಾಡುತ್ತಿದ್ದರು.
- **1937, 1946, 1951, 1956, 1960, 1970, 1980–81, 1993–94** ಇದುವರೆಗೂ ಪರಿಗಣಿಸುತ್ತಿದ್ದ ಆಧಾರ ವರ್ಷಗಳಾಗಿವೆ.
- ಈ ಸೂಚ್ಯಂಕವನ್ನು ತೂಕಾಂಕ ಅಂಕಗಣಿತೀಯ ಸರಾಸರಿ & ಲ್ಯಾಸ್ಪಿಯರ್ ವಿಧಾನದ ಮೂಲಕ ಲೆಕ್ಕಾಚಾರ ಮಾಡಲಾಗುತ್ತದೆ.

## ಆರ್ಥಿಕ ಗಣತಿ (Economic Census)

- ಭಾರತದ ಆರ್ಥಿಕ ಗಣತಿಯಲ್ಲಿ ವಿವಿಧ ವಲಯಗಳ ಆರ್ಥಿಕ ಚಟುವಟಿಕೆಗಳ ದೀರ್ಘಾವಧಿ ಬದಲಾವಣೆಯನ್ನು ಸೂಕ್ಷ್ಮ & ಸಮಗ್ರ ಮಟ್ಟದಲ್ಲಿ ಸಮೀಕ್ಷೆ, ಮೌಲ್ಯಮಾಪನ ಮಾಡಿ ಮಾಹಿತಿಯನ್ನು ಪ್ರಕಟಪಡಿಸುವುದೇ **ಆರ್ಥಿಕ ಗಣತಿ.**
- ಭಾರತ ಸರ್ಕಾರ 1976 ರಲ್ಲಿ ಆರ್ಥಿಕ ಗಣತಿಯನ್ನು ಮೊದಲ ಬಾರಿಗೆ ನಡೆಸುವ ಸಂಪ್ರದಾಯ ಪ್ರಾರಂಭಿಸಿತು.
- 1977 ರಲ್ಲಿ **ಕೇಂದ್ರೀಯ ಸಾಂಖ್ಯಿಕ ಸಂಸ್ಥೆ** ಎಲ್ಲಾ ರಾಜ್ಯಗಳ ಆರ್ಥಿಕ & ಸಾಂಖ್ಯಿಕ ನಿರ್ದೇಶನಾಲಯಗಳ ಸಹಭಾಗಿತ್ವದಲ್ಲಿ ಮೊದಲ ಬಾರಿ ಆರ್ಥಿಕ ಗಣತಿ ಕಾರ್ಯ ನಡೆಸಿತು.
- ದೇಶದಲ್ಲಿ **1977, 1980, 1990, 1998, 2005, 2013** ಒಟ್ಟು 6 ಬಾರಿ ಆರ್ಥಿಕ ಗಣತಿಯನ್ನು ನಡೆಸಿದೆ.
- ಆರ್ಥಿಕ ಗಣತಿಯು ದೀರ್ಘಾವಧಿ ಏರಿಳಿತಗಳನ್ನು ವಿಶ್ಲೇಷಿಸಿದರೆ, **ಆರ್ಥಿಕ ಸಮೀಕ್ಷೆ**ಯು ನಿರ್ಧಿಷ್ಟ ಆರ್ಥಿಕ ವರ್ಷ (ಹಿಂದಿನ 12 ತಿಂಗಳ) ದ ಬದಲಾವಣೆಗಳನ್ನು ತಿಳಿಸುತ್ತದೆ. ಇದನ್ನು **ಕೇಂದ್ರ ಹಣಕಾಸು ಸಚಿವಾಲಯ** ಪ್ರಕಟಪಡಿಸುತ್ತದೆ.

# ಪ್ರಮುಖ ಆರ್ಥಿಕ ಸೂಚ್ಯಂಕಗಳು

ಈ ಕೆಳಗಿನ ಸೂಚ್ಯಂಕಗಳನ್ನು ಪ್ರಕಟಪಡಿಸುವ ಸಂಸ್ಥೆಗಳು ಬದಲಾವಣೆಯಾಗುವುದಿಲ್ಲ. ಆದರೆ ಪ್ರತಿ ವರದಿಯಲ್ಲೂ ದೇಶಗಳ ಸ್ಥಾನಗಳು ಬದಲಾಗುತ್ತವೆ. ಕಾಲಕಾಲಕ್ಕೆ ಮಾಹಿತಿ ಪರಿಷ್ಕರಿಸಿಕೊಳ್ಳಿ. ಪ್ರಸ್ತುತ 2017 ಜೂನ್ ವರೆಗೆ ಮಾಹಿತಿ ನೀಡಲಾಗಿದೆ.

## ಅಂತರ್ಗತ ಅಭಿವೃದ್ಧಿ ಸೂಚ್ಯಂಕ (Inclusive Development Index)




- **ವಿಶ್ವ ಆರ್ಥಿಕ ವೇದಿಕೆ:- (WEF ಪ್ರಕಟ)**
- 79 ರಾಷ್ಟ್ರಗಳ ಸೂಚ್ಯಂಕ ದಲ್ಲಿ ಭಾರತ 2017ರಲ್ಲಿ 60ನೇ ಸ್ಥಾನ (3.38 ಅಂಕ) ವನ್ನು ಪಡೆದಿದೆ.
- ನೆರೆಹೊರೆ ರಾಷ್ಟ್ರಗಳಾದ ಚೀನಾ–15, ನೇಪಾಳ–27, ಬಾಂಗ್ಲಾದೇಶ–36, ಪಾಕಿಸ್ತಾನ–52 ಸ್ಥಾನಗಳನ್ನು ಪಡೆದಿದೆ. ಈ ಎಲ್ಲಾ ರಾಷ್ಟ್ರಗಳಿಗಿಂತ ಭಾರತ ಕಡಿಮೆ ಸ್ಥಾನವನ್ನು ಪಡೆದಿದೆ.
- ಈ ಸೂಚ್ಯಂಕದಲ್ಲಿ ದೇಶದ ಅಭಿವೃದ್ಧಿ ಮತ್ತು ಬೆಳವಣಿಗೆ ಕಾರ್ಯತಂತ್ರ ಒಳಗೊಳ್ಳುವಿಕೆ, ಸುಸ್ಥಿರತೆ, ಅಂತರ್ ಜನಾಂಗೀಯ ಸಮಸ್ಯೆ ಮುಂತಾದ 12 ಸೂಚಿಗಳನ್ನು ಒಳಗೊಂಡಿದೆ.
- ಬ್ರಿಕ್ಸ್ ರಾಷ್ಟ್ರಗಳಲ್ಲಿ ರಷ್ಯಾ – 13, ಬ್ರೆಜಿಲ್ –30, ಚೀನಾ – 30, ಭಾರತ – 60 ನೇ ಸ್ಥಾನವನ್ನು ಪಡೆದಿದೆ.
- ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ಮೊದಲ 5ಸ್ಥಾನ ಪಡೆದ ರಾಷ್ಟ್ರಗಳು ನಾರ್ವೆ, ಲೆಕ್ಸಂಬರ್ಗ್, ಸ್ವಿಟ್ಜರ್ಲೆಂಡ್, ಐಸ್‌ಲ್ಯಾಂಡ್ ಮತ್ತು ಡೆನ್ಮಾರ್ಕ್.
- ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಮೊದಲ 5 ಸ್ಥಾನ ಪಡೆದ ರಾಷ್ಟ್ರಗಳು – ಲಿಥುವೇನಿಯಾ, ಅಜರ್ ಬೈಜಾನ್, ಹಂಗೇರಿ, ಪೋಲೆಂಡ್ ಮತ್ತು ರುಮೇನಿಯಾ.

## ಜಾಗತಿಕ ಸ್ಪರ್ಧಾತ್ಮಕ ಸೂಚ್ಯಂಕ (Global Competitive Index)




- **ಪ್ರಕಟಿಸುವವರು:**-World Economic Forum
- **2016-17 ನೇ ಸಾಲಿನಲ್ಲಿ ಪಡೆದ ಮೊದಲ 5 ಸ್ಥಾನಗಳು:**- ಸ್ವಿಡ್ಜರ್ಲೆಂಡ್, ಸಿಂಗಪುರ, ಯು. ಎಸ್.ಎ, ನೆದರ್ಲೆಂಡ್, ಜರ್ಮನಿ
- **ಭಾರತದ ಸ್ಥಾನ:**- 39 ನೇ ಸ್ಥಾನ (2015–16ನೇ ಸಾಲಿನಲ್ಲಿ
- **ಬ್ರಿಕ್ಸ್ ರಾಷ್ಟ್ರಗಳಲ್ಲಿ ಕ್ರಮವಾಗಿ ಸ್ಥಾನ ಪಡೆದ ರಾಷ್ಟ್ರಗಳು** ಚೀನಾ, ಭಾರತ, ರಷ್ಯಾ, ದ. ಆಫ್ರಿಕಾ & ಬ್ರೆಜಿಲ್

## ಜಾಗತಿಕ ಶಾಂತಿ ಸೂಚ್ಯಂಕ – 2017 (Global Peace Index)

- **ಪಟ್ಟಿ ಬಿಡುಗಡೆ ಮಾಡುವವರು:**- Institute for Econom & Peace




- **ಮೊದಲ ಸ್ಥಾನದಲ್ಲಿರುವ 5 ದೇಶಗಳು:**- ಐಸ್‌ಲ್ಯಾಂಡ್, ನ್ಯೂಜಿಲೆಂಡ್, ಪೋರ್ಚುಗಲ್, ಆಸ್ಟ್ರಿಯಾ, ಡೆನ್ಮಾರ್ಕ್
- **ಭಾರತದ ಸ್ಥಾನ:**- 163 ದೇಶಗಳಲ್ಲಿ 137 ನೇ ಸ್ಥಾನ (2017 ಜೂನ್

## ವಿಶ್ವದ ಮಾಧ್ಯಮದ ಸ್ವಾತಂತ್ರ್ಯದ ಸೂಚ್ಯಂಕ (World Press Freedom Index)

- **ಪ್ರಕಟಿಸುವವರು:** World Without borders
- **2016ನೇ ಸಾಲಿನಲ್ಲಿ ಮೊದಲ 5 ಸ್ಥಾನದಲ್ಲಿನ ದೇಶಗಳು:** ಫಿನ್‌ಲೆಂಡ್, ನೆದರ್‌ಲ್ಯಾಂಡ್, ನಾರ್ವೆ, ಡೆನ್ಮಾರ್ಕ್, ನ್ಯೂಜಿಲೆಂಡ್,




- **ಕೊನೆಯ 5 ದೇಶಗಳು:** ಎರಿಟ್ರಿಯಾ, ಉತ್ತರ ಕೊರಿಯಾ, ತುರ್ಕ್‌ಮೆನಿಸ್ತಾನ, ಚೀನಾ
- 180 ದೇಶಗಳಲ್ಲಿ ಭಾರತ ದೇಶವು 133ನೇ ಸ್ಥಾನ ಪಡೆದಿದೆ.

## ಮಾನವ ಅಭಿವೃದ್ಧಿ ಸೂಚ್ಯಂಕ (Human Development Index):

+ **ಪರಿಕಲ್ಪನೆ :-** ಪಾಕಿಸ್ತಾನದ ಮೆಹಬೂಬ್ ಉಲ್ ಹಕ್, ಭಾರತದ ಅಮರ್ತ್ಯಸೇನ್, ಮೇಘನಾಥ್ ದೇಸಾಯಿ
+ **ವರದಿ ಬಿಡುಗಡೆ ಮಾಡುವವರು** – ಯು.ಎನ್.ಡಿ.ಪಿ (ವಿಶ್ವಸಂಸ್ಥೆ ಅಭಿವೃದ್ಧಿ ಕಾರ್ಯಕ್ರಮ, ನ್ಯೂಯಾರ್ಕ್)
+ **ಮಾನದಂಡಗಳು:-**




1. ದೀರ್ಘ & ಆರೋಗ್ಯವಂತ ಜೀವನ(**LEI**),
2. ಶೈಕ್ಷಣಿಕ ಪ್ರಾಪ್ತಿ (**EAI**)

A. ಸರಾಸರಿ ಶಾಲಾ ವರ್ಷಗಳು (MYS)

B. ನಿರೀಕ್ಷಿತ ಶಾಲಾ ವರ್ಷಗಳು) (EYS)

3. ಜೀವನದ ಗುಣಮಟ್ಟ ಅನುಸೂಚಿ(**SLI**)

$HDI=\sqrt[3]{LEI.EAI.SLI}$

+ **2016 ನೇ ಸಾಲಿನಲ್ಲಿರುವ 5 ದೇಶಗಳು:-** ನಾರ್ವೆ, ಆಸ್ಟ್ರೇಲಿಯಾ, ಸ್ವಿಡ್ಜರ್ಲೆಂಡ್, ಜರ್ಮನಿ, ಡೆನ್ಮಾರ್ಕ್
**ಭಾರತದ ಸ್ಥಾನ:-** 131 ನೇ ಸ್ಥಾನ (0.624 ಸೂಚ್ಯಂಕ)
+ **2016ನೇ ಸಾಲಿನ ಬ್ರಿಕ್ಸ್ ರಾಷ್ಟ್ರಗಳಲ್ಲಿ ಮಾನವ ಅಭಿವೃದ್ಧಿ ಸೂಚ್ಯಂಕದ ಸ್ಥಾನಗಳು:-** ರಷ್ಯಾ–49, ಬ್ರೆಜಿಲ್–79, ಚೀನಾ–90, ದಕ್ಷಿಣ ಆಫ್ರಿಕಾ–119, ಭಾರತ–131 (2015 ರಲ್ಲಿ 130 ನೇ ಸ್ಥಾನ)
+ **ಕೊನೆಯ ರಾಷ್ಟ್ರಗಳು:-** ಸೆಂಟ್ರಲ್ ಆಫ್ರಿಕನ್ ರಿಪಬ್ಲಿಕ್ (188), ನೈಜಿರ್ (187), ಚಾದ್ (186), ಬುರ್ಕಿನಾ ಫಾಸೋ (185), ಬುರುಂಡಿ (184)

**ಹೆಚ್.ಡಿ.ಐ ನಲ್ಲಿ ಸಾರ್ಕ್ ರಾಷ್ಟ್ರಗಳು**

| ಸ್ಥಾನ | ರಾಷ್ಟ್ರ | ಸೂಚ್ಯಂಕ |
|---|---|---|
| 73 | ಶ್ರೀಲಂಕಾ | 0.766 |
| 105 | ಮಾಲ್ಡೀವ್ಸ್ | 0.701 |
| 131 | ಭಾರತ | 0.624 |
| 132 | ಭೂತಾನ್ | 0.607 |
| 139 | ಬಾಂಗ್ಲಾದೇಶ | 0.579 |
| 144 | ನೇಪಾಳ | 0.558 |
| 147 | ಪಾಕಿಸ್ತಾನ | 0.550 |
| 169 | ಆಫ್ಘಾನಿಸ್ತಾನ | 0.479 |

## CORRUPTION PERCEPTIONS INDEX

## ಭ್ರಷ್ಟಾಚಾರ ಸಂವೇದಿ ಸೂಚ್ಯಂಕ (Corruption Perception Index)

**ಪ್ರಕಟಿಸುವವರು:** ಬರ್ಲಿನ್ ಮೂಲದ ಟ್ರಾನ್ಸ್‌ಫರೆನ್ಸಿ ಇಂಟರ್‌ನ್ಯಾಷನಲ್ ಸಂಸ್ಥೆಯ ಮಾಹಿತಿ ಮೂಲಕ WEF ಪ್ರಕಟ ಪಡಿಸುತ್ತದೆ.

**2016ನೇ ಸಾಲಿನ ಭ್ರಷ್ಟಾಚಾರ ಸಂವೇದಿ ಸೂಚ್ಯಂಕ**

+ **ಅತೀ ಕಡಿಮೆ ಭ್ರಷ್ಟಾಚಾರ ಹೊಂದಿರುವ 5 ದೇಶಗಳು:** ಡೆನ್ಮಾರ್ಕ್, ನ್ಯೂಜಿಲೆಂಡ್, ಫಿನ್‌ಲೆಂಡ್, ಸ್ವೀಡನ್, ಸ್ವಿಡ್ಜರ್ಲೆಂಡ್
+ **ಅತೀ ಹೆಚ್ಚು ಭ್ರಷ್ಟಾಚಾರ ಹೊಂದಿರುವ ದೇಶ:** ಸೊಮಾಲಿಯಾ, ದ. ಸೂಡಾನ್, ಉ.ಕೊರಿಯಾ, ಸಿರಿಯಾ, ಯೆಮೆನ್
+ **ಬ್ರಿಕ್ಸ್ ರಾಷ್ಟ್ರಗಳಲ್ಲಿ ಭ್ರಷ್ಟಾಚಾರದ ಸ್ಥಾನ:-** ದ. ಆಫ್ರಿಕಾ (64), ಬ್ರೆಜಿಲ್ (79), ಭಾರತ (79), ಚೀನಾ (79), ರಷ್ಯಾ (131)
+ **ಸಾರ್ಕ್ ರಾಷ್ಟ್ರಗಳಲ್ಲಿ ಭ್ರಷ್ಟಾಚಾರದ ಸ್ಥಾನ:-** ಭೂತಾನ್ (27), ಭಾರತ (79), ಮಾಲ್ಡೀವ್ಸ್ (95), ಶ್ರೀಲಂಕಾ (95), ಪಾಕಿಸ್ತಾನ (116), ನೇಪಾಳ (131), ಬಾಂಗ್ಲಾದೇಶ (145), ಆಫ್ಘಾನಿಸ್ತಾನ (169(
+ 2015ರಲ್ಲಿ 168 ದೇಶಗಳಲ್ಲಿ ಭಾರತವು 78 ನೇ ಸ್ಥಾನ
+ 2016ರಲ್ಲಿ 176 ದೇಶಗಳಲ್ಲಿ ಭಾರತವು 79ನೇ ಸ್ಥಾನ

## ಜೀವನದ ಭೌತಿಕ ಗುಣಮಟ್ಟದ ಅನುಸೂಚಿ (PQLI - Physical Quality Life Index)

+ **ಅಭಿವೃದ್ಧಿ ಪಡಿಸಿದವರು** - ಡಿ.ಮೋರಿಸ್ ಅವರು 1979 ರಲ್ಲಿ ಅಭಿವೃದ್ಧಿ ಪಡಿಸಿದರು.
+ **ಮಾನದಂಡಗಳು:-**1.ಜೀವನ ನಿರೀಕ್ಷೆ (LEI)
2. ಮೂಲ ಸಾಕ್ಷರತಾ ಸೂಚ್ಯಂಕ (BLI)
3. ಶಿಶು ಮರಣ ಸೂಚಿ (IMI)




## ವಿಶ್ವದ ಅತಿ ಸಂತೋಷ ಸೂಚ್ಯಂಕ (World Happiness Index)

✦ **ಪ್ರಕಟಿಸುವವರು:** ವಿಶ್ವ ಸಂಸ್ಥೆಯ ಸುಸ್ಥಿರ ಅಭಿವೃದ್ಧಿ ಪರಿಹಾರ ಜಾಲ (United Nations Sustainable Development Solutions Network)

✦ **2016ರ ವರದಿಯಲ್ಲ ಮೊದಲ 5 ದೇಶಗಳು:** ಡೆನ್ಮಾರ್ಕ್, ಸ್ವಿಡ್ಜರ್ಲೆಂಡ್, ಐಸ್‌ಲೆಂಡ್, ನಾರ್ವೆ, ಫಿನ್‌ಲೆಂಡ್

✦ **ಅತಿ ಕಡಿಮೆ ಸಂತೃಪ್ತ ದೇಶಗಳು:** ಬುರುಂಡಿ, ಸಿರಿಯಾ, ಟೋಗೋ, ಅಫ್ಘಾನಿಸ್ತಾನ, ಬೆನಿನ್, 157 ದೇಶಗಳಲ್ಲಿ ಭಾರತ ದೇಶವು 118ನೇ ಸ್ಥಾನವನ್ನು ಹೊಂದಿದೆ.




## ಜಾಗತಿಕ ನಾವಿನ್ಯತೆ ಸೂಚ್ಯಂಕ (GII-Global Innovation Index)

✦ **ಪ್ರಕಟಿಸುವವರು:** ಫ್ರಾನ್ಸ್ ಮೂಲದ ಇಂಟರ್‌ನ್ಯಾಷನಲ್ ಬ್ಯುಸಿನೆಸ್ ಸ್ಕೂಲ್ ಇನ್‌ಸೀಡ್ & ವಿಶ್ವ ಬೌದ್ಧಿಕ ಸಂಪತ್ತಿನ ಸಂಘಟನೆ

✦ **2016ನೇ ಸಾಲಿನ ಮೊದಲ 5 ದೇಶಗಳು:** ಸ್ವಿಡ್ಜರ್ಲೆಂಡ್, ಸ್ವೀಡನ್, ಯುಕೆ, ಯುಎಸ್, ಫಿನ್‌ಲೆಂಡ್

✦ 128 ದೇಶಗಳಲ್ಲಿ 2016 ರಲ್ಲಿ ಭಾರತವು 66ನೇ ಸ್ಥಾನವನ್ನು ಪಡೆದಿದೆ. 2015ರಲ್ಲಿ 81ನೇ ಸ್ಥಾನದಲ್ಲಿತ್ತು.

## ಜಾಗತಿಕ ಹಸಿವಿನ ಸೂಚ್ಯಂಕ (Global Hunger Index)

✦ **ಪ್ರಕಟಿಸುವವರು:** ಅಂತರಾಷ್ಟ್ರೀಯ ಆಹಾರ ನೀತಿ ಸಂಶೋಧನಾ ಸಂಸ್ಥೆ (IFPRI - Interanational Food Policy Research Institute ಕೇಂದ್ರ ಕಛೇರಿ – ವಾಷಿಂಗ್‌ಟನ್ ಡಿ.ಸಿ.)




✦ **ಮೊದಲ ಬಾರಿಗೆ 2006ರಲ್ಲ ಪ್ರಕಟಿಸಿದವರು-** ಜರ್ಮನಿಯ ಎನ್‌ಜಿಒ welt hunger hilfe, 2007ರಿಂದ ಐರಿಸ್‌ನ ಎನ್‌ಜಿಒ (Concern World wide) ಸಹ ಸೇರಿಕೊಂಡಿದೆ.

✦ **ಅತೀ ಹೆಚ್ಚು ಹಸಿವನ್ನು ಹೊಂದಿರುವ ಮೊದಲ 5 ರಾಷ್ಟ್ರಗಳು:** ಸೆಂಟ್ರಲ್ ಆಫ್ರಿಕನ್ ರಿಪಬ್ಲಿಕ್, ಛಾಡ್, ಜಾಂಬಿಯಾ, ಹ... ಮಡಗಾಸ್ಕರ್

✦ **ಅತೀ ಕಡಿಮೆ ಹಸಿವಿನ ಸೂಚ್ಯಂಕದ ರಾಷ್ಟ್ರಗಳು:** ಅರ್ಜೆಂಟೈನಾ, ಬೋಸ್ನಿಯಾ, ಬೆಲಾರಸ್, ಬ್ರೆಜಿಲ್, ಚಿಲಿ, ಓಸ್ಟರಿಕಾ,

✦ 118ದೇಶಗಳಲ್ಲಿ ಭಾರತ ದೇಶವು 2016 ನೇ ಸಾಲಿನಲ್ಲಿ 97 ಸ್ಥಾನದಲ್ಲಿದೆ.

✦ 2015 ನೇ ಸಾಲಿನಲ್ಲಿ 55 ನೇ ಸ್ಥಾನದಲ್ಲಿತ್ತು.

## ಜಾಗತಿಕ ಪ್ರತಿಭಾವಂತ ಸ್ಪರ್ಧಾತ್ಮಕ ಸೂಚ್ಯಂಕ (Global Talent competitiveness index)

✦ **ಪ್ರಕಟಿಸುವವರು:** Insead Business Schoolರವರು ಅಡಿಕೊ ಗ್ರೂಪ್ & ಸಿಂಗಪೂರ್‌ನ ಹ್ಯೂಮನ್ ಕ್ಯಾಪಿಟಲ್ ಲೀಡರ್‌ಶಿಪ್ ಸಂಸ್ಥೆ.

✦ **ಮೊದಲ ಸ್ಥಾನದ ದೇಶಗಳು:** ಸ್ವಿಡ್ಜರ್ಲೆಂಡ್, ಸಿಂಗಪುರ್, ಲುಕ್ಸನ್‌ಬರ್ಗ್

✦ 2016ನೇ ಸಾಲಿನ ಸೂಚ್ಯಂಕದಲ್ಲಿ ಭಾರತವು 89 ನೇ ಸ್ಥಾನ, 2017 ರಲ್ಲಿ 118 ದೇಶಗಳಲ್ಲಿ 92 ನೇ ಸ್ಥಾನ

✦ ಬ್ರಿಕ್ಸ್ ದೇಶಗಳಲ್ಲಿ ಬ್ರೆಜಿಲ್–81, ರಷ್ಯಾ–56, ಚೀನಾ–54, ದ. ಆಫ್ರಿಕಾ – 67, ಭಾರತ – 92 ಪಡೆದಿವೆ.



## ಜಾಗತಿಕ ಜೀವಿತಾವಧಿ ಸೂಚ್ಯಂಕ (Global Longevity Initiative)




- **ಪ್ರಕಟಿಸುವವರು:** ವಿಶ್ವ ಆರೋಗ್ಯ ಸಂಸ್ಥೆ
- 2015ರ ದತ್ತಾಂಶವನ್ನು ಆಧರಿಸಿ 2016ರಲ್ಲಿ ಪ್ರಕಟಿಸಲಾಗಿದೆ.

**ಮೊದಲ ಸ್ಥಾನದ ದೇಶಗಳು:**

| ದೇಶಗಳು | ಸ್ಥಾನ | ಸರಾಸರಿ ಜೀವಿತಾವಧಿ |
|---|---|---|
| ಜಪಾನ್ | 1 | 83.7 ವರ್ಷ |
| ಸ್ವಿಟ್ಜರ್ಲೆಂಡ್ | 2 | 83.4 |
| ಸಿಂಗಪೂರ್ | 3 | 83.1 |
| ಆಸ್ಟ್ರೇಲಿಯಾ | 4 | 82.8 |
| ಸ್ಪೈನ್ | 4 | 82.8 |
| ಭಾರತ | 125 | 68.3 |

## ಜಾಗತಿಕ ಪರಿಸರ ಸಾಧನಾ ಸೂಚ್ಯಂಕ (Global Environment Performance Test)

- **ಪ್ರಕಟಿಸುವವರು:** ಯಾಲೆ ವಿ.ವಿ. ಅಭಿವೃದ್ಧಿಪಡಿಸಿದ್ದನ್ನು ವಿಶ್ವ ಆರ್ಥಿಕ ವೇದಿಕೆ ಅವರು ಪ್ರಕಟಿಸಿದರು.
- **ಮೊದಲ 5 ದೇಶಗಳು:** ಫಿನ್‌ಲೆಂಡ್, ಐಸ್‌ಲೆಂಡ್, ಸ್ವೀಡನ್, ಡೆನ್ಮಾರ್ಕ್, ಸ್ಲೋವೇನಿಯಾ
- 2016 ನೇ ಸಾಲಿನಲ್ಲಿ 180 ದೇಶಗಳಲ್ಲಿ ಭಾರತದ ಸ್ಥಾನ–141

## ಬೌದ್ಧಿಕ ಸಂಪತ್ತು ಸೂಚ್ಯಂಕ (Intellectual property index)




GIPC
Global Intellectual Property Center
U.S. CHAMBER OF COMMERCE

- **ಪ್ರಕಟಿಸುವವರು:** ಛೇಂಬರ್ಸ್ ಗ್ಲೋಬಲ್ ಇಂಟೆಲೆಕ್ಚುಯೆಲ್ ಪ್ರಾಪರ್ಟಿ ಸೆಂಟರ್ (GIPC)
- **ಮೊದಲ ಸ್ಥಾನದಲ್ಲಿರುವ ರಾಷ್ಟ್ರಗಳು:** ಯುಎಸ್, ಯುಕೆ, ಜರ್ಮನಿ, ಫ್ರಾನ್ಸ್, ಸ್ವೀಡನ್, ಸಿಂಗಪೂರ್, ಸ್ವಿಟ್ಜರ್ಲೆಂಡ್
- 38 ದೇಶಗಳಲ್ಲಿ ಭಾರತದ ಸ್ಥಾನ 37
- **ಬ್ರಿಕ್ಸ್ ರಾಷ್ಟ್ರಗಳಲ್ಲಿ ಭಾರತದ ಸ್ಥಾನ:**- ರಷ್ಯಾ–20. ಚೀನಾ–22, ದಕ್ಷಿಣ ಆಫ್ರಿಕಾ–26, ಬ್ರೆಜಿಲ್–2. ಭಾರತ–37

## ಜಾಗತಿಕ ಭಯೋತ್ಪಾದನಾ ಸೂಚ್ಯಂಕ (Global Terrorism index)




- **ಪ್ರಕಟಿಸುವವರು:** ಸಿಡ್ನಿ ಮೂಲದ ಥಿಂಕ್ ಟ್ಯಾಂಕ್ ಇನ್‌ಸ್ಟಿಟ್ಯೂಟ್ ಫಾರ್ ಎಕನಾಮಿಕ್ ಅಂಡ್ ಪೀಸ್
- **ಅತೀ ಹೆಚ್ಚು ಭಯೋತ್ಪಾದನೆ ಹೊಂದಿರುವ ಮೊದಲ 5 ದೇಶಗಳು:** ಇರಾಕ್, ಅಫ್ಘಾನಿಸ್ತಾನ, ನೈಜೀರಿಯಾ, ಪಾಕಿಸ್ತಾನ್, ಸಿರಿಯಾ
- 163 ದೇಶಗಳಲ್ಲಿ ಭಾರತ 7ನೇ ಸ್ಥಾನ.

## ಆರೋಗ್ಯ ಸೂಚ್ಯಂಕ (Health Index)

- **ಪ್ರಕಟಿಸುವವರು:** ವಿಶ್ವ ಸಂಸ್ಥೆಯ ಸಾಮಾನ್ಯ ಸಭೆ
- **2016ನೇ ಸಾಲಿನ ಸೂಚ್ಯಂಕದಲ್ಲಿ ಮೊದಲ ಸ್ಥಾನ:** ಐಸ್‌ಲೆಂಡ್, ಸಿಂಗಪುರ
- 188 ದೇಶಗಳಲ್ಲಿ ಭಾರತ ದೇಶವು 143ನೇ ಸ್ಥಾನ ಹೊಂದಿದೆ.

## ವಿಶ್ವಬ್ಯಾಂಕ್‌ನ ಲಾಜಿಸ್ಟಿಕ್ಸ್ ಸೂಚ್ಯಂಕ

- **2016ನೇ ಸಾಲಿನಲ್ಲಿ ಮೊದಲ ಸ್ಥಾನ:** ಜರ್ಮನಿ
- 160 ದೇಶಗಳಲ್ಲಿ ಭಾರತ ದೇಶವು 35ನೇ ಸ್ಥಾನ

## ಜಾಗತಿಕ ಲಿಂಗ ಅಸಮಾನತೆ ಸೂಚ್ಯಂಕ (Global Gender Inequality Index)

- ಪ್ರಕಟ ಪಡಿಸುವವರು:– ಯು [illegible]
- 2016 ನೇ ಸಾಲಿನಲ್ಲಿ ಭಾರತ 125 ನೇ ಸ್ಥಾನ
- ಬ್ರಿಕ್ಸ್ ರಾಷ್ಟ್ರಗಳಲ್ಲಿ – ಬ್ರೆಜಿಲ್–92, ರಷ್ಯಾ–52, ಚೀನಾ– 37, ದ. ಆಫ್ರಿಕಾ – 90, ಭಾರತ – 125

## ಜಾಗತಿಕ ಲಿಂಗ ಅಂತರ ಸೂಚಿ (Global Gender Gap Report-2016)

- **ಬಿಡುಗಡೆ ಮಾಡುವವರು:** ವಿಶ್ವ ಆರ್ಥಿಕ ವೇದಿಕೆ
- **ಅತೀ ಕಡಿಮೆ ಲಿಂಗ ಅಂತರ ಇರುವ ಮೊದಲ 5 ರಾಷ್ಟ್ರಗಳು:** ಐಸ್‌ಲ್ಯಾಂಡ್, ಫಿನ್‌ಲೆಂಡ್, ನಾರ್ವೆ, ... ಹರವಾಂಡ
- ಭಾರತವು 2015 ರಲ್ಲಿ 108ನೇ ಸ್ಥಾನ ಪಡೆದಿದ್ದು, ಪ್ರಸ್ತುತ (2016) ವಾಗಿ 144 ರಾಷ್ಟ್ರಗಳಲ್ಲಿ 87ನೇ ಸ್ಥಾನ
- **ಅತೀ ಹೆಚ್ಚು ಲಿಂಗ ಅಂತರ ಇರುವ ರಾಷ್ಟ್ರಗಳು:** ಯೆಮನ್, ಪಾಕಿಸ್ತಾನ, ಸಿರಿಯಾ, ಸೌದಿ ಅರೇಬಿಯಾ, ಛಾಡ್.
- **ಮಾನದಂಡಗಳು:-** ಆರ್ಥಿಕ ಪಾಲ್ಗೊಳ್ಳುವಿಕೆ & ಅವಕಾಶ, ಶೈಕ್ಷಣಿಕ ಪ್ರಾಪ್ತಿ, ರಾಜಕೀಯ ಸಬಲೀಕರಣ, ಆರೋಗ್ಯ ಸೂಚಿ.

WORLD ECONOMIC FORUM

## ಸುಸ್ಥಿರ ಅಭಿವೃದ್ಧಿ ಸೂಚ್ಯಂಕ (Sustainable Develoment Index)

- **ಬಿಡುಗಡೆ ಮಾಡುವವರು:** ಸುಸ್ಥಿರ ಅಭಿವೃದ್ಧಿ ಸಲ್ಯೂಷನ್ ನೆಟ್‌ವರ್ಕ್ (SDSN) & ಬ್ರಿಟೆಲ್ಸ್ ಮನ್ ಸ್ಟಿಫ್‌ಟು... (bertelsmann stif-tung)) 2016 ರಲ್ಲಿ ಭಾರತ 149 ದೇಶಗಳಲ್ಲಿ 110ನೇ ಸ್ಥಾನ ಪಡೆದಿದೆ.




- **ಮೊದಲ ಸ್ಥಾನದಲ್ಲಿರುವ 5 ದೇಶಗಳು:** ಸ್ವೀಡನ್, ಡೆನ್ಮಾರ್ಕ್, ನಾರ್ವೆ, ಫಿನ್‌ಲೆಂಡ್, ಸ್ವಿಡ್ಜರ್ಲೆಂಡ್
- **ಬ್ರಿಕ್ಸ್ ರಾಷ್ಟ್ರಗಳ ಸ್ಥಾನ:** ರಷ್ಯಾ (47), ಚೀನಾ (76), ಭಾರತ(110)
- **ಕೊನೆಯ ಸ್ಥಾನದಲ್ಲಿರುವ ದೇಶಗಳು:** ಸೆಂಟ್ರಲ್ ಆಫ್ರಿಕನ್ ರಿಪಬ್ಲಿಕ್ (1... ಲೈಬೀರಿಯಾ (148), ಕಾಂಗೋ (147), ನೈಜರ್ (146), ಛಾಡ್ (145)
- **ಭಾರತದ ನೆರೆಯ ರಾಷ್ಟ್ರಗಳ ಸ್ಥಾನ:** ಬಾಂಗ್ಲಾದೇಶ (1... ಪಾಕಿಸ್ತಾನ (115), ಮಯನ್ಮಾರ್ (117), ಆಫ್ಘಾನಿಸ್ತಾನ (139)

## ಜಾಗತಿಕ ಜೀತ ಸೂಚ್ಯಂಕ (Global Slavery Index)

THE GLOBAL SLAVERY INDEX

- **ಬಿಡುಗಡೆ ಮಾಡುವವರು:-** Walk Free Foundation
- ಭಾರತವು 167 ದೇಶಗಳಲ್ಲಿ 4 ನೇ ಸ್ಥಾನವನ್ನು ಪಡೆದಿದೆ.
- **ಅತಿ ಹೆಚ್ಚು ಜೀತಪದ್ಧತಿ ಹೊಂದಿರುವ ರಾಷ್ಟ್ರಗಳು:-** ಉ.ಕೊರಿಯಾ, ಉಜ್ಬೇಕಿಸ್ತಾನ, ಕಾಂಬೋಡಿಯಾ, ಭಾರತ & ಕತ್ತಾರ್
- **ಅತಿ ಕಡಿಮೆ ಜೀತಪದ್ಧತಿ ಹೊಂದಿರುವ ರಾಷ್ಟ್ರಗಳು:-** ಲುಕ್ಸಂಬರ್ಗ್, ಐರ್‌ಲೆಂಡ್, ನಾರ್ವೆ, ಡೆನ್ಮಾರ್ಕ್, ಸ್ವಿಡ್ಜರ್‌ಲೆಂಡ್, ಆಸ್ಟ್ರಿಯಾ, ಸ್ವೀಡನ್ & ಬೆಲ್ಜಿಯಂ

## ಆರೋಗ್ಯ ಫಲ ಸೂಚ್ಯಂಕ Health Outcome Index (HO...

- ಭಾರತದ ನೀತಿ ಆಯೋಗ ಕೇಂದ್ರ ಆರೋಗ್ಯ ಕುಟುಂಬ ಕ... ಸಚಿವಾಲಯ ಸಹಭಾಗಿತ್ವದಲ್ಲಿ ಪ್ರಕ...
- **ಸೂಚಕದ ಮಾನದಂಡಗಳು:-** ಜ... ನಿರೀಕ್ಷೆ, ಶಿಶುಮರಣ, ತಾ... ಮರಣದರ
- ದೇಶದ 18 ರಾಜ್ಯಗಳ ದತ್ತಾ... ಬಳಸಿಕೊಂಡು ಪ್ರಕಟ
- ದೇಶದ ಸರಾಸರಿ ಸೂಚಿ 2010-14 ... 0.6%,

| | | |
|---|---|---|
| ಗರಿಷ್ಠ | ಕೇರಳ | 0.9% |
| ಕನಿಷ್ಠ | ಅಸ್ಸಾಂ | 0.4% |

## ವಿಶ್ವ ವ್ಯಾಪಿ ಜೀವನ ವೆಚ್ಚ ವರದಿ – 2017




ಪ್ರಕಟ ಪಡಿಸುವವರು:– ಎಕನಾಮಿಸ್ಟ್ ಇಂಟೆಲಿಜೆನ್ಸ್ ಯುನಿಟ್ (EIU)

ಮಾನದಂಡಗಳು:– ಆಹಾರ, ಬಟ್ಟೆ, ಬಾಡಿಗೆ, ಶಾಲೆ, ಸಾರಿಗೆ ದಿನಬಳಕೆಯ ವಸ್ತುಗಳು ಮುಂತಾದ 160 ವಸ್ತುಗಳ ಮತ್ತು ಸೇವೆಗಳ ಬೆಲೆಗಳ ಹೋಲಿಕೆಯಿಂದ ಅಗ್ಗವಾದ ಮತ್ತು ದುಬಾರಿ ನಗರಗಳನ್ನು ನಿರ್ಧರಿಸುವುದು.

ದುಬಾರಿ ಪಟ್ಟಿಯಲ್ಲಿರುವ 5 ಪ್ರಮುಖ ನಗರಗಳು:– ಸಿಂಗಪುರ, ಹಾಂಕಾಂಗ್, ಜ್ಯೂರಿಚ್, ಟೋಕಿಯೋ, ಒಸಾಕ

ಅಗ್ಗದ ಪಟ್ಟಿಯಲ್ಲಿರುವ 5 ನಗರಗಳು:– ಆಲ್ಮಾಡಿ (ಕಜಕಿಸ್ತಾನ), ಲಾಗೋಸ್ (ನೈಜೀರಿಯಾ), **ಬೆಂಗಳೂರು (ಭಾರತ)**, ಕರಾಚಿ (ಪಾಕಿಸ್ತಾನ), ಅಲ್ಜೀರೀಸ್ (ಅಲ್ಜೀರಿಯಾ)

ದೇಶದ ಮುಖ್ಯ ನಗರಗಳು:– ಬೆಂಗಳೂರು (3ನೇ ಸ್ಥಾನ), ಚೆನ್ನೈ (6ನೇ ಸ್ಥಾನ), ಮುಂಬೈ (7ನೇ ಸ್ಥಾನ), ದೆಹಲಿ (10 ನೇ ಸ್ಥಾನ)

## ನಗರಗಳ ಜೀವನಮಟ್ಟ ಸೂಚ್ಯಂಕ




**ಪ್ರಕಟಪಡಿಸುವವರು:–** ಸರ್ಬಿಯಾದ ನಂಬಿಯೋ (Numbeo) ಸಂಸ್ಥೆ ದೇಶದಲ್ಲಿ ಮಂಗಳೂರು ಮೊದಲ ಸ್ಥಾನದಲ್ಲಿದ್ದು, ಬೆಂಗಳೂರು ಈ ಪಟ್ಟಿಯಲ್ಲಿ 132ನೇ ಸ್ಥಾನದಲ್ಲಿದೆ.

**ಮಾನದಂಡಗಳು:–** ನಗರಗಳಲ್ಲಿ ಜನರು ಕೊಳ್ಳುವ ಶಕ್ತಿ, ಭದ್ರತೆ, ಆರೋಗ್ಯ, ಜೀವನ ವೆಚ್ಚ, ಆದಾಯಕ್ಕನುಗುಣವಾಗಿ ಆಸ್ತಿ ಬೆಲೆ, ಸಂಚಾರ ದಟ್ಟಣೆ, ಮಾಲಿನ್ಯ, ಹವಾಮಾನ

**ಮೊದಲ 3 ಸ್ಥಾನ ಪಡೆದ ನಗರಗಳು:-**

| ಸ್ಥಾನ | ನಗರ | ದೇಶ |
|---|---|---|
| 1 | ಕ್ಯಾನ್‌ಬೆರಾ | ಆಸ್ಟ್ರೇಲಿಯಾ |
| 2 | ರಾಲೇಹ್ ನ್.ಸಿ. | ಅಮೆರಿಕಾ |
| 3 | ವೆಲ್ಲಿಂಗ್ ಟನ್ | ನ್ಯೂಜಿಲೆಂಡ್ |

**ಭಾರತದ ಮುಖ್ಯ ನಗರಗಳು:-**

| ಮಂಗಳೂರು | | 48ನೇ ಸ್ಥಾನ | |
|---|---|---|---|
| ಪುಣೆ | 102ನೇ ಸ್ಥಾನ | ಹೈದರಾಬಾದ್ | 116ನೇ ಸ್ಥಾನ |
| ಕೊಯಮತ್ತೂರು | 131ನೇ ಸ್ಥಾನ | ಬೆಂಗಳೂರು | 132ನೇ ಸ್ಥಾನ |
| ಅಹಮದಾಬಾದ್ | 138ನೇ ಸ್ಥಾನ | ಗುರುಗ್ರಾಮ | 141ನೇ ಸ್ಥಾನ |
| ಚೆನ್ನೈ | 160ನೇ ಸ್ಥಾನ, | ದೆಹಲಿ | 161ನೇ ಸ್ಥಾನ, |
| ಕೋಲ್ಕತ್ತಾ | 170ನೇ ಸ್ಥಾನ, | ಮುಂಬೈ | 172ನೇ ಸ್ಥಾನ |

## ಬಹು ಆಯಾಮಗಳ ಬಡತನ ಸೂಚ್ಯಂಕ (MDPI)




ಪ್ರಕಟ ಪಡಿಸುವವರು:– **ಆಕ್ಸ್‌ಫರ್ಡ್ ಪಾವರ್ಟಿ ಅಂಡ್ ಹ್ಯೂಮನ್ ಡೆವಲಪ್‌ಮೆಂಟ್ ಇನ್ನಿಯೇಟಿವ್ (OPHI)**

ವಿಶ್ವಸಂಸ್ಥೆಯ ಅಭಿವೃದ್ಧಿ ಕಾರ್ಯಕ್ರಮ 2014 ರಲ್ಲಿ ತನ್ನ 20 ನೇ ವಾರ್ಷಿಕೋತ್ಸವದ ಅಂಗವಾಗಿ ಬಡತನದ ಬಗೆಗಿನ ಹೊಸ ಅಂತರಾಷ್ಟ್ರೀಯ ಮಾಪನವನ್ನು ಅಭಿವೃದ್ಧಿಪಡಿಸಿತು.

ಇದರಲ್ಲಿ 3 ಆಯಾಮಗಳಿವೆ:– **ದೀರ್ಘ & ಆರೋಗ್ಯವಂತ ಜೀವನ(LEI) (1/6)**

**ಶೈಕ್ಷಣಿಕ ಪ್ರಾಪ್ತಿ (EAI) (1/6):–** A. ಸರಾಸರಿ ಶಾಲಾ ವರ್ಷಗಳು (MYS) B. ನಿರೀಕ್ಷಿತ ಶಾಲಾ ವರ್ಷಗಳು)(EYS)

**ಜೀವನದ ಗುಣಮಟ್ಟ ಅನುಸೂಚಿ(SLI) (1/18)**

## ಆರ್ಥಿಕ ಸ್ವತಂತ್ರ ಸೂಚ್ಯಂಕ – 2017:




**ಪ್ರಕಟ ಪಡಿಸುವವರು:-** ಅಮೆರಿಕಾ ವಾಷಿಂಗ್‌ಟನ್ ಮೂಲದ ಥಿಂಕ್ ಟ್ಯಾಂಕ್ ಎಂದೇ ಖ್ಯಾತವಾದ "ದಿ ಹೆರಿಟೇಜ್ ಫೌಂಡೇಶನ್" & ವಾಲ್‌ಸ್ಟ್ರೀಟ್ ಜರ್ನಲ್ ಅವರು 1995 ರಿಂದ ಪ್ರಕಟಪಡಿಸುತ್ತಿದೆ.

**ಭಾರತದ ಸ್ಥಾನ:-** 2017 ರ ಪ್ರಕಾರ 186 ದೇಶಗಳಲ್ಲಿ 143ನೇ ಸ್ಥಾನ (52.6 ಅಂಕ) ಸುಮಾರು ಮುಕ್ತ ಎಂಬ ವರ್ಗಕ್ಕೆ ಸೇರಿದೆ.

2016 ರ ಪ್ರಕಾರ 186 ದೇಶಗಳಲ್ಲಿ 128ನೇ ಸ್ಥಾನ (56.2 ಅಂಕ)

| ಮೊದಲ 5 ಸ್ಥಾನದಲ್ಲಿರುವ ದೇಶಗಳು | | ಕೊನೆಯ 5 ಸ್ಥಾನ ಪಡೆದ ದೇಶಗಳು | | |
|---|---|---|---|---|
| ದೇಶ | ಅಂಕ | ದೇಶ | ಸ್ಥಾನ | ಅಂಕ |
| 1) ಹಾಂಕಾಂಗ್ | 89.8 | ಉ. ಕೊರಿಯಾ | 180 | 4.9 |
| 2) ಸಿಂಗಪುರ | 88.6 | ವೆನಿಜುವೆಲಾ | 179 | 27.0 |
| 3)ನ್ಯೂಜಿಲೆಂಡ್ | 83.7 | ಕ್ಯೂಬಾ | 178 | 33.9 |
| 4)ಸ್ವಿಟ್ಜರ್ಲೆಂಡ್ | 81.5 | ಕಾಂಗೊ | 177 | 40.0 |
| 5) ಆಸ್ಟ್ರೇಲಿಯಾ | 81.0 | ಎರಿಟ್ರಿಯಾ | 176 | 42.2 |

### ಬ್ರಿಕ್ಸ್ (BRICS)ರಾಷ್ಟ್ರಗಳಲ್ಲಿ ಸ್ಥಾನ:-

| ದೇಶ | ಸ್ಥಾನ | ಅಂಕ |
|---|---|---|
| 1) ಬ್ರೆಜಿಲ್ | 140 | 52.9 |
| 2) ರಷ್ಯಾ | 114 | 57.1 |
| 3) ಭಾರತ | 143 | 52.6 |
| 4) ಚೀನಾ | 111 | 57.4 |
| 5) ದಕ್ಷಿಣ ಆಫ್ರಿಕಾ | 81 | 62.3 |

### ಸಾರ್ಕ್ (SAARC) 8 ರಾಷ್ಟ್ರಗಳ ಸ್ಥಾನಗಳು

| ದೇಶಗಳು | ಸ್ಥಾನ | ಅಂಕ |
|---|---|---|
| 1) ಶ್ರೀಲಂಕಾ | 112 | 57.4 |
| 2) ಅಫ್ಘಾನಿಸ್ತಾನ | 163 | 48.9 |
| 3) ಭೂತಾನ್ | 107 | 58.4) |
| 4) ಮಾಲ್ಡೀವ್ಸ್ | 157 | 50.3 |
| 5) ನೇಪಾಳ | 125 | 55.1 |
| 6) ಭಾರತ | 143 | 52.6 |
| 7) ಪಾಕಿಸ್ತಾನ | 141 | 52.8 |
| 8) ಬಾಂಗ್ಲಾದೇಶ | 128 | 55.0 |

## ಜಾಗತಿಕ ಮಾಹಿತಿ ತಂತ್ರಜ್ಞಾನ ವರದಿ (Global Information Technology Index)

- **ಬಿಡುಗಡೆ ಮಾಡುವವರು:-** ವಿಶ್ವ ಆರ್ಥಿ... ವೇದಿಕೆ
- **ಮೊದಲ ಸ್ಥಾನದ ದೇಶಗಳು:-** ಸಿಂಗಪು... ಫಿನ್‌ಲೆಂಡ್, ಸ್ವೀಡನ್, ನಾರ್ವೆ, ಯು. ಎಸ್.
- ಭಾರತವು 2016 ರಲ್ಲಿ 91 ನೇ ಸ್ಥಾನದಲ್ಲಿ...
- 2015 ರಲ್ಲಿ 89 ನೇ ಸ್ಥಾನದಲ್ಲಿತ್ತು.

## ಎಫ್‌ಎಂ ಗ್ಲೋಬಲ್ ರೀಸೈಲೆನ್ಸ್ ಸೂಚ್ಯಂಕ




- 2016ನೇ ಸಾಲಿನಲ್ಲಿ ಮೊದಲ 5 ದೇಶಗ... ಸ್ವಿಡ್ಜರ್ಲೆಂಡ್, ನಾರ್ವೆ, ಐರ್ಲೆಂ... ಜರ್ಮನಿ, ಲುಕ್ಸನ್‌ಬರ್ಗ್
- ಭಾರತ ದೇಶವು 107ನೇ ಸ್ಥಾನ... ಹೊಂದಿದೆ.

## ಮಾನವ ಬಂಡವಾಳ ಸೂಚ್ಯಂಕ (Human Capital Index)

- **ಬಿಡುಗಡೆ ಮಾಡುವವರು:-** ವಿಶ್ವ ಆರ್ಥಿ... ವೇದಿಕೆ
- ಮಾನದಂಡಗಳು:– ಅಭಿವೃ... ಕಾರ್ಯತಂತ್ರ, ಆರ್ಥಿಕ ಬೆಳವಣಿ... ಪ್ರತಿಭಾವಂತರು, ಪೋಷಣೆ
- **ಮೊದಲ ಸ್ಥಾನದ ದೇಶಗಳು** ಫಿನ್‌ಲೆಂಡ್, ನಾರ್ವೆ, ಸ್ವಿಡ್ಜರ್ಲೆಂಡ್
- **ಕೊನೆಯ 5 ಸ್ಥಾನಗಳು:–** ಮೌರಿಟೇನಿಯಾ... ಯೆಮೆನ್, ಚಾದ್, ನೈಜೀರಿಯಾ, ಮಾಲಿ
- ಭಾರತವು 2016 ರಲ್ಲಿ 130 ರಾಷ್ಟ್ರಗಳ... 105 ನೇ ಸ್ಥಾನದಲ್ಲಿದೆ
- 2015 ರಲ್ಲಿ 124 ರಾಷ್ಟ್ರಗಳಲ್ಲಿ 100 ನೇ ಸ್ಥಾ...
- ಬ್ರಿಕ್ಸ್ ರಾಷ್ಟ್ರಗಳು – ರಷ್ಯಾ (28), ಚೀನಾ (71), ಬ್ರೆಜಿಲ್ (83), ದ. ಆಫ್ರಿಕಾ (88), ಭಾರತ (105)

## ಪ್ರಯಾಣ & ಪ್ರವಾಸೋದ್ಯಮ ಸ್ಪರ್ಧಾತ್ಮಕ ಸೂಚ್ಯಂಕ – ಭಾರತಕ್ಕೆ 40 ನೇ ಸ್ಥಾನ




✦ **ಪ್ರಕಟಪಡಿಸುವವರು:**– ವಿಶ್ವ ಆರ್ಥಿಕ ವೇದಿಕೆ (WEF - World Economic Forum)

✦ 2017 ಏಪ್ರಿಲ್ 8 ರಂದು ಬಿಡುಗಡೆ ಮಾಡಿರುವ ಪ್ರಯಾಣ & ಪ್ರವಾಸೋದ್ಯಮ ಸ್ಪರ್ಧಾತ್ಮಕ ಸೂಚ್ಯಂಕ – 2017 (Travell & Tourism Competative Index - TTCI) ರಲ್ಲಿ ಭಾರತವು 136 ದೇಶಗಳಲ್ಲಿ **40 ನೇ ಸ್ಥಾನ** ಪಡೆದಿದೆ.

✦ ಈ ವರದಿಯಲ್ಲಿ ಮೊದಲ ಸ್ಥಾನ ಸ್ಪೈನ್, 2ನೇ ಸ್ಥಾನ ಫ್ರಾನ್ಸ್, 3ನೇ ಸ್ಥಾನ ಜರ್ಮನಿ ದೇಶಗಳು ಪಡೆದುಕೊಂಡಿವೆ.

## ನವೀಕರಿಸಬಲ್ಲ ಇಂಧನ ಸೂಚ್ಯಂಕ–2017 : ಭಾರತಕ್ಕೆ 2ನೇ ಸ್ಥಾನ

ಯುನೈಟೆಡ್ ಕಿಂಗ್‌ಡಮ್ ಮೂಲದ ಅಕೌಂಟೆನ್ಸಿ ಸಂಸ್ಥೆಯಾದ **ಅರ್ನೆಸ್ಟ್ ಅಂಡ್ ಯಂಗ್** (Ernst & Young report)ನವರು 2017ರ ಮೇ 16ರಂದು ಬಿಡುಗಡೆ ಮಾಡಿರುವ, **2017ರ ನವೀಕರಿಸಲಾಗುವ ಶಕ್ತಿ ದೇಶ ಆಕರ್ಷಣೀಯ ಸೂಚ್ಯಂಕ** (RECAI-Renewable energy country attractiveness index-2017) ವನ್ನು ಬಿಡುಗಡೆ ಮಾಡಿದ್ದು, ಈ ಸೂಚ್ಯಂಕದಲ್ಲಿ **ಭಾರತವು 2ನೇ ಸ್ಥಾನ** ಪಡೆದಿದೆ.

ಈ ಸೂಚ್ಯಂಕದಲ್ಲಿ **ಚೀನಾ ದೇಶವು ಮೊದಲ ಸ್ಥಾನವನ್ನು** ಪಡೆದುಕೊಂಡಿದ್ದು, **ಅಮೆರಿಕಾ ದೇಶವು 3ನೇ ಸ್ಥಾನ** ಪಡೆದುಕೊಂಡಿದೆ. ಹಿಂದಿನ ವರದಿಗಳಲ್ಲಿ ಮೊದಲ ಸ್ಥಾನದಲ್ಲಿದ್ದ ಅಮೆರಿಕಾವು 3ನೇ ಸ್ಥಾನಕ್ಕೆ ಬಂದಿದ್ದು, ಭಾರತದ ಸ್ಥಾನ ಸುಧಾರಣೆಗೊಂಡಿದೆ.

ವಿಶ್ವದ ಅತಿ ದೊಡ್ಡ 40 ಮಾರ್ಕೆಟ್‌ಗಳಲ್ಲಿ ನವೀಕರಿಸಬಲ್ಲ ಇಂಧನಕ್ಕೆ ಮಾಡುತ್ತಿರುವ ಹೂಡಿಕೆಯನ್ನು ಆಧರಿಸಿ ವಾರ್ಷಿಕವಾಗಿ ವರದಿ ತಯಾರಿಸುತ್ತದೆ.

ಈ ಸೂಚ್ಯಂಕವು ಒಂದು ದೇಶವು ಅತೀ ಕಡಿಮೆ ಫಾಸಿಲ್ ಇಂಧನ ಬಳಕೆ ಮಾಡುವುದನ್ನು ಕಡಿಮೆ ಮಾಡಿದೆ. ಮತ್ತು ಹಸಿರು ಮನೆ ಅನಿಲದ ಬಳಕೆ ಮಾಡುವುದನ್ನು ಸೂಚಿಸುತ್ತದೆ. ಭಾರತವು 2022ರ ವೇಳೆಗೆ 175 GW ಸಾಮರ್ಥ್ಯದಷ್ಟು ನವೀಕರಿಸಬಲ್ಲ ಇಂಧನ ಉತ್ಪಾದನೆಯ ಗುರಿ ಹಾಕಿಕೊಂಡಿದೆ.

## ವಿಶ್ವ ಬಂಡವಾಳ ಹೂಡಿಕೆ ವರದಿ – 2017




**ಪ್ರಕಟ ಪಡಿಸುವವರು:**– ವಿಶ್ವ ಸಂಸ್ಥೆಯ ವ್ಯಾಪಾರ & ಅಭಿವೃದ್ಧಿ ಮೇಲಿನ ಸಮ್ಮೇಳನ (UNCTAD)

1964 ರಲ್ಲಿ ಸ್ಥಾಪನೆಯಾದ ಈ ಸಂಸ್ಥೆಯು 1991 ರಿಂದ ವಿಶ್ವ ಹೂಡಿಕೆ ವರದಿಯನ್ನು ಪ್ರಾದೇಶಿಕ & ರಾಷ್ಟ್ರ ಮಟ್ಟದಲ್ಲಿ ವಿಶ್ವ ವ್ಯಾಪಿ ವಿದೇಶಿ ನೇರ ಬಂಡವಾಳ ಹೂಡಿಕೆ ಪ್ರವೃತ್ತಿಗಳ ಮೇಲೆ ಬೆಳಕು ಚೆಲ್ಲಲು ಪ್ರಕಟಪಡಿಸುತ್ತದೆ.

2017 ಜೂನ್ 8 ರಂದು ಪ್ರಕಟ ಪಡಿಸಿದ ವರದಿಯಲ್ಲಿ **ಅಮೆರಿಕ, ಚೀನಾ & ಭಾರತ** ವಿಶ್ವ ಬಂಡವಾಳ ಹೂಡಿಕೆಯ ನೆಚ್ಚಿನ ಮೊದಲ ಮೂರು ಸ್ಥಾನದಲ್ಲಿರುವ ರಾಷ್ಟ್ರಗಳಾಗಿವೆ.

ದ. ಏಷ್ಯಾ ರಾಷ್ಟ್ರಗಳಲ್ಲಿ ಎಫ್.ಡಿ.ಐ ಶೇ 6 ರಷ್ಟು ಹೆಚ್ಚಾಗಿದ್ದು, ಭಾರತ 44 ಬಿಲಿಯನ್ ಅಮೆರಿಕನ್ ಡಾಲರ್‌ನಷ್ಟು ವಿದೇಶಿ ಬಂಡವಾಳ ಹೂಡಿಕೆ ರಾಷ್ಟ್ರವಾಗಿದೆ.

## ಜಾಗತಿಕ ಚಿಲ್ಲರೆ ಅಭಿವೃದ್ಧಿ ಸೂಚ್ಯಂಕ (Global Retail Development Index) – 2017

**ಪ್ರಕಟ ಪಡಿಸುವವರು:**– ಲಂಡನ್ ಮೂಲದ ಎ.ಟಿ. ಕಿಯಾರ್ನಿ ಬ್ಯುಸಿನೆಸ್ ಕನ್‌ಸಲ್ಟೆನ್ಸಿ

ಚಿಲ್ಲರೆ ವ್ಯವಹಾರದಲ್ಲಿ ಹೂಡಿಕೆ ಮಾಡಿರುವ 30 ಅಭಿವೃದ್ಧಿ ಶೀಲ ರಾಷ್ಟ್ರಗಳಿಗೆ ಸಂಬಂಧಿಸಿದ ಸೂಚ್ಯಂಕವಾಗಿದ್ದು, 2017 ರ ವರದಿಯು The Age of Focus ಎಂಬ ಶೀರ್ಷಿಕೆಯನ್ನು ಪಡೆದಿದ್ದು, **2017 ರಲ್ಲಿ ಭಾರತ ಮೊದಲ ಸ್ಥಾನ** ಪಡೆದಿದೆ. ಇದಕ್ಕೆ ಮುಖ್ಯ ಕಾರಣ ಎಫ್.ಡಿ.ಐ ನ ನಿಯಮಾವಳಿಗಳನ್ನು ವಿನಾಯಿತಿ, ಅನುಭೋಗ ಮಟ್ಟ ಉನ್ನತವಾಗಿದ್ದು, ನಗದು ರಹಿತ ಪಾವತಿ ವ್ಯವಸ್ಥೆ, ಪರೋಕ್ಷ ತೆರಿಗೆ ಪದ್ಧತಿ ಸುಧಾರಣೆ ಕಾರಣವಾಗಿದೆ. ಚೀನಾ ಎರಡನೇ ಸ್ಥಾನವನ್ನು ಪಡೆದಿದೆ.

## ರಾಷ್ಟ್ರೀಯ ವಾಯು ಗುಣಮಟ್ಟ ಸೂಚ್ಯಂಕ (National Air Quality Index)




- ಪ್ರಧಾನ ಮಂತ್ರಿ ನರೇಂದ್ರ ಮೋದಿ ಅವರು 2015 ಏಪ್ರಿಲ್ 6 ರಂದು ಈ ಸೂಚ್ಯಂಕವನ್ನು ಪ್ರಕಟ ಪಡಿಸಲು ತೀರ್ಮಾನಿಸಿದ್ದು, ಅಮೆರಿಕ, ಫ್ರಾನ್ಸ್, ಚೀನಾ & ಮೆಕ್ಸಿಕೋದ ಜಾಗತಿಕ ರಾಷ್ಟ್ರಗಳ ಸಂಘಟನೆಗೆ ಭಾರತ ಸೇರ್ಪಡೆಯಾದ ಮೇಲೆ ದೇಶದ ಪ್ರಮುಖ 10 ನಗರಗಳ ನಿವಾಸಿಗಳಿಗೆ ವಾಯುಗುಣಮಟ್ಟದ ಮಾಹಿತಿಯ ವಿವರವನ್ನು ತಿಳಿಸಲು ಈ ಸೂಚ್ಯಂಕ ಸಹಾಯಕವಾಗಿದೆ.
- ಈ ಸೂಚ್ಯಂಕವನ್ನು **ಕೇಂದ್ರೀಯ ಮಾಲಿನ್ಯ ನಿಯಂತ್ರಣ ಮಂಡಳಿ ಐ.ಐ.ಟಿ & ಕಾನ್ಪುರ** ಪರಿಣಿತ ಪಡೆಯ ಸಲಹೆ ಮೇರೆಗೆ ಪ್ರಕಟ ಪಡಿಸುತ್ತದೆ.
- ಆಧುನಿಕವಾಗಿ ಮಾಲಿನ್ಯಗೊಳ್ಳುತ್ತಿರುವ ಇಂದಿನ ದಿನದಲ್ಲಿ ದೇಶದ ಮಾನವ ಸಂಪನ್ಮೂಲದ ಗುಣಮಟ್ಟ, ಆರೋಗ್ಯದಿಂದಲೂ ಉತ್ತಮ ಆರೋಗ್ಯ, ಉತ್ತಮ ವಾಯುವಿನಿಂದ ಮಾತ್ರ ಸಾಧ್ಯ ಎಂಬುದರ ಅರಿವನ್ನು ತಿಳಿಸುತ್ತದೆ.

## ಮಾನವ ಬಡತನ ಸೂಚ್ಯಂಕ (Human Poverty Index)

ವಿಶ್ವಸಂಸ್ಥೆಯು ಮಾನವಾಭಿವೃದ್ಧಿ ಸೂಚ್ಯಂಕಕ್ಕೆ ಪೂರಕ... ರಾಷ್ಟ್ರದ ಜನರ ಜೀವನದ ಗುಣಮಟ್ಟವನ್ನು ಗುರುತಿ... 1997 ಮಾನವಾಭಿವೃದ್ಧಿ ವರದಿಯ ಭಾಗ... ಪ್ರಕಟಪಡಿಸಲಾಯಿತು. ಮಾನವಾಭಿವೃದ್ಧಿ ಸೂಚ್ಯ... ಕ್ಕೆ ಹೋಲಿಸಿದಂತೆ, ಅಭಿವೃದ್ಧಿ ಹೊಂದುತ್ತಿದ್ದ ರಾಷ್ಟ್ರ... ಅಭಾವದ ವ್ಯಾಪ್ತಿಯನ್ನು ತಿಳಿಸುವ, ಉತ್ತಮ ಸೂಚಕವಾ... 2010 ರ ನಂತರ ಇದನ್ನು ಬಹು ಆಯಾಮಗಳ ಬ... ಸೂಚ್ಯಂಕವನ್ನಾಗಿ ಮಾರ್ಪಡಿಸಿತು. ಇದು ದೀರ್ಘಾಯು... ಜ್ಞಾನ & ಜೀವನದ ಗುಣಮಟ್ಟ ಎಂಬ 3 ಆಯಾಮಗ... ಹೊಂದಿತ್ತು. ಈ ಸೂಚ್ಯಂಕದ ಅನ್ವಯ ಅಭಿ... ಹೊಂದುತ್ತಿರುವ ರಾಷ್ಟ್ರಗಳನ್ನು HPI-1 & OE... ರಾಷ್ಟ್ರಗಳ ಅಧಿಕ ವರಮಾನ ಹೊಂದಿದ ಕೆಲವು ರಾಷ್ಟ್ರ... ಗುಂಪನ್ನು HPI-2 ಎಂದು ವರ್ಗೀಕರಿಸಿ ಸಾಮಾಜಿ... ಆರ್ಥಿಕ ವ್ಯತ್ಯಾಸಗಳ ಹೋಲಿಕೆ ಮಾಡಿ ಅಭ್ಯಸಿಸ...

**ನಿಮ್ಮ ಉತ್ತಮ ಜೀವನ ಸೂಚ್ಯಂಕ:** 2011 ಮೇ 2... OECD ವಸತಿ, ಆದಾಯ, ಉದ್ಯೋಗ, ಶಿಕ್ಷಣ, ... ಆರೋಗ್ಯ ಮುಂತಾದ 11 ಸೂಚಕಗಳ ಮೇಲೆ ಸಾಮಾ... **ಆರ್ಥಿಕ ಪ್ರಗತಿಯ ಮಾಪನದ ಆಯೋಗ – ಸ್ಟಿಗ್ಲಿಟ್ಜ್ ಸೇನ್ ... ಆಯೋಗದ** ಶಿಫಾರಸ್ಸಿನ ಮೇಲೆ ಅಂತರಾಷ್ಟ್ರೀಯ ... ಉತ್ತಮ ಜೀವನ ಸ್ಥಿತಿಯನ್ನು ಮಾಪನ ಮಾಡಲು ಈ ಸೂ... ಪ್ರಕಟಪಡಿಸಲಾಯಿತು. 2016 ರ ವರದಿ ಪ್ರಕಾರ ನಾವೆ... ಮೊದಲ ಸ್ಥಾನ ಪಡೆದಿದ್ದು, ದ. ಆಫ್ರಿಕಾ ಕೊನೆಯ ಸ್ಥಾನ...

## ಆರ್ಥಿಕ ಸಹಕಾರ & ಅಭಿವೃದ್ಧಿ ಸಂಘಟನೆ (OECD - Organisation of Economic Co-operation and Development)




1948 ಏಪ್ರಿಲ್ 16 ರಂದು ಮಾರ್ಷಲ್ ಯೋಜನೆಯ ಪ್ರಕಾರ **ಫ್ರಾನ್ಸ್ ದೇಶದ ರಾಬರ್ಟ್ ಮಾರ್ಜೊಲಿನ್** ನಾಯಕತ್ವದಲ್ಲಿ ಐರೋಪ್ಯ ಆರ್ಥಿಕ ಸಹಕಾರ ಸಂಘಟನೆ ಪ್ರಾರಂಭವಾಗಿದ್ದು, ಸೋವಿಯತ್ ರಷ್ಯಾ ಈ ಸಂಘಟನೆಯಲ್ಲಿ ಸೇರ್ಪಡೆಯಾಗದೇ, ಅಮೆರಿಕದ ಆರ್ಥಿಕ ನೆರವಿನಿಂದ ಸಂಘಟನೆ ನಡೆಯುತ್ತಿತ್ತು.

**1961 ಸೆಪ್ಟೆಂಬರ್**‌ನಲ್ಲಿ ಈ ಸಂಘಟನೆಯು ಐರೋಪ್ಯ ರಾಷ್ಟ್ರಗಳ ಹೊರತಾಗಿ, ಐರೋಪ್ಯೇತರ ರಾಷ್ಟ್ರಗಳನ್ನು ಸ... ರಾಷ್ಟ್ರಗಳನ್ನಾಗಿಸಿಕೊಂಡು, ಆರ್ಥಿಕ ಸಹಕಾರ & ಅಭಿವೃದ್ಧಿ ಸಂಘಟನೆಯಾಗಿ ಮರು ನಾಮಕರಣಗೊಂ... ಇದರ ಕೇಂದ್ರ ಕಛೇರಿ ಫ್ರಾನ್ಸ್ ದೇಶದ ಪ್ಯಾರಿಸ್‌ನಲ್ಲಿದೆ. 35 ರಾಷ್ಟ್ರಗಳ ಸದಸ್ಯತ್ವ ಹೊಂದಿರುವ ಇದು ಅಂತ... ಸರ್ಕಾರ ಆರ್ಥಿಕ ಸಂಘಟನೆಯಾಗಿ ಪ್ರಜಾಪ್ರಭುತ್ವ & ಮಾರುಕಟ್ಟೆ ಅರ್ಥವ್ಯವಸ್ಥೆಯ ನೀತಿ ಅನುಭವಗಳ ಹೋ... ವೇದಿಕೆಯಾಗಿ, ಸಾಮಾನ್ಯ ಆರ್ಥಿಕ ಸಮಸ್ಯೆಗಳಿಗೆ ಉತ್ತರ ಹುಡುಕುವ ಸಂಸ್ಥೆ, ಸದಸ್ಯ ರಾಷ್ಟ್ರಗಳ ನಡುವೆ ಅಂತರಾ... ಅಂತರಾಷ್ಟ್ರೀಯ ನೀತಿಗಳ ನಡುವೆ ಸಂಯೋಜನೆ ತರುವ ಸಂಸ್ಥೆಯಾಗಿದೆ. ಈ ಸಂಘಟನೆಯು ವಿಶ್ವಸಂಸ್ಥೆಯ ಅಧಿ... ವೀಕ್ಷಕ ಸಂಸ್ಥೆಯಾಗಿದೆ. ಈ ಸಂಸ್ಥೆಯ ಸದಸ್ಯ ರಾಷ್ಟ್ರಗಳು ಬಹುತೇಕ ಹೆಚ್ಚು ವರಮಾನ ಹೊಂದಿದ, ಅತ್ಯಂತ ಅ... ಮಾನವಾಭಿವೃದ್ಧಿ ಸೂಚ್ಯಂಕ ಹೊಂದಿರುವ ಅಭಿವೃದ್ಧಿ ಹೊಂದಿದ ರಾಷ್ಟ್ರಗಳನ್ನು ಹೊಂದಿದ ಸಂಘಟನೆಯಾಗಿದೆ.

## ಜಾಗತಿಕವಾದ ಸಂಸ್ಥೆಗಳು ಬಿಡುಗಡೆ ಮಾಡುವ ವರದಿಗಳು
## International Institutions & Their Reports

| ಸಂಸ್ಥೆ | ಪ್ರಕಟಪಡಿಸುವ ವರದಿಗಳು |
|---|---|
| ವಿಶ್ವ ಆರ್ಥಿಕ ವೇದಿಕೆ<br>World Economic Forum | ಜಾಗತಿಕ ಸ್ಪರ್ಧಾತ್ಮಕ ವರದಿ<br>ಜಾಗತಿಕ ಮಾಹಿತಿ ತಂತ್ರಜ್ಞಾನ ವರದಿ<br>ಜಾಗತಿಕ ಲಿಂಗ ಅಂತರ ವರದಿ<br>ಪ್ರವಾಸೋದ್ಯಮ ಸ್ಪರ್ಧಾತ್ಮಕ ವರದಿ<br>ಅಂತರ್ಗತ ಅಭಿವೃದ್ಧಿ ಸೂಚ್ಯಂಕ<br>ಮಾನವ ಬಂಡವಾಳ ಸೂಚ್ಯಂಕ |
| UNODC-United Nation Office on Drugs and Crime | ➢ ಅಪರಾಧ ವರದಿ<br>➢ ವಿಶ್ವ ಡ್ರಗ್ ವರದಿ<br>➢ ಮಾನವ ಕಳ್ಳಸಾಗಾಣಿಕೆ ಜಾಗತಿಕ ವರದಿ |
| IBRD (World Bank) (International Bank for Reconstruction and Development) | ➢ Ease of Doing Business<br>➢ ವಿಶ್ವ ಅಭಿವೃದ್ಧಿ ವರದಿ (World Development Report) |
| ILO - International Labour Organisation | ➢ ವಿಶ್ವ ಸಾಮಾಜಿಕ ಭದ್ರತೆ ವರದಿ<br>➢ ವಿಶ್ವ ಉದ್ಯೋಗ ಮತ್ತು ಸಾಮಾಜಿಕ ಮುನ್ನೋಟ<br>➢ (World Emploment and a Social Outlook)<br>➢ World of Work Report<br>➢ ಜಾಗತಿಕ ಕೂಲಿ ಸೂಚ್ಯಂಕ (Global wages Report) |
| IMF (International Monetary Fund) | ➢ ವಿಶ್ವ ಆರ್ಥಿಕ ಮುನ್ನೋಟ (World Economic Outlook)<br>➢ ಜಾಗತಿಕ ಹಣಕಾಸಿನ ಸ್ಥಿರತೆ ವರದಿ (Global Financial Stability Report) |
| ಯುನಿಸೆಫ್ (UNICEF - United Nations Children's Fund) | ➢ Report on Regular Resources<br>➢ The State of the World Children's Report |
| ಒಪೆಕ್ (Organization of the Petroleum Exporting Countries) | ➢ ವಿಶ್ವ ತೈಲ ಮುನ್ನೋಟ (World Oil Outlook)<br>➢ ಮಾಸಿಕ ತೈಲ ಮಾರುಕಟ್ಟೆ ವರದಿ (Monthly Oil Report) |
| UNEP (United Nations Environment Programme) | ➢ ಜಾಗತಿಕ ಪರಿಸರ ಮುನ್ನೋಟ<br>➢ Action on Air Quality |
| UNCTAD (United Nations Conference on Trade and Development) ವಿಶ್ವ ರಾಷ್ಟ್ರಗಳ ವ್ಯಾಪಾರ ಮತ್ತು ಅಭಿವೃದ್ಧಿ ಸಮ್ಮೇಳನ | ➢ ವಿಶ್ವ ಹೂಡಿಕೆ ವರದಿ (World Investment Report) |
| WTO (World Trade Organization) | ➢ ವಿಶ್ವ ವ್ಯಾಪಾರ ವಾರ್ಷಿಕ ವರದಿ (World Trade Annual Report) |

## ಜಾಗತಿಕವಾದ ಸಂಸ್ಥೆಗಳು ಬಿಡುಗಡೆ ಮಾಡುವ ವರದಿಗಳು
## International Institutions & Their Reports

| ಸಂಸ್ಥೆ | ಪ್ರಕಟಪಡಿಸುವ ವರದಿಗಳು |
|---|---|
| ವಿಶ್ವ ಆರ್ಥಿಕ ವೇದಿಕೆ<br>World Economic Forum | ಜಾಗತಿಕ ಸ್ಪರ್ಧಾತ್ಮಕ ವರದಿ<br>ಜಾಗತಿಕ ಮಾಹಿತಿ ತಂತ್ರಜ್ಞಾನ ವರದಿ<br>ಜಾಗತಿಕ ಲಿಂಗ ಅಂತರ ವರದಿ<br>ಪ್ರವಾಸೋದ್ಯಮ ಸ್ಪರ್ಧಾತ್ಮಕ ವರದಿ<br>ಅಂತರ್ಗತ ಅಭಿವೃದ್ಧಿ ಸೂಚ್ಯಂಕ<br>ಮಾನವ ಬಂಡವಾಳ ಸೂಚ್ಯಂಕ |
| UNODC-United Nation Office on Drugs and Crime | ➢ ಅಪರಾಧ ವರದಿ<br>➢ ವಿಶ್ವ ಡ್ರಗ್ ವರದಿ<br>➢ ಮಾನವ ಕಳ್ಳಸಾಗಣೆಯ ಜಾಗತಿಕ ವರದಿ |
| IBRD (World Bank) (International Bank for Reconstruction and Development) | ➢ Ease of Doing Business<br>➢ ವಿಶ್ವ ಅಭಿವೃದ್ಧಿ ವರದಿ (World Development Report) |
| ILO - International Labour Organisation | ➢ ವಿಶ್ವ ಸಾಮಾಜಿಕ ಭದ್ರತೆ ವರದಿ<br>➢ ವಿಶ್ವ ಉದ್ಯೋಗ ಮತ್ತು ಸಾಮಾಜಿಕ ಮುನ್ನೋಟ<br>➢ (World Emploment and a Social Outlook)<br>➢ World of Work Report<br>➢ ಜಾಗತಿಕ ಕೂಲಿ ಸೂಚ್ಯಂಕ (Global wages Report) |
| IMF (International Monetary Fund) | ➢ ವಿಶ್ವ ಆರ್ಥಿಕ ಮುನ್ನೋಟ (World Economic Outlook)<br>➢ ಜಾಗತಿಕ ಹಣಕಾಸಿನ ಸ್ಥಿರತೆ ವರದಿ (Global Financial Stability Report) |
| ಯುನಿಸೆಫ್ (UNICEF - United Nations Children's Fund) | ➢ Report on Regular Resources<br>➢ The State of the World Children's Report |
| ಒಪೆಕ್ (Organization of the Petroleum Exporting Countries) | ➢ ವಿಶ್ವ ತೈಲ ಮುನ್ನೋಟ (World Oil Outlook)<br>➢ ಮಾಸಿಕ ತೈಲ ಮಾರುಕಟ್ಟೆ ವರದಿ (Monthly Oil Report) |
| UNEP (United Nations Environment Programme) | ➢ ಜಾಗತಿಕ ಪರಿಸರ ಮುನ್ನೋಟ<br>➢ Action on Air Quality |
| UNCTAD (United Nations Conference on Trade and Development) ವಿಶ್ವ ರಾಷ್ಟ್ರಗಳ ವ್ಯಾಪಾರ ಮತ್ತು ಅಭಿವೃದ್ಧಿ ಸಮ್ಮೇಳನ | ➢ ವಿಶ್ವ ಹೂಡಿಕೆ ವರದಿ (World Investment Report) |
| WTO (World Trade Organization) | ➢ ವಿಶ್ವ ವ್ಯಾಪಾರ ವಾರ್ಷಿಕ ವರದಿ (World Trade Annual Report) |

# ಪ್ರಮುಖ ಅಂತರಾಷ್ಟ್ರೀಯ ಹಣಕಾಸು ಸಂಸ್ಥೆಗಳು

ಜಾಗತಿಕ ಮಟ್ಟದ 1939-45 ರ ದ್ವಿತೀಯ ಮಹಾಯುದ್ಧ ನಂತರ ಸ್ಥಾಪನೆಗೊಂಡ ಪ್ರಮುಖ ಅಂತರಾಷ್ಟ್ರೀಯ ಸಂಸ್ಥೆಗಳಲ್ಲಿ ವಿಶ್ವಸಂಸ್ಥೆ, ಐ.ಎಂ.ಎಫ್ & ಐ.ಬಿ.ಆರ್.ಡಿ ಮುಖ್ಯವಾಗಿವೆ. ಆರ್ಥಿಕ ಮುಗ್ಗಟ್ಟಿನ ನಂತರ ವಿಶ್ವದ ಪ್ರಬಲ ರಾಷ್ಟ್ರಗಳ ವ್ಯಾಪಾರ & ಆರ್ಥಿಕ ಚಟುವಟಿಕೆಗಳು ಕುಸಿತಗೊಂಡು, ರಾಷ್ಟ್ರೀಯ ಕರೆನ್ಸಿಗಳ ಅಪಮೌಲ್ಯೀಕರಣ ವಿಶ್ವದ ಆರ್ಥಿಕ ಅಭಿವೃದ್ಧಿಯನ್ನು ಕುಂಠಿತಗೊಳಿಸಿತು. ಈ ಹಿನ್ನಲೆಯಲ್ಲಿ 1944 ರಲ್ಲಿ ನ್ಯೂ ಹ್ಯಾಂಪ್‌ಶೈರ್ ನ ಬ್ರೆಟನ್‌ವುಡ್ಸ್‌ನಲ್ಲಿ 45 ರಾಷ್ಟ್ರಗಳ ಪ್ರತಿನಿಧಿಗಳ ಸಭೆ ಸೇರಿತು. ಅಮೇರಿಕದ ಹ್ಯಾರಿ-ಡಿ-ವೈಟ್ & ಇಂಗ್ಲೆಂಡ್‌ನ ಜೆ. ಎಂ. ಕೀನ್ಸ್ ಅವರು ತಮ್ಮದೇ ಆದ ಅಭಿವೃದ್ಧಿ ಯೋಜನೆಗಳ ಮಾದರಿಗಳನ್ನು ರೂಪಿಸಿದ್ದು, ಈ ಸಭೆಯಲ್ಲಿ ಚರ್ಚಿತವಾಯಿತು.

## ಅಂತರಾಷ್ಟ್ರೀಯ ಹಣಕಾಸು ನಿಧಿ (IMF:- International Monetary Fund)




- ಹ್ಯಾರಿ - ಡಿ - ವೈಟ್ ಅವರ ಯೋಜನೆಯ ಅನ್ವಯ 1945 ಡಿಸೆಂಬರ್ 27 ರಂದು 29 ರಾಷ್ಟ್ರಗಳ ಸದಸ್ಯತ್ವದೊಂದಿಗೆ ಸ್ಥಾಪನೆಗೊಂಡ ಪ್ರಮುಖ ಅಂತರಾಷ್ಟ್ರೀಯ ಹಣಕಾಸು ಸಂಸ್ಥೆಯೇ ಅಂತರಾಷ್ಟ್ರೀಯ ಹಣಕಾಸು ನಿಧಿ.
- 1947 ಮಾರ್ಚ್ 1 ರಂದು ಐ.ಎಂ.ಎಫ್ ತನ್ನ ಹಣಕಾಸು ಕಾರ್ಯಾಚರಣೆಯನ್ನು ಪ್ರಾರಂಭಿಸಿತು. ಫ್ರಾನ್ಸ್ ದೇಶ 1947 ಮೇ 8 ರಂದು ಮೊಟ್ಟ ಮೊದಲ ಬಾರಿಗೆ ಐ.ಎಂ.ಎಫ್ ನಿಂದ ಹಣಕಾಸು ನೆರವು ಪಡೆದ ಮೊದಲ ರಾಷ್ಟ್ರವನ್ನಾಗಿ ಗುರ್ತಿಸಬಹುದು.
- ಅಮೇರಿಕದ ವಾಷಿಂಗ್‌ಟನ್ ಡಿ.ಸಿ. ಯಲ್ಲಿ ಇದರ ಕೇಂದ್ರ ಕಛೇರಿಯಿದ್ದು, ಪ್ರಾರಂಭದಲ್ಲಿ 29 ರಾಷ್ಟ್ರಗಳ ಸದಸ್ಯತ್ವವನ್ನು ಪಡೆದ ಐ.ಎಂ.ಎಫ್ ಪ್ರಸ್ತುತ 2016 ಏಪ್ರಿಲ್ 12 ರ ವೇಳೆಗೆ **189 ನೇ ದೇಶವಾಗಿ ನೌರು** ದೇಶ ಸೇರ್ಪಡೆಗೊಳ್ಳುವ ಮೂಲಕ 189 ಸದಸ್ಯ ರಾಷ್ಟ್ರಗಳನ್ನು ಹೊಂದಿದೆ.
- ದ.ಸೂಡಾನ್ - 188 ನೇ ಸದಸ್ಯ ರಾಷ್ಟ್ರವಾಗಿ 2012 ರಲ್ಲಿ ಸೇರ್ಪಡೆಗೊಂಡಿತು.
- ಐ.ಎಂ.ಎಫ್ ನ ಮೊದಲ ವ್ಯವಸ್ಥಾಪಕ ನಿರ್ದೇಶಕರಾಗಿ **ಬೆಲ್ಜಿಯಂನ ಕೆಮಿಲೆ ಗುಟ್** ಹಾಗೂ ಪ್ರಸ್ತುತ ವ್ಯವಸ್ಥಾಪಕ ನಿರ್ದೇಶಕರು: ಕ್ರಿಸ್ಟಿನಾ ಲಿಗಾರ್ಡೆ ಕಾರ್ಯ ನಿರ್ವಹಿಸುತ್ತಿದ್ದಾರೆ.
- ವ್ಯವಸ್ಥಾಪಕ ನಿರ್ದೇಶಕರ ಅಧಿಕಾರಾವಧಿ 5ವರ್ಷಗಳು
- ಅಂತರಾಷ್ಟ್ರೀಯ ಮಟ್ಟದಲ್ಲಿ ದೇಶಗಳ ಪಾವತಿ ಶಿಲ್ಕಿನ ಪರಿಸ್ಥಿತಿಯನ್ನು ಪರಿಹರಿಸಲು ಅಲ್ಪಾವಧಿ ಹಣಕಾಸು ಸಹಾಯ ಮಾಡುವ ಅಂತರಾಷ್ಟ್ರೀಯ ಸಂಸ್ಥೆಯಾಗಿದೆ.
- ಅಂತರಾಷ್ಟ್ರೀಯ ವ್ಯಾಪಾರಕ್ಕೆ ಉತ್ತೇಜನ, ವಿನಿಮಯ ದರದಲ್ಲಿ ಸ್ಥಿರತೆ, ಆರ್ಥಿಕ ಬೆಳವಣಿಗೆ, ಸಂಪನ್ಮೂಲ ಸದ್ಬಳಕೆಗೆ ಹಣಕಾಸು ನೆರವು ನೀಡುವ ಇತರ ಉದ್ದೇಶಗಳನ್ನು ಹೊಂದಿದೆ.
- ಸದಸ್ಯ ರಾಷ್ಟ್ರಗಳಿಗೆ ಆರ್ಥಿಕ ನೆರವನ್ನು ನೀಡುವ ಐ.ಎಂ.ಎಫ್ ಹಲವಾರು ಷರತ್ತು & ನಿಬಂಧನೆಗಳನ್ನು 1952 ರಿಂದ ವಿಧಿಸುತ್ತಿದೆ. ಇದನ್ನೇ ಐ.ಎಂ.ಎಫ್ ಸಾಲ ನಿರ್ಬಂಧಗಳು ಎನ್ನುವರು.
- 1971 ರ ಬ್ರೆಟನ್‌ವುಡ್ ವ್ಯವಸ್ಥೆಯ ಅವನತಿಯ ನಂತರ ವಿಶ್ವದಲ್ಲಿನ ಅಂತರಾಷ್ಟ್ರೀಯ ದ್ರವ್ಯತೆಯ ಸಮಸ್ಯೆಯನ್ನು ಬಗೆಹರಿಸಲು **ವಿಶೇಷ ಸ್ವೀಕಾರದ ಹಕ್ಕುಗಳ (SDR - Special Drawing Rights)** ಅಳವಡಿಕೆಯನ್ನು ಐ.ಎಂ.ಎಫ್ ಜಾರಿಗೆ ತಂದಿದ್ದು, ಇದು **ಕಾಗದದ ಚಿನ್ನ** ಎಂದು ಪ್ರಸಿದ್ಧವಾಗಿದೆ. ಇದರಲ್ಲಿ ವಿಶ್ವದ 5 ಪ್ರಮುಖ ಕರೆನ್ಸಿಗಳಾದ **ಡಾಲರ್ (ಅಮೇರಿಕ), ಪೌಂಡ್ (ಇಂಗ್ಲೆಂಡ್), ಯೆನ್ (ಜಪಾನ್), ಯುರೋ** (ಇ.ಯು) ಇತ್ತೀಚೆಗೆ **ಚೀನಾದ ಯು-ಅನ್** ಕರೆನ್ಸಿ ಸೇರ್ಪಡೆಗೊಂಡಿದೆ.
- **Economic Outlook** ಎಂಬ ವಾರ್ಷಿಕ ಪತ್ರಿಕೆಯನ್ನು ಪ್ರಕಟಿಸುತ್ತದೆ. ಐ.ಎಂ.ಎಫ್ ನಲ್ಲಿ ಸದಸ್ಯ ರಾಷ್ಟ್ರಗಳು ಹೊಂದಿರುವ **ವಂತಿಕೆ ಅಥವಾ ಕೋಟಾದ ಆಧಾರದ ಮೇಲೆ** ಮತ ಚಲಾಯಿಸುವ ಹಕ್ಕು ಇರುತ್ತದೆ.
- ಅಮೇರಿಕ ಒಟ್ಟು ಕೋಟಾದಲ್ಲಿ ಶೇ 17.68 ರಷ್ಟು, ಭಾರತ ಕೇವಲ ಶೇ 2.79ರಷ್ಟು ಹಾಗೂ ಇಂಡೋನೇಷ್ಯಾ ಅತ್ಯಂತ ಕಡಿಮೆ ಶೇ 0.99 ರಷ್ಟು ಪಾಲನ್ನು ಹೊಂದಿವೆ.
- ಭಾರತ 1945 ರಲ್ಲಿ ಐ.ಎಂ.ಎಫ್ ಸದಸ್ಯತ್ವವನ್ನು ಪಡೆದಿದ್ದು, **ಪ್ರಸ್ತುತ ಐ.ಎಂ.ಎಫ್‌ನ ಪ್ರತಿನಿಧಿಗಳಾಗಿ ಅರುಣ್ ಜೇಟ್ಲಿ ಅಥವಾ ಪರ್ಯಾಯವಾಗಿ ಊರ್ಜಿತ್ ಪಟೇಲ್** ಆಗಿರುತ್ತಾರೆ.

## ಅಂತರಾಷ್ಟ್ರೀಯ ಪುನರ್ ನಿರ್ಮಾಣ & ಅಭಿವೃದ್ಧಿ ಬ್ಯಾಂಕು

## IBRD-International Bank for Reconstruction and Development




✦ ಐ.ಬಿ.ಆರ್.ಡಿ ಇದೊಂದು ಅಂತರಾಷ್ಟ್ರೀಯ ಹಣಕಾಸು ಸಂಸ್ಥೆಯಾಗಿದ್ದು 1944ರ ಬ್ರೆಟನ್‌ವುಡ್‌ನ ಸಭೆಯ ಫಲವಾಗಿ ಐ.ಎಂ.ಎಫ್ ನ ಅವಳಿ ಸಂಸ್ಥೆಯಾಗಿ 1945 ರಲ್ಲಿ ಸ್ಥಾಪನೆಯಾಗಿದ್ದು, 1946 ರಿಂದ ಕಾರ್ಯಾರಂಭ ಮಾಡುತ್ತಿದೆ.

✦ **ಉದ್ದೇಶ:-** 2ನೇ ಮಹಾಯುದ್ಧದ ನಂತರ ಹಾನಿಗೊಳಗಾದ ಪ್ರದೇಶಗಳ ಅಭಿವೃದ್ಧಿಗೆ ಹಾಗೂ ಪುನರ್ ನಿರ್ಮಾಣಕ್ಕೆ ವಿಶೇಷವಾಗಿ ಮಧ್ಯಮ ವರಮಾನ ಹೊಂದಿರುವ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಿಗೆ ದೀರ್ಘಾವಧಿ ಹಣಕಾಸು ನೀಡುವ ಉದ್ದೇಶದಿಂದ ಸ್ಥಾಪನೆಯಾಗಿದೆ.

✦ ಕೇಂದ್ರ ಕಚೇರಿ: ವಾಷಿಂಗ್‌ಟನ್ ಡಿ.ಸಿ. ಸದಸ್ಯ ರಾಷ್ಟ್ರಗಳು: 189 ಪ್ರಸ್ತುತ ಅಧ್ಯಕ್ಷರು: ಜಿಮ್ ಯಾಂಗ್ ಕಿಮ್

✦ 1947 ರಲ್ಲಿ ಫ್ರಾನ್ಸ್ ದೇಶದ ಮೂಲಸೌಕರ್ಯಗಳಿಗೆ ಹಣಕಾಸು ನೆರವನ್ನು ಈ ಸಂಸ್ಥೆ ಮೊದಲ ಬಾರಿಗೆ ನೀಡಿತು.

✦ ಈ ಹಣಕಾಸು ಸಂಸ್ಥೆಯಲ್ಲಿ ಸದಸ್ಯ ರಾಷ್ಟ್ರಗಳು ಹೊಂದಿರುವ ಕಾರ್ಯನಿರತ ಬಂಡವಾಳದ ಅಥವಾ ವಂತಿಗೆಯ ಆಧಾರದ ಮೇಲೆ ಮತ ಚಲಾಯಿಸುವ ಹಕ್ಕನ್ನು ನೀಡಲಾಗುತ್ತಿದೆ.

✦ ಈ ಸಂಸ್ಥೆಯು **ವಿಶ್ವ ಅಭಿವೃದ್ಧಿ ವರದಿ (WDR)** ಯನ್ನು ಪ್ರತಿ ವರ್ಷ ಪ್ರಕಟ ಮಾಡುತ್ತದೆ.

✦ ಇದರ ಪ್ರಕಾರ ವಿಶ್ವದ ರಾಷ್ಟ್ರಗಳನ್ನು ಅಭಿವೃದ್ಧಿ ಹೊಂದಿದ, ಅಭಿವೃದ್ಧಿ ಹೊಂದುತ್ತಿರುವ ಮಧ್ಯಮ ವರಮಾನ & ಕಡಿಮೆ ವರಮಾನ ಹೊಂದಿದ ರಾಷ್ಟ್ರಗಳು ಹಾಗೂ ಅಲ್ಪ ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಎಂದು ವರ್ಗೀಕರಿಸಬಹುದು.

✦ ಐ.ಬಿ.ಆರ್.ಡಿ & ಐ.ಡಿ.ಎ (ಅಂತರಾಷ್ಟ್ರೀಯ ಅಭಿವೃದ್ಧಿ ಸಂಘ) ಎರಡನ್ನೂ ಒಟ್ಟಾರೆಯಾಗಿ **ವಿಶ್ವ ಬ್ಯಾಂಕ್** ಎಂದು ಕರೆಯಲಾಗುತ್ತದೆ.

## ಅಂತರಾಷ್ಟ್ರೀಯ ಹಣಕಾಸು ನಿಗಮ (IFC)




✦ ಸ್ಥಾಪನೆ: 1956ರ ಜುಲೈ 20, ಕೇಂದ್ರ ಕಛೇರಿ:– ವಾಷಿಂಗ್‌ಟನ್ ಡಿ.ಸಿ, ಸದಸ್ಯ ರಾಷ್ಟ್ರಗಳು:– 184

✦ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಖಾಸಗಿ ವಲಯದ ಅಭಿವೃದ್ಧಿಗೆ ಪೂರಕವಾದ ಹೂಡಿಕೆ, ಸಲಹೆ, ಸ್ವತ್ತು ನಿರ್ವಹಣೆ ಸೇವೆಗಳನ್ನು ಒದಗಿಸುವ ಉದ್ದೇಶದಿಂದ ವಿಶ್ವ ಬ್ಯಾಂಕ್‌ನ ಅಂಗಸಂಸ್ಥೆಯಾಗಿ ಸ್ಥಾಪನೆಯಾಗಿದೆ.

✦ ದೇಶದ ಆರ್ಥಿಕಾಭಿವೃದ್ಧಿಗೆ ಉತ್ತೇಜನ ನೀಡಿ, ಬಡತನ ನಿಯಂತ್ರಿಸುವ ಮೂಲಕ ಜನರ ಜೀವನದ ಗುಣಮಟ್ಟವನ್ನು ಉತ್ತಮಪಡಿಸುವ ಗುರಿಯನ್ನು ಹೊಂದಿದೆ. ಈ ಹಿನ್ನಲೆಯಲ್ಲಿ ವಿಶ್ವಸಂಸ್ಥೆಯ ಸುಸ್ಥಿರ ಅಭಿವೃದ್ಧಿಯ ಗುರಿಗಳನ್ನು ಈಡೇರಿಸುವ ಪ್ರಯತ್ನದಲ್ಲಿ ತೊಡಗಿರುವ ಸಂಸ್ಥೆಯಾಗಿದೆ.

## ಅಂತರಾಷ್ಟ್ರೀಯ ಅಭಿವೃದ್ಧಿ ಸಂಘ (IDA)




✦ ಸ್ಥಾಪನೆ: 1959ರ ಅಕ್ಟೋಬರ್, ಕೇಂದ್ರ ಕಛೇರಿ:– ವಾಷಿಂಗ್‌ಟನ್ ಡಿ.ಸಿ.

✦ ಸದಸ್ಯ ರಾಷ್ಟ್ರಗಳು:– 173

✦ ವಿಶ್ವಬ್ಯಾಂಕ್‌ನ ಅಂಗಸಂಸ್ಥೆಯಾಗಿ ವಿಕಾಸ ಶೀಲ ರಾಷ್ಟ್ರಗಳಿಗೆ ಕಡಿಮೆ ಬಡ್ಡಿ ದರದಲ್ಲಿ ಅತ್ಯಂತ ದೀರ್ಘ ಕಾಲ ಮರುಪಾವತಿ ಅವಧಿ ಹೊಂದಿರುವ ಸಾಲವನ್ನು ನೀಡುವ ಉದ್ದೇಶ ಹೊಂದಿದೆ.

✦ ಇದು ತ್ವರಿತ ಗತಿಯ ಆರ್ಥಿಕ ಪ್ರಗತಿ, ಸಮಾನತೆ & ಸುಸ್ಥಿರತೆ, ಮಾನವ ಅಭಿವೃದ್ಧಿಯೊಂದಿಗೆ ಬಡತನವನ್ನು ನಿಯಂತ್ರಿಸುವ ಗುರಿಯನ್ನು ಹೊಂದಿದೆ.

✦ IDA ಯನ್ನು ಮೃದು ಸಾಲದ ಕಿಂಡಿ (Soft Loan Window) ಹಣಕಾಸು ಸಂಸ್ಥೆ ಎನ್ನುವರು.

## ಬಹುಪಕ್ಷೀಯ ಹೂಡಿಕೆ ಭರವಸೆ ನಿಧಿ (MIGA - Multilateral Investment Guarantee Agency)

MIGA Multilateral Investment Guarantee Agency

✦ ವಿಶ್ವ ಬ್ಯಾಂಕ್‌ನ ಸಹ ಅಂಗಸಂಸ್ಥೆಯಾಗಿ ವಿಕಾಸ ಶೀಲ ರಾಷ್ಟ್ರಗಳಲ್ಲಿ ವಿದೇಶಿ ನೇರ ಬಂಡವಾಳ ಹೂಡಿಕೆಗೆ ಸಂಬಂಧಿಸಿದ ರಾಜಕೀಯ & ವಾಣಿಜ್ಯೇತರ ಗಂಡಾಂತರಗಳ ವಿರುದ್ಧ ಭರವಸೆ ನೀಡುವ ಮೂಲಕ ಅಭಿವೃದ್ಧಿಗೆ ಅಗತ್ಯವಾದ ಹೂಡಿಕೆ ಸಾಲವನ್ನು ನೀಡುವ ಉದ್ದೇಶದಿಂದ ಸ್ಥಾಪನೆಯಾದ ಅಂತರಾಷ್ಟ್ರೀಯ ಹಣಕಾಸು ಸಂಸ್ಥೆಯಾಗಿದೆ.

✦ ವಿಶ್ವ ಬ್ಯಾಂಕ್‌ನ ಗವರ್ನರ್ ಮಂಡಳಿ 1985 ರ ಸೆಪ್ಟೆಂಬರ್‌ನಲ್ಲಿ ನಡೆಸಿದ ಸಭೆಯ ನಡಾವಳಿಯ ಮೂಲಕ ಈ ಸಂಸ್ಥೆಯು **1988** ಏಪ್ರಿಲ್ 12 ರಂದು ಸ್ಥಾಪನೆಯಾಗಿದ್ದು, ಈ ಸಂಸ್ಥೆಯು **ವಾಷಿಂಗ್‌ಟನ್ ಡಿ.ಸಿ.** ಯಲ್ಲಿ ತನ್ನ ಕೇಂದ್ರ ಕಛೇರಿ ಹೊಂದಿದೆ. ಪ್ರಸ್ತುತ 181 ರಾಷ್ಟ್ರಗಳು ಸದಸ್ಯತ್ವ ಪಡೆದಿದ್ದು, ಅದರಲ್ಲಿ 156 ಅಭಿವೃದ್ಧಿ ಹೊಂದುತ್ತಿರುವ 25 ಕೈಗಾರಿಕಾ ಪ್ರಧಾನ ರಾಷ್ಟ್ರಗಳಾಗಿವೆ. ಆದರೆ ಸದಸ್ಯತ್ವ ಪಡೆಯುವ ಯಾವುದೇ ರಾಷ್ಟ್ರವು ವಿಶ್ವ ಬ್ಯಾಂಕ್‌ನ ಸದಸ್ಯತ್ವ ಪಡೆದಿರಬೇಕು.

✦ 2014 ಡಿಸೆಂಬರ್‌ನಲ್ಲಿ **ಭೂತಾನ್** ಈ ಸಂಸ್ಥೆಯ ಸದಸ್ಯತ್ವ ಪಡೆದ ಇತ್ತೀಚಿನ ಅಂದರೆ **181 ನೇ ರಾಷ್ಟ್ರವಾಗಿದೆ.**

✦ ಆರ್ಥಿಕ ಬೆಳವಣಿಗೆಯ ಮೂಲಕ ಬಡತನ ನಿಯಂತ್ರಣ ಮೂಲ ಸೌಕರ್ಯಗಳ ಅಭಿವೃದ್ಧಿ, ಸುಸ್ಥಿರ ನೀತಿ & ಕಾರ್ಯಕ್ರಮಗಳ ಮೂಲಕ ನೈಸರ್ಗಿಕ ಸಂಪನ್ಮೂಲಗಳ ಬಳಕೆ, ಜನರ ಜೀವನ ಗುಣಮಟ್ಟ ಸುಧಾರಣೆ, ವಿದೇಶಿ ನೇರ ಬಂಡವಾಳ ಹೂಡಿಕೆಗೆ ಉತ್ತೇಜನ ಮುಂತಾದ ಗುರಿಗಳನ್ನು ಹೊಂದಿದೆ.

✦ ಈ ಸಂಸ್ಥೆಯ ಕಾರ್ಯಚಟುವಟಿಕೆಗಳು ದೀರ್ಘಾವಧಿಯ ಸಾಲ & ಈಕ್ವಿಟಿಗಳಿಗೆ ಸಂಬಂಧಿಸಿದ್ದು, ಇದನ್ನು ವಿಶ್ವ ಬ್ಯಾಂಕ್‌ನ ಸ್ವತಂತ್ರ ಮೌಲ್ಯಮಾಪನ ಪಡೆ ಪ್ರತಿ ವರ್ಷ ಮೌಲ್ಯಮಾಪನ ಮಾಡುತ್ತದೆ.

## ವಿಶ್ವಸಂಸ್ಥೆ ಅಭಿವೃದ್ಧಿ ಕಾರ್ಯಕ್ರಮ (UNDP - United Nations Development Programme)

UNDP

✦ ಕೇಂದ್ರ ಕಛೇರಿ:– ನ್ಯೂಯಾರ್ಕ್. ಸ್ಥಾಪನೆ:– 1965

✦ **ಯುಎನ್‌ಡಿಪಿಯ ಆಡಳಿತಗಾರರು:- ಹೆಲೆನ್ ಕ್ಲಾರ್ಕ್ (Halen Clark)** ಆಡಳಿತಗಾರರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಯುಎನ್‌ಡಿಪಿಯ ಆಡಳಿತಾರರು ವಿಶ್ವಸಂಸ್ಥೆಯಲ್ಲಿ ಪ್ರಧಾನ ಕಾರ್ಯದರ್ಶಿ, ಉಪಕಾರ್ಯದರ್ಶಿ ನಂತರದ ಮೂರನೇ ಅತ್ಯುನ್ನತ ಸ್ಥಾನವಾಗಿದೆ.

✦ ಹೆಲೆನ್ ಕ್ಲಾರ್ಕ್‌ರವರು ನ್ಯೂಜಿಲೆಂಡ್‌ನ ಮಾಜಿ ಪ್ರಧಾನಿಗಳು. ಇವರು ಯುಎನ್‌ಡಿಪಿಯ ಆಡಳಿತಗಾರರಾದ ಮೊದಲ ಮಹಿಳೆಯಾಗಿದ್ದಾರೆ.

✦ ಯು.ಎನ್.ಡಿ.ಪಿ ನವರು ವಿಶ್ವಸಂಸ್ಥೆಯ ಪ್ರಮುಖ ಅಂಗಸಂಸ್ಥೆಯಾದ ವಿಶ್ವಸಂಸ್ಥೆಯ ಆರ್ಥಿಕ ಮತ್ತು ಸಾಮಾಜಿಕ ಮಂಡಳಿ (ECOSOC) ಯಲ್ಲಿ ಕಾರ್ಯ ನಿರ್ವಹಿಸುವ ವಿಶೇಷ ಅಂಗಸಂಸ್ಥೆಯಾಗಿದೆ.

✦ ಯುಎನ್‌ಡಿಪಿ ಯವರು ಮಾನವ ಅಭಿವೃದ್ಧಿ ಸೂಚ್ಯಂಕ ವರದಿಯನ್ನು 1990ರಲ್ಲಿ **"Concept and Measurment of Human Development"** ಎಂಬ ಧ್ಯೇಯವಾಕ್ಯದೊಂದಿಗೆ ಪ್ರಕಟಿಸಲಾಯಿತು. ಇದು ಮೊಟ್ಟ ಮೊದಲ ಮಾನವ ಅಭಿವೃದ್ಧಿ ಸೂಚ್ಯಂಕದ ವರದಿಯಾಗಿದೆ. **2012ರಲ್ಲಿ ವರದಿ ಪ್ರಕಟವಾಗಿಲ್ಲ.**

✦ ಯು.ಎನ್.ಡಿ.ಪಿ ಯವರು ವಿಶ್ವಸಂಸ್ಥೆಯ ಮಿಲೇನಿಯಂ ಡೆವೆಲಪ್‌ಮೆಂಟ್ ಗೋಲ್ಸ್ ಮತ್ತು ನಂತರದ ಸಹಸ್ರಮಾನದ ಅಭಿವೃದ್ಧಿ ಗುರಿಗಳನ್ನು ಸಾಧಿಸುವಲ್ಲಿ ಸಹಕಾರಿಯಾಗಿದೆ.

✦ 2015ರ ಅಂಕಿ ಅಂಶಗಳ ಆಧಾರದ ಮೇಲೆ 2016 ನೇ ಸಾಲಿನ ಹೆಚ್.ಡಿ.ಐ ನ್ನು **Human Development for Everyone** ಎಂಬ ಶೀರ್ಷಿಕೆಯಡಿಯಲ್ಲಿ ಸ್ವೀಡನ್ನಿನ ಸ್ಟಾಕ್‌ಹೋಂ ನಲ್ಲಿ ಪ್ರಕಟಿಸಿದ್ದು, ನಾರ್ವೆ ದೇಶವು ಮೊದಲ ಸ್ಥಾನ, **ಭಾರತವು 131 ನೇ (0.624) ಸ್ಥಾನದಲ್ಲಿದೆ.**

### ಕಾರ್ಯನಿರ್ವಹಿಸುತ್ತಿರುವ ಕ್ಷೇತ್ರಗಳು

1) ಸುಸ್ಥಿರ ಅಭಿವೃದ್ಧಿ (Sustainable Development)
2) ಪ್ರಜಾಸತಾತ್ಮಕ ಆಡಳಿತ ಮತ್ತು ಶಾಂತಿ ನಿರ್ಮಾಣ (Democratic Governance and Peace Building)
3) ಹವಾಮಾನ ಮತ್ತು ವಿಕೋಪ ನಿಯಂತ್ರಣ (Climate and Disaster Resilience)

# ಸುಂಕಗಳು ಮತ್ತು ವ್ಯಾಪಾರದ ಮೇಲಿನ ಸಾಮಾನ್ಯ ಒಪ್ಪಂದ (GATT - General Agreement on Trade and Tariffs)

1940 ರ ದಶಕದಲ್ಲಿ 2ನೇ ಜಾಗತಿಕ ಸಮರದ ನಂತರ ವಿಶ್ವ ಶಾಂತಿ ಸ್ಥಾಪನೆಗಾಗಿ 1945 ರಲ್ಲಿ ವಿಶ್ವಸಂಸ್ಥೆಯು, ಜಾಗತಿಕ ರಾಷ್ಟ್ರಗಳ ಆರ್ಥಿಕಾಭಿವೃದ್ಧಿಗಾಗಿ ಐ.ಎಂ.ಎಫ್ & ಐ.ಬಿ.ಆರ್.ಡಿ ಸಂಸ್ಥೆಗಳು ಸ್ಥಾಪನೆಗೊಂಡ ನಂತರ ನೂತನ ಆರ್ಥಿಕ ವ್ಯವಸ್ಥೆ ಪ್ರಾರಂಭಗೊಂಡಿತು. ಬ್ರಿಟನ್ನಿನ ವಸಾಹತುಶಾಹಿ ನೀತಿ ಅಂತ್ಯದ ನಂತರ ವಿಶ್ವದ ವ್ಯಾಪಾರವು ಬಹುತೇಕ ರಾಷ್ಟ್ರಗಳ ನಡುವೆ ನಡೆಯುತ್ತಿರುವಾಗ ಹಲವಾರು ವ್ಯಾಪಾ... ನಿಯಂತ್ರಣಗಳು ವಿಧಿಸಲ್ಪಡುತ್ತಿದ್ದವು. ಆದರೆ ವಿದೇಶಿ ವ್ಯಾಪಾರದ ಉತ್ತೇಜನಕ್ಕಾಗಿ ಬಹುತೇಕ ರಾಷ್ಟ್ರಗಳು ಉದಾರೀಕೃತ ವ್ಯಾಪಾರಿ ತಂತ್ರಕ್ಕಾಗಿ ಮಾಡಿಕೊಂಡ ಒಪ್ಪಂದವೇ ಬಹುಪಕ್ಷೀಯ ವ್ಯಾಪಾರಿ ಒಪ್ಪಂದ (GA...

- 1945 ರ ನಂತರ ಜಾಗತಿಕ ಆರ್ಥಿಕ ವ್ಯವಸ್ಥೆ ಅಥವಾ ನೂತನ ಜಾಗತಿಕ ಆರ್ಥಿಕ ವ್ಯವಸ್ಥೆಯಲ್ಲಿ ಮಿತ್ರ ರಾಷ್ಟ್ರ... ಉದಾರೀಕೃತ ವ್ಯಾಪಾರಿ ವ್ಯವಸ್ಥೆಯನ್ನು ಸ್ಥಾಪಿಸಲು 1947 ರಲ್ಲಿ ಹವಾನಾದಲ್ಲಿ ವ್ಯಾಪಾರ & ಉದ್ಯೋಗದ ಮೇ... ಜಾಗತಿಕ ಸಮ್ಮೇಳನ (TEC) ಜರುಗಿದ್ದು, 53 ರಾಷ್ಟ್ರಗಳು ಈ ಒಪ್ಪಂದಕ್ಕೆ ಸಹಿ ಹಾಕಿ, ಅಂತರಾಷ್ಟ್ರೀಯ ವ್ಯಾ... ಸಂಘಟನೆ (ITO) ಸ್ಥಾಪನೆಗೆ ಪ್ರಯತ್ನಿಸಿದವು.
- ಆದರೆ ಅಮೇರಿಕ ಈ ಒಪ್ಪಂದಕ್ಕೆ ಸಹಿ ಹಾಕದ ಕಾರಣ ಐ.ಟಿ.ಓ ಅಸ್ತಿತ್ವಕ್ಕೆ ಬರಲಿಲ್ಲ.
- ಆಗ 23 ರಾಷ್ಟ್ರಗಳು ತಮ್ಮ ಒಪ್ಪಂದವನ್ನು ಮುಂದುವರೆಸಲು ಜಿನೀವಾದಲ್ಲಿ ಸಭೆ ಸೇರಿ 1947 ರ ಅಕ್ಟೋಬ... ರಂದು ಸುಂಕಗಳು & ವ್ಯಾಪಾರದ ಮೇಲಿನ ಸಾಮಾನ್ಯ ಒಪ್ಪಂದ (ಗ್ಯಾಟ್) ಬಹುಪಕ್ಷೀಯ ಒಪ್ಪಂದಕ್ಕೆ ಸಹಿ ಹಾ...
- ಗ್ಯಾಟ್ 1948 ಜನವರಿ 1 ರಿಂದ ಕಾರ್ಯರೂಪಕ್ಕೆ ಬಂದಿದ್ದು, ಸ್ವಿಡ್ಜರ್‌ಲೆಂಡ್‌ನ ಜಿನೀವಾದಲ್ಲಿ ಕೇಂದ್ರ ಕಛೇರಿ ಹೊ... ಪ್ರಾರಂಭದಲ್ಲಿ 23 ರಾಷ್ಟ್ರಗಳ ಸದಸ್ಯತ್ವದೊಂದಿಗೆ ಪ್ರಾರಂಭವಾದ ಈ ಒಪ್ಪಂದವು 1994 ರ ವೇಳೆಗೆ **ವಿಶ್ವದ 123 ರಾ...** ಸದಸ್ಯತ್ವ ಪಡೆದಿತ್ತು.

**ಉದ್ದೇಶಗಳು:-**

- ಗ್ಯಾಟ್ ಎಂಬುದು ಒಂದು ಬಹುಪಕ್ಷೀಯ ಒಪ್ಪಂದವಾಗಿ ಕಾಲ ಕಾಲಕ್ಕೆ ಸಭೆ ಸೇರಿ ತಮ್ಮ ವ್ಯಾಪಾರ ವಾಣಿಜ್ಯ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವ, ಜಾಗತಿಕ ಜೀವನದ ಗುಣಮಟ್ಟವನ್ನು ಉತ್ತಮಪಡಿಸುವುದು, ಸಂಪನ್ಮೂಲಗಳ ಪೂರ್ಣ ಬಳಕೆ ಸಾಧಿಸುವುದು, ಜಾಗತಿಕ ಮಟ್ಟದಲ್ಲಿ ಸರಕುಗಳ ಉತ್ಪಾದನೆ & ವಿನಿಮಯವನ್ನು ವಿಸ್ತರಿಸುವುದು.
- **ಮುಖ್ಯ ಲಕ್ಷಣ:-** ಎಂ.ಎಫ್.ಎನ್ ರಾಷ್ಟ್ರಗಳ ಸಮಾನ ಕೃಪೆ ಅಧಿನಿಯಮ (Most Favoured Nation's Clause) ಅಂದರೆ ವ್ಯಾಪಾರಿ ದ್ವಿಪಕ್ಷೀಯತೆಯನ್ನು ತೆಗೆದುಹಾಕಿ ಬಹು ಪಕ್ಷೀಯ ವ್ಯಾಪಾರಕ್ಕೆ ಹೆಚ್ಚಿನ ಒತ್ತು ನೀಡುವುದು ಹಾಗೂ ಸದಸ್ಯ ರಾಷ್ಟ್ರಗಳೆಲ್ಲವನ್ನೂ ಏಕರೂಪ ದೃಷ್ಟಿಯಲ್ಲಿ ನೋಡಿಕೊಳ್ಳುವುದು.

**ಗ್ಯಾಟ್‌ನ ವ್ಯಾಪಾರಿ ಮಾತುಕತೆಗಳು:-**

- ಗ್ಯಾಟ್ ಅಡಿಯಲ್ಲಿ 1947 ರಿಂದ 1995 ರವರೆಗೆ ವಿಶ್ವದ ವಿವಿಧ ಸ್ಥಳಗಳಲ್ಲಿ ವ್ಯಾಪಾರಿ ಸಮಸ್ಯೆಗಳನ್ನು ಪರಿಹರಿಸಿ, ವಿದೇಶಿ ವ್ಯಾಪಾರವನ್ನು ಉತ್ತೇಜಿಸುವ ದೃಷ್ಟಿಯಿಂದ, ಒಪ್ಪಂದಗಳನ್ನು ಮಾಡಿಕೊಳ್ಳುವ ದೆಸೆಯಲ್ಲಿ 8 ಸುತ್ತಿನ ಚರ್ಚೆಗಳು ನಡೆದವು. ಇವುಗಳನ್ನೇ ಗ್ಯಾಟ್‌ನ 8 ಸುತ್ತಿನ ಮಾತುಕತೆಗಳು ಎನ್ನಲಾಗಿದೆ.

| ಸುತ್ತು | ವರ್ಷ | ಸ್ಥಳ |
|---|---|---|
| 1 | 1947 | ಜಿನೀವಾ |
| 2 | 1949 | ಫ್ರಾನ್ಸ್‌ನ ಅನೇಸಿ |
| 3 | 1950–51 | ಬ್ರಿಟನ್‌ನ ಟರ್ಕ್ವೇ |
| 4 | 1955–56 | ಜಿನೀವಾ |
| 5 | 1954–62 | ಜಿನೀವಾ (ದಿಲ್ಲಾನ್ ಸುತ್ತಿನ ಮಾತುಕತೆ |
| 6 | 1963–67 | ಜಿನೀವಾ(ಕೆನಡಿ ಸುತ್ತಿನ ಮಾತುಕತೆ) |
| 7 | 1973–79 | ಟೋಕಿಯೋ |
| 8 | 1986–94 | ಉರುಗ್ವೆಯ ಪಂತಾದೆಲ್ |

**ಉರುಗ್ವೆ ಸುತ್ತಿನ ಮಾತುಕತೆ (1986-94):-**

- ಗ್ಯಾಟ್‌ನ 8ನೇ & ಕೊನೆಯ ಸುತ್ತಿನ ಮಾ... ಇದಾಗಿದ್ದು, ಬಹುಪಕ್ಷೀಯ ವ್ಯವಹಾರದ ಸಂ... ಮಾತುಕತೆಗಳನ್ನು ದಕ್ಷಿಣ ಅಮೇರಿಕದ ಅರ್ಜೆಂ... ಬ್ರೆಜಿಲ್ ದೇಶಗಳ ನಡುವೆ ಇರುವ ಚಿಕ್ಕ ರಾಷ್ಟ್ರ... ಉರುಗ್ವೆ ಪಂತಾದೆಲ್ ಎಸ್ಟಿಯಲ್ಲಿ 1986 ಸೆಪ್ಟೆಂ... ಆರಂಭವಾಯಿತು.

✦ ಈ ಒಡಂಬಡಿಕೆಗಳು ಮೊದಲು ಉರುಗ್ವೆಯಲ್ಲಿ ಆರಂಭವಾಮುದ್ದರಿಂದ ಆನಂತರ ಬೇರಾವ ಸಭೆಗಳು ಯಾವ ಸ್ಥಳದಲ್ಲಿ ನಡೆದರೂ ಅದನ್ನು **"ಉರುಗ್ವೆ ಸಂಧಾನ"** ವೆಂದು ಕರೆಯುತ್ತಾರೆ.

✦ 1993 ಡಿಸೆಂಬರ್ 15 ರಂದು ಈ ಸಂಧಾನ ಮುಕ್ತಾಯಗೊಂಡಿದೆ. ಇದರಲ್ಲಿ ಒಟ್ಟು 115 ದೇಶಗಳು ಪಾಲ್ಗೊಂಡಿವೆ.

## ಡಂಕೆಲ್ ಪ್ರಸ್ತಾವನೆಗಳು (Dunkel Proposals):-

✦ ಗ್ಯಾಟ್‌ನ ಉರುಗ್ವೆ ಸಂಧಾನದ ಮಾತುಕತೆಗಳಲ್ಲಿ ಸದಸ್ಯ ರಾಷ್ಟ್ರಗಳ




ನಡುವೆ ಉಂಟಾದ ಬಿಕ್ಕಟ್ಟಿಗೆ ಪರಿಹಾರ ಕಂಡುಕೊಳ್ಳಲು ಅಂದಿನ ಗ್ಯಾಟ್ ಮಹಾನಿರ್ದೇಶಕರಾದ ಆರ್ಥರ್ ಡಂಕೆಲ್‌ರವರು 1991ರ ಡಿಸೆಂಬರ್‌ನಲ್ಲಿ ಕ್ರಿಯಾಯೋಜನೆಯ ಪ್ಯಾಕೇಜನ್ನು ಸಿದ್ಧಪಡಿಸಿದರು.

✦ 1994ರಲ್ಲಿ ಆಗಿನ ಅಧ್ಯಕ್ಷರಾಗಿದ್ದ, **ಆರ್ಥರ್ ಡಂಕೆಲ್‌**ನ ಪ್ರಸ್ತಾವನೆಗೆ ಅನುಗುಣವಾಗಿ ಎಂಟನೇ ಸುತ್ತಿನ ಮಾತುಕತೆಯಲ್ಲಿ ವಿಶ್ವ ವ್ಯಾಪಾರ ಸಂಘಟನೆ ಸ್ಥಾಪನೆಯಾಯಿತು.

✦ 436 ಪುಟಗಳ ಬೃಹತ್ ಸಂಪುಟವಾಗಿದ್ದು, ಈ ಪ್ಯಾಕೇಜ್‌ನಲ್ಲಿ ಮಾತುಕತೆಗಳ ಫಲಿತಾಂಶಗಳು ಸಮ್ಮತಿಸಲಾದ ವಿಷಯಗಳು ಭಿನ್ನಾಭಿಪ್ರಾಯಗಳಿರುವಂತೆ ಎಲ್ಲರಿಗೂ ಒಪ್ಪಿಗೆಯಾಗುವಂತಹ ಪ್ರಸ್ತಾಪಗಳಿದ್ದವು.

✦ ಮೊದಲು ಉರುಗ್ವೆ ಸುತ್ತಿನ ಮಾತುಕತೆಗಳಲ್ಲಿ 15 ವಿಷಯಗಳನ್ನು ಸೇರಿಸಲಾಗಿತ್ತು. ಅವುಗಳನ್ನು ಪರಿಷ್ಕರಿಸಿ 7 ವಲಯಗಳನ್ನಾಗಿ ಪುನರ್‌ರೂಪಿಸಲಾಯಿತು.

✦ ಅವುಗಳೆಂದರೆ, ಕೃಷಿ, ಜವಳಿ, ಉದ್ಯಮ, ಕಾನೂನು ರಚನೆ, ಬೌದ್ಧಿಕ ಸಂಪತ್ತಿನ ಹಕ್ಕುಗಳು (TRIPS) ಬಂಡವಾಳ ಹೂಡಿಕೆ ಕ್ರಮಗಳು (TRIMS), ವ್ಯಾಪಾರಿ ಸೇವೆಗಳು (GATS), ಮಾರುಕಟ್ಟೆ ಲಭ್ಯತೆ, ಮೊದಲಾದ ವಿಚಾರಗಳು ಇವುಗಳನ್ನು ಒಟ್ಟಾರೆಯಾಗಿ **ಡಂಕೆಲ್ ಪ್ರಸ್ತಾವನೆ**ಗಳೆಂದು ಕರೆಯುತ್ತಾರೆ.

✦ ಡಂಕೆಲ್ ಎಂದರೆ ಸಿದ್ಧಾಂತವಲ್ಲ, 1991 ರಲ್ಲಿ ಮಂಡಿಸಿದ ಉರುಗ್ವೆ ಸುತ್ತಿನ ಮಾತುಕತೆಗಳ ಫಲಿತಾಂಶಗಳು ಉರುಗ್ವೆ ಸುತ್ತಿನ ಸಮಾಲೋಚನೆಗಳ ಗ್ಯಾಟ್ ಒಪ್ಪಂದಕ್ಕೆ 1994 ರ ಏಪ್ರಿಲ್‌ನಲ್ಲಿ **ಮೊರಾಕ್ಕೊ ದೇಶದ ಮರ್‍ರಾ ಕೇಶ್‌ನಲ್ಲಿ ನಡೆದ ಸಚಿವ ಮಟ್ಟದ ಸಮ್ಮೇಳನ**ದಲ್ಲಿ ಅಂತಿಮವಾಗಿ ಸಹಿ ಹಾಕಲಾಯಿತು.

### ಗ್ಯಾಟ್ ಏನನ್ನು ಹೇಳುತ್ತದೆ:

✦ ಕೃಷಿ ವ್ಯಾಪಾರ ಕ್ಷೇತ್ರದಲ್ಲಿ ಕೈಗಾರಿಕಾ ದೇಶಗಳು ತಮ್ಮ ಸರಕುಗಳಿಗೆ ಹೆಚ್ಚಿನ ಸಹಾಯಧನವನ್ನು ನೀಡಿ ಕೃಷಿಯನ್ನು ರಕ್ಷಿಸುವುದರಿಂದ ವಿಶ್ವದ ಉತ್ಪಾದನೆಯಲ್ಲಿ ಬಹಳಷ್ಟು ಕುಸಿತ ಕಂಡು ಬಂದಿದೆ. ಆದುದರಿಂದ ಕೃಷಿ ಕ್ಷೇತ್ರದಲ್ಲಿನ ವಿಕೃತಿಗಳನ್ನು ಕೃಷಿ ಸರುಕುಗಳ ವ್ಯಾಪಾರವನ್ನು ಉದಾರಿಸಬೇಕು ಎಂದು ತಿಳಿಸುತ್ತದೆ.

✦ ಕೃಷಿ ಮತ್ತು ಮಾಂಸ ಉತ್ಪನ್ನಗಳಿಗೆ ಸ್ಪರ್ಧಾತ್ಮಕ ಸಹಾಯಧನಗಳನ್ನು ನೀಡಲಾಗಿ ಅವುಗಳ ಬೆಲೆಗಳು ವಿಶ್ವ ಮಟ್ಟದಲ್ಲಿ ಬಹಳಷ್ಟು ಕುಸಿದಿವೆ. ಇದರಿಂದ ಮಾರುಕಟ್ಟೆಯ ಅವಕಾಶಗಳು ಎಲ್ಲ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ದೊರೆಯುತ್ತಿಲ್ಲ.

### ಕೃಷಿ ಸಂಬಂಧಿ ಪ್ರಸ್ತಾಪನೆಗಳು:

1) ಎಲ್ಲ ದೇಶೀಯ ಕೃಷಿ ಉತ್ಪಾದಕರಿಗೆ ಸಹಾಯಧನ ರೂಪದಲ್ಲಿ ನೀಡುವ ಬೆಂಬಲವನ್ನು 1993ರಿಂದ 1999ರವರೆಗೆ ಶೇ 20ರಷ್ಟು ತಗ್ಗಿಸುವುದು.

2) ಎಲ್ಲ ರಫ್ತು ಸಹಾಯಧನಗಳನ್ನು ಶೇ36ರಿಂದ ಶೇ24ಕ್ಕೆ ಕ್ರಮವಾಗಿ 1993ರಿಂದ 1999ರಲ್ಲಿ ಇಳಿಸುವುದು.

3) 1993ರಿಂದ 1999ರವರೆಗೆ ಸಾಮಾನ್ಯ ಸುಂಕಗಳನ್ನು ಸರಾಸರಿ ಕನಿಷ್ಠ 36%ಕ್ಕೆ ಇಳಿಸುವುದು, ಪ್ರತಿಯೊಂದು ಸುಂಕ ರೇಖೆಯಲ್ಲಿ ಅದು ಶೇ15 ಇರುವುದು.

✦ ಈ ಮೇಲಿನವುಗಳಲ್ಲಿ ಕೆಲವು ರಿಯಾಯಿತಿಗಳನ್ನು ನೀಡಬಹುದಾಗಿದೆ. ಸಾಮಾನ್ಯ ಸೇವೆಗಳಲ್ಲಿ ಉತ್ಪಾದಕರಿಗೆ ನೇರವಾಗಿ ಸಹಾಯಧನವನ್ನು ಪಾವತಿ ಮಾಡಲಾಗುವುದಿಲ್ಲ. ಆಹಾರ ರಕ್ಷಣೆಗಾಗಿ ಸಾರ್ವಜನಿಕ ಸ್ಟಾಕ್‌ಗಳನ್ನು ಹಿಡಿದುಕೊಳ್ಳುವುದು. ಅಗತ್ಯ ಜನರಿಗೆ ದೇಶೀಯ ಆಹಾರಕ್ಕೆ ನೆರವು ನೀಡಿಕೆ, ಹೂಡಿಕೆಯ ರೂಪದಲ್ಲಿ ನೀಡುವ ನೆರವಿಗೆ ರಚನಾತ್ಮಕ ಹೊಂದಾಣಿಕೆಗಳು ಮೊದಲಾದುವು ಇದರಲ್ಲಿ ಅಡಕವಾಗಿವೆ.

### ಗ್ಯಾಟ್‌ನ ನಿರ್ದೇಶಕರುಗಳು

1. ಎರಿಕ್ ವಿಂಧಮ್ ವೈಟ್ (1948–68),
2. ಆಲಿವರ್ ಲಾಂಗ್ (1968–80),
3. ಆರ್ಥರ್ ಡಂಕೆಲ್ (1980–93)
4. ಪೀಟರ್ ಸದರ್ ಲ್ಯಾಂಡ್ (1993–95)

### ಜವಳಿ ಉದ್ಯಮಕ್ಕೆ ಸಂಬಂಧಿಸಿದಂತೆ ಡಂಕೆಲ್ ಪ್ರಸ್ತಾಪ:

+ ಜವಳಿ ಉದ್ಯಮವನ್ನು ಗ್ಯಾಟ್ ನಿಯಮ ಮತ್ತು ನಿಬಂಧನೆಗಳ ಚೌಕಟ್ಟಿನಲ್ಲಿ 1993ರ ಜನವರಿಯಿಂದ 3 ಹಂತಗಳಲ್ಲಿ ತರಲಾಗುತ್ತದೆ. ಜವಳಿ ಉದ್ಯಮ ಒಪ್ಪಂದದಂತೆ 2003 ಜನವರಿಯೊಳಗೆ ಸರಕನ್ನು ಮೇಲಿನ ಎಲ್ಲಾ ನಿರ್ಬಂಧಗಳನ್ನು ತೆಗೆಯಬೇಕಾಗುತ್ತದೆ. ಗ್ಯಾಟ್‌ನ ಪರಿಧಿಯೊಳಗೆ ತರಲಾದ ಜವಳಿ ಸರುಕುಗಳ ವ್ಯಾಪಾರ ವಿಚಾರವು ಗ್ಯಾಟ್‌ನ ಹತೋಟಿಗೆ ಒಳಪಡುವುದು ಎಂಬುದಾಗಿತ್ತು.

### ವ್ಯಾಪಾರಕ್ಕೆ ಸಂಬಂಧಿಸಿದ ಬೌದ್ಧಿಕ ಆಸ್ತಿ ಹಕ್ಕುಗಳ ವಿಷಯದಲ್ಲಿ ಡಂಕೆಲ್ ಪ್ರಸ್ತಾವನೆ:

+ ಯುರೋಪ್ ಖಂಡದಲ್ಲಿ ಸಂಭವಿಸಿದ ಕೈಗಾರಿಕಾ ಕ್ರಾಂತಿಯಿಂದಾಗಿ ಅನೇಕ ಹೊಸ ಹೊಸ ಸಂಶೋಧನೆಗಳು ಜರುಗಿದವು, ಹಾಗೂ ಹೊಸ ತಂತ್ರಜ್ಞಾನಗಳು ಹುಟ್ಟಿದವು.
+ ಇದರಿಂದ ಯುರೋಪಿನ ಅನೇಕ ದೇಶಗಳು ಕೈಗಾರಿಕಾ ಮತ್ತು ಕೃಷಿ ಕ್ಷೇತ್ರದಲ್ಲಿ ಅಗಾಧ ಪ್ರಮಾಣದಲ್ಲಿ ಅಭಿವೃದ್ಧಿ ಸಾಧಿಸಿದ್ದವು. ನಂತರ ಅಭಿವೃದ್ಧಿ ಶೀಲ ರಾಷ್ಟ್ರಗಳು ಮೂಲ ಸಂಶೋಧಕರ ಅನುಮತಿ ಇಲ್ಲದೆ ಈ ತಂತ್ರಜ್ಞಾನವನ್ನು ಬಳಸಿಕೊಂಡು ಉತ್ಪಾದನೆ ಹೆಚ್ಚಿಸಲು ಯತ್ನಿಸಿದವು.
+ ಇದರಿಂದ ಕೋಪಗೊಂಡ ಮುಂದುವರಿದ ದೇಶಗಳು ಮೂಲ ಸಂಶೋಧಕರ ಅನುಮತಿ ಇಲ್ಲದೆ ಈ ತಂತ್ರಜ್ಞಾನವನ್ನು ಬಳಸಿಕೊಂಡು ಉತ್ಪಾದನೆ ಹೆಚ್ಚಿಸಲು ಯತ್ನಿಸಿದವು.
+ ತಮ್ಮ ಪ್ರಯತ್ನ ವಿಫಲವಾದಾಗ ಮುಂದುವರಿದ ದೇಶಗಳು ಗ್ಯಾಟ್ ಮೂಲಕ ಬೌದ್ಧಿಕ ಆಸ್ತಿ ಹಕ್ಕುಗಳನ್ನು ಖಾಸಗಿ ಹಕ್ಕುಗಳೆಂದು ಪರಿಗಣಿಸಬೇಕು, ತಂತ್ರಜ್ಞಾನದ ಎಲ್ಲಾ ಕ್ಷೇತ್ರಗಳಲ್ಲಿಯೂ ಉತ್ಪನ್ನ ಮತ್ತು ಪ್ರಕ್ರಿಯೆಗಳ ಕುರಿತು ಹೊಸ ಆವಿಷ್ಕಾರಕ್ಕೆ ಪೇಟೆಂಟ್ ಪಡೆಯುತ್ತಿರಬೇಕು, ಕಡ್ಡಾಯ ಲೈಸೆನ್ಸ್ ಪದ್ಧತಿ ಮತ್ತು ಅಟೋಮ್ಯಾಟಿಕ್ ಲೈಸೆನ್ಸ್ ಹಕ್ಕುಗಳನ್ನು ರದ್ದುಪಡಿಸಬೇಕು, ಜೀವಿಗಳನ್ನು ಪೇಟೆಂಟ್ ವ್ಯಾಪ್ತಿಗೊಳಪಡಿಬೇಕು, ಎಲ್ಲ ಪೇಟೆಂಟ್‌ಗಳ ಅವಧಿಯನ್ನು 20ವರ್ಷಗಳಿಗೆ ವಿಸ್ತರಿಸಬೇಕು. ಎಂಬ ನಿಬಂಧನೆಗಳನ್ನು ರೂಪಿಸಲಾಗಿದೆ.
+ ಅಂದರೆ ಆವಿಷ್ಕಾರ, ಶಿಕ್ಷಣ, ವ್ಯಾಪಾರಕ್ಕೆ ಸಂಬಂಧಿಸಿದಂತೆ ಪಡೆಯುವ ಸ್ವಾಮ್ಯದ ಹಕ್ಕನ್ನು ಬೌದ್ಧಿಕ ಆಸ್ತಿ ಹಕ್ಕು ಎನ್ನಬಹುದು. ಇದರಲ್ಲಿ ಪೇಟೆಂಟ್, ಟ್ರೇಡ್ ಮಾರ್ಕ್, ಇಂಡಸ್ಟ್ರೀಯಲ್ ಡಿಸೈನ್, ಜಿಯೋಗ್ರಫಿಕಲ್ ಇಂಡಿಕೇಷನ್ಸ್, ಇಂಟಿಗ್ರೇಟೆಡ್ ಸರ್ಕ್ಯೂಟ್ಸ್, ಕಾಪಿರೈಟ್ಸ್ ಸೇರಿರುತ್ತವೆ.

### ಕೈಗಾರಿಕೆಗೆ ಅನುಕೂಲ:

+ ಡಂಕೆಲ್ ಪ್ರಸ್ತಾವನೆ ಯಿಂದಾಗಿ ಕೃಷಿ ಸರಕು... ಬೆಲೆಗಳು ಜಾಗತಿಕ ಮಾರುಕಟ್ಟೆಯಲ್ಲಿ ಕುಸಿಯು... ಅಪಾಯವಿದೆ.
+ ಕೃಷಿ ವಸ್ತುಗಳ ಮೇಲಿನ ಸಹಾಯಧನ... ಕಡಿತಗೊಳಿಸುವುದರಿಂದ ಭಾರತದ ರಫ್ತು... ವಿಶ್ವ ಪೇಟೆಯಲ್ಲಿ ಹೆಚ್ಚಿನ ಬೇಡಿಕೆ ಉಂಟಾಗು...
+ ಅಲ್ಲದೆ ಸಾರ್ವಜನಿಕ ವಿತರಣೆಗೆ ಸಹಾಯಧನ... ಕಡಿತಗೊಳಿಸುವುದಿಲ್ಲ. ಇದರಿಂದ ಬಡಜ... ಅಗತ್ಯ ಆಹಾರ ಧಾನ್ಯಗಳು ಯೋಗ್ಯ ಬೆ... ದೊರೆಯುತ್ತದೆ.
+ ಮುಂದಿನ 10ವರ್ಷಗಳಲ್ಲಿ ಜವಳಿ ಉದ್ಯ... ವ್ಯವಸ್ಥೆ ಕ್ರಮೇಣ ಜವಳಿ ಮತ್ತು ಬಟ್ಟೆಗಳ ಮೇ... ನಿರ್ಬಂಧವನ್ನು ತೆಗೆದು ಹಾಕುವುದರಿಂದ ಭಾರ... ಹೆಚ್ಚಿನ ಪ್ರಯೋಜನವಾಗಲಿದೆ. ಅಮೇರಿ... ಮತ್ತು ಯುರೋಪಿನ ಸಮುದಾಯಗಳು ... ನಿರ್ಬಂಧ ತೆಗೆದು ಹಾಕುವುದರಿಂದ ಭಾರ... ಹೆಚ್ಚಿನ ಪ್ರಯೋಜನವಾಗಲಿದೆ. ಆದರೆ ... ಪ್ರಯೋಜನಗಳನ್ನು ಭಾರತ ಪಡೆಯಬೇಕಾ... ಜವಳಿ ಉದ್ಯಮಗಳನ್ನು 10 ವರ್ಷಗಳ ಅವಧಿ... ಆಧುನೀಕರಿಸಬೇಕು.
+ ಲೇಖಕರ ಹಕ್ಕುಗಳು, ವ್ಯಾಪಾರ ಚಿಹ್ನೆ... ಸನ್ನದ್ದುಗಳಿಗೆ ಸಂಬಂಧಿಸಿದ ಪ್ರಸ್ತಾವನೆಗಳಿಂದ... ಔಷಧಿಗಳು ಮತ್ತು ಸುಧಾರಿತ ಬಿತ್ತನೆ ಬೀಜಗ... ಬೆಲೆ ಏರುವ ಭೀತಿ ಇದೆ. ಏಕೆಂದರೆ ಹಕ್ಕು... ಮತ್ತು ಪೇಟೆಂಟ್‌ಗಳಿಗೆ ಕೊಡುವ ರಾಜ... ಏರುತ್ತದೆ.
+ ವಿದೇಶಗಳಲ್ಲಿ ಭಾರತೀಯ ಉತ್ಪಾದಿತ ವಸ್ತು... ಮತ್ತು ಪ್ರಕ್ರಿಯೆ ಅಭಿವೃದ್ಧಿಗಳು ಈ ವ್ಯಾಪ್ತಿ... ಬರುವ ಸಾಧ್ಯತೆ ಇದೆ.
+ ವಿಶ್ವ ಮಾರುಕಟ್ಟೆಯಲ್ಲಿ ಕೃಷಿ ವಸ್ತುಗಳು ಮ... ಜವಳಿ ಉತ್ಪನ್ನಗಳು ಹೆಚ್ಚಿನ ಲಾಭ ಪಡೆಯಬಹು... ಇತರೆ ದೇಶಗಳಲ್ಲಿನ ಸಂಶೋಧನೆಯಿಂದ ... ತಂತ್ರಜ್ಞಾನವನ್ನು ಭಾರತ ಪಡೆಯಬಹುದು.

### ಮಾರ್ರೆಕೇಶ್ ಒಪ್ಪಂದ (Marrakesh Agreement):-

+ 1994 ಏಪ್ರಿಲ್ 15 ರಂದು ಉತ್ತರ ಆಫ್ರಿ... ಪ್ರಾಂತ್ಯದ **ಮೊರಾಕ್ಕೋದ ಮಾರ್ರೆಕೇಶ್**... **ಮಾಡಿಕೊಂಡ ಒಪ್ಪಂದದ** ಅನ್ವಯ ಡಂಕೆ... ಪ್ರಸ್ತಾವನೆಯಂತೆ **ವಿಶ್ವ ವ್ಯಾಪಾರ ಸಂಘಟನೆ**... **ಜನವರಿ 1, 1995ರಂದು** ಜಾರಿಗೆ ಬಂದಿತು.

# ವಿಶ್ವ ವ್ಯಾಪಾರ ಸಂಘಟನೆ (WTO-Wolrd Trade Organisation




ಗ್ಯಾಟ್‌ನ 8ನೇ ಸುತ್ತಿನ ಮಾತುಕತೆಯು ಅರ್ಜೆಂಟೈನಾ & ಬ್ರೆಜಿಲ್ ರಾಷ್ಟ್ರಗಳ ನಡುವಿನ ಉರುಗ್ವೆಯ ಪಂತಾದೆಲ್ ಎಸ್ಟೆಯಲ್ಲಿ 123 ರಾಷ್ಟ್ರಗಳ ಸಮ್ಮುಖದಲ್ಲಿ ನಡೆಯಿತು. ಅಂದಿನ ಗ್ಯಾಟ್‌ನ ಮಹಾನಿರ್ದೇಶಕರಾದ ಪ್ರೊ|| ಆರ್ಥರ್ ಡಂಕೆಲ್ ಸಿದ್ಧಪಡಿಸಿದ 439 ಪುಟಗಳ ಕ್ರಿಯಾ ಯೋಜನೆಯ ಅನ್ವಯ 1994 ಏಪ್ರಿಲ್ 15 ರಂದು ಮೊರಾಕ್ಕೋದ ಮರಕೇಶ್ ನಲ್ಲಿ ಸದಸ್ಯ ರಾಷ್ಟ್ರಗಳ ಸಭೆ ನಡೆದು ಬಹು ಪಕ್ಷೀಯ ಒಪ್ಪಂದ ಎನಿಸಿದ ಗ್ಯಾಟ್‌ನ ಸ್ಥಾನಕ್ಕೆ ಬದಲಾಗಿ ಕಾನೂನುಬದ್ಧವಾದ ರೀತಿಯಲ್ಲಿ ವಿಶ್ವಸಂಘಟನೆಯನ್ನು ಮಾಡುವ ಉದ್ದೇಶದಿಂದ ಒಪ್ಪಂದ ಮಾಡಿಕೊಂಡರು. ಇದರ ಅಂತಿಮ ಫಲವೇ ವಿಶ್ವ ವ್ಯಾಪಾರ ಸಂಘಟನೆ.

- ವಿಶ್ವ ವ್ಯಾಪಾರ ಸಂಘಟನೆಯು ಗ್ಯಾಟ್ ನ ಬದಲಾಗಿ ಉರುಗ್ವೆ ಸುತ್ತಿನ ಮಾತುಕತೆಯ ಫಲವಾಗಿ ಅಸ್ತಿತ್ವಕ್ಕೆ ಬಂದ ಅಂತರಾಷ್ಟ್ರೀಯ ಮಟ್ಟದ ವ್ಯಾಪಾರ ಸಂಘಟನೆಯಾಗಿದೆ.
- **1995ರ ಜನವರಿ 1** ರಂದು ಕಾನೂನುಬದ್ಧವಾದ ರೀತಿಯಲ್ಲಿ ಸ್ಥಾಪನೆಯಾಗಿದ್ದು, ಸ್ವಿಡ್ಜರ್‌ಲೆಂಡ್‌ನ ಜಿನೀವಾದಲ್ಲಿ ಕೇಂದ್ರ ಕಛೇರಿಯನ್ನು ಹೊಂದಿದೆ.
- ಇದು 164 ರಾಷ್ಟ್ರಗಳ ಸದಸ್ಯತ್ವದ ಸಂಘಟನೆಯಾಗಿದ್ದು, WTO ನ 10 ನೇ ಶೃಂಗಸಭೆಯಲ್ಲಿ ಆಫ್ಘಾನಿಸ್ತಾನ ಸದಸ್ಯತ್ವ ಪಡೆದ **164 ನೇ** ರಾಷ್ಟ್ರವಾಗಿದೆ. 163 ನೇ ರಾಷ್ಟ್ರ ಲಿಬೇರಿಯಾ.
- **ಮೊದಲ ನಿರ್ದೇಶಕರು:-** ಪೀಟರ್ ಸದರ್‌ಲ್ಯಾಂಡ್
- **ಪ್ರಸ್ತುತ ಮಹಾನಿರ್ದೇಶಕರು:-** ರಾಬರ್ಟ್ ಅಜ್ವಿವಿಡೋ ಇವರ ಅಧಿಕಾರಾವಧಿ 4 ವರ್ಷಗಳು.

**ಉದ್ದೇಶಗಳು:-**

- ಸರಕುಗಳ ವ್ಯಾಪಾರ, ಸೇವೆಗಳಲ್ಲಿನ ವ್ಯಾಪಾರ, ಬೌದ್ಧಿಕ ಆಸ್ತಿಯ ಹಕ್ಕುಗಳು, ವಿದೇಶಿ ಬಂಡವಾಳ ಹೂಡಿಕೆ ಸಂಬಂಧಿಸಿದಂತೆ ವಿವಿಧ ಕ್ಷೇತ್ರಗಳ ನಿಯಂತ್ರಣ ನಿರ್ಬಂಧಗಳನ್ನು ತೆಗೆದುಹಾಕಿ, ಜಾಗತಿಕ ಮಟ್ಟದಲ್ಲಿ ಮುಕ್ತ ವ್ಯಾಪಾರವನ್ನು ಅಭಿವೃದ್ಧಿ ಪಡಿಸುವ ಉದ್ದೇಶದಿಂದ ಸ್ಥಾಪನೆಗೊಂಡ ಸಂಸ್ಥೆಯಾಗಿದೆ.

**ಕಾರ್ಯಗಳು:-**

- ಉರುಗ್ವೆ ಸುತ್ತಿನ ಮಾತುಕತೆ ಒಪ್ಪಂದಗಳ ಅನುಷ್ಠಾನ.
- ಸದಸ್ಯ ರಾಷ್ಟ್ರಗಳ ವ್ಯಾಪಾರಿ ಸಂಧಾನಗಳ ವೇದಿಕೆ
- IMF & IBRD ಜೊತೆಯಲ್ಲಿ ಸಮನ್ವಯದ ಕಾರ್ಯ
- ಸದಸ್ಯ ರಾಷ್ಟ್ರಗಳ ನಡುವಿನ ವ್ಯಾಪಾರಿ ವ್ಯಾಜ್ಯಗಳ ಪರಿಹಾರ
- ವ್ಯಾಪಾರಿ ನೀತಿಯ ಪರಿಷ್ಕರಣೆ ಯಂತ್ರ
- ವಿಶ್ವ ವ್ಯಾಪಾರಿ ವರದಿ (WTR) ಪ್ರತಿ ವರ್ಷಕ್ಕೊಮ್ಮೆ ಈ ಸಂಸ್ಥೆಯು ಪ್ರಕಟಪಡಿಸುತ್ತದೆ.

- ವಿದೇಶಿ ವ್ಯಾಪಾರದ ಕಾವಲು ನಾಯಿ ಸಂಸ್ಥೆ.
- WTO ನ ಶೃಂಗಸಭೆಗಳು ಪ್ರತಿ 2 ವರ್ಷಗಳಿಗೊಮ್ಮೆ ನಡೆಯುತ್ತಿದ್ದು, ಮೊದಲ ಶೃಂಗಸಭೆ 1996 ರಲ್ಲಿ ಸಿಂಗಾಪುರದಲ್ಲಿ ನಡೆದಿತ್ತು.
- 10 ನೇ ಶೃಂಗಸಭೆಯು 2015 ಡಿಸೆಂಬರ್ 15 ರಿಂದ 19 ರವರೆಗೆ ಕೀನ್ಯಾದ ನೈರೋಬಿಯಲ್ಲಿ ಜರುಗಿತ್ತು.
- 11ನೇ ಸಭೆ – 2017 ಡಿಸೆಂಬರ್ 11 ರಿಂದ 14 ರವರೆಗೆ ಮುಂದಿನ ಸಭೆ ಅರ್ಜೆಂಟೈನಾದ ಬ್ಯೂನಸ್ ಏರ್ (Buenos aires) ನಲ್ಲಿ ನಡೆಯಲಿದೆ.




**ಡಬ್ಲ್ಯೂಟಿಒ ನ ಮಹಾ ನಿರ್ದೇಶಕರು: ರಾಬರ್ಟ್ ಅಜ್ವಿವಿಡೊ** ಇವರು ಪ್ರಸ್ತುತವಾಗಿ ವಿಶ್ವ ವ್ಯಾಪಾರ ಸಂಘಟನೆಯ ಮಹಾ ನಿರ್ದೇಶಕರಾಗಿ ಸೆಪ್ಟೆಂಬರ್ 1 2013 ರಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಇವರು ಮೂಲತಃ ಬ್ರೆಜಿಲ್‌ನವರು. ವಿಶ್ವವ್ಯಾಪಾರ ಸಂಘಟನೆಯ ಮುಖ್ಯಸ್ಥರನ್ನು ಮಹಾನಿರ್ದೇಶಕರೆಂದು ಕರೆಯುತ್ತಾರೆ. ಇವರು ವಿಶ್ವ ವ್ಯಾಪಾರ ಸಂಘಟನೆಯ ಮೇಲ್ವಿಚಾರಣೆ ಆಡಳಿತಾತ್ಮಕ ಕಾರ್ಯಗಳ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಇವರು ವಿಶ್ವ ವ್ಯಾಪಾರ ಸಂಘಟನೆಯ ಕಾರ್ಯಾಲಯದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ. ಇವರನ್ನು 4 ವರ್ಷದ ಅವಧಿಗೆ ವಿಶ್ವ ವ್ಯಾಪಾರ ಸಂಘಟನೆಯ ಸದಸ್ಯ ರಾಷ್ಟ್ರಗಳು ಆಯ್ಕೆ ಮಾಡುತ್ತವೆ.

## WTO ಶೃಂಗಸಭೆಗಳು

| ಸಭೆ | ಸ್ಥಳ | ಅವಧಿ |
|---|---|---|
| 1 | ಸಿಂಗಾಪುರ | 1996ರ ಡಿಸೆಂಬರ್ 9ರಿಂದ 13 |
| 2 | ಜಿನೇವಾ | 1998ರ ಮೇ 18ರಿಂದ 20 |
| 3 | ಅಮೇರಿಕಾದ ಸಿಯಾಟಲ್ | 1999ರ ನ. 30ರಿಂದ ಡಿ. 3 |
| 4 | ಕತಾರ್‌ನ ದೋಹಾ | 2001ರ ನವೆಂಬರ್ 9–14 |
| 5 | ಮೆಕ್ಸಿಕೋದ ಕ್ಯಾನ್‌ಕನ್ | 2003ರ ಸೆಪ್ಟೆಂಬರ್ 10–14 |
| 6 | ಹಾಂಕಾಂಗ್ | 2005ರ ಡಿಸೆಂಬರ್ 13–18 |
| 7 | ಸ್ವಿಡ್ಜರ್ಲೆಂಡಿನ ಜಿನೇವಾ | 2008ರ ಜುಲೈ |
| 8 | ಜಿನೇವಾ | 2011ರ ಡಿಸೆಂಬರ್ 15–17 |
| 9 | ಇಂಡೋನೇಷ್ಯಾದ ಬಾಲಿ | 2013ರ ಡಿಸೆಂಬರ್ 3–7 |
| 10 | ಕೀನ್ಯಾದ ನೈರೋಬಿ | 2015 ಡಿಸೆಂಬರ್ 15–19 |
| 11 | ಅರ್ಜೆಂಟೈನಾ (ಬ್ಯೂನಸ್ ಐರ್ಸ್) ಮುಂದಿನಸಭೆ (2017) | |

### WTO ನಲ್ಲಿ ಭಾರತ :–

- ಭಾರತವು ವಿಶ್ವ ವ್ಯಾಪಾರ ಸಂಘಟನೆಯ ಸ್ಥಾಪಕ ಸದಸ್ಯ ರಾಷ್ಟ್ರವಾಗಿದೆ.
- ಜನವರಿ 1, 1995 ರಂದು ಭಾರತವು WTO ನ ಸದಸ್ಯತ್ವ ಪಡೆಯಿತು.
- ಭಾರತ ಸರ್ಕಾರವು ಇದರ ಒಪ್ಪಂದಗಳನ್ನು ಜಾರಿಗೆ ತರಲು ಅನೇಕ ಕ್ರಮಗಳನ್ನು ಕೈಗೊಂಡಿದೆ.
- ಭಾರತವು ಅರ್ಥವ್ಯವಸ್ಥೆಯ **ಖಾಸಗೀಕರಣ, ಉದಾರೀಕರಣ ಮತ್ತು ಜಾಗತೀಕರಣ** ಪ್ರಕ್ರಿಯೆಗಳನ್ನು ಜಾರಿಗೆ ತಂದಿದೆ.
- ಆಮಧುಗಳ ಮೇಲಿನ ಸುಂಕ ದರಗಳನ್ನು ಕಡಿತಗೊಳಿಸಲಾಗಿದೆ. ಮತ್ತು ಪರಿಮಾಣಾತ್ಮಕ ನಿರ್ಬಂಧಗಳನ್ನು ತೆಗೆದುಹಾಕಲಾಗಿದೆ.

### WTO ಕೃಷಿ ಮೇಲಿನ ಒಪ್ಪಂದಗಳು:–

- ಈ ಸಂಸ್ಥೆಯ ಕೃಷಿ ಮೇಲಿನ ಒಪ್ಪಂದಗಳು 3 ಪಟ್ಟಿಯಲ್ಲಿ ಸೇರಿವೆ. ಅವುಗಳೆಂದರೆ **ಹಸಿರು ಪೆಟ್ಟಿಗೆ, ನೀಲಿ ಪೆಟ್ಟಿಗೆ, ಅಂಬರ್ ಪೆಟ್ಟಿಗೆ**
- **ಹಸಿರು ಪೆಟ್ಟಿಗೆ ಸಹಾಯಧನ:–** ಸಂಶೋಧನೆ, ರೋಗ ನಿಯಂತ್ರಣ, ಆಹಾರ ಭದ್ರತೆ, ಮೂಲಸೌಕರ್ಯಗಳು ಮುಂತಾದವುಗಳು. ಇವು WTO ನ ನಿಯಮಾವಳಿಯಲ್ಲಿ ಸೇರಿದ್ದು, ಕೃಷಿ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಸರ್ಕಾರಿ ಸೇವೆಗಳನ್ನು ಮನರ್ ಪರಿಷ್ಕರಿಸುವುದರ ಬಗ್ಗೆ ತಿಳಿಸುತ್ತವೆ. ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಈ ಒಪ್ಪಂದವನ್ನು ಮುಂದುವರಿಸಲು ಇಚ್ಛಿಸಿದವು.
- **ನೀಲಿ ಪೆಟ್ಟಿಗೆ ಸಹಾಯಧನ:–** ಇದೊಂದು ನಿರ್ದಿಷ್ಟ ಉತ್ಪನ್ನಕ್ಕೆ ಸಂಬಂಧಿಸಿದ್ದು, ಉತ್ಪಾದನೆಯ ಮಟ್ಟ ಹೆಚ್ಚಾದಂತೆ ಸಹಾಯಧನಗಳನ್ನು ನಿರ್ಬಂಧಿಸಲು ಸೂಚಿಸುತ್ತದೆ.
- **ಅಂಬರ್ ಪೆಟ್ಟಿಗೆ ಸಹಾಯಧನ:–** ಇದು ಸರ್ಕಾರದ ಸಹಾಯಧನವನ್ನು ನಿಯಂತ್ರಿಸುವುದನ್ನು ತಿಳಿಸುತ್ತದೆ. ಅಂದರೆ ರಫ್ತು ಸಹಾಯಧನ, ಅಗ್ಗದ ಸಾಲ, ಕನಿಷ್ಠ ಬೆಂಬಲ ಬೆಲೆ, ಉತ್ಪನ್ನದ ಪ್ರಮಾಣಕ್ಕೆ ನೇರವಾಗಿ ಸಂಬಂಧಿಸಿದ ಸಹಾಯಧನಗಳನ್ನು ನಿಯಂತ್ರಿಸುವುದನ್ನು ತಿಳಿಸುತ್ತದೆ.

### ರಾಷ್ಟ್ರಗಳ ಸಮಾನ ಕೃಷಿ ಅಧಿನಿಯ... (MFN-Most Favoured Natio... Clause)

- ಅಂದರೆ "ಒಂದು ರಾಷ್ಟ್ರ, ಒಂದು ... ತತ್ವದ ಆಧಾರದ ಮೇಲೆ ಎಲ್ಲಾ ... ರಾಷ್ಟ್ರಗಳನ್ನು ಒಂದೇ ದೃಷ್ಟಿ... ನೋಡುವುದು.
- TFA - Trade Facilitat... Agreement (ವ್ಯಾಪಾರ ... ಒಪ್ಪಂದ) ಇದು ಆಹಾರ ... ಸಂಬಂಧಿಸಿದ್ದು, 1986–88 ರ ... ಶೇ 10 ರಷ್ಟನ್ನು ನೀಡಬೇಕೆಂದು ತಿಳಿ...

### ವಿಶ್ವ ವ್ಯಾಪಾರಿ ವರದಿ (World Trade Report)

- 2003 ರಿಂದ ವಾರ್ಷಿಕವಾಗಿ ವಿಶ್ವ ವ್ಯಾ... ಸಂಘಟನೆಯು ಅಂತರಾಷ್ಟ್ರೀಯ ವ್ಯಾ... & ವ್ಯಾಪಾರ ನೀತಿಗೆ ಸಂಬಂಧ... ವಿಚಾರಗಳನ್ನು ಪ್ರಕಟಪಡಿಸುವುದೇ **ವ್ಯಾಪಾರ ವರದಿ.**
- 2016 ರ ವರದಿಯು ಸಣ್ಣ & ಮ... ಪ್ರಮಾಣದ ಉದ್ದಿಮೆಗಳ ಅಂತರಾಷ್ಟ್ರೀ... ವ್ಯಾಪಾರಕ್ಕೆ ಸಂಬಂಧಿಸಿದ ವಿಚಾರ... ಬೆಳಕು ಚೆಲ್ಲುತ್ತದೆ.
- 2015ರ ವರದಿಯು ವ್ಯಾಪಾರಿ ... ಒಪ್ಪಂದದ ಅನುಷ್ಠಾನದ ಅನುಕೂ... ಸವಾಲುಗಳನ್ನು ಬಿಂಬಿಸಿತು.

### 10ನೇ ಶೃಂಗಸಭೆ

- ಕೀನ್ಯಾದ ನೈರೋಬಿಯಲ್ಲಿ 2015 ಡಿಸೆಂಬರ್ 15 ರಿಂದ 19 ರ... WTO ನ 10ನೇ ಶೃಂಗಸಭೆ ಜರುಗಿ... ಈ ಸಭೆಯಲ್ಲಿ **ಅಫ್ಘಾನಿಸ್ತಾನ್ ಲೈಬೀರಿಯಾಗಳು** ಸಂಸ್ಥೆಯ ಸ... ಪಡೆದವು.
- ಅಲ್ಪ ಅಭಿವೃದ್ಧಿ ಹೊಂದಿದ ರಾಷ್ಟ್ರಗಳ... ಹತ್ತಿ & ಇತರ ಉತ್ಪನ್ನಗಳ ವ್ಯಾಪಾ... ಸಂಬಂಧಿಸಿದ ನೈರೋಬಿ ಪ್ಯಾಕೇಜ್ ... ಸಭೆಯಲ್ಲಿ ಚರ್ಚಿಸಲಾಯಿತು.
- ಈ ಸಭೆಯಲ್ಲಿ ಭಾರತದ ವಾಣಿ... ಸಚಿವರಾದ **ನಿರ್ಮಲಾ ಸೀತಾರಾಮ...** ಭಾಗವಹಿಸಿದ್ದರು.

# ಯುರೋಪಿಯನ್/ಐರೋಪ್ಯ ಒಕ್ಕೂಟ (EU-European Union)

+ ಕೇಂದ್ರ ಕಛೇರಿ :- ಬ್ರೆಜಿಲ್‌ನ ಬ್ರುಸೇಲ್ಸ್.
+ ಸ್ಥಾಪನೆ :- ನವೆಂಬರ್ 1, 1993
+ ಅಧಿಕೃತ ಭಾಷೆಗಳು:- 24
+ ಧ್ಯೇಯವಾಕ್ಯ:- United in Diversity
+ ಪ್ರಧಾನ ಅಂಗಸಂಸ್ಥೆಗಳು:- 7
+ ನೋಬೆಲ್ ಪ್ರಶಸ್ತಿ ಬಂದಿದ್ದು - 2012
+ ಇ.ಯು ದ ಸದಸ್ಯ ರಾಷ್ಟ್ರಗಳು:- 28 (ಬ್ರಿಟನ್ ಸೇರಿ)
+ ಯುರೋ ವಲಯ (ಯುರೋಜಾನ್)ದಲ್ಲಿರುವ ರಾಷ್ಟ್ರಗಳು:- 19



## ಯುರೋಪಿಯನ್ ಒಕ್ಕೂಟದ ಇತಿಹಾಸ

ಇ.ಯು ಒಂದು ಯುರೋಪ್‌ನ 28 ಸದಸ್ಯ ರಾಷ್ಟ್ರ (ಬ್ರಿಟನ್ ಸೇರಿ) ಗಳನ್ನು ಒಳಗೊಂಡ ಆರ್ಥಿಕ & ರಾಜಕೀಯ ಒಕ್ಕೂಟವಾಗಿದೆ. ಯುರೋಪಿಯನ್ ಒಕ್ಕೂಟವು ಹಂತಹಂತವಾಗಿ ಬೆಳವಣಿಗೆಯಾಗುತ್ತಾ ಸಾಗಿದ್ದು, ಜಗತ್ತಿನ ಬೃಹತ್ ಒಕ್ಕೂಟವಾಗಿ ಹೊರಹೊಮ್ಮಿದೆ.

### ಪ್ಯಾರಿಸ್ ಒಪ್ಪಂದ (1951)- ಯುರೋಪಿಯನ್ ಕಲ್ಲಿದ್ದಲು & ಉಕ್ಕು ಸಮುದಾಯ (ECSC)

+ 2ನೇ ಮಹಾಯುದ್ಧದ ನಂತರ ಯುರೋಪ್‌ನ 6 ರಾಷ್ಟ್ರಗಳು 1951 ಏಪ್ರಿಲ್ 18 ರಂದು ಪ್ಯಾರಿಸ್ ಒಪ್ಪಂದದ ಮೂಲಕ ಯುರೋಪಿಯನ್ ಕಲ್ಲಿದ್ದಲು & ಉಕ್ಕು ಸಮುದಾಯ ಎಂಬ ಹೆಸರಿನಲ್ಲಿ ಸಮುದಾಯವನ್ನು ಸ್ಥಾಪಿಸಲು ಒಪ್ಪಂದಕ್ಕೆ ಸಹಿ ಹಾಕಿದವು. ಈ ಒಪ್ಪಂದವು 1952 ಜುಲೈ 23 ರಂದು ಜಾರಿಗೆ ಬಂದಿತು.
+ ಪ್ಯಾರಿಸ್ ಒಪ್ಪಂದಕ್ಕೆ ಸಹಿ ಹಾಕಿದ ಯುರೋಪಿಯನ್ ಕಲ್ಲಿದ್ದಲು & ಉಕ್ಕು ಸಮುದಾಯದ 6 ರಾಷ್ಟ್ರಗಳೆಂದರೆ – ಬೆಲ್ಜಿಯಂ, ಫ್ರಾನ್ಸ್, ಪಶ್ಚಿಮ ಜರ್ಮನಿ, ಇಟಲಿ, ನೆದರ್ಲೆಂಡ್ & ಲುಕ್ಸಂಬರ್ಗ್.

### ರೋಮ್ ಒಪ್ಪಂದ (1957) - ಯುರೋಪಿಯನ್ ಆರ್ಥಿಕ ಸಮುದಾಯ (EEC European Economic Community):-

+ ಯುರೋಪಿಯನ್ ಕಲ್ಲಿದ್ದಲು & ಉಕ್ಕು ಸಮುದಾಯವು 1957 ಮಾರ್ಚ್ 25 ರಂದು ಇಟಲಿಯ ರೋಮ್‌ನಲ್ಲಿ ರೋಮ್ ಒಪ್ಪಂದಕ್ಕೆ ಸಹಿ ಹಾಕಲಾಯಿತು. ಈ ಒಪ್ಪಂದ ಮೂಲಕ ಯುರೋಪಿಯನ್ ಕಲ್ಲಿದ್ದಲು & ಉಕ್ಕು ಸಮುದಾಯವು ಯುರೋಪಿಯನ್ ಆರ್ಥಿಕ ಸಮುದಾಯವಾಗಿ ರೂಪುಗೊಂಡಿತು.
+ ಈ ಸಮುದಾಯವನ್ನು ಸಾಮಾನ್ಯ ಮಾರುಕಟ್ಟೆ (Common Market) ಎಂದು ಕೂಡ ಕರೆಯುತ್ತಾರೆ.

### ಮ್ಯಾಸ್ಟ್ರಿಚ್ ಒಪ್ಪಂದ (1992)ಸ - ಯುರೋಪಿಯನ್ ಒಕ್ಕೂಟ:-

+ ಯುರೋಪಿಯನ್ ಆರ್ಥಿಕ ಸಮುದಾಯವು ನೆದರ್ಲೆಂಡ್‌ನ ಮ್ಯಾಸ್ಟ್ರಿಚ್‌ನಲ್ಲಿ 1992 ಫೆಬ್ರವರಿ 7 ರಂದು ಮ್ಯಾಸ್ಟ್ರಿಚ್ ಒಪ್ಪಂದಕ್ಕೆ ಸಹಿ ಹಾಕಿತು. ಈ ಒಪ್ಪಂದವು 1993, ನವೆಂಬರ್ 1 ರಂದು ಯುರೋಪಿಯನ್ ಒಕ್ಕೂಟವಾಗಿ ಜಾರಿಗೆ ಬಂದಿತು.
+ ಯುರೋಪಿಯನ್ ಒಕ್ಕೂಟದಲ್ಲಿ 6 ರಾಷ್ಟ್ರಗಳು ಸೇರ್ಪಡೆಗೊಂಡು ಒಟ್ಟು 12 ರಾಷ್ಟ್ರಗಳಾದವು. ಸೇರ್ಪಡೆಗೊಂಡ ಹೊಸ 6 ರಾಷ್ಟ್ರಗಳೆಂದರೆ – ಡೆನ್ಮಾರ್ಕ್, ಗ್ರೀಸ್, ಐರ್ಲೆಂಡ್, ಯು.ಕೆ, ಪೋರ್ಚುಗಲ್ & ಸ್ಪೈನ್

### ಆಮ್‌ಸ್ಟರ್‌ಡ್ಯಾಮ್ (Amsterdam) ಒಪ್ಪಂದ (1997)

+ 1997 ಅಕ್ಟೋಬರ್ 2 ರಂದು ಮ್ಯಾಸ್ಟ್ರಿಚ್ ಒಪ್ಪಂದಕ್ಕೆ ಅನೇಕ ತಿದ್ದುಪಡಿಗಳನ್ನು ಸೇರಿಸಿ, ನೆದರ್ಲೆಂಡ್ ರಾಜಧಾನಿಯಾದ ಆಮ್‌ಸ್ಟರ್‌ಡ್ಯಾಮ್‌ನಲ್ಲಿ ಆಮ್‌ಸ್ಟರ್‌ಡ್ಯಾಮ್ ಒಪ್ಪಂದಕ್ಕೆ ಸಹಿ ಹಾಕಲಾಯಿತು. ಇದು ಅನೇಕ ತಿದ್ದುಪಡಿಗಳನ್ನು ಒಳಗೊಂಡಿತ್ತು.
+ 1999ರ ಜನವರಿ 1ರಲ್ಲಿ ಐರೋಪ್ಯ ಹಣಕಾಸು ಒಕ್ಕೂಟವಾಗಿ ಮಾರ್ಪಾಡು ಹೊಂದಿದ್ದು, ಯೂರೋ ಎಂಬ ಸರ್ವಸಮ್ಮತ ಏಕರೂಪ ಕರೆನ್ಸಿ ಜಾರಿಗೆ ತರಲು ಒಪ್ಪಂದ.

# ಯೂರೋಪ್ ಒಕ್ಕೂಟದಿಂದ ಹೊರ ನಡೆಯುತ್ತಿರುವ ಬ್ರಿಟನ್

## ಬ್ರಿಟನ್ ಇ.ಯುನಿಂದ ಹೊರನಡೆಯುವ ಪ್ರಕ್ರಿಯೆಯ ವಿವಿಧ ಹಂತಗಳು

### ಇ.ಯು ನಿಂದ ಹೊರ ಬರಲು ಮತದಾನ

- ಯೂರೋಪ್ ಒಕ್ಕೂಟದಿಂದ ಬ್ರಿಟನ್ ಹೊರ ನಡೆಯುವ ಸಂಬಂಧ 2016ರ ಜೂನ್23ರಂದು ಬ್ರಿಟನ್‌ನಲ್ಲಿ ಮತದಾನ ನಡೆಸಲಾಗಿತ್ತು. ಆಗ ಶೇ 51.9 ((1,74,10,742) ರಷ್ಟು ಮಂದಿ (ಪ್ರಧಾನವಾಗಿ ಇಂಗ್ಲೆಂಡ್ ಮತ್ತು ವೇಲ್ಸ್) ಇ.ಯು ಒಕ್ಕೂಟದಿಂದ ಬ್ರಿಟನ್ ಹೊರ ಬರಬೇಕೆಂದು (ಬ್ರೆಕ್ಸಿಟ್/ಪರ) ಮತ ಹಾಕಿದ್ದರೆ, ಶೇ 48.1 (1,61,41,241) ರಷ್ಟು ಮಂದಿ (ನಿರ್ದಿಷ್ಟವಾಗಿ ಸ್ಕಾಟ್‌ಲೆಂಡ್ ಮತ್ತು ಉತ್ತರ ಐರ್ಲೆಂಡ್) ಒಕ್ಕೂಟದಲ್ಲಿ ಇರಬೇಕೆಂಬ (ಬ್ರಿಮೇನ್/ಬ್ರೆಕ್ಸಿಟ್ ವಿರುದ್ಧವಾಗಿ) ಮತ ಚಲಾಯಿಸಿದ್ದರು.

### ಬ್ರೆಕ್ಸಿಟ್ ಎಂದರೇನು?

- ಐರೋಪ್ಯ ಒಕ್ಕೂಟದಿಂದ ಬ್ರಿಟನ್ ಹೊರನಡೆಯಬೇಕೇ ಎಂಬ ಬಗ್ಗೆ ನಡೆದ ಜನಾದೇಶವನ್ನು (ಬ್ರಿಟನ್ ಎಕ್ಸಿಟ್) ಸಂಕ್ಷಿಪ್ತವಾಗಿ ಬ್ರೆಕ್ಸಿಟ್ ಎಂದು ಕರೆಯಲಾಗಿದೆ. ಬ್ರೆಕ್ಸಿಟ್ ಎಂದರೆ "ಬ್ರಿಟನ್ ಹೊರ ಹೋಗಬೇಕು" ಎಂದು ಅರ್ಥ.

**ಬ್ರೆಕ್ಸಿಟ್‌ಗೆ ಕಾರಣ:-** ಬ್ರಿಟನ್ ಅರ್ಥ ವ್ಯವಸ್ಥೆಯನ್ನು ಇಯು ಕೇಂದ್ರ ಸ್ಥಾನ ಬ್ರುಸೆಲ್ಸ್ ನಿಯಂತ್ರಿಸುತ್ತಿದೆ ಎಂಬ ಆಕ್ರೋಶ.

- ಬ್ರಿಟನ್‌ಗೆ ಭಾರೀ ಪ್ರಮಾಣದ ವಲಸೆ ಮತ್ತು ಅದು ಸೃಷ್ಟಿಸಿರುವ ಸಮಸ್ಯೆಗಳು.
- ಕುಸಿಯುತ್ತಿರುವ ಆರ್ಥಿಕ ಭದ್ರತೆ.
- ಬ್ರಿಟನ್‌ನ ಅಂದಿನ ಪ್ರಧಾನಿ ಡೇವಿಡ್ ಕ್ಯಾಮರಾನ್ ಬ್ರಿಟನ್ ಯೂರೋಪಿಯನ್ ಒಕ್ಕೂಟದಲ್ಲೇ ಉಳಿಯಬೇಕೆಂದೂ, ಕನ್ಸರ್ವೇಟಿವ್ ಪಕ್ಷದ ಇತರ ಸದಸ್ಯರು ಒಳಗೊಂಡಂತೆ ಸ್ವತಃ **ತೆರೇಸಾ ಮೇ** ಅವರು ಒಕ್ಕೂಟದಿಂದ ಹೊರ ಬರಬೇಕೆಂದೂ ಆಸೆ ವ್ಯಕ್ತಪಡಿಸಿದ್ದರು. ಈ ಹಿನ್ನೆಲೆಯಲ್ಲಿ ಅಂದಿನ ಬ್ರಿಟನ್‌ನ ಪ್ರಧಾನಿಯಾಗಿದ್ದ ಡೇವಿಡ್ ಕ್ಯಾಮರಾನ್ ಅವರು ರಾಜೀನಾಮೆ ನೀಡಬೇಕಾಗಿ ಬಂತು. ಬ್ರಿಟನ್ನಾದ್ಯಂತ ಮತದಾನವನ್ನು ನಡೆಸಲಾಯಿತು.




## ಬ್ರಿಟನ್ ಒಕ್ಕೂಟದಿಂದ ಹೊರಬರಬೇಕೆಂಬ ನಿಲುವಿನ ಪರಿಣಾಮವೇನು?

- ಯುರೋಪ್ ಒಕ್ಕೂಟದಿಂದ ಹೊರ ಬರುವುದರಿಂದ ಶ್ರೀಮಂತ ರಾಷ್ಟ್ರವಾದ ಬ್ರಿಟನ್ ಒಕ್ಕೂಟದ ನೀತಿಯಿಂದಾಗಿ ಸದಸ್ಯರಾಷ್ಟ್ರಗಳ ನಡುವೆ ಜನರು ನಿರುದ್ಯೋಗ ಸಮಸ್ಯೆ ಎದುರಿಸಬೇಕಾಗಿತ್ತು. ಇದೀಗ ಒಕ್ಕೂಟದಿಂದ ಹೊರ ಬಂದಿರುವ ಕಾರಣ ಬ್ರಿಟನ್‌ಗೆ ಆರ್ಥಿಕ ಹೊರೆ ತಗ್ಗಲಿದೆ. ಜತೆಗೆ ವಲಸೆ ಹಾಗೂ ನಿರುದ್ಯೋಗ ಸಮಸ್ಯೆಗೆ ಶಾಶ್ವತ ಪರಿಹಾರ ಸಿಗಲಿದೆ. **ಒಕ್ಕೂಟದ ಪ್ರಸ್ತುತ ಸದಸ್ಯ ರಾಷ್ಟ್ರಗಳ ಸಂಖ್ಯೆ: 28. ಬ್ರಿಟನ್ ಹೊರಹೋದರೆ ಒಕ್ಕೂಟದ ಸದಸ್ಯರಾಷ್ಟ್ರಗಳ ಸಂಖ್ಯೆ 27 ಆಗುತ್ತದೆ.**

**ಕೆಮರಾನ್ ತಲೆದಂಡ:-** ಬ್ರಿಟನ್ ಐರೋಪ್ಯ ಒಕ್ಕೂಟದಲ್ಲಿರಬೇಕು ಎಂಬ ಪರ ಅಭಿಯಾನ ನಡೆಸಿದ ಪ್ರಧಾನಿ ಕ್ಯಾಮರಾನ್ ಅವರ ತಲೆದಂಡಕ್ಕೆ ಒತ್ತಾಯ ಹೆಚ್ಚಾಗಿತ್ತು.

**ತೆರೇಸಾ ಮೇ ಅವರು ಪ್ರಧಾನಿಯಾಗಿ ಆಯ್ಕೆ:-** ಕನ್ಸರ್ವೇಟಿವ್ ಪಕ್ಷದ 76 ನೇ ಪ್ರಧಾನಿಯಾಗಿ **ತೆರೇಸಾ ಮೇ** ಅವರು 2016ರ ಜುಲೈ 13ರಂದು ಅಧಿಕಾರ ವಹಿಸಿಕೊಂಡರು. ಇವರು ಬ್ರಿಟನ್ನಿನ **2ನೇ ಮಹಿಳಾ ಪ್ರಧಾನಿಯಾಗಿದ್ದಾರೆ.** (ಮೊದಲನೇ ಮಹಿಳಾ ಪ್ರಧಾನಿ **ಮಾರ್ಗರೇಟ್ ಥ್ಯಾಚರ್**)

**ಬ್ರಿಟನ್ ಒಕ್ಕೂಟದಲ್ಲೇ ಉಳಿದಿದ್ದರೆ, ಲಾಭ ಏನಾಗುತ್ತಿತ್ತು.**

- ಸದಸ್ಯ ರಾಷ್ಟ್ರಗಳ ಜನರು ಯಾವುದೇ ಸಂದರ್ಭದಲ್ಲೂ ಎಲ್ಲಿಗೆ ಬೇಕಾದರೂ ವಲಸೆ ಹೋಗಬಹುದು.
- ಈ ನೀತಿ ನಿರುದ್ಯೋಗ ಸಮಸ್ಯೆಗೆ ಪರಿಹಾರ ಕಲ್ಪಿಸಿತು.
- ರಾಷ್ಟ್ರೀಯ ವಿಕೋಪ, ಯುದ್ಧ ಸಂದರ್ಭಗಳಲ್ಲೂ ಸದಸ್ಯ ರಾಷ್ಟ್ರಗಳ ನಡುವೆ ಒಗ್ಗಟ್ಟು ಮೂಡಿತ್ತು.

**ಒಕ್ಕೂಟದ ಅಸ್ತಿತ್ವಕ್ಕೆ ಸವಾಲು:-**

✦ ಬ್ರಿಟನ್ ಒಕ್ಕೂಟದಿಂದ ಹೊರ ನಡೆದ ಬೆನ್ನಲ್ಲೇ ಒಕ್ಕೂಟದ ಇತರ ಸದಸ್ಯ ರಾಷ್ಟ್ರಗಳೂ ಬ್ರಿಟನ್ ಹಾದಿ ತುಳಿಯುವ ಆತಂಕ ಎದುರಾಗಲಿದೆ. **ಫ್ರಾನ್ಸ್, ನೆದರ್‌ಲೆಂಡ್, ಡೆನ್ಮಾರ್ಕ್, ಸ್ವೀಡನ್**‌ಗಳಲ್ಲಿ ಒಕ್ಕೂಟ ವಿರೋಧಿಗಳು ಜನಗಣನೆಗೆ ಅಗ್ರಹಿಸಿದ್ದಾರೆ.

**ಮತದಾನದ ನಂತರ ಮುಂದಿನ ಪ್ರಕ್ರಿಯೆ:-**

✦ ಬ್ರಿಟನ್ ದೇಶವು ಯುರೋಪಿಯನ್ ಒಕ್ಕೂಟದಿಂದ ಹೊರಬರಬೇಕೆಂಬ ಪರವಾಗಿ ಮತದಾನವಾದರೂ, ನಿಯಮಗಳ ಪ್ರಕಾರ ಐರೋಪ್ಯ ಒಕ್ಕೂಟವನ್ನು ತೊರೆಯುವುದಕ್ಕಾಗಿ ಪತ್ರ ಬರೆಯಬೇಕಾಗುತ್ತದೆ. ಮತ್ತು ಲಿಸ್ಬನ್ ಒಪ್ಪಂದದ ಅನುಚ್ಛೇದ-50 ರ ಅನ್ವಯ ಸಹಿ ಹಾಕಿದ ಪತ್ರವನ್ನು ಯುರೋಪ್ ಯೂನಿಯನ್ (ಇ.ಯು) ಗೆ ಸಲ್ಲಿಸಬೇಕಾಗುತ್ತದೆ.

**ಲಿಸ್ಬನ್ ಒಪ್ಪಂದ ಅನುಚ್ಛೇದ-50 ಕ್ಕೆ ಸಹಿ:-**

✦ ಬ್ರಿಟನ್‌ನ ಸಂಸತ್‌ನಲ್ಲಿ ಅಂಗೀಕಾರ ಪಡೆದು **ಲಿಸ್ಬನ್ ಒಪ್ಪಂದದ ಅನುಚ್ಛೇದ-50ಕ್ಕೆ** ಬ್ರಿಟನ್‌ನ ಪ್ರಧಾನಿ ತೆರೆಸಾ ಮೇ ಅವರು ಅಂಕಿತ ಹಾಕುವ ಮೂಲಕ **ಯುರೋಪ್ ಯೂನಿಯನ್‌ನ ಅಧ್ಯಕ್ಷ ಡೊನಾಲ್ಡ್ ಟಸ್ಕ್** ಅವರಿಗೆ ಹಸ್ತಾಂತರಿಸಿದರು. ಟಸ್ಕ್ ಅವರು ಬ್ರಿಟನ್‌ನಿಂದ ಪತ್ರ ತಲುಪಿದ ನಂತರ ಬ್ರಿಟನ್ ನಿರ್ಗಮನದ ಕುರಿತ ಸಮಾಲೋಚನೆಯ ಕರಡು ಮಾರ್ಗಸೂಚಿಯನ್ನು ಐರೋಪ್ಯ ಒಕ್ಕೂಟದ ಇತರೆ 27 ಸದಸ್ಯ ರಾಷ್ಟ್ರಗಳಿಗೆ ರವಾನಿಸಲಿದ್ದಾರೆ.

**ಲಿಸ್ಬನ್ ಒಪ್ಪಂದದ ಅನುಚ್ಛೇದ-50 ಏನು ಹೇಳುತ್ತದೆ?**

✦ ಬ್ರಿಟಿಷ್ ಸರ್ಕಾರವು 2007ರಲ್ಲಿ ನಡೆದ ಲಿಸ್ಬನ್ ಒಪ್ಪಂದದ ಅನುಚ್ಛೇದ-50ನ್ನು ಜಾರಿಗೊಳಿಸುವ ಮೂಲಕ ತಾನು ಯೂರೋಪ್ ಒಕ್ಕೂಟದಿಂದ ಹೊರ ಬರುವ ನಿರ್ಧಾರವನ್ನು ಯೂರೋಪಿಯನ್ ಕೌನ್ಸಿಲ್‌ಗೆ ಅಧಿಕೃತವಾಗಿ ತಿಳಿಸಬಹುದು. ಈ ಅನುಚ್ಛೇದವನ್ನು ಜಾರಿಗೊಳಿಸಿದ 2 ವರ್ಷಗಳ ನಂತರ ಬ್ರಿಟನ್ ಒಕ್ಕೂಟದಿಂದ ಪ್ರತ್ಯೇಕಗೊಳ್ಳುತ್ತದೆ. ಮುಂದಿನ ಮಾತುಕತೆಗಾಗಿ ಈ 2 ವರ್ಷಗಳ ಗಡುವನ್ನು & ಉಳಿದ 27 ರಾಷ್ಟ್ರಗಳು ವಿಸ್ತರಿಸದಿದ್ದಲ್ಲಿ ಬ್ರಿಟನ್ 2019ರ ಮಾರ್ಚ್ 29 ರಂದು ಒಕ್ಕೂಟದಿಂದ ಹೊರ ನಡೆಯಲಿದೆ.

**ಮಹತ್ವದ ರದ್ದತಿ ಮಸೂದೆ (Great Repeal Bill)ಗೆ ಕೂಡ ಅಂಗೀಕಾರ:-** ಮಹತ್ವದ ರದ್ದತಿ ಮಸೂದೆ ಎಂದು ಕರೆಯಲ್ಪಡುವ ಕರಡನ್ನು ಬ್ರಿಟನ್ನಿನ ಸಂಸತ್‌ನಲ್ಲಿ ಬಿಡುಗಡೆಗೊಳಿಸಲಾಯಿತು. ಈ ಕರಡಿನಲ್ಲಿ ಐರೋಪ್ಯ ಒಕ್ಕೂಟದ ಕಾನೂನುಗಳು ಬ್ರಿಟನ್ ಸಂವಿಧಾನದಿಂದ ಕೈಬಿಡುವ ಪ್ರಕ್ರಿಯೆಯನ್ನು ಸೂಚಿಸಲಾಗಿದೆ. ಈ ಪ್ರಕ್ರಿಯೆ ಅನ್ವಯ ಬ್ರಿಟನ್ ಯೂರೋಪಿಯನ್ ... ಅಧಿಕಾರ ವ್ಯಾಪ್ತಿಯಿಂದ ಹೊರ ಬರಲಿದೆ...

**2019 ಮಾರ್ಚ್ 29 ರಂದು ಹೊರಬರಲಿರುವ ಬ್ರಿಟನ್:-** ಲಿಸ್ಬನ್ ... ಅನುಚ್ಛೇದ-50 ಕ್ಕೆ ಸಹಿ ಹಾಕಿ ಯುರೋ... ಕೌನ್ಸಿಲ್‌ನ ಮುಖ್ಯಸ್ಥರಿಗೆ ಹಸ್ತಾಂತರ... ಪತ್ರವನ್ನು ಬ್ರಿಟನ್ ಹಸ್ತಾಂತರಿಸಿದ ನಂತರ 2 ವರ್ಷಗಳ ಕಾಲ ಈ ಸಂಬಂಧ ಯುರೋ... ಒಕ್ಕೂಟದ ಉಳಿದ 27 ಸದಸ್ಯ ರಾಷ್ಟ್ರ... ಸಮಾಲೋಚಿಸಿ, ನಂತರ ಎಲ್ಲಾ ಪ್ರ... ಪೂರ್ಣಗೊಂಡು 2019 ಮಾರ್ಚ್ 29 ... ಅಧಿಕೃತವಾಗಿ ಇ.ಯು ನಿಂದ ಹೊರಬೀಳ...

**ಯೂರೋಪ್ ಒಕ್ಕೂಟದಿಂದ ಹೊರಬಂದ... ಮುಂದಿರುವ ಸವಾಲುಗಳೇನು?**

- ಬ್ರಿಟನ್‌ನಲ್ಲಿ 3 ಮಿಲಿಯನ್ ಯೂರೋಪಿಯನ್ನರು ಮತ್ತು ಯೂರ... ನಾನಾ ದೇಶಗಳಲ್ಲಿ 1 ಮಿಲಿಯನ್ ... ಬ್ರಿಟನ್ನರು ವಾಸಿಸುತ್ತಿದ್ದರು. ಉಳಿದ 2 ... ಅನಿವಾಸಿಗಳನ್ನು ಕಾಪಾಡುವುದು ಬ್ರಿಟನ್ ... ಯೂರೋಪ್ ಒಕ್ಕೂಟಗಳ ಪ್ರಮುಖ ಹೊಣೆ...
- ಬ್ರಿಟನ್‌ನ ಈ ನಿರ್ಧಾರದಿಂದ ಉತ್ತರ ಐರ್... ಆತಂಕದ ಸನ್ನಿವೇಶ ಉದ್ಭವವಾಗಿದ್ದು ... ನಿಯಂತ್ರಿಸಬೇಕಾಗಿದೆ.
- ಲಿಸ್ಬನ್ ಒಪ್ಪಂದದ ಪ್ರಕಾರ 2 ವರ್ಷಗಳ ... ಯೂರೋಪ್ ಇತರೆ ರಾಷ್ಟ್ರಗಳೊಡನೆ ವ್ಯಾಪಾರ ಒಪ್ಪಂದವನ್ನು ರೂಪಿಸಿಕೊಳ್ಳ... ಯೂರೋಪ್‌ನ ಏಕ ಮಾರುಕಟ್ಟೆಯನ್ನು ತ... ಬ್ರಿಟನ್‌ನ ಈ ನಿರ್ಧಾರದಿಂದ ವ್ಯಾ... ಕಂಗಾಲಾಗಿದ್ದಾರೆ. 500 ಮಿಲಿಯನ್‌ಗ... ಉದ್ಯೋಗಿಗಳ ಮೇಲೆ ಈ ನಿರ್ಧಾರ ... ಪರಿಣಾಮ ಬೀರಲಿದೆ.

**ಸ್ಕಾಟ್‌ಲ್ಯಾಂಡ್ ಸ್ವಾತಂತ್ರ್ಯ ಹೊಂದುವ ಪ್ರಯ...**

✦ ಐರೋಪ್ಯ ಒಕ್ಕೂಟದಿಂದ ಹೊರ ಹೋ... ಬ್ರಿಟನ್‌ನಿಂದ ಸ್ಕಾಟ್‌ಲ್ಯಾಂಡ್ ಹೊರ ... ಗಂಭೀರ ಚಿಂತನೆ ನಡೆಸಿದೆ. ಈ ... ಜನಮತಗಣನೆ ನಡೆಸಲು ಸಂಸತ್ತಿನ ಒಪ್ಪಿಗೆ ... **ಸ್ಕಾಟ್‌ಲ್ಯಾಂಡ್ ಪ್ರಧಾನಿ ನಿಕೋಲಾ ಸ್ಟರ್ಜನ್** ... ಪ್ರಯತ್ನಿಸುತ್ತಿದ್ದಾರೆ. ಬ್ರಿಟನ್ ಐರೋಪ್ಯ ಒಕ್ಕ... ನಿರ್ಗಮಿಸಿದ ನಂತರ ಸ್ಕಾಟ್‌ಲ್ಯಾಂಡ್ ... ಒಕ್ಕೂಟದ ಜೊತೆ ಸಂಬಂಧ ಹೊಂದುವು... ಉದ್ದೇಶವೆಂದು ಸ್ಕಾಟ್‌ಲ್ಯಾಂಡ್ ಪ್ರಧಾನಿ ... ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.




# G-7 ರಾಷ್ಟ್ರಗಳ ಸಂಘಟನೆ

✦ ರಾಷ್ಟ್ರಗಳು:- ಯು.ಕೆ, ಕೆನಡಾ, ಫ್ರಾನ್ಸ್, ಜರ್ಮನಿ, ಇಟಲಿ, ಜಪಾನ್, ಅಮೆರಿಕ

✦ ಇದು ಒಂದು ಪ್ರಜಾಪ್ರಭುತ್ವ ವ್ಯವಸ್ಥೆ ಹೊಂದಿರುವ ಹೆಚ್ಚು ಕೈಗಾರಿಕಾ ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳ ಸಂಘಟನೆಯಾಗಿದೆ.

✦ ವಿಶ್ವದ ಒಟ್ಟು ಜನಸಂಖ್ಯೆಯಲ್ಲಿ ಶೇ 14, ಒಟ್ಟು ಸಂಪತ್ತಿನಲ್ಲಿ ಶೇ 60, **ವಿಶ್ವದ ಒಟ್ಟು ಜಿ.ಡಿ.ಪಿಯಲ್ಲಿ ಶೇ 60** ನ್ನು ಈ ರಾಷ್ಟ್ರಗಳು ಹೊಂದಿವೆ.

✦ ವಿಶ್ವದಲ್ಲಿ ಮೊದಲ 7 ಸ್ಥಾನ ಪಡೆದ ಹೆಚ್ಚು ಜಿ.ಡಿ.ಪಿ ಹೊಂದಿದ ರಾಷ್ಟ್ರಗಳು, ತಲಾವಾರು ಸಂಪನ್ಮೂಲ ಹೊಂದಿದ ಮೊದಲ 15 ಸ್ಥಾನಗಳಲ್ಲಿ 7 ಸ್ಥಾನಗಳನ್ನು, ಹೆಚ್ಚು ರಫ್ತು ಮಾಡುತ್ತಿರುವ ಮೊದಲ 12 ರಾಷ್ಟ್ರಗಳಲ್ಲಿ 7 ಸ್ಥಾನಗಳನ್ನು, ಹೆಚ್ಚು ಚಿನ್ನದ ನಿಕ್ಷೇಪ ಹೊಂದಿರುವ ಮೊದಲ 10 ರಾಷ್ಟ್ರಗಳಲ್ಲಿ 6 ಸ್ಥಾನಗಳನ್ನು, ಹೆಚ್ಚು ವಿದೇಶಿ ವಿನಿಮಯ ಹೊಂದಿರುವ ಮೊದಲ 30 ರಾಷ್ಟ್ರಗಳಲ್ಲಿ 7 ಸ್ಥಾನಗಳನ್ನು, ಹೆಚ್ಚು ಅಣ್ವಸ್ತ್ರಗಳನ್ನು ಹೊಂದಿರುವ ಮೊದಲ 9 ರಾಷ್ಟ್ರಗಳಲ್ಲಿ 4 ಸ್ಥಾನಗಳನ್ನು, ಅಣ್ವಸ್ತ್ರ ಉತ್ಪಾದಕ 9 ರಾಷ್ಟ್ರಗಳಲ್ಲಿ 7 ಸ್ಥಾನಗಳನ್ನು, ಹೆಚ್ಚು ಮಾನವಾಭಿವೃದ್ಧಿ ಹೊಂದಿದ ಮೊದಲ 10 ರಾಷ್ಟ್ರಗಳಲ್ಲಿ 4 ಸ್ಥಾನಗಳನ್ನು ಈ ಸಂಘಟನೆಯ ರಾಷ್ಟ್ರಗಳು ಪಡೆದಿವೆ.

## ಜಿ-8 ರಾಷ್ಟ್ರಗಳ ಉಗಮ

✦ ಫ್ರಾನ್ಸ್‌ನಲ್ಲಿ 1975 ರಲ್ಲಿ ನಡೆದ 6 ರಾಷ್ಟ್ರಗಳಾದ ಫ್ರಾನ್ಸ್, ಜರ್ಮನಿ, ಜಪಾನ್, ಇಟಲಿ, ಯು.ಕೆ & ಅಮೆರಿಕ ರಾಷ್ಟ್ರಗಳ ಸಭೆಯನ್ನು ಜಿ–6 ಎಂತಲೂ, 1976 ರಲ್ಲಿ ಕೆನಡಾ ಸೇರ್ಪಡೆಯಿಂದ ಜಿ–7 ಎಂತಲೂ, 1997 ರಲ್ಲಿ ರಷ್ಯಾ ಸೇರ್ಪಡೆಯಿಂದ ಜಿ–8 ಆಗಿ ಮಾರ್ಪಟ್ಟಿತು.

## ಜಿ-8 ರಾಷ್ಟ್ರಗಳ ಒಕ್ಕೂಟವು ಜಿ-7 ರಾಷ್ಟ್ರಗಳ ಒಕ್ಕೂಟವಾಗಿ ಬದಲಾವಣೆ

✦ 2005 ರಲ್ಲಿ 5 ಉದಯೋನ್ಮುಖ ಮಾರುಕಟ್ಟೆ ವ್ಯವಸ್ಥೆ ಹೊಂದಿರುವ ರಾಷ್ಟ್ರಗಳಾದ ಬ್ರೆಜಿಲ್, ಚೀನಾ, ಭಾರತ, ಮೆಕ್ಸಿಕೋ & ದ. ಆಫ್ರಿಕಾ ಜಿ–8 ರ ಸಭೆಯಲ್ಲಿ ಭಾಗವಹಿಸಿದ್ದರಿಂದ **ಜಿ–8 + 5 ರಾಷ್ಟ್ರಗಳ ಸಭೆ** ಎಂದೇ ಕರೆಯಲಾಗಿದೆ.

✦ 2014 ಮಾರ್ಚ್‌ನಲ್ಲಿ ಕ್ರಿಮಿಯಾ ಸಮಸ್ಯೆಯಿಂದ ರಷ್ಯಾ ಒಕ್ಕೂಟದಿಂದ ಹೊರಬಂದ ನಂತರ ಜಿ–7 ಆಗಿ ಉಳಿದಿದೆ.

✦ **ರಷ್ಯಾಕ್ಕೆ ಮತ್ತೆ ಅವಕಾಶ ನೀಡಲಿಲ್ಲ:-** 43 ನೇ ಸಭೆಯಲ್ಲಿ ಪಾಲ್ಗೊಳ್ಳಲು ರಷ್ಯಾಕ್ಕೆ ಅವಕಾಶ ನೀಡಲಿಲ್ಲ. 2014ರಲ್ಲಿ ಉಕ್ರೇನ್‌ನ ಕ್ರಿಮಿಯಾವನ್ನು ಸ್ವಾಧೀನ ಪಡಿಸಿಕೊಂಡ ನಂತರ ಜಿ–8 ರಾಷ್ಟ್ರಗಳ ಒಕ್ಕೂಟದಿಂದ ರಷ್ಯಾವನ್ನು ತೆಗೆದು ಹಾಕಿ ಜಿ–7 ರಾಷ್ಟ್ರಗಳ ಒಕ್ಕೂಟವಾಯಿತು. ಆದರೆ ಮತ್ತೆ ಈ ಒಕ್ಕೂಟಕ್ಕೆ ರಷ್ಯಾವನ್ನು ಸೇರಿಸಿಕೊಂಡಿಲ್ಲ.

✦ **ಇತ್ತೀಚಿನ & 43 ನೇ ಸಮ್ಮೇಳನ:-** 2017ರ ಮೇ 26 & 27ರಂದು 2 ದಿನಗಳ ಕಾಲ ಇಟಲಿಯ ಸ್ವಾಯತ್ತ ಪ್ರಾಂತ್ಯ ಸಿಸಿಲಿಯಲ್ಲಿ 43ನೇ ಜಿ–7 ರಾಷ್ಟ್ರಗಳ ಶೃಂಗಸಭೆಯು ಜರುಗಿತು. ಈ ಸಭೆಯಲ್ಲಿ ಜಿ–7 ರಾಷ್ಟ್ರಗಳ ಮುಖಂಡರುಗಳು ಭಾಗವಹಿಸಿ ಜಾಗತಿಕ ವಿಚಾರಗಳಿಗೆ ಸಂಬಂಧಿಸಿದಂತೆ ಚರ್ಚೆ ನಡೆಸಿದರು. ವಿಶೇಷತೆಯೆಂದರೆ ಬ್ರಿಟನ್‌ನ ಪ್ರಧಾನಿ ಥೆರೆಸಾ ಮೇ, ಫ್ರಾನ್ಸ್ ಅಧ್ಯಕ್ಷ ಮ್ಯಾಕ್ರಾನ್ ಮತ್ತು ಅಮೇರಿಕಾ ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಅವರು ಭಾಗವಹಿಸಿದ ಮೊದಲ ಅಂತರಾಷ್ಟ್ರೀಯ ಮಟ್ಟದ ಸಭೆಯಾಗಿದೆ. ಮ್ಯಾಂಚೆಸ್ಟರ್ ಧಾಳಿಯ ಕಾರಣ ಶೃಂಗಸಭೆಗೆ ಅತಿ ಹೆಚ್ಚಿನ ಭದ್ರತೆಯನ್ನು ಒದಗಿಸಲಾಯಿತು.

G7 2017 ITALIA

## ಜಿ-7 ರಾಷ್ಟ್ರಗಳ ಸಭೆಯಲ್ಲಿನ ಚರ್ಚಿತ ವಿಷಯಗಳು:-

✦ ಜಿ–7 ರಾಷ್ಟ್ರಗಳ ಸಭೆಯಲ್ಲಿ ವ್ಯಾಪಾರ ಹಾಗೂ ಹವಾಮಾನ ಬದಲಾವಣೆಗೆ ಸಂಬಂಧಿಸಿದ ಚರ್ಚೆಗಳು ಜರುಗಿದವು.

✦ ಈ ಶೃಂಗಸಭೆಯಲ್ಲಿ ಪ್ಯಾರಿಸ್ ಹವಾಮಾನ ಒಪ್ಪಂದದ ಅನುಷ್ಠಾನದ ಬಗ್ಗೆಯೂ ಕೂಡ ಚರ್ಚೆಯಾಗಿದ್ದು, ಈ ಒಪ್ಪಂದವನ್ನು ಅಮೆರಿಕವು ಒಪ್ಪಿಕೊಳ್ಳುವಂತೆ ಸದಸ್ಯ ರಾಷ್ಟ್ರಗಳಿಂದ ಒತ್ತಾಯಿಸಲಾಯಿತು.

✦ ಜಾಗತಿಕ ಭಯೋತ್ಪಾದನೆ, ಸಿರಿಯಾ ಅಂತರ್ಯುದ್ಧಕ್ಕೆ, ಉತ್ತರ ಕೊರಿಯಾ ಬೆದರಿಕೆ ಮತ್ತು ಜಾಗತಿಕ ಆರ್ಥಿಕತೆ ವಿಷಯಗಳು ಶೃಂಗಸಭೆಯಲ್ಲಿ ಪ್ರಮುಖ ಚರ್ಚಿತ ವಿಷಯಗಳಾಗಿದ್ದವು.

✦ ಜಿ–7 ರ 42 ನೇ ಸಭೆಯು 2016 ಮೇ 26 & 27 ರಂದು ಜಪಾನ್‌ನಲ್ಲಿ ನಡೆದಿತ್ತು.

✦ **ಮುಂದಿನ ಸಭೆ:– ಜಿ–7 ರಾಷ್ಟ್ರಗಳ 44 ನೇ ಸಭೆ ಕೆನಡಾದಲ್ಲಿ 2018 ಕ್ಕೆ ಜರುಗಲಿದೆ.**

## G-4 ರಾಷ್ಟ್ರಗಳ ಸಂಘಟನೆ




ರಾಷ್ಟ್ರಗಳು:–ಬ್ರೆಜಿಲ್, ಜರ್ಮನಿ, ಭಾರತ, ಜಪಾನ್

ಉದ್ದೇಶ :– ವಿಶ್ವಸಂಸ್ಥೆಯ ಭದ್ರತಾ ಮಂಡಳಿ ಯಲ್ಲಿ ಖಾಯಂ ಸದಸ್ಯತ್ವಕ್ಕಾಗಿ ಮುಂಚೂಣಿಯಲ್ಲಿರುವ ರಾಷ್ಟ್ರಗಳು –

**ವಿಶ್ವದ ಒಟ್ಟು ಜನಸಂಖ್ಯೆಯಲ್ಲಿ ಜಿ-4 ರಾಷ್ಟ್ರಗಳು**

| ರಾಷ್ಟ್ರಗಳು | ವಿಶ್ವದ ಒಟ್ಟು ಜನಸಂಖ್ಯೆಯಲ್ಲಿ ಸ್ಥಾನ | ಜಿ.ಡಿ.ಪಿ (ಪಿ.ಪಿ.ಪಿ) ಸ್ಥಾನ |
|---|---|---|
| ಬ್ರೆಜಿಲ್ | 5 (2.8%) | 7 |
| ಜರ್ಮನಿ | 17 (1.1%) | 5 |
| ಭಾರತ | 2 (17.7%) | 3 |
| ಜಪಾನ್ | 10 (1.7%) | 4 |

ವಿಟೋ ಅಧಿಕಾರವನ್ನು ಹೊಂದಿರುವ ರಾಷ್ಟ್ರಗಳಾದ **ಫ್ರಾನ್ಸ್, ರಷ್ಯಾ, ಅಮೆರಿಕ, ಚೀನಾ & ಇಂಗ್ಲೆಂಡ್** ರಾಷ್ಟ್ರಗಳಿಗೆ ಹೋಲಿಸಿದರೆ, ಈ ಜಿ–4 ರಾಷ್ಟ್ರಗಳು ಜಾಗತಿಕ ಆರ್ಥಿಕತೆಯಲ್ಲಿ ಹೆಚ್ಚು ಪ್ರಭಾವ ಬೀರುತ್ತಿರುವುದರಿಂದ ಖಾಯಂ ಸದಸ್ಯತ್ವಕ್ಕಾಗಿ 2011 ಫೆಬ್ರವರಿ 12 ರಂದು ಜಂಟಿ ಹೇಳಿಕೆಯನ್ನು ನೀಡಿದ್ದು, 2015 ಸೆಪ್ಟೆಂಬರ್ 26 ರಂದು ನರೇಂದ್ರ ಮೋದಿ ಅವರು ಜಿ–4 ರಾಷ್ಟ್ರಗಳ ನಾಯಕರ ಸಭೆಯನ್ನು ನಡೆಸಿದ್ದಾರೆ.

## ವಿಶ್ವ ರಾಷ್ಟ್ರಗಳ ಕೈಗಾರಿಕಾ ಅಭಿವೃದ್ಧಿ ಸಂಘಟನೆ (UNIDO - United Nations Industrial Development Organisation)




✦ ವಿಶ್ವ ರಾಷ್ಟ್ರಗಳ ಅಭಿವೃದ್ಧಿ ಗುಂಪಿನ ಸದಸ್ಯ ಸಂಘಟನೆಯಾಗಿರುವ ಇದು 1966 ರ ವಿಶ್ವ ಅಭಿವೃದ್ಧಿ ಕಾರ್ಯಕ್ರಮದ ಅಂಗವಾಗಿ ಆಸ್ಟ್ರಿಯಾದ ವಿಯೆನ್ನಾದಲ್ಲಿ ಕೇಂದ್ರ ಕಛೇರಿಯನ್ನು ಹೊಂದಿದ್ದು, 1966 ರಲ್ಲಿ ಸ್ಥಾಪನೆಗೊಂಡಿತು.

✦ 1985 ರಲ್ಲಿ ವಿಶ್ವಸಂಸ್ಥೆಯ ಸಹ ಅಂಗಸಂಸ್ಥೆಯಾಗಿ ಮಾರ್ಪಾಟು ಹೊಂದಿತ್ತು. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಕೈಗಾರಿಕಾಭಿವೃದ್ಧಿಗೆ ಉತ್ತೇಜನ ನೀಡುವುದು, ಅಂತರಾಷ್ಟ್ರೀಯ ಕೈಗಾರಿಕಾ ಸಹಕಾರವನ್ನು ಬೆಳೆಸುವ ಮುಖ್ಯ ಉದ್ದೇಶ ಹೊಂದಿದ್ದು, ಸಹಸ್ರಾಬ್ದ ಅಭಿವೃದ್ಧಿ ಗುರಿಗಳು & ಸುಸ್ಥಿರ ಅಭಿವೃದ್ಧಿ ಗುರಿಗಳನ್ನು ಅನುಷ್ಠಾನಕ್ಕೆ ತರುವ ಜವಾಬ್ದಾರಿಯನ್ನು ಹೊಂದಿದೆ.

✦ ಭಾರತದ ನವದೆಹಲಿಯಲ್ಲಿ ಈ ಸಂಸ್ಥೆಯ ಸಹ ಕಛೇರಿಯನ್ನು ಹೊಂದಿದ್ದು, ಕೈಗಾರಿಕಾ ನೀತಿ & ಉತ್ತೇಜನಾ ಇಲಾಖೆ ಹಾಗೂ ವಾಣಿಜ್ಯ & ಕೈಗಾರಿಕಾ ಸಚಿವಾಲಯದ ಅಧೀನಕ್ಕೆ ಒಳಪಟ್ಟಿದೆ.

✦ ವ್ಯಾಪಾರ & ಸಾಮರ್ಥ್ಯಾಭಿವೃದ್ಧಿ, ಸಣ್ಣ & ಸೂಕ್ಷ್ಮ ಉದ್ದಿಮೆಗಳ ಉತ್ಪಾದಕತೆ ವೃದ್ಧಿಸುವುದು. ಪೈಪೋಟಿಯುಕ್ತ ಕೈಗಾರಿಕಾಭಿವೃದ್ಧಿಗೆ ಅಗತ್ಯವಾದ ಜ್ಞಾನ, ಮಾಹಿತಿ, ಕೌಶಲ್ಯ, ತಂತ್ರಜ್ಞಾನ ಬೆಳೆಸುವುದು.

✦ ಪರಿಸರ ಸುಸ್ಥಿರತೆ, ಅಂತರ್ಗತ ಜಾಗತೀಕರಣ, ಬಡತನ ನಿಯಂತ್ರಣದ ಮೂಲಕ ಜಾಗತಿಕವಾಗಿ ಕೈಗಾರಿಕಾ ಕ್ಷೇತ್ರದ ಅಭಿವೃದ್ಧಿ ಇದರ ಮುಖ್ಯ ಗುರಿಯಾಗಿದೆ.

## ರಾಷ್ಟ್ರೀಯ ಭದ್ರತಾ ಪತ್ರಗಳ ವ್ಯಾಪಾರಿ ಸಂಘಟನೆಯ ಸ್ವಯಂ ಚಾಲಿತ ಬೆಲೆ (NASDAQ-National Association of Securities Dealers automatted Quotations)

ಅಮೆರಿಕದ ನ್ಯೂಯಾರ್ಕ್ ನಗರದಲ್ಲಿರುವ ಷೇರು ವಿನಿಮಯ ಕೇಂದ್ರವಾಗಿದ್ದು, ನ್ಯಾಷನಲ್ ಅಸೋಸಿಯೇಷನ್ ಆಫ್ ಸೆಕ್ಯುರಿಟೀಸ್ ಡೀಲರ್ಸ್ ಒಡೆತನದಲ್ಲಿ ಕಾರ್ಯ ನಿರ್ವಹಣೆ ಮಾಡುತ್ತಿದ್ದು, 1971 ಫೆಬ್ರವರಿ 8 ರಂದು ಸ್ಥಾಪನೆಯಾದ ಅಮೆರಿಕದ ಬಹು ರಾಷ್ಟ್ರೀಯ ಹಣಕಾಸು ಸೇವಾ ನಿಗಮವಾಗಿದೆ. ವ್ಯವಹಾರ ಭದ್ರತಾ ಪತ್ರಗಳ ಬೆಲೆಗಳನ್ನು ಕಂಪ್ಯೂಟರ್ ಜಾಲಬಂಧದ ಮೂಲಕ ಪೂರೈಕೆ ಮಾಡುತ್ತದೆ. ವಿಶ್ವದ ಮೊಟ್ಟ ಮೊದಲ ವಿದ್ಯುನ್ಮಾನ ಸ್ಟಾಕು ಮಾರುಕಟ್ಟೆ ಸಂಸ್ಥೆ ಇದಾಗಿದೆ. ಇದರ ಪ್ರಸ್ತುತ ಹೆಸರು **NASDAQ: INC**

ಭಾರತದ ಇನ್ಫೋಸಿಸ್ ಕಂಪನಿ ಈ ಸಂಸ್ಥೆಯಲ್ಲಿ 1990 ರಲ್ಲಿ ಸೇರ್ಪಡೆಗೊಂಡ ಭಾರತದ ಮೊಟ್ಟ ಮೊದಲ ಮಾಹಿತಿ ತಂತ್ರಜ್ಞಾನ ಸಂಸ್ಥೆಯಾಗಿದೆ. ಈ ಸಂಸ್ಥೆಯ ದಕ್ಷಿಣ ಏಷ್ಯಾದ ಪ್ರಾದೇಶಿಕ ಕಛೇರಿ ಬೆಂಗಳೂರಿನಲ್ಲಿದೆ.

# G-20 ರಾಷ್ಟ್ರಗಳ ಸಂಘಟನೆ




✦ ಜಾಗತಿಕ ಆರ್ಥಿಕತೆಯಲ್ಲಿ ಕೈಗಾರಿಕಾ ಅಭಿವೃದ್ಧಿ ಹೊಂದಿದ & ವಿಕಾಸಶೀಲ ರಾಷ್ಟ್ರಗಳ ಸಂಘಟನೆಯಾಗಿದೆ.

✦ **ಪ್ರಮುಖ ಸದಸ್ಯ ರಾಷ್ಟ್ರಗಳು:** 1) ಭಾರತ 2) ಅರ್ಜೆಂಟೈನಾ 3) ಆಸ್ಟ್ರೇಲಿಯಾ 4) ಬ್ರೆಜಿಲ್ 5) ಕೆನಡಾ 6) ಚೀನಾ 7) ಫ್ರಾನ್ಸ್ 8) ಜರ್ಮನಿ 9) ಇಂಡೋನೇಷ್ಯಾ 10) ಇಟಲಿ 11) ಜಪಾನ್ 12) ದಕ್ಷಿಣ ಕೊರಿಯಾ 13) ಮೆಕ್ಸಿಕೊ 14) ರಷ್ಯಾ 15) ಸೌದಿ ಅರೇಬಿಯಾ 16) ದಕ್ಷಿಣ ಆಫ್ರಿಕಾ 17) ಟರ್ಕಿ 18) ಅಮೆರಿಕ 19) ಬ್ರಿಟನ್ 20) ಯುರೋಪಿಯನ್ ಒಕ್ಕೂಟ

**ಏನಿದು ಜಿ-20 ಒಕ್ಕೂಟ?:-** ಇದೊಂದು ಅಂತರಾಷ್ಟ್ರೀಯ ವೇದಿಕೆಯಾಗಿದೆ. ಗ್ರೂಪ್-20 ಎಂಬ ಹೆಸರನ್ನು ಸಂಕ್ಷಿಪ್ತವಾಗಿ ಜಿ-20 ಎಂದು ಕರೆಯಲಾಗುತ್ತದೆ. ವಿಶ್ವದ ಒಟ್ಟು ಜಿ.ಡಿ.ಪಿಯಲ್ಲಿ ಶೇ 85, ಒಟ್ಟು ವ್ಯಾಪಾರದಲ್ಲಿ ಶೇ 80, & ಒಟ್ಟು ಜನಸಂಖ್ಯೆಯಲ್ಲಿ 2/3 ರಷ್ಟು ಈ ಸಂಘಟನೆಯು ಹೊಂದಿದೆ.

✦ 1999 ಡಿಸೆಂಬರ್ 15, 16 ರಂದು **ಬರ್ಲಿನ್** ನಲ್ಲಿ ಈ ಸಂಘಟನೆಯ ಉದ್ಘಾಟನಾ ಸಭೆ ನಡೆದಿದ್ದು, ಕೆನಡಾದ ಹಣಕಾಸು ಸಚಿವರಾದ ಪೌಲ್ ಮಾರ್ಟಿನ್ ಅವರು ಈ ಸಂಘಟನೆಯ ಮೊದಲ ಮುಖ್ಯಸ್ಥರಾಗಿದ್ದರು. 1999ರಲ್ಲಿ ಅಮೆರಿಕಾದ ರಾಜಧಾನಿ **ವಾಷಿಂಗ್‌ಟನ್ ಡಿಸಿ** ಯಲ್ಲಿ ಮೊದಲ ಬಾರಿಗೆ ಚರ್ಚಿಸಲಾಯಿತು.

✦ 2008ರ ಆರ್ಥಿಕ ಕುಸಿತದ ನಂತರ ಸದಸ್ಯ ರಾಷ್ಟ್ರಗಳ ಆಡಳಿತ ಮುಖ್ಯಸ್ಥರುಗಳ ಸಭೆಯು ಆರಂಭವಾಯಿತು. ಮೊದಲ ಸಭೆಯು 2008ರ ನವೆಂಬರ್ 14 & 15ರಂದು **ಅಮೆರಿಕಾದ ವಾಷಿಂಗ್ ಟನ್ ಡಿಸಿಯಲ್ಲಿ** ನಡೆಯಿತು.

✦ **ಅಧ್ಯಕ್ಷತೆ ವಹಿಸುವವರು:-** ಜಿ-20 ಒಕ್ಕೂಟಕ್ಕೆ ಖಾಯಂ ಅಧ್ಯಕ್ಷ ಸ್ಥಾನ ಎಂಬುದು ಇಲ್ಲ. ಪ್ರತಿ ವರ್ಷವೂ ಬದಲಾಗುತ್ತದೆ. ಜತೆಗೆ ಎಲ್ಲಾ ರಾಷ್ಟ್ರಗಳಿಗೂ ಪ್ರಾತಿನಿಧ್ಯ ನೀಡಲಾಗುತ್ತದೆ. ಸಭೆಯನ್ನು ಆಯೋಜಿಸುವ ದೇಶವೇ ಚರ್ಚೆಯ ಪ್ರಮುಖ ವಿಷಯಗಳನ್ನು ನಿರ್ಧರಿಸುತ್ತದೆ. ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಮತದಾನ ಅಥವಾ ನಿಲುವಳಿ ಮಂಡನೆ ಇರುವುದಿಲ್ಲ. ಸದಸ್ಯ ರಾಷ್ಟ್ರಗಳು ಒಮ್ಮತದಿಂದ ನಿರ್ಣಯಗಳನ್ನು ಅಂಗೀಕರಿಸುತ್ತವೆ.

✦ **2016 ರ ಜಿ-20 ರಾಷ್ಟ್ರಗಳ 11 ನೇ ಸಮ್ಮೇಳನ:-**

2016ರ ಜಿ-20 ರಾಷ್ಟ್ರಗಳ ಸಮ್ಮೇಳನವು **ಚೀನಾದ ಹಂಗ್-ಝೌ** ನಲ್ಲಿ 2016ರ ಸೆಪ್ಟೆಂಬರ್4ರಿಂದ 5ರವರೆಗೆ ಜರುಗಿತು. ಇದು **ಚೀನಾದಲ್ಲಿ ಜರುಗಿದ ಜಿ-20 ರಾಷ್ಟ್ರಗಳ ಮೊದಲ ಶೃಂಗವಾಗಿದೆ.** ಜಿ-20 ರಾಷ್ಟ್ರಗಳ ಶೃಂಗಸಭೆಯಲ್ಲಿ ಆರ್ಥಿಕ ಅಭಿವೃದ್ಧಿ, ಜಾಗತಿಕ ತಾಪಮಾನದಂತಹ ವಿಷಯಗಳ ಬಗ್ಗೆ ಚರ್ಚೆಗಳು ನಡೆದವು.

ಈ ಸಮ್ಮೇಳನದಲ್ಲಿ **ಭಾರತದ ಪ್ರಧಾನಿ ನರೇಂದ್ರ ಮೋದಿ & ಚೀನಾದ ಅಧ್ಯಕ್ಷ ಕ್ಸಿ-ಜಿನ್-ಪಿಂಗ್** ಅವರ ನಡುವೆ ಪಾಕ್ ಆಕ್ರಮಿತ ಕಾಶ್ಮೀರದಲ್ಲಿ ಚೀನಾ ಆರ್ಥಿಕ ಕಾರಿಡಾರ್ ಯೋಜನೆ. ದಕ್ಷಿಣ ಚೀನಾ ಸಮುದ್ರದ ವಿವಾದ, ಗಡಿ ವಿವಾದದ ಬಗ್ಗೆ ಶಾಂತಿಯುತವಾಗಿ ಬಗೆಹರಿಸಿಕೊಳ್ಳುವುದು, ವಿಶ್ವ ಸಂಸ್ಥೆಯಲ್ಲಿ ಜೈಷ್-ಎ-ಮೊಹಮ್ಮದ್ ಸಂಘಟನೆಯನ್ನು ಉಗ್ರರ ಪಟ್ಟಿಗೆ ಸೇರಿಸಲು ಚೀನಾ ಸಹಕಾರ ನೀಡಬೇಕೆಂಬ ವಿಷಯಗಳನ್ನು ಪ್ರಸ್ತಾಪಿಸಿದರು.

**20 ರಾಷ್ಟ್ರಗಳ ಮುಖ್ಯಸ್ಥರುಗಳ ಶೃಂಗಸಭೆಗಳು**

| ಸಮ್ಮೇಳನ | ದಿನಾಂಕ | ಜರುಗಿದ ಸ್ಥಳ | ಅಧ್ಯಕ್ಷತೆ |
|---|---|---|---|
| 1ನೇ | ನವೆಂಬರ್ 15, 2008 | ವಾಷಿಂಗ್‌ಟನ್ (ಯು.ಎಸ್.ಎ) | ಜಾರ್ಜ್ ಡಬ್ಲ್ಯು ಬುಷ್ |
| 10ನೇ | ನವೆಂಬರ್ 15,16, 2015 | ಅಂಟಾಲ್ಯಾ (ಟರ್ಕಿ) | ರಿಸಿಪ್ ತಯ್ಯಿಪ್ ಎರ್ಡೊಗಾನ್ |
| 11ನೇ | ಸೆಪ್ಟೆಂಬರ್4, 5, 2016 | ಹಂಗ್-ಝೌ (ಚೀನಾ) | ಕ್ಸಿ ಜಿನ್ ಪಿಂಗ್ |
| 12ನೇ | ಜುಲೈ 7 & 8 2017 | ಜರ್ಮನಿಯ ಹಂಬರ್ಗ್ | ಏಂಜೆಲಾ ಮರ್ಕೆಲಾ |

# ಸಾರ್ಕ್ (SAARC - South Asian Association For Regional Co-operat[ion]) ಸಂಘಟನೆ (ದಕ್ಷಿಣ ಏಷ್ಯಾ ಪ್ರಾದೇಶಿಕ ಸಹಕಾರ ಒಕ್ಕೂಟ)

✦ ಜಗತ್ತಿನ ವಿಸ್ತೀರ್ಣದಲ್ಲಿ ಈ ಒಕ್ಕೂಟವು ಶೇ 3 ರಷ್ಟನ್ನು, ಜನಸಂಖ್ಯೆಯು ಶೇ 21 ರಷ್ಟು ಮತ್ತು ಒಟ್ಟು ಜಿ.ಡಿ.ಪಿಯಲ್ಲಿ ಶೇ 9.12 ರಷ್ಟು ಹೊಂದಿದೆ.




**ಕೇಂದ್ರ ಕಛೇರಿ:-** ನೇಪಾಳದ ಕಠ್ಮಂಡು

**ಸ್ಥಾಪನೆ:-** ಡಿಸೆಂಬರ್ 8, 1985

**ಸಾರ್ಕ್ ದಿನ :-** ಡಿಸೆಂಬರ್ 8

**ನಾಣ್ಯಗಳು:-** 8 ಕರೆನ್ಸಿಗಳು

**ಸ್ಥಾಪನೆಯ ಮುಖ್ಯ ರೂವಾರಿ:-** ಬಾಂಗ್ಲಾ ದೇಶದ ಮಾಜಿ ಅಧ್ಯಕ್ಷ **ಮುಝಿಯರ್ ರೆಹಮಾನ್**

**ಉದ್ದೇಶ:-** ದ. ಏಷ್ಯಾ ರಾಷ್ಟ್ರಗಳ ನಡುವೆ ಸಹಕಾರ ಮತ್ತು ಶಾಂತಿ ಸ್ಥಾಪಿಸುವುದು

**ಸದಸ್ಯ ರಾಷ್ಟ್ರಗಳು:- 8** 1) ಅಫ್ಘಾನಿಸ್ತಾನ 2) ಬಾಂಗ್ಲಾದೇಶ 3) ಭೂತಾನ್ 4) ಭಾರತ 5) ಮಾಲ್ಡೀವ್ಸ್ 6) ನೇಪಾಳ 7) ಪಾಕಿಸ್ತಾನ 8) ಶ್ರೀಲಂಕಾ

✦ 1985 ರಲ್ಲಿ ಸಾರ್ಕ್ ಸ್ಥಾಪನೆಯಾದಾಗ ಸಾರ್ಕ್‌ನ ಸದಸ್ಯ ರಾಷ್ಟ್ರಗಳು 7 ಇದ್ದವು. 2007 ಏಪ್ರಿಲ್‌ನಲ್ಲಿ **ಅಫ್ಘಾನಿಸ್ತಾನವು** ಸಾರ್ಕ್‌ನ 8ನೇ ಸದಸ್ಯ ರಾಷ್ಟ್ರವಾಗಿ ಸೇರ್ಪಡೆಯಾಯಿತು.

**ವೀಕ್ಷಕ ರಾಷ್ಟ್ರಗಳು:-** 9 ರಾಷ್ಟ್ರಗಳು

**ಸಾಫ್ಟಾ (SAFTA-South Asian Free Trade Area):** ಸಾರ್ಕ್ ರಾಷ್ಟ್ರಗಳ ನಡುವೆ ಮುಕ್ತ ವ್ಯಾಪಾರ ಪ್ರದೇಶವನ್ನಾಗಿ ಘೋಷಿಸುವ **ಸಾಫ್ಟಾ (ದಕ್ಷಿಣ ಏಷ್ಯಾ ಮುಕ್ತ ವ್ಯಾಪಾರ ಪ್ರದೇಶ)** ನೀತಿಗೆ 2004 ರಲ್ಲಿ ಇಸ್ಲಮಾಬಾದ್‌ನಲ್ಲಿ ನಡೆದ 12ನೇ ಸಾರ್ಕ್ ಶೃಂಗಸಭೆಯಲ್ಲಿ ಸಹಿ ಹಾಕಲಾಯಿತು.

✦ ಸಾರ್ಕ್ ರಾಷ್ಟ್ರಗಳಲ್ಲಿ **ಭಾರತವು** ಅತಿ ಹೆಚ್ಚಿನ ಜಿ.ಡಿ.ಪಿ ಯನ್ನು ಹೊಂದಿದೆ. ಭಾರತವು ಜನಸಂಖ್ಯೆಯಲ್ಲೂ ಕೂಡ ಸಾರ್ಕ್ ಒಕ್ಕೂಟ ರಾಷ್ಟ್ರಗಳಲ್ಲಿ ಮೊದಲ ಸ್ಥಾನದಲ್ಲಿದೆ. 2016 ರ ಹೆಚ್.ಡಿ.ಐ ಪ್ರಕಾರ **ಶ್ರೀಲಂಕಾ** ರಾಷ್ಟ್ರವು (73ನೇ ಸ್ಥಾನ) ಸಾರ್ಕ್ ದೇಶಗಳಲ್ಲಿ ಮೊದಲ ಸ್ಥಾನದಲ್ಲಿದ್ದರೆ, ಮಾಲ್ಡೀವ್ಸ್ (105) ಎರಡನೇ ಸ್ಥಾನ, ಭಾರತ (131) 3ನೇ ಸ್ಥಾನದಲ್ಲಿದೆ.

✦ 2017ರ ಆರ್ಥಿಕ ಸ್ವಾತಂತ್ರ್ಯ ಸೂಚ್ಯಂಕದ ಪ್ರಕಾರ **ಭೂತಾನ್** (107) ಮೊದಲ ಸ್ಥಾನದಲ್ಲಿದೆ. ಭಾರತ (143) 6ನೇ ಸ್ಥಾನದಲ್ಲಿದೆ.

✦ ಅಂತರಾಷ್ಟ್ರೀಯ ಭ್ರಷ್ಟಾಚಾ[ರ] 2017 ರ ಪ್ರಕಾರ **ಭೂತಾನ** ಕಡಿಮೆ ಭ್ರಷ್ಟಾಚಾರ, **ಅಫ್ಘಾನಿಸ್ತಾ[ನ]** ಭ್ರಷ್ಟಾಚಾರ ಹೊಂದಿದೆ.

**ಸಾರ್ಕ್ ಉಪಗ್ರಹ**

ಸಾರ್ಕ್ ಸದಸ್ಯ ರಾಷ್ಟ್ರಗಳಿಗೆ ... ಯಾಗುವಂತೆ ಸಾರ್ಕ್ ಉಪ[ಗ್ರಹ] ಉಡಾಯಿಸಲು **ನೇಪಾಳದ ಕಠ್ಮಂ[ಡು]** ನಡೆದ 18ನೇ ಸಾರ್ಕ್ ಸಮ್ಮೇ[ಳನ] ... ನರೇಂದ್ರ ಮೋದಿ ಅವರು ಪ್ರಸ್ತಾ[ಪಿಸಿದ್ದರು] ... ಈ ಸಂಬಂಧ ಇಸ್ರೋ ಸಾರ್ಕ್ [ಉಪಗ್ರಹ] ಉಡಾವಣೆಗೆ ಸಿದ್ದತೆ ನಡೆಸಿದೆ.

**ಇದುವರೆಗೆ ನಡೆದ ಸಾರ್ಕ್ ಸಮ್ಮೇಳನ[ಗಳು]**

| ಸಮ್ಮೇಳನ | ನಡೆದ ಸ್ಥಳ | ದಿನಾಂ[ಕ] |
|---|---|---|
| 1ನೇ ಸಮ್ಮೇಳನ | ಢಾಕಾ | ಡಿ.7-8, 1[...] |
| 2ನೇ ಸಮ್ಮೇಳನ | ಬೆಂಗಳೂರು | ನ.16-17, [...] |
| 8ನೇ ಸಮ್ಮೇಳನ | ನವದೆಹಲಿ | ಮೇ2-4, [...] |
| 14ನೇ ಸಮ್ಮೇಳನ | ನವದೆಹಲಿ | ಏ.3-4, [...] |
| 18ನೇ ಸಮ್ಮೇಳನ | ಕಠ್ಮಂಡು | ನವೆಂಬ[ರ್] 27, 2[...] |
| 19ನೇ ಸಮ್ಮೇಳನ | ಪಾಕಿಸ್ತಾನದ ಇಸ್ಲಮಾಬಾದ್ | 2016 [...] ರದ್ದಾ[...] |

**ಸಾರ್ಕ್‌ನ ಪ್ರಾದೇಶಿಕ ಕಛೇರಿಗಳು:-**

| | |
|---|---|
| ಕೃಷಿ ಕೇಂದ್ರ | [...] |
| ಹವಾಮಾನ ಸಂಶೋಧನಾ ಕೇಂದ್ರ | [...] |
| ಅರಣ್ಯ ಕೇಂದ್ರ | [...] |
| ಅಭಿವೃದ್ಧಿ ನಿಧಿ | [...] |
| ದಾಖಲೆ ಕೇಂದ್ರ | ನ[...] |
| ಪ್ರಕೃತಿ ವಿಕೋಪ ನಿರ್ವಹಣಾ ಸಂಸ್ಥೆ | ನ[...] |
| ಕರಾವಳಿ ವಲಯ ನಿರ್ವಹಣಾ ಕೇಂದ್ರ | [...] |
| ಮಾಹಿತಿ ಕೇಂದ್ರ | [...] |
| ಟಿ.ಬಿ ಮತ್ತು ಏಡ್ಸ್ ಕೇಂದ್ರ | [...] |
| ಮಾನವ ಸಂಪನ್ಮೂಲ ಅಭಿವೃದ್ಧಿ ಕೇಂದ್ರ | ಇಸ್ಲ[...] |
| ಶಕ್ತಿ ಕೇಂದ್ರ | ಇಸ್ಲ[...] |
| | ಕೊ[...] |

## ತೈಲ ಉತ್ಪನ್ನ ರಾಷ್ಟ್ರಗಳ ಕೂಟ OPEC (Organization of the Petroleum Exporting Countries)




**ಸ್ಥಾಪನೆ :-** 1960 ಸೆಪ್ಟೆಂಬರ್‌ನಲ್ಲಿ ಆರಂಭವಾಗಿ ಜನವರಿ 1961ರಿಂದ **ಇರಾಕ್‌ನ ಬಾಗ್ದಾದ್‌ನಲ್ಲಿ** ಅಸ್ತಿತ್ವಕ್ಕೆ ಬಂದಿತು. **ಕೇಂದ್ರ ಕಛೇರಿ :-** ಆಸ್ಟ್ರಿಯಾದ ವಿಯೆನ್ನಾ

**ಸದಸ್ಯ ರಾಷ್ಟ್ರಗಳ ಸಂಖ್ಯೆ :-** 14

1) ಅಲ್ಜೀರಿಯಾ 2)ಅಂಗೋಲಾ 3) ಈಕ್ವೆಡಾರ್ 4) ಇರಾನ್ 5) ಇರಾಕ್ 6) ಕುವೈತ್ 7) ಲಿಬಿಯಾ 8) ನೈಜೀರಿಯಾ 9) ಕತ್ತಾರ್ 10) ಸೌದಿಅರೇಬಿಯಾ 11) ಯುನೈಟೆಡ್ ಅರಬ್ ಎಮಿರೈಟ್ಸ್ 12) ವೆನಿಜುವೆಲಾ 13) ಗಬಾನ್ (2016 ಜುಲೈ) 14) **ಈಕ್ವೆಟೋರಿಯಲ್ ಗ್ಯುನಿಯಾ (2017ಮೇ)**

**ಉದ್ದೇಶ:-** ತೈಲ ಮಾರುಕಟ್ಟೆಯಲ್ಲಿ ತೈಲ ಬೆಲೆ ಸ್ಥಿರತೆ ಕಾಪಾಡುವುದು, ತೈಲ ಉತ್ಪಾದಕ ರಾಷ್ಟ್ರಗಳಿಗೆ ಸ್ಥಿರ ಆದಾಯ ತಲುಪಿಸುವುದು. ಆಮದು ರಾಷ್ಟ್ರಗಳಿಗೆ ನಿರ್ದಿಷ್ಟ ಪ್ರಮಾಣದಲ್ಲಿ ತೈಲವನ್ನು ಪೂರೈಸುವುದು. 1973ರಲ್ಲಿ ತೈಲ ಬಿಕ್ಕಟ್ಟಿನ ಸಂದರ್ಭದಲ್ಲಿ ತೈಲವನ್ನು ಅಸ್ತ್ರವಾಗಿಸಿ, ಇಡೀ ಜಗತ್ತನ್ನೇ ಎಚ್ಚರಗೊಳಿಸಿತು.

## ತೈಲ & ನೈಸರ್ಗಿಕ ಅನಿಲ ನಿಗಮ (ONGC - Oil & Natural Gas Corporation)




**ಸ್ಥಾಪನೆ:** 1956 ಆಗಸ್ಟ್ 14. 1959 ರಲ್ಲಿ **ಭಾರತೀಯ ಸಂಸತ್ತಿನ ಕಾಯ್ದೆ** ಮೂಲಕ ಶಾಸನ ವಿಹಿತ ಸಂಸ್ಥೆಯಾಗಿ ಪರಿವರ್ತಿಸಲಾಗಿದೆ.

1993 ರಲ್ಲಿ ತೈಲ & ನೈಸರ್ಗಿಕ ಅನಿಲ ಉದ್ಯಮವನ್ನು ಕಾರ್ಪೋರೇಷನ್ ಆಗಿ ಪರಿವರ್ತಿಸಿದೆ.

**ಕೇಂದ್ರ ಕಛೇರಿ:-** ಉತ್ತರಾಖಂಡದ ಡೆಹರಾಡೂನ್, **ಪ್ರಸ್ತುತ ಅಧ್ಯಕ್ಷರು:-** ಆರ್.ಎಸ್. ಶರ್ಮಾ

✦ ಭಾರತ ಸರ್ಕಾರಿ ಒಡೆತನದ ಕಂಪನಿಯಾಗಿದ್ದು, ಭಾರತದಲ್ಲಿ **ಅತಿ ಹೆಚ್ಚು ಲಾಭವನ್ನು** ಗಳಿಸುತ್ತಿರುವ ನಿಗಮವಾಗಿದೆ.

✦ ಈ ಕಂಪನಿಯಲ್ಲಿ ಭಾರತ ಸರ್ಕಾರವು ಶೇ 74.14 ಸಾಮಾನ್ಯ ಷೇರುಗಳ ರೂಪದಲ್ಲಿ ಬಂಡವಾಳ ಹೂಡಿಕೆ ಮಾಡಿದೆ.

✦ ತೈಲ ನಿಕ್ಷೇಪಗಳ ಶೋಧನೆ & ಉತ್ಪಾದನೆಯಲ್ಲಿ ತೊಡಗಿರುವ ವಿಶ್ವಾದ ಅತಿ ದೊಡ್ಡ ಬಹು ಚಟುವಟಿಕೆಯ ಕಂಪನಿಯಾಗಿದೆ. ಪೆಟ್ರೋಲಿಯಂ ಉತ್ಪನ್ನಗಳು, ನೈಸರ್ಗಿಕ ಅನಿಲ & ಪೆಟ್ರೋ ಕೆಮಿಕಲ್ಸ್ ಉತ್ಪನ್ನಗಳಿಗೆ ಸಂಬಂಧಿಸಿದೆ.

✦ 2010 ರ ಜಾಗತಿಕ ಇಂಧನ ಶಕ್ತಿ ಕಂಪನಿಗಳ ಅಗ್ರ ಶ್ರೇಯಾಂಕ 250 ರ ಪಟ್ಟಿಯಲ್ಲಿ 18 ನೇ ಸ್ಥಾನ ಪಡೆದಿದೆ. 2014ರ ಗೋಲ್ಡನ್ ಪೀಕಾಕ್ ಅವಾರ್ಡ್ ಪಡೆದಿದೆ. **2010 ನವೆಂಬರ್‌ನಲ್ಲಿ ಭಾರತ ಸರ್ಕಾರದಿಂದ ಮಹಾರತ್ನ** ಉದ್ದಿಮೆ ಸ್ಥಾನ ಪಡೆದಿದೆ.

✦ ಒ.ಎನ್.ಜಿ.ಸಿ ವಿದೇಶ್ ಸಂಸ್ಥೆಯು 1989 ಜೂನ್ 15 ರಂದು ಒ.ಎನ್.ಜಿ.ಸಿ ಯ ಅಂತರಾಷ್ಟ್ರೀಯ ಅಂಗಸಂಸ್ಥೆಯಾಗಿ ಸ್ಥಾಪನೆಯಾಗಿದ್ದು, ವಿಯೆಟ್ನಾಂ & ಸೂಡಾನ್ ನಂತಹ 16 ರಾಷ್ಟ್ರಗಳಲ್ಲಿ ಬಂಡವಾಳ ಹೂಡಿಕೆ ಮಾಡಿದೆ.

## ಆಫ್ರಿಕನ್ ಒಕ್ಕೂಟ (OAU - Organisation of African Union)



**ಸ್ಥಾಪನೆ:-** ಆಫ್ರಿಕನ್ ಒಕ್ಕೂಟ ಚಾರ್ಟರ್ ಮೇ.25, 1963ರಲ್ಲಿ ಸ್ಥಾಪನೆಯಾಗಿದ್ದು, ನಂತರ ಆಫ್ರಿಕನ್ ಒಕ್ಕೂಟವಾಗಿ 2001 ಮೇ 26 ರಂದು ಅಡೀಸ್ ಅಬಾಬದಲ್ಲಿ ಸ್ಥಾಪನೆಯಾಗಿ ಜುಲೈ.9, 2002ರಲ್ಲಿ ಆಫ್ರಿಕಾದ ಮಿಡ್ರಾಂದ್ ನಲ್ಲಿ ಚಾಲನೆಗೊಂಡಿತು.

**ಆಡಳಿತ ಕೇಂದ್ರಗಳು :-** 1) ಇಥಿಯೋಪಿಯಾದ ಅಡೀಸ್ ಅಬಾಬಾ
2) ದಕ್ಷಿಣ ಆಫ್ರಿಕಾದ ಮಿಡ್ರಾಂದ್

ಪ್ರಸ್ತುತ ಸದಸ್ಯ ರಾಷ್ಟ್ರಗಳ ಸಂಖ್ಯೆ – 55 (1963ರಲ್ಲಿ ಆಫ್ರಿಕನ್ 32 ರಾಷ್ಟ್ರಗಳು ಇಥೋಪಿಯಾದ ಅಡಿಸ್ ಅಬಾಬಾದಲ್ಲಿ ಸಭೆ ಸೇರಿ ಆಫ್ರಿಕನ್ ಒಕ್ಕೂಟ ಸಂಸ್ಥೆಯನ್ನು ಸ್ಥಾಪಿಸಿದವು. ಆಫ್ರಿಕನ್ ಒಕ್ಕೂಟದಲ್ಲಿ 2016ರ ವೇಳೆಗೆ 55 ರಾಷ್ಟ್ರಗಳಿವೆ)

**ಆಫ್ರಿಕನ್ ರಾಷ್ಟ್ರದ ರಾಷ್ಟ್ರಗೀತೆ :-** "Let us All unite and Celebrate together"

## ವ್ಯಾಪಾರ ಮತ್ತು ಅಭಿವೃದ್ಧಿ ಮೇಲಿನ ವಿಶ್ವ ರಾಷ್ಟ್ರಗಳ ಸಮ್ಮೇಳನ

**UNCTAD-United National Conference on Trade and Development**




✦ ಕೇಂದ್ರ ಕಚೇರಿ: ಜಿನೀವಾ

✦ 1962ರ ಜುಲೈನಲ್ಲಿ ಕೈರೋದಲ್ಲಿ ನಡೆದ ಅಭಿವೃದ್ಧಿಶೀಲ ರಾಷ್ಟ್ರಗಳು ಸಮ್ಮೇಳನದಲ್ಲಿ ಘೋಷಣೆ

✦ ವಿಶ್ವ ಸಂಸ್ಥೆಯ ಅಂಗ ಸಂಸ್ಥೆಯಾಗಿ 1964ರಲ್ಲಿ ಸ್ಥಾಪನೆ

✦ 1964ರಲ್ಲಿ ಜಿನೇವಾದಲ್ಲಿ ಮೊದಲ ಸಭೆ ಜರುಗಿತು.

✦ 2012ರಲ್ಲಿ ದೋಹಾದ ಕತಾರ್‌ನಲ್ಲಿ ಇತ್ತೀಚಿನ ಸಭೆ ನಡೆಯಿತು.

✦ 1968ರಲ್ಲಿ ಭಾರತದ ದೆಹಲಿಯಲ್ಲಿ 2ನೇ ಶೃಂಗಸಭೆ ನಡೆದಿದೆ.

✦ 'ವಿಶ್ವ ಬಂಡವಾಳ ಹೂಡಿಕೆ ವರದಿ' ಪ್ರಕಟ

## ಏಷ್ಯಾ & ಫೆಸಿಫಿಕ್ ಅಂತರಾಷ್ಟ್ರೀಯ ಆರ್ಥಿಕ & ಸಾಮಾಜಿಕ ಆಯೋಗ

**(UNESCAP-United Nations Economic & Social Commission for Asia and Pacific / ESCAP)**




ಸ್ಥಾಪನೆ:– 1947, ಕೇಂದ್ರ ಕಛೇರಿ: ಥೈಲ್ಯಾಂಡ್‌ನ ಬ್ಯಾಂಕಾಕ್, ಸದಸ್ಯ ರಾಷ್ಟ್ರಗಳು:– 53 & 9 ಸಹಾಯಕ ಸದಸ್ಯ ರಾಷ್ಟ್ರಗಳು.

ವಿಶ್ವಸಂಸ್ಥೆಯ ಅಂಗಸಂಸ್ಥೆಯಲ್ಲಿ ಒಂದಾದ ಆರ್ಥಿಕ & ಸಾಮಾಜಿಕ ಮಂಡಳಿಯ ಅಧೀನ ಸಂಸ್ಥೆಯಾಗಿರುವ ಇದು ಸದಸ್ಯ ರಾಷ್ಟ್ರಗಳ ನಡುವೆ ಆರ್ಥಿಕ ಸಹಕಾರವನ್ನು ವೃದ್ಧಿಸುವ ಉದ್ದೇಶ ಹೊಂದಿದೆ.

ಮಾನವ ಹಕ್ಕುಗಳು, ಸುಸ್ಥಿರ ಅಭಿವೃದ್ಧಿ, ಜಾಗತೀಕರಣ & ವಿದೇಶಿ ವ್ಯಾಪಾರದ ಬೆಳವಣಿಗೆಯನ್ನು ಸದಸ್ಯ ರಾಷ್ಟ್ರಗಳ ನಡುವೆ ಸಾಧಿಸುವ ಗುರಿ ಹೊಂದಿದೆ.

## ಆಸಿಯಾನ್

**(ASEAN- Association of South E... Asian Nations)**

**ಸ್ಥಾಪನೆ:–** ಆಗಸ್ಟ್ 8, 1967

**ಕೇಂದ್ರ ಕಛೇರಿ:–** ಜಕಾರ್ತಾ, ಇಂಡೋನೇಷ್ಯಾ

**ಉದ್ದೇಶ:–** ಈ ಭೂಪ್ರದೇಶದಲ್ಲಿ ಶಾಂತಿ, ಸ್ಥಿರತೆಯ ರಕ್ಷಣೆ ತನ್ನ ಸದಸ್ಯರಲ್ಲಿ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಅಭಿವೃದ್ಧಿ ಸಾಧನೆ.

**ಪ್ರಧಾನ ಕಾರ್ಯದರ್ಶಿ:–** ಲೀಲೂನಾಂಗ್ ಮಿನ್ಹಾ

**ಧ್ಯೇಯವಾಕ್ಯ:–** One vision, One Identity, One community

**ಆಸಿಯಾನ್ ಶೃಂಗಸಭೆಗಳು:–**

✦ ಮೊದಲ ಶೃಂಗಸಭೆಯು 1976 ರಲ್ಲಿ ಇಂಡೋ... ಬಾಲಿಯಲ್ಲಿ ಜರುಗಿತು.

✦ 27ನೇ ಶೃಂಗಸಭೆಯು 2015 ರ ನವೆಂಬರ್ 18 ... ರವರೆಗೆ ಮಲೇಶಿಯಾದ ಕೌಲಾಲಂಪುರದಲ್ಲಿ ಜರುಗಿ...

✦ 28 & 29ನೇ ಆಸಿಯಾನ್ ಶೃಂಗಸಭೆಯು ಲಾವೋ... 2016 ಸೆಪ್ಟೆಂಬರ್ 6 ರಿಂದ 7 ರವರೆಗೆ ರಲ್ಲಿ ಜರುಗಿ...

✦ 30 ನೇ ಶೃಂಗಸಭೆ 2017 ಏಪ್ರಿಲ್ 28 & 29 ... ಫಿಲಿಫೈನ್ಸ್‌ನ ಮನಿಲಾದಲ್ಲಿ ಜರುಗಿತು.

✦ 31ನೇ ಶೃಂಗಸಭೆ 2017 ನವೆಂಬರ್ 13 & 14 ... ಫಿಲಿಫೈನ್ಸ್ ಪಂಪಾಂಗದಲ್ಲಿ ಜರುಗಲಿದೆ.

✦ ಈ ಸಂಘಟನೆಯು ವಿಶ್ವದ ಒಟ್ಟು ಭೂ ಭಾಗದಲ್ಲಿ ... ರಷ್ಟು, ಜನಸಂಖ್ಯೆಯಲ್ಲಿ ಶೇ 8.8 ರಷ್ಟನ್ನು ಹೊಂದಿದ್ದು ... ದೊಡ್ಡ 6 ಆರ್ಥಿಕತೆಗಳಲ್ಲಿ ಇದೂ ಒಂದಾಗಿದೆ.

✦ 1997 ರಲ್ಲಿ ಏಷ್ಯಾದ ಕರೆನ್ಸಿ ಘಟಕವನ್ನು ಜಾರಿಗೆ ತ... ಮೂಲಕ ಹಣಕಾಸು ಒಕ್ಕೂಟವಾಗಿ ಮಾರ್ಪಟ್ಟಿತು.

**ಸದಸ್ಯ ರಾಷ್ಟ್ರಗಳ ಸಂಖ್ಯೆ - 10 ರಾಷ್ಟ್ರಗಳು:-**

1) ಇಂಡೋನೇಷ್ಯಾ 2) ಮಲೇಷಿಯಾ 3) ಫಿಲಿಫೈನ್ಸ್
4) ಸಿಂಗಾಪುರ 5) ಥಾಯ್ಲೆಂಡ್ 6) ಬ್ರೂನಿ
7) ಮಯನ್ಮಾರ್ 8) ಕಾಂಬೋಡಿಯಾ
9) ಲಾವೋಸ್ 10) ವಿಯೆಟ್ನಾಂ

**ಆಸಿಯಾನ್ - ಭಾರತ ಶೃಂಗಸಭೆ:**

✦ ಭಾರತದ ಪ್ರಧಾನಿಯವರು ಆಸಿಯಾನ್ ರಾಷ್ಟ್ರಗ... 1992 ರಿಂದ ಸಭೆಯಲ್ಲಿ ಪಾಲ್ಗೊಳ್ಳುತ್ತಾರೆ. ಇಂತಹ ... ಇದುವರೆಗೂ 12 ಜರುಗಿದ್ದು, ಮಲೇಷ್ಯಾದ ಕೌಲಾಲಂ... ಜರುಗಿದ ಸಭೆಯು 13ನೇ ಆಸಿಯಾನ್ - ... ಸಮ್ಮೇಳನವಾಗಿದೆ. ಭಾರತ ಈ ಒಕ್ಕೂಟದ ಸದಸ್ಯತ್ವ ...

## ಭಾರತ ದೂರ ಸಂಪರ್ಕ ನಿಯಂತ್ರಣ ಪ್ರಾಧಿಕಾರ (TRAI - Telecom Regulatory Authority of India)




ಭಾರತದ ದೂರ ಸಂಪರ್ಕ ಕ್ಷೇತ್ರದಲ್ಲಿ ನಿಯಂತ್ರಕನಾಗಿ ಕಾರ್ಯ ನಿರ್ವಹಿಸುತ್ತಿರುವ ಈ ಸಂಸ್ಥೆಯು 1997 ಭಾರತೀಯ ದೂರ ಸಂಪರ್ಕ ನಿಯಂತ್ರಣ ಪ್ರಾಧಿಕಾರ ಕಾಯ್ದೆ ಪ್ರಕಾರ 1997 ಫೆಬ್ರವರಿ 20 ರಂದು ನವದೆಹಲಿಯಲ್ಲಿ ಸ್ಥಾಪನೆಯಾಗಿದೆ.

1997 ಕ್ಕೆ ಮುನ್ನ ಭಾರತದ ಕೇಂದ್ರ ಸರ್ಕಾರ ದೇಶದ ದೂರ ಸಂಪರ್ಕ ಸೇವೆಗಳ ಮೇಲೆ ನಿಯಂತ್ರಣವನ್ನು ಹೊಂದಿದ್ದು, ಬದಲಾಗುತ್ತಿರುವ ಜಾಗತಿಕ ಮಾಹಿತಿ ವ್ಯವಸ್ಥೆಯಲ್ಲಿ ದೇಶದ ದೂರ ಸಂಪರ್ಕ ಕ್ಷೇತ್ರವನ್ನು ಉನ್ನತೀಕರಿಸಲು ಟ್ರಾಯ್ ಸಂಸ್ಥೆಯನ್ನು ಸ್ಥಾಪಿಸಲಾಗಿದೆ

ಈ ಸಂಸ್ಥೆಯು ದೂರ ಸಂಪರ್ಕ ವಲಯದ ತೆರಿಗೆಗಳು, ಅಂತರ್ ಸಂಪರ್ಕಿಸುವಿಕೆ, ಸೇವೆಯ ಗುಣಮಟ್ಟ ಹೆಚ್ಚಿಸುವುದು, ಡಿ.ಟಿ.ಹೆಚ್ ಸೇವೆ, ಮೊಬೈಲ್ ಪೋರ್ಟಬಿಲಿಟಿ ಮುಂತಾದ ಸೇವೆಗಳನ್ನು ಒದಗಿಸುತ್ತದೆ.

2016 ಜನವರಿ 1 ರಿಂದ ಟ್ರಾಯ್ ಸಂಸ್ಥೆಯು ದೇಶದ ದೂರ ಸಂಪರ್ಕ ಗ್ರಾಹಕರಿಗೆ ಕರೆ ಕಡಿತದ ವಿರುದ್ಧ ಪರಿಹಾರ ನೀಡುವ ಮಹತ್ವದ ಸೇವೆ ಒದಗಿಸಲು ಪ್ರಾರಂಭಿಸಿದೆ.

## ಕಾರ್ಲ್‌ಮಾರ್ಕ್ಸ್ - ವೈಜ್ಞಾನಿಕ ಸಮಾಜವಾದದ ಪಿತಾಮಹ.



1818 ಮೇ 5 ರಿಂದ 1883 ಮಾರ್ಚ್ 14 ರವರೆಗೆ ಜೀವಿಸಿದ್ದ ಕಾರ್ಲ್ ಮಾರ್ಕ್ಸ್ ಬಂಡವಾಳ ಶಾಹಿ ಸಿದ್ಧಾಂತ-ಕ್ಕೆ ವಿರುದ್ಧವಾಗಿ ಸಮತಾವಾದ ಅಥವಾ ವೈಜ್ಞಾನಿಕ ಸಮಾಜವಾದ ಸಿದ್ಧಾಂತದ ಶಿಲ್ಪಿಯಾಗಿದ್ದಾರೆ. ಅಧಿಕ ಮೌಲ್ಯ ಸಿದ್ಧಾಂತ, ಶ್ರಮ ಮೌಲ್ಯ ಸಿದ್ಧಾಂತ, ವರ್ಗ ಸಂಘರ್ಷ, ಇತಿಹಾಸದ ಭೌತಿಕ ನಿರೂಪಣೆ ಮುಂತಾದ ಪರಿಕಲ್ಪನೆಗಳನ್ನು ಪರಿಚಯಿಸಿದರು.

**ಅಧಿಕ ಮೌಲ್ಯ ಸಿದ್ಧಾಂತ** ಎಂದರೆ – ಶ್ರಮಿಕರು ಜೀವನಾಧಾರ ಕೂಲಿಯನ್ನು ಪಡೆಯುತ್ತಿದ್ದು, ತಾವು ಪಡೆಯುತ್ತಿದ್ದ ಮೌಲ್ಯಕ್ಕಿಂತ ಹೆಚ್ಚಿನ ಮೌಲ್ಯದಲ್ಲಿ ವಸ್ತುಗಳನ್ನು ಉತ್ಪಾದಿಸುತ್ತಿದ್ದರು. ಈ ವ್ಯತ್ಯಾಸವೇ ಬಂಡವಾಳ ಶಾಹಿಗಳ ನಿವ್ವಳ ಲಾಭವಾಗಿತ್ತು. ಕಾರ್ಮಿಕರ ಪಾವತಿಯಾಗದ ಶ್ರಮವೇ ಅಧಿಕ ಮೌಲ್ಯ.

- ಸ್ಥಿರ ಬಂಡವಾಳ & ಚರ ಬಂಡವಾಳದ ನಡುವಿನ ಅನುಪಾತವೇ **ಬಂಡವಾಳದ ಜೈವಿಕ ಸಂಯೋಜನೆ.** (C/V)
- ಅಧಿಕ ಮೌಲ್ಯ ದರ ಅಥವಾ **ಶೋಷಣೆಯ ದರವು** ಅಧಿಕ ಮೌಲ್ಯ & ಚರ ಬಂಡವಾಳದ ನಡುವಿನ ಅನುಪಾತಕ್ಕೆ ಸಮವಾಗಿರುತ್ತದೆ. (S/V)
- ಬಂಡವಾಳ ಶಾಹಿಗಳ **ಲಾಭದ ದರ** ಅಧಿಕ ಮೌಲ್ಯ & ಒಟ್ಟು ಬಂಡವಾಳದ ನಡುವಿನ ಅನುಪಾತವಾಗಿರುತ್ತದೆ. (R=S/C+V)
- **ದಾಸ್ ಕ್ಯಾಪಿಟಲ್, ಕಮ್ಯುನಿಸ್ಟ್ ಮ್ಯಾನಿಫೆಸ್ಟೋ** ಕಾರ್ಲ್ ಮಾರ್ಕ್ಸ್ ಅವರ ಪ್ರಮುಖ ಕೃತಿಗಳಾಗಿವೆ.

## ಭಾರತದ ಯೋಜನಾ ಆಯೋಗದ ಪ್ರಕಾರ ದೇಶದ ಜಲಾನಯನ ಯೋಜನೆಗಳ ವರ್ಗೀಕರಣ:-

1. **ಬೃಹತ್ ನೀರಾವರಿ ಯೋಜನೆ:-** 10,000 ಹೆಕ್ಟೇರ್‌ಗಿಂತ ಹೆಚ್ಚು ಜಲಾನಯನ ಪ್ರದೇಶಗಳಿಗೆ ನೀರಾವರಿ ಒದಗಿಸುವುದು.
2. **ಮಧ್ಯಮ ನೀರಾವರಿ ಯೋಜನೆ:-** 2,000 –10,000 ಹೆಕ್ಟೇರ್ ಜಲಾನಯನ ಪ್ರದೇಶಗಳಿಗೆ ನೀರಾವರಿ ಒದಗಿಸುವುದು.
3. **ಸಣ್ಣ ನೀರಾವರಿ ಯೋಜನೆ:-** 2,000 ಹೆಕ್ಟೇರ್‌ಗಿಂತ ಕಡಿಮೆ ಜಲಾನಯನ ಪ್ರದೇಶಗಳಿಗೆ ನೀರಾವರಿ ಒದಗಿಸುವುದು.

## TRIFED - Tribal Co-Operative Marketing Development Federation of India Limited – ಭಾರತದ ಬುಡಕಟ್ಟು ಸಹಕಾರಿ ಮಾರುಕಟ್ಟೆ ಅಭಿವೃದ್ಧಿ ಒಕ್ಕೂಟ ನಿಗಮ

1984 ರ ಭಾರತ ಸರ್ಕಾರದ ಬಹು ರಾಜ್ಯ ಸಹಕಾರಿ ಸಂಘ ಕಾಯ್ದೆಯ ಅನ್ವಯ **1987 ಆಗಸ್ಟ್** ನಲ್ಲಿ ಸ್ಥಾಪನೆಯಾದ ಈ ಸಂಸ್ಥೆಯು ಭಾರತದ ಆಹಾರ ನಿಗಮದ ಏಜೆಂಟ್ ಆಗಿ ಕಾರ್ಯನಿರ್ವಹಿಸುತ್ತಿದ್ದು, **ಗೋಧಿ & ಭತ್ತದ ನಿರ್ವಹಣೆ** ಮಾಡುತ್ತಿದೆ. ಪ್ರಸ್ತುತ ಕೇಂದ್ರ ಸರ್ಕಾರದ **ಕಲ್ಯಾಣ ಸಚಿವಾಲಯದ ಅಧೀನದಲ್ಲಿದೆ.** ಇದರ ಮುಖ್ಯ ಉದ್ದೇಶ ಬುಡಕಟ್ಟು ಜನಾಂಗ ಉತ್ಪಾದಿಸಿದ ಕೃಷಿ ಉತ್ಪನ್ನಗಳು, ಸಣ್ಣ ಪ್ರಮಾಣದ ಕೈಗಾರಿಕಾ ಉತ್ಪನ್ನಗಳಿಗೆ ಸೂಕ್ತ ಮಾರುಕಟ್ಟೆ ಸೌಲಭ್ಯ ಕಲ್ಪಿಸುವುದು.




TRIBAL COOPERATIVE MARKETING DEVELOPMENT FEDERATION of INDIA LIMITED TRIFED

## NAFED - National Agricultural Co-operative Marketing Federation of India Limited - ಭಾರತದ ರಾಷ್ಟ್ರೀಯ ಕೃಷಿ ಸಹಕಾರ ಮಾರುಕಟ್ಟೆ ಒಕ್ಕೂಟ



NAFED

ಈ ಸಂಸ್ಥೆಯು ಭಾರತದಲ್ಲಿ **ಕೃಷಿ ಉತ್ಪನ್ನಗಳಿಗೆ ಮಾರುಕಟ್ಟೆ** ಒದಗಿಸುವ ಸಹಕಾರಿ ವಲಯವಾಗಿ ಸ್ಥಾಪನೆ – **1958 ಅಕ್ಟೋಬರ್ 2.** ಭಾರತದಲ್ಲಿ ಕೃಷಿ ಉತ್ಪನ್ನಗಳಿಗೆ ಮಾರುಕಟ್ಟೆ ಸಹಕಾರ ನೀಡುವ ಅಪೆಕ್ಸ್ ಸಂಸ್ಥೆಯಾಗಿದ್ದು ಇದರ **ಕೇಂದ್ರ ಕಛೇರಿ ನವದೆಹಲಿಯಲ್ಲಿದೆ.** ದೆಹಲಿ, ಮುಂಬೈ, ಕೋಲ್ಕತ್ತ & ಚೆನ್ನೈಗಳಲ್ಲಿ ಪ್ರಾದೇಶಿಕ ಕಛೇರಿ ಹೊಂದಿದ್ದು, 28 ವಲಯ ಕಛೇರಿಗಳನ್ನು ಹೊಂದಿದೆ.

2008 ರಲ್ಲಿ ಹಣಕಾಸು ತಂತ್ರಜ್ಞಾನ ನಿಗಮದ ಜಂಟಿ ನಿಧಿಯ ಮೂಲಕ ರಾಷ್ಟ್ರೀಯ ಸ್ಪಾಟ್ ವಿನಿಮಯ ಸ್ಥಾಪಿಸಿದೆ. **ಕೇಂದ್ರ ಕೃಷಿ ಸಚಿವಾಲಯದಡಿಯಲ್ಲಿ** ಕಾರ್ಯ ನಿರ್ವಹಿಸುತ್ತಿದೆ.

## ಗ್ರಾಹಕ ರಕ್ಷಣಾ ಕಾನೂನು - 1986




- ಆಧುನಿಕ ಮಾರುಕಟ್ಟೆ ಸಿದ್ಧಾಂತವು ಗ್ರಾಹಕನನ್ನು ರಾಜ ಎಂದು ಪರಿಗಣಿಸಿದ್ದು, ಸರಕು & ಸೇವೆಗಳನ್ನು ಹಣವನ್ನು ಪಾವತಿಸಿ, ಖರೀದಿಸುವ ವ್ಯಕ್ತಿಯೇ **ಗ್ರಾಹಕ.** ಗ್ರಾಹಕ ಸ್ವಂತ ಅಥವಾ ಅನ್ಯರ ಉಪಯೋಗಕ್ಕೆ ಖರೀದಿಸಬೇಕೇ ವಿನಃ, ವ್ಯವಹಾರ ಉದ್ದೇಶಗಳಿಗೆ ಖರೀದಿ ಮಾಡಿದರೆ, ಗ್ರಾಹಕ ಎನಿಸುವುದಿಲ್ಲ.
- ಆಧುನಿಕ ಮಾರುಕಟ್ಟೆಯಲ್ಲಿ ಗ್ರಾಹಕ ತೂಕ & ಅಳತೆಯಲ್ಲಿ ತಪ್ಪು ಮಾಹಿತಿ, ಕಲಬೆರಕೆ, ಕಾಳಸಂತೆ ವ್ಯಾಪಾರ, ಕೃತಕ ಅಭಾವ ಮುಂತಾದ ಸಮಸ್ಯೆಗಳನ್ನು ಎದುರಿಸುತ್ತಿದ್ದು, ಇವುಗಳಿಂದ ರಕ್ಷಣೆ ನೀಡುವುದೇ **ಗ್ರಾಹಕನ ಹಿತರಕ್ಷಣೆ.**
- ಪ್ರತಿ ವರ್ಷ **ಮಾರ್ಚ್ 15** ರಂದು **ವಿಶ್ವ ಗ್ರಾಹಕನ ಹಕ್ಕುಗಳ ದಿನ** ಎಂದು ಆಚರಿಸಲಾಗುತ್ತಿದ್ದು, **ಡಿಸೆಂಬರ್ 24 ರಂದು ರಾಷ್ಟ್ರೀಯ ಗ್ರಾಹಕರ ದಿನ** ಎಂದು ಆಚರಿಸಲಾಗುತ್ತದೆ. ಇದರ ಮುಖ್ಯ ಉದ್ದೇಶ ಗ್ರಾಹಕನಲ್ಲಿ ಜಾಗೃತಿ ಮೂಡಿಸುವುದು.
- ಭಾರತ ಸರ್ಕಾರ 1986 ರಲ್ಲಿ ಗ್ರಾಹಕನ ಹಿತಾಸಕ್ತಿಯನ್ನು ಸಂರಕ್ಷಿಸುವ ಉದ್ದೇಶದಿಂದ **ಗ್ರಾಹಕ ಹಿತರಕ್ಷಣಾ ಕಾಯ್ದೆ** ಜಾರಿಗೆ ತಂದಿದೆ. ಇದರ ಅನ್ವಯ ಸುರಕ್ಷತೆಯ ಹಕ್ಕು, ಮಾಹಿತಿ ಪಡೆಯುವ ಹಕ್ಕು, ವಸ್ತುವಿನ ಆಯ್ಕೆಯ ಹಕ್ಕು, ಆಲಿಸುವ ಹಕ್ಕು, ಕುಂದು ಕೊರತೆಗಳನ್ನು ನಿವಾರಿಸುವ ಹಕ್ಕು, ಗ್ರಾಹಕರ ಶಿಕ್ಷಣದ ಹಕ್ಕು ಎಂಬ 6 ರೀತಿಯ ಹಕ್ಕುಗಳನ್ನು ನೀಡಲಾಗಿದೆ. ಇದರ ಜೊತೆಯಲ್ಲಿ ವಿಶ್ವ ಸಂಸ್ಥೆ ಮೂಲಭೂತ ಅವಶ್ಯಕತೆಗಳನ್ನು ಪಡೆಯುವ ಹಕ್ಕು, ಮಾಲಿನ್ಯಮುಕ್ತ ಪರಿಸರವನ್ನು ಪಡೆಯುವ ಹಕ್ಕು ಎಂಬ 2 ಪ್ರತ್ಯೇಕ ಹಕ್ಕುಗಳನ್ನು ಒದಗಿಸಿದೆ.
- ಈ ಕಾಯ್ದೆ ಅಡಿಯಲ್ಲಿ ಗ್ರಾಹಕರ ದೂರುಗಳನ್ನು ಪರಿಹರಿಸಿಕೊಳ್ಳಲು **ಜಿಲ್ಲಾ ಹಂತದಲ್ಲಿ** ಜಿಲ್ಲಾ ಗ್ರಾಹಕ ದೂರು ಪರಿಹಾರ ಸಂಸ್ಥೆ, ರಾಜ್ಯ ಮಟ್ಟದಲ್ಲಿ ರಾಜ್ಯ ಗ್ರಾಹಕ ದೂರು ಪರಿಹಾರ ಸಂಸ್ಥೆ & ರಾಷ್ಟ್ರಮಟ್ಟದಲ್ಲಿ ರಾಷ್ಟ್ರೀಯ ಗ್ರಾಹಕ ವಿವಾದಗಳ ಪರಿಹಾರ ಸಂಸ್ಥೆ ಸ್ಥಾಪಿಸಲಾಗಿದೆ.

# ಜನಸಂಖ್ಯಾ ಶಾಸ್ತ್ರ (Demography)

**ಒಂದು ದೇಶದ ಆರ್ಥಿಕಾಭಿವೃದ್ಧಿಯು ಕೇವಲ ನೈಸರ್ಗಿಕ ಸಂಪನ್ಮೂಲಗಳ ಮೇಲೆ ಅವಲಂಬನೆಯಾಗಿರುವುದಕ್ಕೆ ಬದಲಾಗಿ ಅವುಗಳನ್ನು ಸಮರ್ಪಕ ರೀತಿಯಲ್ಲ ಬಳಸಿಕೊಂಡು ನಿರೀಕ್ಷಿತ ಯೋಜನೆಗಳ ಅನ್ವಯ ಅಭಿವೃದ್ಧಿ ಸಾಧಿಸುವುದು ಆ ದೇಶದ ಮಾನವ ಸಂಪನ್ಮೂಲದ ಮೇಲೆ ಅವಲಂಬಿತವಾಗಿರುತ್ತದೆ. ಮಾನವ ಸಂಪನ್ಮೂಲ ಎಂದರೆ, ಕೇವಲ ಜನಸಂಖ್ಯೆಯಲ್ಲ. ಬದಲಾಗಿ ಜನಸಂಖ್ಯೆಯು ಉತ್ತಮವಾದ ಜ್ಞಾನ, ಶಿಕ್ಷಣ, ಕೌಶಲ್ಯ, ಆರೋಗ್ಯ ಸೌಲಭ್ಯ, ತರಬೇತಿ ಪಡೆಯುವುದಾಗಿರುತ್ತದೆ.**

- ಜನಸಂಖ್ಯೆಗೆ ಸಂಬಂಧಿಸಿದ ಅಂಕಿ ಅಂಶಗಳ ಅಧ್ಯಯನ ಶಾಸ್ತ್ರವನ್ನು **ಜನಸಂಖ್ಯಾಶಾಸ್ತ್ರ** ಎನ್ನುವರು.
- **ಡೆಮಾಗ್ರಫಿ** (Demography) ಎಂಬ ಆಂಗ್ಲ ಪದವು ಗ್ರೀಕ್‌ನ **ಡೆಮೋಸ್** ಮತ್ತು **ಗ್ರಾಫಿನ್** ಎಂಬ ಎರಡು ಪದಗಳಿಂದ ಬಂದಿದೆ. 1855ರಲ್ಲಿ **ಅಚಿಲ್ ಗಿಲಾರ್ಡ್** ಎಂಬುವವರು ಮೊದಲ ಬಾರಿಗೆ **ಡೆಮಾಗ್ರಫಿ** ಎಂಬ ಪದವನ್ನು ಬಳಕೆ ಮಾಡಿದರು.
- ಜನಸಂಖ್ಯಾ ಪ್ರಕ್ರಿಯೆಯ ದತ್ತಾಂಶವನ್ನು ವ್ಯವಸ್ಥಿತವಾಗಿ ಮೊದಲ ಬಾರಿ ಅಧ್ಯಯನ ಮಾಡಿದ ಕೀರ್ತಿ **"ಜಾನ್ ಗ್ರ್ಯಾಂಟ್"** ಅವರಿಗೆ ಸಲ್ಲುತ್ತದೆ. ಆದ್ದರಿಂದ ಇವರನ್ನು **ಜನಸಂಖ್ಯಾಶಾಸ್ತ್ರದ ಪಿತಾಮಹ** ಎನ್ನುವರು.

### ಜನಸಂಖ್ಯಾ ಸ್ಥಿತ್ಯಂತರ ಸಿದ್ಧಾಂತ (Theory of Demographic Transition):-

- **Frank W. Notestein**–1945ರಲ್ಲಿ ಅಭಿವೃದ್ಧಿ ಪಡಿಸಿದ್ದು, ಇದು ಜನಸಂಖ್ಯಾ ಬೆಳವಣಿಗೆ ದರದ ವಿವಿಧ ಹಂತಗಳನ್ನು ಪರಿಚಯಿಸುವ ಪರಿಕಲ್ಪನೆಯಾಗಿದೆ.

| ಹಂತ | ಸ್ಥಿತಿಗತಿ | ಅಭಿವೃದ್ಧಿ ಸ್ಥಿತಿ | ಜನ ಸಂಖ್ಯಾ ಬೆಳವಣಿಗೆ ದರ |
|---|---|---|---|
| 1 | ಜನನದರ ಹೆಚ್ಚು, ಮರಣ ದರ ಹೆಚ್ಚು | ಹಿಂದುಳಿದ ಹಂತ | ಕಡಿಮೆ |
| 2 | ಜನನದರ ಹೆಚ್ಚು, ಮರಣ ದರ ಕಡಿಮೆ | ಮುಂದುವರೆಯುತ್ತಿರುವ ಹಂತ | ಹೆಚ್ಚು |
| 3 | ಜನನದರ ಕಡಿಮೆ, ಮರಣ ದರ ಕಡಿಮೆ | ಮುಂದುವರೆದ ಹಂತ | ಕಡಿಮೆ |

- ಭಾರತ ಈ ಸಿದ್ಧಾಂತದಲ್ಲಿ 1921–31ರ ದಶಕದ ನಂತರ 2ನೇ ಹಂತದಲ್ಲಿ ಮುಂದುವರೆಯುತ್ತಾ ಸಾಗಿದೆ. ಇದಕ್ಕೆ ಮುಖ್ಯ ಕಾರಣ ವೈದ್ಯಕೀಯ ಕ್ಷೇತ್ರದ ಬೆಳವಣಿಗೆಯಿಂದ ಮರಣದರ ನಿರೀಕ್ಷಿತ ಪ್ರಮಾಣದಲ್ಲಿ ಕಡಿಮೆಯಾಗಿ ಜನನ ದರವನ್ನು ಪರಿಣಾಮಕಾರಿಯಾಗಿ ನಿಯಂತ್ರಿಸುವಲ್ಲಿ ವಿಫಲವಾಗಿರುವುದು.

### ಟಿ.ಆರ್.ಮಾಲ್ಥಸ್ – ಜನಸಂಖ್ಯಾ ಸಿದ್ಧಾಂತ (Malthusian Theory of Population)

- An Essay on the Principles of Population (1798) ಎಂಬ ಗ್ರಂಥದಲ್ಲಿ ಸಿದ್ಧಾಂತ ರೂಪಿಸಿದ್ದರು.

**ಸಿದ್ಧಾಂತದ ಮೂಲಾಂಶಗಳು:-**

- ಜನಸಂಖ್ಯೆಯು ರೇಖಾಗಣಿತ ದೋಪಾದಿಯಲ್ಲಿ ಹೆಚ್ಚಾಗುತ್ತದೆ.
- ಆಹಾರೋತ್ಪಾದನೆ ಅಂಕಗಣಿತ ದೋಪಾದಿಯಲ್ಲಿರುತ್ತದೆ.
- ಜನಸಂಖ್ಯೆ ಪ್ರತಿ 25 ವರ್ಷಗಳಿಗೊಮ್ಮೆ ದ್ವಿಗುಣಗೊಳ್ಳುತ್ತದೆ.
- ಜನಸಂಖ್ಯೆ ನಿಯಂತ್ರಣಕ್ಕೆ ಸ್ವಯಂ ಪ್ರತಿಬಂಧಕ ಮತ್ತು ಮುನ್ನೆಚ್ಚರಿಕೆ ಕ್ರಮಗಳನ್ನು ಅಳವಡಿಸಬೇಕೆಂದು ಸಿದ್ಧಾಂತ ತಿಳಿಸುತ್ತದೆ.

### ಜನಸಂಖ್ಯಾಶಾಸ್ತ್ರದ ಪ್ರಮುಖ ಪರಿಕಲ್ಪನೆಗಳು:-

**ಕಚ್ಚಾ ಜನನದರ (Crude Birth Rate):-** ಪ್ರತೀ 1000 ಜನಸಂಖ್ಯೆಗೆ ಜನಿಸುತ್ತಿರುವ ಮಕ್ಕಳ ಪ್ರಮಾಣದ ನಡುವಿನ ಅನುಪಾತವಾಗಿದೆ.

$$\text{ಜನನದರ} = \frac{\text{ಜನಿಸುತ್ತಿರುವ ಮಕ್ಕಳ ಸಂಖ್ಯೆ}}{\text{ಒಟ್ಟು ಜನಸಂಖ್ಯೆ}} \times 1000$$

**ಕಚ್ಚಾ ಮರಣದರ (Crude Death Rate):-** ಪ್ರತೀ 1000 ಜನಸಂಖ್ಯೆಯಲ್ಲಿ ಮರಣ ಹೊಂದುವ ಮಕ್ಕಳ ಪ್ರಮಾಣದ ನಡುವಿನ ಅನುಪಾತವಾಗಿದೆ.

$$\text{ಮರಣ ದರ} = \frac{\text{ಮರಣ ಹೊಂದುವವರ ಸಂಖ್ಯೆ}}{\text{ಒಟ್ಟು ಜನಸಂಖ್ಯೆ}} \times 1000$$

**ಶಿಶುಮರಣ ದರ IMR- Infant Mortality Rate :-** ಪ್ರತಿ 1000 ಮಕ್ಕಳಲ್ಲಿ ಮೊದಲ ವರ್ಷದ ಹುಟ್ಟುಹಬ್ಬವನ್ನು ಆಚರಿಸಿಕೊಳ್ಳುವ ಮೊದಲೇ ಮರಣ ಹೊಂದುವ ಮಕ್ಕಳ ಪ್ರಮಾಣವಾಗಿದೆ.

**ಮಗು ಮರಣ ದರ (CMR - Child Mortality Rate):–** ಪ್ರತಿ 1000 ಮಕ್ಕಳಲ್ಲಿ 5 ವರ್ಷದ ಒಳಗೆ ಮರಣ ಹೊಂದುವ ಮಕ್ಕಳ ಪ್ರಮಾಣವಾಗಿದೆ.

**ತಾಯ್ತನ ಮರಣದರ (MMR - Maternal Mortality Rate):–** ಪ್ರತಿ 1 ಲಕ್ಷ ಗರ್ಭಿಣಿ ಜನಸಂಖ್ಯೆಯಲ್ಲಿ ಮಗುವಿಗೆ ಜನ್ಮ ನೀಡಿ ಅಥವಾ ನೀಡುವ ವೇಳೆಯಲ್ಲಿ ಮರಣ ಹೊಂದುವ ತಾಯಂದಿರ ಪ್ರಮಾಣ.

**ಜೀವನ ನಿರೀಕ್ಷೆ (Life Expectency):-** ಮಗು ಹುಟ್ಟಿದಂದಿನಿಂದ ಎಷ್ಟು ವರ್ಷಗಳ ಕಾಲ ಸರಾಸರಿ ವರ್ಷಗಳು ಬದುಕುಳಿಯುತ್ತದೆ ಎಂಬುದನ್ನು ತಿಳಿಸುತ್ತದೆ.

**ಜನಸಂಖ್ಯಾ ಬೆಳವಣಿಗೆ ದರ (Growth Rate of Population):-** ಶೇಕಡವಾರು ಪ್ರಮಾಣದಲ್ಲಿ ಜನಸಂಖ್ಯೆ ಪ್ರಮಾಣವನ್ನು ವ್ಯಕ್ತಪಡಿಸುವ ಪರಿಕಲ್ಪನೆ. ಅಥವಾ ಜನನದರ & ಮರಣದರದ ನಡುವಿನ ವ್ಯತ್ಯಾಸವಾಗಿರುತ್ತದೆ.

$$gt = \frac{Qt - Qt\text{-}1}{qt - 1} \times 100$$

gt ಎಂದರೆ t ಅವಧಿಯಲ್ಲಿ ಜನಸಂಖ್ಯಾ ಬೆಳವಣಿಗೆ ದರ

qt ಎಂದರೆ ಈಗಿನ ಅವಧಿಯ ಜನಸಂಖ್ಯಾ ಬೆಳವಣಿಗೆ ದರ

qt-1 ಹಿಂದಿನ ಅವಧಿಯ ಜನಸಂಖ್ಯಾ ಬೆಳವಣಿಗೆ ದರ

ಜನಸಂಖ್ಯಾ ಬೆಳವಣಿಗೆ ದರವನ್ನು 2 ರೀತಿಯಲ್ಲಿ ವರ್ಗೀಕರಿಸಬಹುದು.

**ಜನಸಂಖ್ಯಾ ವಾರ್ಷಿಕ ಬೆಳವಣಿಗೆ ದರ (Annual Growth Rate of Population) :-** ಪ್ರತಿ ವರ್ಷ ಹೆಚ್ಚಳವಾಗುವ ಜನಸಂಖ್ಯೆಯ ಶೇಕಡಾವಾರು ಪ್ರಮಾಣ. ಅಥವಾ ದಶವಾರ್ಷಿಕ ಬೆಳವಣಿಗೆ ದರವನ್ನು 10 ರಿಂದ ಭಾಗಿಸಿದಾಗ ಲಭ್ಯವಾಗುವ ಪ್ರಮಾಣ.

**ಜನಸಂಖ್ಯಾ ದಶ ವಾರ್ಷಿಕ ಬೆಳವಣಿಗೆ ದರ (Decadal Growth Rate of Population):-** ಪ್ರತಿ 10 ವರ್ಷಗಳ ಅವಧಿಯಲ್ಲಿ ಹೆಚ್ಚಳವಾಗುವ ಜನಸಂಖ್ಯೆಯ ಶೇಕಡಾವಾರು ಪ್ರಮಾಣ. ಅಥವಾ ವಾರ್ಷಿಕ ಬೆಳವಣಿಗೆ ದರವನ್ನು 10 ರಿಂದ ಗುಣಿಸಿದಾಗ ಲಭ್ಯವಾಗುವ ಪ್ರಮಾಣ.

**ಜನಸಾಂದ್ರತೆ (Density of Popula...** ಚ.ಕಿ.ಮೀ ಭೂಪ್ರದೇಶದಲ್ಲಿ ವಾಸ... ಜನಸಂಖ್ಯೆಯ ಪ್ರಮಾಣವಾಗಿದೆ.

$$\text{ಜನಸಾಂದ್ರತೆ} = \frac{\text{ಒಟ್ಟು ಜನಸಂಖ್ಯೆ}}{\text{ಒಟ್ಟು ಭೌಗೋಳಿ...}}$$

**ಲಿಂಗಾನುಪಾತ (Sex Ratio):-** ಪ್ರತಿ 10... ಜನಸಂಖ್ಯೆಗಿರುವ ಮಹಿಳೆಯರ ಪ್ರಮಾ...

**ಮಕ್ಕಳ ಲಿಂಗಾನುಪಾತ (Child Sex ra...** 1000 ಗಂಡು ಮಕ್ಕಳು (0–6 ವರ್ಷ) ಮಕ್ಕಳ ನಡುವಿನ ಅನುಪಾತವಾಗಿದೆ.

**ತಲಾ ವರಮಾನ (Percapta I...** ಒಂದು ನಿರ್ದಿಷ್ಟ ಅವಧಿಯಲ್ಲಿ ಒಟ್ಟು... ವರಮಾನವನ್ನು ಆ ದೇಶದ ಜನಸ... ಭಾಗಿಸಿದಾಗ ಬರುವ ಸರಾಸರಿ ಆದಾಯ...

$$\text{ತಲಾವರಮಾನ} = \frac{\text{ಒಟ್ಟು ರಾಷ್ಟ್ರೀಯ ವರಮಾ...}}{\text{ಒಟ್ಟು ಜನಸಂಖ್ಯೆ}}$$

**ದೂರವಾಣಿ ಸಾಂದ್ರತೆ (Tele Density...** 100 (ನೂರು) ಜನರಲ್ಲಿ ದೂರವಾಣಿ... ಹೊಂದಿರುವವರ ಸಂಖ್ಯೆಯನ್ನು ತಿಳಿಸು...

**ಜನಸಂಖ್ಯಾ ಪಿರಮಿಡ್ಡು (Population Py...** ಪುರುಷ ಮತ್ತು ಮಹಿಳೆಯರ ವಿವಿಧ ವಯ... ಜನಸಂಖ್ಯೆಯ ನಕ್ಷಾ ನಿರೂಪಣೆಯಾಗಿ...

**ಜನಸಂಖ್ಯಾ ಲಾಭಾಂಶ (Demograph... dend):-** ಒಟ್ಟು ಜನಸಂಖ್ಯೆಯಲ್ಲಿ ಯುವ... ಹೆಚ್ಚಾಗುವುದರಿಂದ ಲಭ್ಯವಾಗುವ ಅನು... ತಿಳಿಸುವ ಪರಿಕಲ್ಪನೆಯಾಗಿದೆ.

**BIMARU-** ಅಂದರೆ **ಬಿಹಾರ, ಮಧ್ಯಪ್ರದೇಶ... ಮತ್ತು ಉತ್ತರ ಪ್ರದೇಶ.** ಜನಸಂಖ್ಯಾ... ಮೂಲ ಈ ರಾಜ್ಯಗಳಾಗಿದ್ದು, ದೇ... ಜನಸಂಖ್ಯೆಯಲ್ಲಿ ಶೇ 39 ರಷ್ಟು ಪಾಲು... ಬೆಳವಣಿಗೆಯಲ್ಲಿ ಶೇ 42 ಹಾಗೂ... ಪ್ರಮಾಣ ಕೇವಲ ಶೇ 48 ಮಾತ್ರ ಆಗಿ...

**DEMARU - (Daughter Eliminat...** ದರೆ ಮಕ್ಕಳ ಲಿಂಗಾನುಪಾತ ಇಳಿಕೆಗೊಂ... ಪಂಜಾಬ್, ಹರಿಯಾಣ, ಹಿಮಾ... ಗುಜರಾತ್, ಮಹಾರಾಷ್ಟ್ರಗಳು ಸೇರಿವೆ.

(ಕರ್ನಾಟಕದಲ್ಲಿ 2001– 2011 ರ ಅವಧಿ... ಲಿಂಗಾನುಪಾತ ಇಳಿಕೆಗೊಂಡ... **ಚಾಮರಾಜನಗರ** (22%), ದಾವಣ... **ಚಿತ್ರದುರ್ಗ** (13%) ಮತ್ತು ಹಾಸನ (12...

**ವಿಶ್ವ ರಾಷ್ಟ್ರಗಳ ಜನಸಂಖ್ಯಾ ನಿಧಿ (UNPF - United Nations Population Fund):-** ಅಂದರೆ ಮೊದಲ ಮಗುವಿನ ಜನನವನ್ನು ನಿಧಾನಿಸುವ ಮತ್ತು ಮುಂದಿನ ಮಕ್ಕಳ ಜನನಕ್ಕೆ ಸಂಬಂಧಿಸಿದಂತೆ ಅಂತರವಿಡುವ ಮಾರ್ಗದರ್ಶಿ ಸೂತ್ರವಾಗಿದೆ.

**ಸಬಲೀಕೃತ ಕ್ರಿಯಾ ರಾಜ್ಯಗಳ ಸಮೂಹ (EAGS - Empowered Action Group):-** ಭಾರತದ ದೇಶದ ಜನಸಂಖ್ಯಾ ಬೆಳವಣಿಗೆ ದರವು ರಾಜಸ್ಥಾನ, ಉತ್ತರ ಪ್ರದೇಶ, ಬಿಹಾರ, ಜಾರ್ಖಂಡ್, ಮಧ್ಯಪ್ರದೇಶ, ಛತ್ತೀಸ್‌ಘರ್, ಒಡಿಶಾ, ಉತ್ತರಾಖಂಡ ಈ 8 ರಾಜ್ಯಗಳ ಜನಸಂಖ್ಯಾ ಬೆಳವಣಿಗೆ ದರದ ಮೇಲೆ ನಿರ್ಧರಿಸಲ್ಪಡುತ್ತದೆ. ಈ ರಾಜ್ಯಗಳ ಗುಂಪನ್ನು **ಸಬಲೀಕೃತ ಕ್ರಿಯಾ ರಾಜ್ಯಗಳ ಸಮೂಹ** ಎಂತಲೂ ಉಳಿದ ರಾಜ್ಯಗಳ ಗುಂಪನ್ನು **ಸಬಲೀಕೃತವಲ್ಲದ ಕ್ರಿಯಾ ರಾಜ್ಯಗಳ ಸಮೂಹ** (Non EAGS) ಎನ್ನುವರು.

**ವಿಶ್ವ ಜನಸಂಖ್ಯಾ ದಿನಾಚರಣೆ:-** 1989 ಜುಲೈ 11 ರ ನಂತರ ವಿಶ್ವ ಮಟ್ಟದಲ್ಲಿ ವಿಶ್ವ ಜನಸಂಖ್ಯಾ ದಿನಾಚರಣೆಯನ್ನು ಯು.ಎನ್.ಡಿ.ಪಿ ರವರು ಪ್ರತಿ ವರ್ಷ ಆಚರಿಸುವಂತೆ ಘೋಷಿಸಿದರು. ಮಾನವ ಹಕ್ಕುಗಳು, ಲಿಂಗ ಸಮಾನತೆ, ಮಾತೃತ್ವ ಆರೋಗ್ಯ & ಕಲ್ಯಾಣ, ಬಡತನ ಮುಂತಾದ ವಿಷಯಗಳ ಬಗೆಗೆ ವಿಶ್ವದ ಜನಸಂಖ್ಯೆಯಲ್ಲಿ ಅರಿವನ್ನು ಮೂಡಿಸುವುದು ಮುಖ್ಯ ಉದ್ದೇಶವಾಗಿದೆ. 2016 ಜುಲೈ 11 ರಂದು ವಿಶ್ವ ಜನಸಂಖ್ಯಾ ದಿನವನ್ನು **Investigating in Teenage Girl** ಎಂಬ ಧ್ಯೇಯವಾಕ್ಯದೊಂದಿಗೆ ಆಚರಿಸಲಾಯಿತು. 2017 ಜುಲೈ 11 ರ ಜನಸಂಖ್ಯಾ ದಿನದ ಧ್ಯೇಯವಾಕ್ಯ **"Family Planning: Empowering People, Developing Nations."** ಕಾಕತಾಳೀಯ ಎಂಬಂತೆ 2017 ಜುಲೈ 11 ರಂದು ಕುಟುಂಬ ಯೋಜನಾ ಸಭೆಯು ಕೂಡ ನಡೆಯಲಿದೆ.

## ಭಾರತದ ಜನಸಂಖ್ಯಾ ಮಾಹಿತಿ.

- ವಿಶ್ವದಲ್ಲಿ ಭಾರತ ಭೌಗೋಳಿಕವಾಗಿ **7ನೇ ದೊಡ್ಡ ರಾಷ್ಟ್ರ** (ಶೇ 2.4 ವಿಸ್ತೀರ್ಣ)
- ಜನಸಂಖ್ಯೆಯಲ್ಲಿ 2ನೇ ದೊಡ್ಡ ರಾಷ್ಟ್ರ **(ಶೇ 17.7 ರಷ್ಟು** ಜನಸಂಖ್ಯೆ)
- 1790ರಲ್ಲಿ **ಅಮೆರಿಕಾದಲ್ಲಿ** ನಡೆದ ಜನಗಣತಿ ವಿಶ್ವದ ಮೊದಲ ಜನಗಣತಿ ಎನಿಸಿದೆ.
- ಭಾರತದಲ್ಲಿ ಮೊದಲ ಬಾರಿ ಜನಗಣತಿ–**1871–72–ದಾದಾಬಾಯಿ ನವರೋಜಿ.**
- ಕ್ರಮಬದ್ಧವಾದ ಜನಗಣತಿ–**1881** ರಲ್ಲಿ ಆರಂಭ
- ಸ್ವಾತಂತ್ರ್ಯ ನಂತರ ಮೊದಲು **1951** ಇತ್ತೀಚೆಗೆ **2011** ರಲ್ಲಿ ಜನಗಣತಿ ನಡೆದಿದೆ. ಈ ಗಣತಿಯು ಸ್ವಾತಂತ್ರ್ಯ ನಂತರ ನಡೆದ **7ನೇಯ** ಮತ್ತು ಒಟ್ಟಾರೆ **15ನೇ** ಜನಗಣತಿಯಾಗಿದೆ.
- **1921**ರಲ್ಲಿ ಜನಸಂಖ್ಯಾ **"ಮಹಾ ಇಬ್ಬಾಗದ ವರ್ಷ"**.
- **1921–31** ರ ದಶಕವನ್ನು **"ಜನಸಂಖ್ಯಾ ಇಬ್ಬಾಗದ ದಶಕ"** ಎಂದು ಕರೆಯಲಾಗುತ್ತದೆ. ಕಾರಣ ಜನಸಂಖ್ಯೆಯು ಶೇ 11.1ರ ದರದಲ್ಲಿ ಏರಿಕೆಯಾಗಲು ಪ್ರಾರಂಭಿಸಿದ್ದು, ತದನಂತರದ ದಶಕಗಳಲ್ಲಿ ಜನಸಂಖ್ಯಾ ಬೆಳವಣಿಗೆ ತೀವ್ರ ಹೆಚ್ಚಾಗಲು ಕಾರಣವಾಯಿತು.
- **2001–11**ರ ದಶಕವನ್ನು **"ಜನಸಂಖ್ಯಾ ಬೆಳವಣಿಗೆಯ ಇಳಿಕೆ ದರದ ದಶಕ"** (ಶೇ 17.64 ಬೆಳವಣಿಗೆ ದರ) ಎನ್ನಲಾಗುತ್ತಿದೆ. ಕಾರಣ 1911–21 ರ ದಶಕದ ನಂತರ ಮೊದಲ ಬಾರಿಗೆ **2001 – 2011** ರ ದಶಕದಲ್ಲಿ **ಜನಸಂಖ್ಯಾ ಬೆಳವಣಿಗೆ ದರ ಇಳಿಕೆಯಾಗಿದೆ.**
- ಪ್ರಸ್ತುತ **"ಭಾರತದ ಜನಗಣತಿ ಆಯೋಗ"** ಜನಗಣತಿ ಕಾರ್ಯ ನಡೆಸುವ ಸಂಸ್ಥೆ.
- **1952**ರಲ್ಲಿ ವಿಶ್ವದಲ್ಲಿ ಮೊಟ್ಟ ಮೊದಲ ಬಾರಿಗೆ ಭಾರತವು **ಕುಟುಂಬ ಯೋಜನೆಯನ್ನು** ಜಾರಿಗೆ ತಂದ ರಾಷ್ಟ್ರವಾಗಿದೆ. ಆದರೆ ಈ ಯೋಜನೆಯು 1977ರಲ್ಲಿ **ಕುಟುಂಬ ಕಲ್ಯಾಣ ಯೋಜನೆಯಾಗಿ** ಮರುನಾಮಕರಣಗೊಂಡಿದೆ.
- ಪ್ರಧಾನ ಮಂತ್ರಿಯವರ ನೇತೃತ್ವದಲ್ಲಿ **2000ರ ಮೇ 11** ರಲ್ಲಿ ರಾಷ್ಟ್ರೀಯ ಜನಸಂಖ್ಯಾ ಆಯೋಗವನ್ನು ನೇಮಕ ಮಾಡಲಾಗಿದ್ದು, 2005ರ ಮೇ 19ರಲ್ಲಿ ಈ ಆಯೋಗ ಮನರ್ ರಚನೆಗೊಂಡಿದೆ.

**ವಿಶ್ವದ ಜನಸಂಖ್ಯಾ ಇತಿಹಾಸ**

| ವರ್ಷ | ವಿಶೇಷತೆ |
|---|---|
| 1804 | Day of 1 st Billion |
| 1927 | Day of 2 nd Billion |
| 1960 | Day of 3 rd Billion |
| 1974 | Day of 4 th Billion |
| 1987 ಜುಲೈ 11 | Day of 5 th Billion |
| 1999ರ ಅಕ್ಟೋಬರ್ 12 | "Day of 6th Billion" |
| **2011ರ ಅಕ್ಟೋಬರ್ 31** | **"Day of 7th Billion"** ಎಂದು UNPF ಗುರುತಿಸಿದೆ. |
| 2022 ರಿಂದ 2034 ಅಂದಾಜು | **"Day of 8th Billion"** |

## ರಾಷ್ಟ್ರೀಯ ಜನಸಂಖ್ಯಾ ನೀತಿ - 2000

✦ 2000 ಮೇ 11 ರಂದು ಭಾರತದ ಒಟ್ಟು ಜನಸಂಖ್ಯೆ 100 ಕೋಟಿಯನ್ನು ಮೀರಿದ್ದು, 2050 ರ ಒಳಗೆ ಚೀನಾ ದೇಶವನ್ನು ಮೀರಿಸಿ, ವಿಶ್ವದಲ್ಲೇ ಅಗ್ರ ಸ್ಥಾನಕ್ಕೇರಲಿದೆ ಎಂದು ಅಂದಾಜಿಸಿದೆ.

✦ ಜನಸಂಖ್ಯಾ ಸ್ಫೋಟದಿಂದ ಉಂಟಾಗುವ ಪರಿಣಾಮಗಳನ್ನು ನಿಯಂತ್ರಿಸಲು 9ನೇ ಪಂಚವಾರ್ಷಿಕ ಯೋಜನೆಯಡಿಯಲ್ಲಿ ಕೇಂದ್ರ ಸರ್ಕಾರವು **2000 ಫೆಬ್ರವರಿ 15 ರಂದು** ಕುಟುಂಬ ಕಲ್ಯಾಣ ಕಾರ್ಯಕ್ರಮದಡಿಯಲ್ಲಿ ಕೇಂದ್ರ ಆರೋಗ್ಯ & ಕುಟುಂಬ ಕಲ್ಯಾಣ ಸಚಿವಾಲಯದ ವತಿಯಿಂದ ರಾಷ್ಟ್ರೀಯ ಜನಸಂಖ್ಯಾ ನೀತಿಯನ್ನು ಪ್ರಕಟಪಡಿಸಿತು.

**ಉದ್ದೇಶಗಳು:-**

✦ **ತತ್‌ಕ್ಷಣದ ಉದ್ದೇಶ:-** ಆರೋಗ್ಯ ಸೇವಾ ಸೌಕರ್ಯಗಳನ್ನು ಕಲ್ಪಿಸುವುದು, ಮರು ಉತ್ಪಾದಕ ಸೇವೆ, ಗರ್ಭನಿರೋಧಕ & ಮಕ್ಕಳ ಆರೋಗ್ಯ ಪ್ರತಿರಕ್ಷಣಾ ಸೇವೆಗಳನ್ನು ಒದಗಿಸುವುದು.

✦ **ಮಧ್ಯಮ ಅವಧಿಯ ಉದ್ದೇಶಗಳು:-** ಅಂತರ್ ವಲಯ ಕಾರ್ಯರೂಪ ತಂತ್ರಗಳ ಮೂಲಕ 2010 ರ ಒಳಗೆ ಒಟ್ಟು ಸಂತಾನೋತ್ಪತ್ತಿಯ ದರವನ್ನು ನಿಯಂತ್ರಿಸುವುದು.

✦ **ದೀರ್ಘಾವಧಿ ಉದ್ದೇಶಗಳು:-** 2045 ರ ವೇಳೆಗೆ ಜನಸಂಖ್ಯಾ ಬೆಳವಣಿಗೆ ದರದಲ್ಲಿ ಸ್ಥಿರೀಕರಣ ಹಂತವನ್ನು ತಲುಪುವುದು, ಸುಸ್ಥಿರ ಆರ್ಥಿಕ ಬೆಳವಣಿಗೆ, ಸಾಮಾಜಿಕ ಅಭಿವೃದ್ಧಿ & ಪರಿಸರ ರಕ್ಷಣೆ ಮಾಡುವುದು.

**ಗುರಿಗಳು:-**

✦ 2045 ರ ವೇಳಗೆ ಶೂನ್ಯ ಜನಸಂಖ್ಯಾ ಬೆಳವಣಿಗೆ ದರ ಸಾಧಿಸುವುದು.

✦ ಶಿಶುಮರಣ ದರವನ್ನು ಪ್ರತಿ ಸಾವಿರಕ್ಕೆ ಶೇ 30 ಕ್ಕೆ ಕಡಿಮೆಗೊಳಿಸುವುದು.

✦ ಮಾತೃತ್ವ ಮರಣ ದರವನ್ನು ಪ್ರತಿ 1 ಲಕ್ಷಕ್ಕೆ 100 ಕ್ಕಿಂತ ಕಡಿಮೆಗೊಳಿಸುವುದು.

✦ 2010 ರ ವೇಳೆಗೆ ಜನನ ದರವನ್ನು ಪ್ರತಿ ಸಾವಿರಕ್ಕೆ 21 ಕ್ಕೆ ಕಡಿಮೆಗೊಳಿಸುವುದು.

✦ 2010 ರ ವೇಳೆಗೆ ಒಟ್ಟು ಸಂತಾನೋತ್ಪತ್ತಿ ದರವನ್ನು 2.1 ಕ್ಕೆ ಕಡಿಮೆಗೊಳಿಸುವುದು.

✦ 6 ರಿಂದ 14 ವರ್ಷದೊಳಗಿನ ಮಕ್ಕಳಿಗೆ ಉಚಿತ & ಕಡ್ಡಾಯ ಶಿಕ್ಷಣ, ಶಾಲೆಯಿಂದ ಹೊರಗುಳಿದ ಮಕ್ಕಳ ಸಂಖ್ಯೆ ಕಡಿಮೆ ಮಾಡುವುದು.

## 7 ಬಿಲಿಯನ್ ಮಗು (7 Billionth Child)

✦ 2011 ಅಕ್ಟೋಬರ್ 31 ರಂದು ಉ. ಪ್ರದೇಶದ ಮಾಲ ಗ್ರಾಮದಲ್ಲಿ **ನರ್ಗೀಸ್ (Nargis)** ಎಂಬ ಹೆಣ್ಣುಮಗುವು ಜನನವಾಗಿದ್ದು, ಈ ಮಗುವು ಜಗತ್ತಿನ 7 ಬಿಲಿಯನ್ ಮಗುವಾಗಿದೆ.

✦ ವಿಶ್ವಸಂಸ್ಥೆಯು ಅಕ್ಟೋಬರ್ 31 2011 ನ್ನು 7 ಗಂಟೆ 25 ನಿಮಿಷಕ್ಕೆ (ಭಾರತದ ಕಾಲಮಾನ, 1 ಗಂಟೆ 55 ನಿಮಿಷದಲ್ಲಿ) ಜನಿಸಿದ ಮಗುವನ್ನು ಜಾಗತಿಕವಾಗಿ 7 ಬಿಲಿಯನ್ ಮಗು ಎಂದು ಘೋಷಿಸಿತು. ಈ ಮೂಲಕ ಭಾರತದ ಹೆಣ್ಣುಮಗುವೊಂದು ಜಗತ್ತಿನ 7 ಬಿಲಿಯನ್‌ನೇ ಮಗುವಾಗಿದೆ.

## ಭಾರತದ ಜನಗಣತಿ ಆಯುಕ್ತ... ರಿಜಿಸ್ಟ್ರಾರ್ ಜನರಲ್

ಭಾರತದ ಕೇಂದ್ರ ಸರ್ಕಾರದ ... ಸಚಿವಾಲಯದ ಅಧೀನದ... ಈ ಸಂಘಟನೆಯು ... ಜನಸಂಖ್ಯೆಗೆ ಸಂಬಂಧಿಸಿದ ... ಮಾಹಿತಿಯನ್ನು ಸಮೀಕ್ಷೆ ... ಸಂಗ್ರಹಿಸಿ ಪ್ರಕಟಪಡಿಸುವ ... ಹೊಂದಿದೆ. ಪ್ರಧಾನಮಂತ್ರಿ ... ಕ್ಯಾಬಿನೆಟ್ ನೇಮಕಾತಿ ... ಡಾ|| ಸಿ. ಚಂದ್ರಮೌಳಿ ನಂತರ ... ಅವರನ್ನು ಜನಗಣತಿ ಆಯುಕ್ತ... ರಿಜಿಸ್ಟ್ರಾರ್ ಜನರಲ್ ಆಗಿ ... ಮಾಡಿದೆ. ಈ ಹುದ್ದೆಯು ... ಸರ್ಕಾರದ ಜಂಟಿ ಕಾರ್ಯ... ಹುದ್ದೆಗೆ ಸಮನಾಗಿದೆ.

## ಆಧಾರ್ (Aadhar)

ಭಾರತದ ನಿವಾಸಿ... ಗುರುತಿಸಲು 12 ಸಂಖ್ಯೆಯ ... ವಿಶಿಷ್ಟ ಗುರುತಿನ ಸಂಖ್ಯೆಗಳನ್ನು ... ಸರ್ಕಾರವು **2016 ಜುಲೈ 12** ... ಸ್ಥಾಪಿಸಿದ UIDAI-Unique Ide... cation Authority of India ... ಬಯೋಮೆಟ್ರಿಕ್ & ಜನಸಂ... ದತ್ತಾಂಶದ ಆಧಾರದ ಮೇಲೆ ... ರ ಆಧಾರ್ ಕಾಯ್ದೆಗೆ ಅನುಗುಣ... ಭಾರತದ ಕೇಂದ್ರ ಸರ್ಕಾರದ ವಿದ್ಯು... **& ಮಾಹಿತಿ ತಂತ್ರಜ್ಞಾನ ಸಚಿವಾಲ...** ಅಧೀನದಲ್ಲಿ ವಿತರಿಸಲಾಗುತ್ತಿದೆ. ... **2009 ಜನವರಿ 28 ರಂದು** ... ಮೊದಲ ಬಾರಿಗೆ ಉದ್ಘಾಟಿಸಲಾ... ಪ್ರಾಧಿಕಾರದ ಮೊದಲ ಮುಖ್ಯ... ನಂದನ್ ನಿಲೇಕಣಿ ... ಕಾರ್ಯನಿರ್ವಹಿಸಿದ್ದಾರೆ.

ವಿಶ್ವದಲ್ಲಿಯೇ ಅತ್ಯಂತ ... **ಬಯೋಮೆಟ್ರಿಕ್** ಐ.ಡಿ. ... ಆಧಾರ್ ಆಗಿದ್ದು, 18 ವರ್ಷ ... ಅದಕ್ಕಿಂತ ಮೇಲ್ಪಟ್ಟ ಶೇ 99 ... ಭಾರತೀಯರು ಆಧಾರ್ ... ಚೀಟಿ ಹೊಂದಿದ್ದಾರೆ.

# 2011ರ ಜನಗಣತಿಯ ಸಂಕ್ಷಿಪ್ತ ಮಾಹಿತಿ

(ಶೀರ್ಷಿಕೆ Our Census, Our Future )

| | ಭಾರತ | | | ಕರ್ನಾಟಕ | | |
|---|---|---|---|---|---|---|
| ಸೂಚಕಗಳು | ಗರಿಷ್ಠ ರಾಜ್ಯ | ಕನಿಷ್ಠ ರಾಜ್ಯ | ಸರಾಸರಿ | ಗರಿಷ್ಠ ಜಿಲ್ಲೆ | ಕನಿಷ್ಠ ಜಿಲ್ಲೆ | ಸರಾಸರಿ |
| ಭೌಗೋಳಿಕ ವಿಸ್ತೀರ್ಣ | ರಾಜಸ್ಥಾನ (3,42,239 ಚ.ಕಿ.ಮೀ) | ಗೋವಾ (3,702 ಚ.ಕಿ.ಮೀ) | 32,87,263 (ವಿಶ್ವದಲ್ಲಿ 7 ನೇ ಸ್ಥಾನ 2.4%) | ಬೆಳಗಾವಿ (13,415 ಚ.ಕಿ.ಮೀ) | ಬೆಂಗಳೂರು ನಗರ (741 ಚ.ಕಿ.ಮೀ) | 1,91,791 ಚ.ಕಿ.ಮೀ (ದೇಶದಲ್ಲಿ 7ನೇ ಸ್ಥಾನ 5.83%) |
| ಜನಸಂಖ್ಯೆ | ಉ.ಪ್ರದೇಶ (19.98 ಕೋಟಿ 16.5%) | ಸಿಕ್ಕಿಂ 6.11 ಲಕ್ಷ (0.05%) | 1,21,07,26,932 (ವಿಶ್ವದಲ್ಲಿ 2ನೇ ಸ್ಥಾನ 17.7%) | ಬೆಂಗಳೂರು ನಗರ (95,88,910) | ಕೊಡಗು (5,54,762) | 6,10,95,000 (ದೇಶದಲ್ಲಿ 8 ನೇ ಸ್ಥಾನ 5.05%) |
| ಸಾಕ್ಷರತೆ | ಕೇರಳ (93.91 %) | ಬಿಹಾರ 61.80% (ಮಹಿಳಾ ಸಾಕ್ಷರತೆ ಕಡಿಮೆ ರಾಜಸ್ಥಾನ 52.66%) | 73% (ಪುರುಷರ ಸಾಕ್ಷರತೆ 82.14%, ಮಹಿಳಾ ಸಾಕ್ಷರತೆ 65.46%) | ದ.ಕನ್ನಡ (88.6%) | ಯಾದಗಿರಿ (52.4%) | 75.40% (ದೇಶದಲ್ಲಿ 9ನೇ ಸ್ಥಾನ) (ಪುರುಷ 82.47%, ಮಹಿಳೆ 66.01%) |
| ಜನ ಸಾಂದ್ರತೆ | ಬಿಹಾರ (1,102) | ಅರುಣಾಚಲ ಪ್ರದೇಶ (17) | 382 | ಬೆಂಗಳೂರು ನಗರ (4,378) | ಕೊಡಗು (135) | 319 |
| ಲಿಂಗಾನುಪಾತ | ಕೇರಳ (1,084) | ಹರಿಯಾಣ (879) | 943 | ಉಡುಪಿ (1,093) | ಬೆಂಗಳೂರು ನಗರ (908) | 973 |
| ಮಕ್ಕಳ ಲಿಂಗಾನುಪಾತ (0–6ವರ್ಷ) | ಮಿಜೋರಾಂ (970) | ಹರಿಯಾಣ (834) | 918 | ಯಾದಗಿರಿ (15.83% ಇಳಿಕೆ) | ಉಡುಪಿ (8.54% ಇಳಿಕೆ) | 948 |
| 2001 ರಿಂದ 2011 ರ ದಶವಾರ್ಷಿಕ ಬೆಳವಣಿಗೆ ದರ | ಮೇಘಾಲಯ (27.8%) | ನಾಗಾಲ್ಯಾಂಡ್ (–0.5%) | 17.64% | ಬೆಂಗಳೂರು ನಗರ (46.68%) | ಚಿಕ್ಕಮಗಳೂರು (–0.28%) | 15.6% |
| ಅರಣ್ಯ ಪ್ರದೇಶ (%) | ಮಧ್ಯಪ್ರದೇಶ (25.15%) | ಪಂಜಾಬ್ (3.52%) | 21.23% | ಉ. ಕನ್ನಡ | ವಿಜಯಪುರ | 22.61% (36,132 ಚ.ಕಿ.ಮಿ) |

**ಕರ್ನಾಟಕ – ಪರಿಷ್ಕೃತ ಅಂಕಿ ಅಂಶದ ಮಾಹಿತಿ:-**

+ 1. 2011 ರ ಪ್ರಕಾರ ಭೌಗೋಳಿಕ ವಿಸ್ತೀರ್ಣದಲ್ಲಿ ಸ್ಥಾನ – 8ನೇ ಸ್ಥಾನ & ಜನಸಂಖ್ಯೆಯಲ್ಲಿ 9ನೇ ಸ್ಥಾನ. ಆದರೆ 2014 ಜೂನ್ 2 ರಂದು ಆಂಧ್ರಪ್ರದೇಶದಿಂದ ತೆಲಂಗಾಣ ರಾಜ್ಯವು 29ನೇ ರಾಜ್ಯವಾಗಿ ಉಗಮವಾಯಿತು.
+ ಈ ಹಿನ್ನಲೆಯಲ್ಲಿ ಕರ್ನಾಟಕ ರಾಜ್ಯದ ಭೌಗೋಳಿಕ ಸ್ಥಾನ & ಜನಸಂಖ್ಯಾ ಸ್ಥಾನದಲ್ಲಿ ಬದಲಾವಣೆ ಹೊಂದಿತು.
+ ತೆಲಂಗಾಣ ರಾಜ್ಯ ರಚನೆಯಾದ ನಂತರ ಕರ್ನಾಟಕವು ಭೌಗೋಳಿಕವಾಗಿ 7ನೇ ಸ್ಥಾನ & ಜನಸಂಖ್ಯೆಯಲ್ಲಿ 8 ನೇ ಸ್ಥಾನ ಪಡೆದಿದೆ.
+ 2011 ರ ಅಂದಾಜು ಅಂಕಿ ಅಂಶದ ಪ್ರಕಾರ ಕರ್ನಾಟಕದ ಲಿಂಗಾನುಪಾತ 968. ಆದರೆ ಪರಿಷ್ಕೃತ ಮಾಹಿತಿ ಪ್ರಕಾರ 973 ಆಗಿದೆ.
+ ಮಕ್ಕಳ ಲಿಂಗಾನುಪಾತವು 914. ಆದರೆ ಅಂತಿಮ ಮಾಹಿತಿ ಪ್ರಕಾರ 948.
+ ಹರಿಯಾಣ ರಾಜ್ಯದ ಲಿಂಗಾನುಪಾತವು ಪ್ರಾರಂಭದಲ್ಲಿ 877 ಇದ್ದು, ಪರಿಷ್ಕೃತ ಮಾಹಿತಿ ಪ್ರಕಾರ 879.
+ ಭಾರತದ ಸರಾಸರಿ ಸಾಕ್ಷರತೆಯು ಅಂದಾಜು ಅಂಕಿ ಅಂಶದಲ್ಲಿ 74%. ಆದರೆ ಪರಿಷ್ಕೃತ ಮಾಹಿತಿ 73% ಆಗಿದೆ.

## 2011ರ ಜನಗಣತಿಯ ವಿಶ್ಲೇಷಣಾ ಮಾಹಿತಿ

**ದೇಶದಲ್ಲಿ ಅತಿ ಹೆಚ್ಚು ಜನಸಂಖ್ಯೆ ಹೊಂದಿದ 10 ರಾಜ್ಯಗಳು (2011 ರ ಜನಗಣತಿಯಂತೆ)**

| | |
|---|---|
| 1) ಉತ್ತರ ಪ್ರದೇಶ | 19.98 ಕೋಟಿ |
| 2) ಮಹಾರಾಷ್ಟ್ರ | 11.24 ಕೋಟಿ |
| 3) ಬಿಹಾರ | 10.41 ಕೋಟಿ |
| 4) ಪಶ್ಚಿಮ ಬಂಗಾಳ | 9.13 ಕೋಟಿ |
| 5) ಆಂಧ್ರಪ್ರದೇಶ | 8.46 ಕೋಟಿ |
| 6) ಮಧ್ಯಪ್ರದೇಶ | 7.26 ಕೋಟಿ |
| 7) ತಮಿಳುನಾಡು | 7.21 ಕೋಟಿ |
| 8) ರಾಜಸ್ಥಾನ | 6.85 ಕೋಟಿ |
| **9) ಕರ್ನಾಟಕ** | **6.11 ಕೋಟಿ** |
| 10) ಗುಜರಾತ್ | 6.04 ಕೋಟಿ |

**ಜನಸಾಂದ್ರತೆ ಹೆಚ್ಚು ಹೊಂದಿರುವ ದೇಶದ 10 ರಾಜ್ಯಗ (ಚ.ಕಿ.ಮೀ ಗೆ ವಾಸಿಸುವ ಜನಸಂಖ್ಯೆ) 2011ರ ಜನಗ**

| | |
|---|---|
| 1) ದೆಹಲಿ | 11,320 ಮಂದಿ |
| 2) ಚಂಡಿಗಡ | 9258 ಮಂದಿ) |
| 3) ಪಾಂಡುಚೆರಿ | 2547 ಮಂದಿ |
| 4) ದಮನ್ ಮತ್ತು ಡಿಯು | 2191 ಮಂದಿ |
| 5) ಲಕ್ಷದ್ವೀಪ | 2149 ಮಂದಿ |
| 6) ಬಿಹಾರ | 1106 ಮಂದಿ ರಾಜ್ಯಗಳ ಅತಿ ಹೆಚ್ಚು ಜನಸಾಂದ್ರ ಹೊಂದಿದ ರಾಜ್ಯವಾಗಿ |
| 7) ಪಶ್ಚಿಮ ಬಂಗಾಳ | 1028 ಮಂದಿ |
| 8) ಕೇರಳ | 860 ಮಂದಿ |
| 9) ಉತ್ತರ ಪ್ರದೇಶ | 829 ಮಂದಿ |
| 10) ದಾದ್ರಾ &ನಗರ ಹವೇಲಿ | 700 |

**ಅತಿ ಹೆಚ್ಚು ಲಿಂಗಾನುಪಾತ ಹೊಂದಿರುವ 10 ರಾಜ್ಯಗಳು (ಒಂದು ಸಾವಿರ ಪುರುಷರಿಗೆ ಮಹಿಳೆಯರ ಸಂಖ್ಯೆ) 2011ರ ಜನಗಣತಿ**

| | |
|---|---|
| 1) ಕೇರಳ | 1084 |
| 2) ಪಾಂಡುಚೆರಿ | 1037 |
| 3) ತಮಿಳುನಾಡು | 996 |
| 4) ಆಂಧ್ರಪ್ರದೇಶ | 993 |
| 5) ಛತ್ತೀಸಘಡ | 991 |
| 6) ಮೇಘಾಲಯ | 989 |
| 7) ಮಣಿಪುರ | 985 |
| 8) ಒರಿಸ್ಸಾ | 979 |
| 9) ಮಿಜೋರಾಂ | 976 |
| 10) ಗೋವಾ | 973 |

**ದೇಶದಲ್ಲಿ ವಿಸ್ತೀರ್ಣದಲ್ಲಿ ಅತಿದೊಡ್ಡ ರಾಜ್ಯಗಳು (20 ರ ಜನಗಣತಿಯಂತೆ)**

| | |
|---|---|
| 1) ರಾಜಸ್ಥಾನ | 6) ಜಮ್ಮು & ಕಾಶ್ಮೀರ |
| 2) ಮಧ್ಯಪ್ರದೇಶ | 7) ಗುಜರಾತ್ |
| 3) ಮಹಾರಾಷ್ಟ್ರ | **8) ಕರ್ನಾಟಕ** |
| 4) ಆಂಧ್ರಪ್ರದೇಶ | 9) ಒರಿಸ್ಸಾ |
| 5) ಉತ್ತರಪ್ರದೇಶ | 10) ಛತ್ತೀಸಘಡ |

**2011 ರ ಜನಗಣತಿಯಂತೆ ಅತಿ ಹೆಚ್ಚು ಸಾಕ್ಷರತೆ ಹೊಂದಿದ 10 ರಾಜ್ಯಗಳು**

| | |
|---|---|
| 1) ಕೇರಳ | 94% |
| 2) ಲಕ್ಷದ್ವೀಪ | 91.85% |
| 3) ಮಿಜೋರಾಂ | 91.33% |
| 4) ಗೋವಾ | 88.70% |
| 5) ತ್ರಿಪುರ | 87.22% |
| 6) ದಮನ್ & ದಿಯು | 87.10% |
| 7) ಅಂಡಮಾನ್ ಮತ್ತು ನಿಕೋಬಾರ್ ದ್ವೀಪ | 86.63% |
| 8) ದೆಹಲಿ | 86.21% |
| 9) ಚಂಡೀಗಡ | 86.05% |
| 10) ಪಾಂಡುಚೇರಿ | 85.85% |

**2011ರ ಜನಗಣತಿಯಂತೆ ಅತಿ ಕಡಿಮೆ ಜನಸಂಖ್ಯೆ ಹೊಂದಿದ ರಾಜ್ಯಗಳು & ಕೇಂದ್ರಾಡಳಿತ ಪ್ರದೇಶಗಳು**

| | |
|---|---|
| 1) ಲಕ್ಷದ್ವೀಪ | (64.47 ಸಾವಿರ) |
| 2) ದಮನ್ ಮತ್ತು ದಿಯು | (2.43 ಲಕ್ಷ) |
| 3) ದಾದ್ರ & ನಗರಹವೇಲಿ | (3.44 ಲಕ್ಷ) |
| 4) ಅಂಡಮಾನ್ ಮತ್ತು ನಿಕೋಬಾರ್ | (3.81 ಲಕ್ಷ) |
| 5) ಸಿಕ್ಕಿಂ | (6.11 ಲಕ್ಷ) ರಾಜ್ಯಗಳಲ್ಲಿ ಅತಿ ಕಡಿಮೆ ಜನಸಂಖ್ಯೆ ಹೊಂದಿದ ರಾಜ್ಯ |
| 6) ಚಂಡೀಗಡ | (10.55 ಲಕ್ಷ) |
| 7) ಮಿಜೋರಾಂ | (10.97 ಲಕ್ಷ) |
| 8) ಪಾಂಡುಚೇರಿ | 12.48 ಲಕ್ಷ) |
| 9) ಅರುಣಾಚಲ ಪ್ರದೇಶ | (13.84) |
| 10) ಗೋವಾ | (14.59 ಲಕ್ಷ) |

**2014 ಜೂನ್ 2 ರಂದು ಆಂಧ್ರಪ್ರದೇಶದಿಂದ ತೆಲಂಗಾಣ ರಾಜ್ಯವಾಗಿ ವಿಭಜನೆಯಾದ ನಂತರ ವಿಸ್ತೀರ್ಣದಲ್ಲಿ ಅತಿ ದೊಡ್ಡ ರಾಜ್ಯಗಳು**

| | |
|---|---|
| 1) ರಾಜಸ್ಥಾನ | 6) ಗುಜರಾತ್ |
| 2) ಮಧ್ಯಪ್ರದೇಶ | 7) ಕರ್ನಾಟಕ |
| 3) ಮಹಾರಾಷ್ಟ್ರ | 8) ಆಂಧ್ರಪ್ರದೇಶ |
| 4) ಉತ್ತರ ಪ್ರದೇಶ | 9) ಒಡಿಶಾ |
| 5) ಜಮ್ಮು ಮತ್ತು ಕಾಶ್ಮೀರ | 10) ಛತ್ತೀಸ್‌ಘಡ |

**2014 ಜೂನ್ 2 ರ ನಂತರ ಆಂಧ್ರ ಪ್ರದೇಶದಿಂದ ತೆಲಂಗಾಣ ರಾಜ್ಯವು ಪ್ರತ್ಯೇಕಗೊಂಡ ನಂತರ ದೇಶದಲ್ಲಿ ಅತಿ ಹೆಚ್ಚು ಜನಸಂಖ್ಯೆ ಹೊಂದಿರುವ ರಾಜ್ಯಗಳು**

| | |
|---|---|
| 1) ಉತ್ತರಪ್ರದೇಶ | 6) ತಮಿಳುನಾಡು |
| 2) ಮಹಾರಾಷ್ಟ್ರ | 7) ರಾಜಸ್ಥಾನ |
| 3) ಬಿಹಾರ | 8) ಕರ್ನಾಟಕ |
| 4) ಪಶ್ಚಿಮಬಂಗಾಳ | 9) ಗುಜರಾತ್ |
| 5) ಮಧ್ಯಪ್ರದೇಶ | 10) ಆಂಧ್ರಪ್ರದೇಶ (4.9 ಕೋಟಿ) |

**ಕಡಿಮೆ ಲಿಂಗಾನುಪಾತ ಹೊಂದಿರುವ 10 ರಾಜ್ಯಗಳು**

| | |
|---|---|
| 1) ದಮನ್ ಮತ್ತು ದಿಯು | 618 |
| 2) ದಾದ್ರ & ನಗರಹವೇಲಿ | 774 |
| 3) ಚಂಡಿಗಡ | 818 |
| 4) ದೆಹಲಿ | 868 |
| 5) ಅಂಡಮಾನ್ & ನಿಕೋಬಾರ್ ದ್ವೀಪಗಳು | 876 |
| 6) ಹರ್‍ಯಾಣ | 879 ಅತಿ ಕಡಿಮೆ ಲಿಂಗಾನುಪಾತ ಹೊಂದಿದ ರಾಜ್ಯ |
| 7) ಜಮ್ಮು ಮತ್ತು ಕಾಶ್ಮೀರ | 889 |
| 8) ಸಿಕ್ಕಿಂ | 890 |
| 9) ಪಂಜಾಬ್ | 895 |
| 10) ಉತ್ತರಪ್ರದೇಶ | 912 |

**ಅತಿ ಕಡಿಮೆ ಸಾಕ್ಷರತೆ ಹೊಂದಿರುವ ರಾಜ್ಯಗಳು**

| | |
|---|---|
| 1) ಬಿಹಾರ | 61.80% |
| 2) ಅರುಣಾಚಲ ಪ್ರದೇಶ | 65.38% |
| 3) ರಾಜಸ್ಥಾನ | 66.11% |
| 4) ಜಾರ್ಖಂಡ್ | 66.41% |
| 5) ಆಂಧ್ರಪ್ರದೇಶ | 67.02% |
| 6) ಜಮ್ಮು ಮತ್ತು ಕಾಶ್ಮೀರ | 67.16% |
| 7) ಉತ್ತರಪ್ರದೇಶ | 67.68% |
| 8) ಮಧ್ಯಪ್ರದೇಶ | 69.32% |
| 9) ಛತ್ತೀಸ್‌ಗಡ | 70.28% |
| 10) ಅಸ್ಸಾಂ | 72.19% |

| ಅತಿ ಹೆಚ್ಚು ಸಾಕ್ಷರತೆ ಹೊಂದಿದ ಜಿಲ್ಲೆಗಳು (2011 ರ ಜನಗಣತಿ) | |
|---|---|
| 1) ಸೆರ್‌ಚಿಪ್ (Serchhip) | ಮಿಜೋರಾಂ (97.91%) |
| 2) ಐಜ್ವಾಲ್ (ಮಿಜೋರಾಂ) | (97.89%) |
| 3) ಮಾಹೆ (ಪಾಂಡುಚೇರಿ) | (97.87%) |
| 4) ಕೊಟ್ಟಾಯಂ (ಕೇರಳ) | (97.21%) |

| ಅತಿ ಕಡಿಮೆ ಸಾಕ್ಷರತೆ ಹೊಂದಿರುವ ಜಿಲ್ಲೆಗಳು | |
|---|---|
| 1) ಅಲಿರಾಜ್‌ಪುರ (ಮಧ್ಯಪ್ರದೇಶ) | 36.10% |
| 2) ಬಿಜಪುರ (ಛತ್ತೀಸಗಢ) | 40.86% |
| 3) ದಾಂತೇವಾಡ (ಛತ್ತೀಸಗಢ) | 42.12% |

| 2011 ರ ಜನಗಣತಿಯಂತೆ ಲಿಂಗಾನುಪಾತ ಹೆಚ್ಚು ಹೊಂದಿರುವ ಜಿಲ್ಲೆಗಳು | |
|---|---|
| 1) ಮಾಹೆ (ಪಾಂಡುಚೇರಿ) | 1184 (ಸಾವಿರ ಪುರುಷರಿಗೆ 1184 ಸ್ತ್ರೀಯರು) |
| 2) ಅಲಮೋರ (ಉತ್ತರಖಂಡ) | 1139 (ಸಾವಿರ ಪುರುಷರಿಗೆ 1139 ಸ್ತ್ರೀಯರು |
| 3) ಕನ್ನೂರು (ಕೇರಳ) | 1136 (ಸಾವಿರ ಪುರುಷರಿಗೆ 1136 ಸ್ತ್ರೀಯರು) |

| 2011 ರ ಜನಗಣತಿಯಂತೆ ಲಿಂಗಾನುಪಾತ ಕಡಿಮೆ ಹೊಂದಿರುವ ಜಿಲ್ಲೆಗಳು | |
|---|---|
| 1) ದಮನ್ (ದಮನ್ ಮತ್ತು ದಿಯು) | 534 (ಸಾವಿರ ಪುರುಷರಿಗೆ 534 ಸ್ತ್ರೀಯರು) |
| 2) ಲೇಹ್ (ಜಮ್ಮು ಮತ್ತು ಕಾಶ್ಮೀರ) | 690 (ಸಾವಿರ ಪುರುಷರಿಗೆ 690 ಸ್ತ್ರೀಯರು |
| 3) ತವಾಂಗ್ (ಅರುಣಾಚಲ ಪ್ರದೇಶ) | 714 (ಸಾವಿರ ಪುರುಷರಿಗೆ 714 ಸ್ತ್ರೀಯರು) |

| ಕ್ರಮ ಸಂಖ್ಯೆ | ಸೂಚಕಗಳು | ಅತಿ ಹೆಚ್ಚು | ಅತಿ ಕಡಿಮೆ |
|---|---|---|---|
| 1 | ಭೌಗೋಳಿಕ ವಿಸ್ತೀರ್ಣ | ಕಛ್ (ಗುಜರಾತ್) (45,652 ಚ.ಕಿ.ಮೀ) | ಮಾಹೆ (ಪಾಂಡಿಚೇರಿ) (9.ಚ.ಕಿ.ಮೀ) |
| 2 | ಜನಸಂಖ್ಯೆ | ಥಾಣೆ (ಮಹಾರಾಷ್ಟ್ರ) | ದಿವಾಂಗ್ ವ್ಯಾಲಿ (ಅಸ್ಸಾಂ) (8004) |
| 3 | ಲಿಂಗಾನುಪಾತ | ಮಾಹೆ (ಪಾಂಡಿ-ಚೆರಿ) (1184) | ದಮನ್ (ಡಿಯು & ದಮನ್) (534) |
| 4 | ಜನ ಸಾಂದ್ರತೆ | ಈ.ದೆಹಲಿ (37,346) | ದಿವಾಂಗ್ ವ್ಯಾಲಿ (ಅಸ್ಸಾಂ) (1) |
| 5 | ಸಾಕ್ಷರತೆ | ಸೆರ್‌ಚಿಪ್ (ಮಿಜೋರಾಂ (97.91%) | ಅಲಿರಾಜ್ ಪುರ್ (ಮಧ್ಯ ಪ್ರದೇಶ) (36.10%) |
| 6 | ಜನಸಂಖ್ಯಾ ಬೆಳವಣಿಗೆ ದರ | ಕುರುಂಗ್ ಕುಮೇ (ಅ.ಪ್ರದೇಶ) (111.01%) | ಲಾಂಗ್ ಲೆಂಗ್ (ನಾಗಾಲ್ಯಾಂಡ್) (–58.39%) |

## ಜನಸಾಂದ್ರತಾ ವಲಯಗಳು (Density Zones):-

✦ ಭಾರತದಲ್ಲಿ 2011 ರ ಜನಗಣತಿಯ ದತ್ತಾಂಶದ ಮೇರೆಗೆ ಜನಸಾಂದ್ರತೆ ಆಧಾರದ ಮೇಲೆ ರಾಜ್ಯಗಳನ್ನು ಮುಖ್ಯವಾಗಿ ಈ ಕೆಳಗಿನ 3 ವಲಯಗಳಾಗಿ ವಿಂಗಡಿಸಲಾಗಿದೆ.

✦ ಪ್ರತಿ ಚ.ಕಿ.ಮೀ ಭೂ ಪ್ರದೇಶದಲ್ಲಿ 500 ಕ್ಕಿಂತ ಹೆಚ್ಚುಜನಸಾಂದ್ರತೆಯನ್ನು ಹೊಂದಿರುವ ರಾಜ್ಯಗಳನ್ನು ಅಧಿಕ ಜನಸಾಂದ್ರತೆ ವಲಯ (More Density Zone) ಎನ್ನುವರು.

✦ ಪ್ರತಿ ಚ.ಕಿ.ಮೀ ಭೂ ಪ್ರದೇಶದಲ್ಲಿ 251 ರಿಂದ 500 ಜನಸಾಂದ್ರತೆಯನ್ನು ಹೊಂದಿರುವ ರಾಜ್ಯಗಳನ್ನು ಸಾಧಾರಣ ಜನಸಾಂದ್ರತೆ ವಲಯ (Moderate Density Zone) ಎನ್ನುವರು.

✦ ಪ್ರತಿ ಚ.ಕಿ.ಮೀ ಭೂ ಪ್ರದೇಶದಲ್ಲಿ 250 ಕ್ಕಿಂತ ಕಡಿಮೆ ಜನಸಾಂದ್ರತೆಯನ್ನು ಹೊಂದಿರುವ ರಾಜ್ಯಗಳನ್ನು ವಿರಳ ಜನಸಾಂದ್ರತೆ ವಲಯ (Low Density Zone) ಎನ್ನುವರು.

ವಿಶ್ವಸಂಸ್ಥೆಯು 1990 ನೇ ವರ್ಷವನ್ನು ಅಂತರಾಷ್ಟ್ರೀಯ ಸಾಕ್ಷರತೆಯ ವರ್ಷ & ಪ್ರತಿ ವರ್ಷ ಸೆಪ್ಟೆಂಬರ್ 8 ನ್ನು ವಿಶ್ವ ಸಾಕ್ಷರತಾ ದಿನವಾಗಿ ಆಚರಿಸಲು ಘೋಷಿಸಿದೆ.

## ಜನಸಾಂದ್ರತಾ ವಲಯದ ವರ್ಗೀಕರಣ

| ಅಧಿಕ ಜನಸಾಂದ್ರತೆ ವಲಯ | ಸಾಧಾರಣ ಜನಸಾಂದ್ರತೆ ವಲಯ | ವಿರಳ ಜನಸಾಂದ್ರತೆ ವಲಯ |
|---|---|---|
| ಬಿಹಾರ (1102) | ಅಸ್ಸಾಂ (397) | ಮಧ್ಯಪ್ರದೇಶ (236) |
| ಪ.ಬಂಗಾಳ (1030) | ಜಾರ್ಖಂಡ್ (414) | ಛತ್ತೀಸ್‌ಘರ್ (189) |
| ಕೇರಳ (859) | ಗುಜರಾತ್ (308) | ಉತ್ತರಾಖಂಡ್ (189) |
| ಉ.ಪ್ರದೇಶ (828) | ಗೋವಾ (394) | ರಾಜಸ್ಥಾನ (201) |
| ಹರಿಯಾಣ (573) | ಮಹಾರಾಷ್ಟ್ರ (365) | ಹಿಮಾಚಲ ಪ್ರದೇಶ (123) |
| ತಮಿಳುನಾಡು (555) | **ಕರ್ನಾಟಕ (319)** | ಮಣಿಪುರ (122) |
| ಪಂಜಾಬ್ (550) | ಆಂಧ್ರಪ್ರದೇಶ (308) | ಮೇಘಾಲಯ (132) |
| | ಒಡಿಶಾ (269) | ಜಮ್ಮು & ಕಾಶ್ಮೀರ (56) |
| | ತ್ರಿಪುರ (350) | ನಾಗಾಲ್ಯಾಂಡ್ (119) |
| | | ಸಿಕ್ಕಿಂ (86) |
| | | ಮಿಜೋರಾಂ (52) |
| | | ಅರುಣಾಚಲ ಪ್ರದೇಶ (17) |

## ಕೇಂದ್ರಾಡಳಿತ ಪ್ರದೇಶಗಳ ವರ್ಗೀಕರಣ

| ಅಧಿಕ ಜನಸಾಂದ್ರತೆ ವಲಯ | ಸಾಧಾರಣ ಜನಸಾಂದ್ರತೆ ವಲಯ | ವಿರಳ ಜನಸಾಂದ್ರತೆ ವಲಯ |
|---|---|---|
| ದಾದ್ರ & ನಗರ ಹವೇಲಿ (698) | – | ಅಂಡಮಾನ್ & ನಿಕೋಬಾರ್ (46) |
| ದಿಯು & ದಮನ್ (2169) | | |
| ಲಕ್ಷದ್ವೀಪ (2013) | | |
| ಚಂಡೀಗಡ (9252) | | |
| ಪುದುಚೆರಿ (2598) | | |
| ದೆಹಲಿ (11297) | | |

## ಅಧಿಕ ಜನಸಂಖ್ಯೆ ಹೊಂದಿದ ವಿಶ್ವದ 5 ಅಗ್ರಗಣ್ಯ ನಗರಗಳು

| ಕ್ರ. ಸಂಖ್ಯೆ | ದೇಶ | 2014 |
|---|---|---|
| 1 | ಟೋಕಿಯೋ, ಜಪಾನ್ | 37833000 |
| 2 | ನವದೆಹಲಿ, ಭಾರತ | 24953000 |
| 3 | ಶಾಂಘೈ, ಚೀನಾ | 22991000 |
| 4 | ಮೆಕ್ಸಿಕೋ | 20843000 |
| 5 | ಸಾವೋಪೌಲೋ, ಬ್ರೆಜಿಲ್ | 20831000 |

## ಅಧಿಕ ಜನಸಂಖ್ಯೆ ಹೊಂದಿದ ವಿಶ್ವದ 5 ಅಗ್ರಗಣ್ಯ ರಾಷ್ಟ್ರಗಳು:

| ಕ್ರ. ಸಂಖ್ಯೆ | ದೇಶ | 2017 |
|---|---|---|
| 1 | ಚೀನಾ | 1388232693 |
| 2 | ಭಾರತ | 1342512706 |
| 3 | ಅಮೆರಿಕ | 326474013 |
| 4 | ಇಂಡೋನೇಷ್ಯಾ | 263510146 |
| 5 | ಬ್ರೆಜಿಲ್ | 211243220 |

## ಅಧಿಕ ಭೌಗೋಳಿಕ ವಿಸ್ತೀರ್ಣ ಹೊಂದಿದ ವಿಶ್ವದ 7 ರಾಷ್ಟ್ರಗಳು:

| ಕ್ರ. ಸಂಖ್ಯೆ | ದೇಶ | ವಿಸ್ತೀರ್ಣ ಚ.ಕಿ.ಮೀ |
|---|---|---|
| 1 | ರಷ್ಯಾ | 17098246 |
| 2 | ಕೆನಡಾ | 9984670 |
| 3 | ಚೀನಾ | 9572900 |
| 4 | ಅಮೆರಿಕ | 9525067 |
| 5 | ಬ್ರೆಜಿಲ್ | 8515767 |
| 6 | ಆಸ್ಟ್ರೇಲಿಯಾ | 7692024 |
| 7 | ಭಾರತ | 3287263 |

## ಅಧಿಕ ಅರಣ್ಯ ಹೊಂದಿದ ವಿಶ್ವದ ಪ್ರಮುಖ ರಾಷ್ಟ್ರಗಳು:

| ಕ್ರ. ಸಂಖ್ಯೆ | ದೇಶ | ಅರಣ್ಯ ವಿಸ್ತೀರ್ಣ ಚ.ಕಿ.ಮೀ |
|---|---|---|
| 1 | ರಷ್ಯಾ | 8149300 |
| 2 | ಕೆನಡಾ | 4916438 |
| 3 | ಬ್ರೆಜಿಲ್ | 4776980 |
| 4 | ಅಮೆರಿಕ | 3100950 |
| 5 | ಚೀನಾ | 2083210 |
| 10 | ಭಾರತ | 778424 |

## 2011 ರ ಜನಗಣತಿಯಲ್ಲಿ ಸಾಕ್ಷರತೆಯ ಪ್ರವೃತ್ತಿ

| ವಿಭಾಗ | ಪುರುಷ | ಮಹಿಳೆ | ಸರಾಸರಿ |
|---|---|---|---|
| ಗ್ರಾಮೀಣ | 77.2 | 57.9 | 67.8 |
| ನಗರ | 88.8 | 79.1 | 84.1 |
| ಸರಾಸರಿ | 80.9 | 64.6 | 73 |

## 2011 ರ ಜನಗಣತಿಯಲ್ಲಿ ಸಾಕ್ಷರತೆಯ ಪ್ರವೃತ್ತಿ

| ರಾಜ್ಯ | ಪುರುಷ | ಮಹಿಳೆ | ಸರಾಸರಿ |
|---|---|---|---|
| ಹೆಚ್ಚು | ಕೇರಳ(95.4) | ಕೇರಳ (90.08) | ಕೇರಳ (94) |
| ಕಡಿಮೆ | ಅರುಣಾಚಲ ಪ್ರದೇಶ (67.4) | ರಾಜಸ್ಥಾನ (45.8) | ಬಿಹಾರ (61.8) |

## ಭಾರತದ ಪ್ರಮುಖ ಆಹಾರ ಉತ್ಪಾದನೆ:

| ವರ್ಷ | ಆಹಾರ ಉತ್ಪಾದನೆ (ಮಿ.ಟನ್) |
|---|---|
| 2014–15 | 252.02 |
| 2015–16 | 251.57 |
| 2016–17 | 271.98 |

## 2014-15 ರ ಪ್ರಕಾರ ಭಾರತದ ಪ್ರಮುಖ ಆಹಾರ ಉತ್ಪಾದನೆ & ರಾಜ್ಯಗಳು:

| ಬೆಳೆಗಳು | ರಾಜ್ಯಗಳು |
|---|---|
| ಭತ್ತ | ಪ. ಬಂಗಾಳ |
| ಗೋಧಿ | ಉ. ಪ್ರದೇಶ |
| ಮೆಕ್ಕೆಜೋಳ | ಆಂಧ್ರಪ್ರದೇಶ |
| ಒಟ್ಟು ಆಹಾರ ಧಾನ್ಯಗಳು | ಉ. ಪ್ರದೇಶ |
| ಏಕದಳ ಧಾನ್ಯಗಳು | ಮಹಾರಾಷ್ಟ್ರ |
| ದ್ವಿದಳ ಧಾನ್ಯಗಳು | ಮಧ್ಯಪ್ರದೇಶ |
| ಒಟ್ಟು ಎಣ್ಣೆಕಾಳುಗಳು | ರಾಜಸ್ಥಾನ |
| ಕಬ್ಬು | ಉ. ಪ್ರದೇಶ |
| ಹತ್ತಿ | ಗುಜರಾತ್ |
| ಸೆಣಬು | ಪ. ಬಂಗಾಳ |
| ಆಲೂಗಡ್ಡೆ | ಉ. ಪ್ರದೇಶ |
| ಈರುಳ್ಳಿ | ಮಹಾರಾಷ್ಟ್ರ |

## 2014-15 ರ ಪ್ರಕಾರ ಭಾರತದ ಪ್ರಮುಖ ಆ... ಉತ್ಪಾದನೆಯಲ್ಲಿ ಮುಂಚೂಣಿ ರಾಜ್ಯಗಳು

| ಬೆಳೆಗಳು | ರಾಜ್ಯಗಳು |
|---|---|
| ಭತ್ತ | ಪ. ಬಂಗಾಳ, ಉ. ಪ್ರದೇ... ಪಂಜಾಬ್, ಆಂಧ್ರಪ್ರದೇ... |
| ಗೋಧಿ | ಉ. ಪ್ರದೇಶ, ಪಂಜಾಬ... ಹರಿಯಾಣ, ಮಧ್ಯಪ್ರದೇ... |
| ಒಟ್ಟು ಆಹಾರ ಧಾನ್ಯಗಳು | ಉ. ಪ್ರದೇಶ, ಪಂಜಾಬ... ಮಧ್ಯಪ್ರದೇಶ, ಪ.ಬಂಗಾ... |
| ಏಕದಳ ಧಾನ್ಯಗಳು | ಮಹಾರಾಷ್ಟ್ರ, ಕರ್ನಾಟ... ರಾಜಸ್ಥಾನ, ಉ. ಪ್ರದೇ... |
| ದ್ವಿದಳ ಧಾನ್ಯಗಳು | ಮಧ್ಯಪ್ರದೇಶ, ಉ. ಪ್ರದೇ... ಮಹಾರಾಷ್ಟ್ರ, ರಾಜಸ್ಥಾ... |

## 2011 ರ ಜನಗಣತಿಯಲ್ಲಿ ಜೀವನ ನಿರೀಕ್ಷೆ (ವ...

| ರಾಜ್ಯ | ಪುರುಷ | ಮಹಿಳೆ | ಸರಾ... |
|---|---|---|---|
| ಹೆಚ್ಚು | ಕೇರಳ (71.7) | ಕೇರಳ (78.1) | ಕೇರ... (74.. |
| ಕಡಿಮೆ | ಮಧ್ಯಪ್ರದೇಶ (61.3) | ಅಸ್ಸಾಂ (64.6) | ಅಸ್ಸಾ... (63.. |
| ಸರಾಸರಿ (ಶೇಕಡಾ) | 66.6 | 69.49 | 68.. |

### ಭಾರತದ ಜನಸಂಖ್ಯಾ ಬೆಳವಣಿಗೆಯ 5 ಆಶ್ಚರ್ಯಕರ ಪ್ರವೃತ್ತಿಗಳು

- 2017 ಜೂನ್ 24 ರಂದು ವಿಶ್ವಸಂಸ್ಥೆ ಬಿಡು... ಮಾಡಿರುವ ವಿಶ್ವ ಜನಸಂಖ್ಯೆ ಪ್ರವೃತ್ತಿ... ಪರಿಷ್ಕರಣಾ ವರದಿಯಲ್ಲಿ ಈ ಕೆಳ... ಮುಖ್ಯಾಂಶಗಳಿವೆ.
- ಭಾರತ 7 ವರ್ಷಗಳಲ್ಲಿ ಚೀನಾವನ್ನು ಮೀ... ಜನಸಂಖ್ಯೆಯಲ್ಲಿ ಮೊದಲ ಸ್ಥಾನವ... ಪಡೆಯಲಿದೆ.
- ಭಾರತ ಯುವಕರ ರಾಷ್ಟ್ರ. ಆದರೆ ... ದೀರ್ಘಕಾಲಿಕವಲ್ಲ (ಪ್ರಸ್ತುತ 27 ... ಮಧ್ಯಮಾವಧಿ ವಯಸ್ಸಾಗಿದೆ)
- ಭಾರತದಲ್ಲಿ ಜನಸಂಖ್ಯಾ ಲಾಭಾಂಶದ ಅವಧಿ... ಪ್ರಾರಂಭ ಹಂತ
- ಭಾರತದಲ್ಲಿ ಲಿಂಗಾನುಪಾತ 2020 ರ ನಂ... ಸುಧಾರಿಸಲಿದೆ.
- ಪ್ರಸ್ತುತ ಇರುವ ಒಟ್ಟು ಸಂತಾನೋತ್ಪತ್ತಿ ದರ 2... ಮುಂದಿನ 2025 ರ ವೇಳೆಗೆ 2.1% ಆಗಲಿದೆ

## ವಿಸ್ತೀರ್ಣದಲ್ಲಿ ಭಾರತದ ಮೊದಲ 5 ಅರಣ್ಯ ಹೊಂದಿರುವ ರಾಜ್ಯಗಳು

| ರಾಜ್ಯಗಳು | ವಿಸ್ತೀರ್ಣ ಚ.ಕಿ.ಮೀ |
|---|---|
| ಮಧ್ಯಪ್ರದೇಶ | 77462 |
| ಅರುಣಾಚಲ ಪ್ರದೇಶ | 67248 |
| ಛತ್ತೀಸ್‌ಘರ್ | 55586 |
| ಮಹಾರಾಷ್ಟ್ರ | 50628 |
| ಒಡಿಶಾ | 50354 |

## ವಿಸ್ತೀರ್ಣದಲ್ಲಿ ಭಾರತದ ಕೊನೆಯ ಸ್ಥಾನದ 5 ಅರಣ್ಯ ಹೊಂದಿರುವ ರಾಜ್ಯಗಳು

| ರಾಜ್ಯಗಳು | ವಿಸ್ತೀರ್ಣ ಚ.ಕಿ.ಮೀ |
|---|---|
| ದೆಹಲಿ | 188.77 |
| ಹರಿಯಾಣ | 1584 |
| ಪಂಜಾಬ್ | 1771 |
| ಗೋವಾ | 2224 |
| ಸಿಕ್ಕಿಂ | 3357 |

## ಭಾರತದ ಮೊದಲ 5 ಅರಣ್ಯ ಹೊಂದಿರುವ ರಾಜ್ಯಗಳು (ಶೇಕಡಾವಾರು)

| ರಾಜ್ಯ/ಕೇಂ. ಪ್ರದೇಶಗಳು | ಶೇಕಡಾವಾರು |
|---|---|
| ಮಿಜೋರಾಂ | 88.93 |
| ಲಕ್ಷದ್ವೀಪ | 84.56 |
| ಅಂಡಮಾನ್ & ನಿಕೋಬಾರ್ | 81.84 |
| ಅರುಣಾಚಲ ಪ್ರದೇಶ | 80.30 |
| ನಾಗಾಲ್ಯಾಂಡ್ | 78.21 |

## ಭಾರತದ ಕೊನೆಯ 5 ಅರಣ್ಯ ಹೊಂದಿರುವ ರಾಜ್ಯಗಳು (ಶೇಕಡಾವಾರು)

| ರಾಜ್ಯ/ಕೇಂ.ಪ್ರದೇಶಗಳು | ಶೇಕಡಾವಾರು |
|---|---|
| ಪಂಜಾಬ್ | 3.52 |
| ಹರಿಯಾಣ | 3.58 |
| ರಾಜಸ್ಥಾನ್ | 4.73 |
| ಉ.ಪ್ರದೇಶ | 6 |
| ಗುಜರಾತ್ | 7.48 |

## ಭಾರತದ ಆರೋಗ್ಯ ಸೂಚಕಗಳು

| ಸೂಚ್ಯಂಕ | 2001 | 2016* (upto Dec) |
|---|---|---|
| ಜನನ ಪ್ರಮಾಣ (ಪ್ರತಿ 1000 ಜನಸಂಖ್ಯೆಗೆ) | 25.4 | 19.3* |
| ಮರಣ ಪ್ರಮಾಣ (ಪ್ರತಿ 1000 ಜನಸಂಖ್ಯೆಗೆ) | 8.4 | 7.3* |
| ಫಲವತ್ತತೆ ಪ್ರಮಾಣ | 3.1 | 2.45* |
| ತಾಯಿ ಮರಣ ಪ್ರಮಾಣ (ಪ್ರತಿ 1,00,000 ಸಜೀವಜನನಕ್ಕೆ) | 301 | 174* |
| ಶಿಶು ಮರಣ ಪ್ರಮಾಣ (ಪ್ರತಿ1000 ಸಜೀವ ಜನನಕ್ಕೆ) | 66 | 40.5* |
| ಶಿಶು ಮರಣ ಪ್ರಮಾಣ (0–5ವರ್ಷ) (ಪ್ರತಿ 1000 ಮಕ್ಕಳಿಗೆ) | – | 42* |
| ಜೀವನ ನಿರೀಕ್ಷೆ (ವರ್ಷಗಳಲ್ಲಿ) ಗಂಡು | 62.3 | 67.3 |
| ಜೀವನ ನಿರೀಕ್ಷೆ (ವರ್ಷಗಳಲ್ಲಿ) ಹೆಣ್ಣು | 64.6 | 69.8 |
| ಜೀವನ ನಿರೀಕ್ಷೆ ಸರಾಸರಿ | 63.4 | 68.5 |

## ವಿಸ್ತೀರ್ಣದಲ್ಲಿ ಭಾರತದ 5 ಅಗ್ರಗಣ್ಯ ನಗರಗಳು

| ಕ್ರ. ಸಂಖ್ಯೆ | ದೇಶ | ಚ.ಕಿ.ಮೀ |
|---|---|---|
| 1 | ದೆಹಲಿ | 1484 |
| 2 | ಬೆಂಗಳೂರು | 741 |
| 3 | ಹೈದರಾಬಾದ್ | 650 |
| 4 | ಮುಂಬೈ | 603 |
| 5 | ಚೆನ್ನೈ | 426 |

## 2015 ರಲ್ಲಿ ವಿವಿಧ ಸೂಚಕಗಳು

| ವಿಭಾಗ | ಒಟ್ಟು ಸಂತಾನೋತ್ಪತ್ತಿ ದರ | ಶಿಶು ಮರಣ ದರ | ಮಾತೃತ್ವ ಮರಣ ದರ |
|---|---|---|---|
| ಗ್ರಾಮೀಣ | 2.5 | 41 | 301 (2001–03) |
| ನಗರ | 1.8 | 25 | 167 (2011–13) |
| ಸರಾಸರಿ | 2.3 | 37 | – |

# ಕರ್ನಾಟಕದ ಜನಸಂಖ್ಯಾ ಮಾಹಿತಿ

| | | | |
|---|---|---|---|
| ಜನನ ದರ | 19.2/1000 | ಜಿಲ್ಲೆಗಳು–30 | ಕಂದಾಯ ವಿಭಾಗ – 4 (ಬೆಂಗಳೂರು, ಮೈಸೂರು, ಕಲಬುರಗಿ, ಬೆಳಗಾವಿ) |
| ಮರಣದರ | 7.1/1000 | ತಾಲ್ಲೂಕು 176 | ಹಳ್ಳಿಗಳು – 29,340 |
| ಶಿಶುಮರಣ ದರ | 31/1000 | ಕಿತ್ತೂರು ಸೇರಿ–177+ ಹೊಸ 49 ಸೇರಿ ಒಟ್ಟು 226 | ಗ್ರಾಮ ಪಂಚಾಯಿತಿ 5,629+439=6,068 |
| ತಾಯ್ತನ ಮರಣ ದರ | 133/1,00,000 | ಹೋಬಳಿ–747 | ಕರಾವಳಿ ತೀರ – 320 ಕಿಮೀ (3 ಜಿಲ್ಲೆಗಳು – ಉಡುಪಿ, ದಕ್ಷಿಣ ಕನ್ನಡ, ಉ. ಕನ್ನಡ) |
| ಜೀವನ ನಿರೀಕ್ಷೆ | 63 ಸರಾಸರಿ | ನಗರ – 347 | |

## ವಿಸ್ತೀರ್ಣದಲ್ಲಿ ಅತಿದೊಡ್ಡ ಜಿಲ್ಲೆಗಳು

| ಜಿಲ್ಲೆಗಳು | ವಿಸ್ತೀರ್ಣ (ಚ.ಕಿ.ಮೀ) | ರಾಜ್ಯದ ವಿಸ್ತೀರ್ಣದ ಶೇಕಡಾವಾರು |
|---|---|---|
| ಬೆಳಗಾವಿ | 13,433 | 7.00% |
| ಕಲಬುರಗಿ | 10,954 | 5.71% |
| ತುಮಕೂರು | 10,597 | 5.53% |
| ವಿಜಯಪುರ | 10,498 | 5.47% |
| ಉತ್ತರಕನ್ನಡ | 10,277 | 5.36% |

## ವಿಸ್ತೀರ್ಣದಲ್ಲಿ ಅತಿ ಚಿಕ್ಕ ಜಿಲ್ಲೆಗಳು

| ಜಿಲ್ಲೆಗಳು | ವಿಸ್ತೀರ್ಣ (ಚ.ಕಿ.ಮೀ) | ಶೇಕಡಾವಾರು (ರಾಜ್ಯದ ವಿಸ್ತೀರ್ಣದಲ್ಲಿ) |
|---|---|---|
| ಬೆಂಗಳೂರು ನಗರ | 2,196 | 1.14% |
| ಬೆಂಗಳೂರು ಗ್ರಾಮಾಂತರ | 2,298 | 1.20% |
| ರಾಮನಗರ | 3,516 | 1.83% |
| ಉಡುಪಿ | 3,582 | 1.87% |
| ಕೋಲಾರ | 3,979 | 2.07% |

## ಜನಸಾಂದ್ರತೆ ಹೆಚ್ಚು ಹೊಂದಿರುವ ಜಿಲ್ಲೆಗಳು

| | |
|---|---|
| ಬೆಂಗಳೂರು ನಗರ | 4,378 |
| ದಕ್ಷಿಣ ಕನ್ನಡ | 457 |
| ಬೆಂಗಳೂರು ಗ್ರಾಮಾಂತರ | 441 |
| ಮೈಸೂರು | 437 |
| ಧಾರವಾಡ | 434 |

## ಜನಸಾಂದ್ರತೆ ಕಡಿಮೆ ಹೊಂದಿರುವ ಜಿಲ್ಲೆಗಳು

| | |
|---|---|
| ಕೊಡಗು | 135 |
| ಉತ್ತರಕನ್ನಡ | 140 |
| ಚಿಕ್ಕಮಗಳೂರು | 158 |
| ಚಾಮರಾಜನಗರ | 181 |
| ಚಿತ್ರದುರ್ಗ | 197 |

## ಜನಸಂಖ್ಯೆಯಲ್ಲಿ ಅತಿ ದೊಡ್ಡ ಜಿಲ್ಲೆಗಳು

| ಜಿಲ್ಲೆ | ಜನಸಂಖ್ಯೆ | % ವಾರು |
|---|---|---|
| ಬೆಂಗಳೂರು ನಗರ | 95,88,910 | 15.75% |
| ಬೆಳಗಾವಿ | 47,78,439 | 7.82% |
| ಮೈಸೂರು | 29,94,744 | 4.91% |
| ತುಮಕೂರು | 26,81,449 | 4.38% |
| ಕಲಬುರಗಿ | 25,64,892 | 4.20% |

## ಜನಸಂಖ್ಯೆಯಲ್ಲಿ ಅತಿ ಚಿಕ್ಕ ಜಿಲ್ಲೆಗಳು

| ಜಿಲ್ಲೆ | ಜನಸಂಖ್ಯೆ (2011) | ಶೇಕಡಾವಾರು |
|---|---|---|
| ಕೊಡಗು | 5,54,762 | 0.91% |
| ಬೆಂ. ಗ್ರಾಮಾಂತರ | 9,87,257 | 1.62% |
| ಚಾಮರಾಜನಗರ | 10,20,962 | 1.67% |
| ಗದಗ | 10,65,263 | 1.74% |
| ರಾಮನಗರ | 10,82,739 | 1.77% |

# ಹಣ & ಬ್ಯಾಂಕಿಂಗ್
# Money & Banking

ಭಾರತದ ಹಣಕಾಸು ವ್ಯವಸ್ಥೆಯಲ್ಲಿ ಪ್ರಾರಂಭಿಕ ಹಂತದಲ್ಲಿದ್ದ ವಸ್ತುಗಳಿಗೆ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುವ ಸಾಟಿ ಅಥವಾ ವಸ್ತು ವಿನಿಮಯ ಪದ್ಧತಿಯಿಂದ, ಲೋಹ, ನಾಣ್ಯ & ಕಾಗದಹಣ. ಅರ್ಥವ್ಯವಸ್ಥೆಯ ವಿಕಾಸ ಬ್ಯಾಂಕುಗಳ ಬೆಳವಣಿಗೆ & ಡಿಜಿಟಲ್ ಹಾಗೂ ನಗದು ರಹಿತ ಅರ್ಥ ವ್ಯವಸ್ಥೆಯನ್ನಾಗಿಸುವ ಪೇಮೆಂಟ್ ಬ್ಯಾಂಕಿಂಗ್, ಹಣ, ಬಂಡವಾಳ & ವಿಮಾ ಮಾರುಕಟ್ಟೆಯನ್ನು ನಿಯಂತ್ರಿಸುವ ಕೇಂದ್ರ ಬ್ಯಾಂಕು & ಅದರ ಹಣಕಾಸು ನೀತಿ, ಹಣ ಮತ್ತಿತರ ಸಂಸ್ಥೆಗಳ ಕಾರ್ಯನಿರ್ವಹಣೆಯನ್ನು ತಿಳಿಸುವ ಪರಿಕಲ್ಪನೆಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ.

ಎಫ್.ಎ.ವಾಕರ್ ಅವರ ಪ್ರಕಾರ ಹಣ ಏನನ್ನು ಮಾಡುವುದೋ ಅದೇ ಹಣ.

- ಹಣ ಎಂಬುದು ಒಂದು ಸಾರ್ವತ್ರಿಕವಾಗಿ ಸ್ವೀಕೃತವಾದ ವಿನಿಮಯ ಮಾಧ್ಯಮವಾಗಿ, ಮೌಲ್ಯಮಾಪನ ಸಾಧನವಾಗಿ ಕಾರ್ಯನಿರ್ವಹಿಸುತ್ತಿರುವ ವಸ್ತುವಾಗಿದೆ.
- ಹಣವನ್ನು ಇಂಗ್ಲೀಷ್‌ನಲ್ಲಿ "ಮನಿ" ಎಂತಲೂ ಇದು ರೋಮನ್ ಭಾಷೆಯ "ಜುನೋಮನೇಟ (Juno Moneta)" ಎಂಬ ಪದದಿಂದ ಬಂದಿದೆ.
- ಜುನೋಮನೇಟ ಎಂಬುದು ರೋಮನ್ನರ ದೇವತೆಯಾಗಿದೆ.
- ಭಾರತೀಯ ರೂಪಾಯಿ ಸಂಸ್ಕೃತ ಭಾಷೆಯ ರುಪ್ಯಾ ಅಂದರೆ ಬೆಳ್ಳಿ ನಾಣ್ಯ ಎಂದರ್ಥ.

**ಹಣದ ವಿಕಾಸದ ಹಂತಗಳು:-**

1. **ವಸ್ತುವಿನಿಮಯ / ಸಾಟಿ ವಿನಿಮಯ ಪದ್ಧತಿ / ಹಣರಹಿತ ವಿನಿಮಯ ಪದ್ಧತಿ:-** ವಸ್ತುಗಳಿಗೆ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುವ ಪದ್ಧತಿ ಇದಾಗಿದ್ದು, ವ್ಯಾಪಾರದ ವಿಧಾನ ಅತ್ಯಂತ ಕಷ್ಟಕರವಾಗಿತ್ತು ಕಾರಣ, ಬಯಕೆಗಳ ದ್ವಿಮುಖ ಹೊಂದಾಣಿಕೆ ಅಭಾವ, ಸಾರ್ವತ್ರಿಕ ಮೌಲ್ಯಮಾಪನ ಕೊರತೆ, ಸಂಪತ್ತಿನ ಸಂಗ್ರಹಣೆ ಸಮಸ್ಯೆ, ಸರಕುಗಳ ಅವಿಭಾಜ್ಯತೆಯಾಗಿದೆ.
2. **ವಸ್ತು ರೂಪದ ಹಣ:-** ನಿರ್ದಿಷ್ಟ ಗಾತ್ರ ಅಥವಾ ತೂಕದ ವಸ್ತುವನ್ನು ಹಣವೆಂದು ಅಂಗೀಕರಿಸುವ ಪದ್ಧತಿ ಇದಾಗಿದ್ದು, ಗ್ರೀಸ್‌ನಲ್ಲಿ ಹಸು, ರೋಮ್‌ನಲ್ಲಿ ಕುರಿ, ಚೀನಾದಲ್ಲಿ ಹಲ್ಲುಗಳು ಬಳಕೆಯಲ್ಲಿದ್ದವು.

**ಲೋಹದ ಹಣ (Metal money):-**

- ಬೆಲೆ ಬಾಳುವ ಲೋಹಗಳಾದ ಚಿನ್ನ, ಬೆಳ್ಳಿ, ತಾಮ್ರ, ಕಂಚನ್ನು ಪ್ರಮಾಣಿತ ತೂಕದಲ್ಲಿ ಮುದ್ರೆಯಿರುವ ನಾಣ್ಯಗಳನ್ನಾಗಿ ಟಂಕಿಸಲಾಗುತ್ತಿತ್ತು.

1. **ಟೋಕನ್ ಹಣ (Token Money):-** ಅಂದರೆ ಲೋಹದ ಆಂತರಿಕ ಮೌಲ್ಯವು ಅದರ ಮುಖಬೆಲೆಗಿಂತ ಕಡಿಮೆ ಇರುವ ಪ್ರಾತಿನಿಧಿಕ ಹಣ.
2. **ಸಹಾಯಕ ಹಣ (Subsidary Money):-** ಟೋಕನ್ ಹಣಕ್ಕೆ ಪೂರಕವಾಗಿದ್ದು, ಭಾರತದಲ್ಲಿ 5 ಪೈಸೆಯಿಂದ 25 ಪೈಸೆಯವರೆಗೆ ಮೌಲ್ಯವನ್ನು ಪಡೆದಿರುತ್ತದೆ.
3. **ಸ್ಟಾಂಡರ್ಡ್ ಹಣ (Standard Money):-** ಇಲ್ಲಿ ಲೋಹದ ಆಂತರಿಕ ಮೌಲ್ಯ & ಮುಖಬೆಲೆ ಪರಸ್ಪರ ಸಮನಾಗಿರುತ್ತದೆ. ಭಾರತದಲ್ಲಿ 1835 ರಿಂದ 1893 ರವರೆಗೆ ಬೆಳ್ಳಿ ಲೋಹದಿಂದ ಲೇಪಿತವಾದ ಹಣ ಅಸ್ತಿತ್ವದಲ್ಲಿತ್ತು.

**ಕಾಗದದ ಹಣ (Paper money):-**

- ಲೇವಾದೇವಿಗಾರರು & ವ್ಯಾಪಾರಗಾರರ ನಡುವೆ ಅಪ್ಪಾಪಿತ ಹಣದ ಪ್ರಮಾಣಕ್ಕೆ ಸಾಕ್ಷಿಯಾಗಿ ಲಿಖಿತ ದಾಖಲೆಗಳನ್ನು ಬಳಸುತ್ತಿದ್ದರು. ಆದರೆ ಇದು ಹಣ ಎಂದು ಸ್ವೀಕರಿಸಲು ಸಿದ್ಧರಿರಲಿಲ್ಲ.
- ಆದರೆ ರಾಷ್ಟ್ರದ ಕೇಂದ್ರ ಸರ್ಕಾರಗಳು ತಮ್ಮ ದೇಶದ ಕೇಂದ್ರ ಬ್ಯಾಂಕುಗಳ ಮೂಲಕ ನೋಟುಗಳನ್ನು ಚಲಾವಣೆಗೆ ತರುವ ಏಕಸ್ವಾಮ್ಯ ಅಧಿಕಾರವನ್ನು ನೀಡಿದವು. **ಉದಾ:-** ಅಮೆರಿಕದ ಡಾಲರ್, ಬ್ರಿಟನ್‌ನ ಪೌಂಡ್‌ಸ್ಟರ್ಲಿಂಗ್, ಚೀನಾದ ಫ್ರಾನ್, ಜರ್ಮನಿಯ ಮಾರ್ಕ್, ಜಪಾನ್‌ನ ಯೆನ್ ಮುಂತಾದವು.
- **ಅ. ಪ್ರಾತಿನಿಧಿಕ ಕಾಗದದ ಹಣ:-** ಕಾಗದದ ಹಣವನ್ನು ಪೂರ್ಣವಾಗಿ ಚಿನ್ನ ನಾಣ್ಯ ಅಥವಾ ಚಿನ್ನದ ಗಟ್ಟಿಯಾಗಿ ಪೂರ್ಣವಾಗಿ ಪರಿವರ್ತಿಸಲು ಸಾಧ್ಯವಿರುವುದು.
- **ಆ. ಪರಿವರ್ತಿತ ಕಾಗದದ ಹಣ:-** ಇಲ್ಲಿ ಹಣವನ್ನು ಶೇ 100 ರಷ್ಟು ಸ್ಟಾಂಡರ್ಡ್ ಹಣವಾಗಿ ಪರಿವರ್ತಿಸಲು ಸಾಧ್ಯವಿರುವುದಿಲ್ಲ.

**ಇ. ಅಪರಿವರ್ತಿತ ಕಾಗದದ ಹಣ:-** ಹಣವನ್ನು ಸ್ಟಾಂಡರ್ಡ್ ಹಣವಾಗಿ ಪರಿವರ್ತಿಸಲು ಸಾಧ್ಯವಿರುವುದಿಲ್ಲ. ಭಾರತದಲ್ಲಿ ಪ್ರಸ್ತುತ ಚಾಲ್ತಿಯಲ್ಲಿರುವ ಕರೆನ್ಸಿ ಪದ್ಧತಿ ಇದಾಗಿದೆ. ಇದನ್ನು Fiduciary Money ಎಂದು ಕೂಡ ಕರೆಯುತ್ತಾರೆ.

**ಈ. ಫಿಯೆಟ್ ಹಣ (Fiat Money):-** ಸರ್ಕಾರ ಅಥವಾ ಸರ್ಕಾರದ ಪ್ರಾಧಿಕಾರಗಳು ಚಲಾವಣೆಗೆ ತರುವ ಹಣ. ಉದಾ:- ಭಾರತದಲ್ಲಿ ಕೇಂದ್ರ ಹಣಕಾಸು ಸಚಿವಾಲಯ ಜಾರಿಗೆ ತರುತ್ತಿದ್ದ 1. ರೂ. ನೋಟು, ನಾಣ್ಯಗಳು.

- ಫಿಯೆಟ್ & ಅಪರಿವರ್ತಿತ ಕಾಗದ ಹಣದ ನಡುವೆ ವ್ಯತ್ಯಾಸ ಇರುವುದಿಲ್ಲ.

**ಉ. ಕ್ರೆಡಿಟ್ ಹಣ:-** ವಾಣಿಜ್ಯ ಬ್ಯಾಂಕುಗಳು ಚೆಕ್, ಡ್ರಾಫ್ಟ್‌ಗಳ ಮೂಲಕ ಹಣವನ್ನು ವರ್ಗಾಯಿಸುವ ಸಾಧನ.

## ಬ್ಯಾಂಕ್/ಸಾಮೀಪ್ಯ ಹಣ (Bank/Near money):-

- ಚೆಕ್, ಡ್ರಾಫ್ಟ್, ಕ್ರೆಡಿಟ್ ಕಾರ್ಡ್ & ಡೆಬಿಟ್ ಕಾರ್ಡುಗಳು ಬ್ಯಾಂಕು ಹಣಕ್ಕೆ ಮುಖ್ಯ ಉದಾಹರಣೆಗಳಾಗಿದ್ದು, ವ್ಯಾಪಾರ & ವಾಣಿಜ್ಯಾಭಿವೃದ್ಧಿ ಹೊಂದಿದಂತೆ, ಇವುಗಳ ಬೆಳವಣಿಗೆ ಹೆಚ್ಚಾಗಿ ಸಾಮೀಪ್ಯ ಹಣದ ಸ್ವತ್ತುಗಳಾಗಿ ಮಾರ್ಪಟ್ಟಿವೆ.
- ಇವುಗಳು ನಗದು ರೂಪದಲ್ಲಿರದೇ ಪೂರ್ಣ ಹಣದ ದ್ರವ್ಯತ್ವವನ್ನು ಹೊಂದಿರುತ್ತವೆ.

| ಹಣ | ಸಾಮೀಪ್ಯಹಣ |
|---|---|
| ವಿನಿಮಯ ಮಾಧ್ಯಮವಾಗಿ ಕಾರ್ಯ | ಮೌಲ್ಯ ಸಂಗ್ರಹಕ ಸಾಧನವಾಗಿ ಕಾರ್ಯ |
| ನಗದು ಪೂರ್ಣದ್ರವ್ಯತ್ವ | ಹಣಕ್ಕೆ ಪರಿಪೂರ್ಣವಾಗಿ ಬದಲಿಸಲು ಸಾಧ್ಯ |
| ನಿಷ್ಕ್ರಿಯ ಹಣ | ಹಣದ ಆರ್ಥಿಕ ಸದ್ಗಳಕೆ |
| ಕಾನೂನುಬದ್ಧ | ಕಾನೂನು ಬದ್ಧವಾಗಿರುವುದಿಲ್ಲ. |

- ಹಣದ ಕಾರ್ಯಗಳನ್ನು **ಪ್ರೊ.ಕಿನ್ಲೆ** ಅವರು 4 ರೀತಿಯಲ್ಲಿ ವರ್ಗೀಕರಿಸಿದ್ದಾರೆ.




**ವಿನಿಮಯ ಮಾಧ್ಯಮ:-** ವಸ್ತು... ಪ್ರಮುಖ ದೋಷವಾದ ... ಹೊಂದಾಣಿಕೆ ಸಮಸ್ಯೆಯನ್ನು ... & ಸೇವೆಗಳನ್ನು ಕೊಳ್ಳಲು ... ವಿನಿಮಯ ಮಾಧ್ಯಮವಾಗಿ ...

**ಮೌಲ್ಯಮಾಪನ ಸಾಧನ:-** ಸರಕು & ... ಬೆಲೆಯ ರೂಪದಲ್ಲಿ ವ್ಯಕ್ತಪಡಿಸಲು ... ನಿರ್ಧರಿಸಲು ಹಣವು ಅಳತೆಗೋಲು...

## ಹಣದ ಮಾಧ್ಯಮಿಕ ಕಾರ್ಯಗಳು:-

**ಲೇವಾದೇವಿ ವ್ಯವಹಾರದ** ... ಭವಿಷ್ಯದ ಪಾವತಿಗಳಾದ ಸಾಲ, ... ಮುಂತಾದವುಗಳನ್ನು ವ್ಯವಹರಿಸಲು ... ಸಹಾಯಕವಾಗಿದೆ.

**ಮೌಲ್ಯ ಸಂಗ್ರಹಕ:-** ಜನರು ... ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ... ಸಂಗ್ರಹಿಸಿಡಲು ಸಹಾಯಕವಾಗಿದೆ.

**ಮೌಲ್ಯ ವರ್ಗಾವಣೆ ಸಾಧನ:-** ... ಮೌಲ್ಯವನ್ನು ಅಥವಾ ಕೊಳ್ಳುವ ... ವ್ಯಕ್ತಿಯಿಂದ ಮತ್ತೊಬ್ಬ ವ್ಯಕ್ತಿಗೆ ... ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ... ಸಹಾಯಕ.

## ಹಣದ ಪೂರಕ ಕಾರ್ಯಗಳು:-

**ರಾಷ್ಟ್ರೀಯ ವರಮಾನದ ಹಂಚಿಕೆ:-**

- ಗೇಣಿ, ಕೂಲಿ, ಬಡ್ಡಿ, ಲಾಭ... ಪ್ರತಿಫಲವನ್ನು ಹಂಚಿಕೆ ಮಾಡಲು ...
- ಸಾಲದ ವ್ಯವಹಾರಗಳಿಗೆ ಆಧಾರ...
- ಗ್ರಾಹಕ & ಉತ್ಪಾದಕರ ತೃಪ್ತಿಯನ್ನು ... ಬಳಕೆ.
- ಹಣವು ಸಂಪತ್ತಿಗಿಂತ ಹೆಚ್ಚು ... ಏಕರೂಪತೆಯನ್ನು ಹೊಂದಿರುವುದು.

## ಹಣದ ಇತರೆ ಕಾರ್ಯಗಳು:-

- ಗ್ರಾಹಕ ದಿನನಿತ್ಯ ಜೀವನದಲ್ಲಿ ... ಹಣದ ಆಧಾರದ ಮೇಲೆ ನಿರ್ಣಯ... ಸಹಾಯಕ.
- ಹಣದ ಕೊಳ್ಳುವ ಶಕ್ತಿಯ ಸಾಮಾನ್ಯ ...

## ಹಣದ ಬೇಡಿಕೆ (Demand for Money):-

- ✦ ಜನರು ವಿವಿಧ ಉದ್ದೇಶಗಳಿಗಾಗಿ ತಮ್ಮ ಬಳಿ ಇಟ್ಟುಕೊಳ್ಳಲು ಬಯಸುವ ನಗದು ಹಣದ ಮೊತ್ತವೇ ಹಣದ ಬೇಡಿಕೆಯಾಗಿದೆ.
- ✦ ಕೇನ್ಸ್ ಅವರ ಪ್ರಕಾರ ಇದು 3 ಉದ್ದೇಶಗಳನ್ನು ಹೊಂದಿದ್ದು, ದೈನಂದಿನ ವ್ಯವಹಾರ, ಮುನ್ನೆಚ್ಚರಿಕೆ ಮತ್ತು ಸಟ್ಟಾ ವ್ಯಾಪಾರ.
- ✦ **ದೈನಂದಿನ ವ್ಯವಹಾರ ಉದ್ದೇಶ** ಎಂದರೆ ಮಾನವ ತನ್ನ ದೈನಂದಿನ ಖರ್ಚುವೆಚ್ಚಗಳನ್ನು ಭರಿಸಲು ನಗದು ರೂಪದಲ್ಲಿ ಇಟ್ಟುಕೊಳ್ಳಲು ಬಯಸುವ ಹಣಕ್ಕಿರುವ ಬೇಡಿಕೆ. ಇದು ಅನುಭೋಗೀಯ ಆದಾಯದ ನಡುವೆ ನೇರ ಸಂಬಂಧ ಹೊಂದಿದೆ. ಅಂದರೆ ಆದಾಯ ಹೆಚ್ಚಾದಂತೆ ವ್ಯವಹಾರಕ್ಕಿರುವ ಹಣದ ಬೇಡಿಕೆ ಹೆಚ್ಚಾಗುತ್ತದೆ ಇಲ್ಲವೇ ಕಡಿಮೆಯಾಗುತ್ತದೆ.
- ✦ **ಮುನ್ನೆಚ್ಚರಿಕಾ ಉದ್ದೇಶ** ಎಂದರೆ ಭವಿಷ್ಯದ ಅವಶ್ಯಕತೆ, ಆಕಸ್ಮಿಕ ಗಂಡಾಂತರಗಳನ್ನು ಭರಿಸಲು ಇಂದು ಜನರು ಹಣ ಇಟ್ಟುಕೊಳ್ಳಲು ಬಯಸುವುದು. ಇದು ಕೂಡ ಆದಾಯದ ಜೊತೆ ನೇರ ಸಂಬಂಧವನ್ನು ಹೊಂದಿದೆ.
- ✦ **ಸಟ್ಟಾ ವ್ಯಾಪಾರದ ಉದ್ದೇಶ** ಎಂದರೆ, ಭವಿಷ್ಯದಲ್ಲಿ ಲಾಭ ತರುವ ಉದ್ದೇಶದಿಂದ ಪ್ರಸ್ತುತ ಷೇರು, ಡಿಬೆಂಚರು, ಸಾಲಪತ್ರಗಳ ಮೇಲೆ ಬಂಡವಾಳ ತೊಡಗಿಸಲು ಇಚ್ಛಿಸುವ ಹಣದ ಬೇಡಿಕೆ. ಇದು ಬಡ್ಡಿದರದ ನಡುವೆ ವಿಪರ್ಯಯ ಸಂಬಂಧವನ್ನು ಹೊಂದಿದೆ.

## ಹಣದ ಪೂರೈಕೆ (Supply of Money):-

- ✦ ಒಂದು ನಿರ್ದಿಷ್ಟ ಅವಧಿಯಲ್ಲಿ ರಾಷ್ಟ್ರದ ಜನರ ಬಳಿ ಇರುವ ನೋಟು ಮತ್ತು ನಾಣ್ಯಗಳ ಒಟ್ಟು ಸಂಗ್ರಹವೇ ಹಣದ ಪೂರೈಕೆ.
- ✦ ಹಣದ ಸಂಗ್ರಹವು ಚಲಾವಣೆಯಲ್ಲಿರುವ ನೋಟು, ನಾಣ್ಯಗಳು ಮತ್ತು ವಾಣಿಜ್ಯ ಬ್ಯಾಂಕುಗಳ ಬಳಿ ಇರುವ ವಿವಿಧ ಠೇವಣಿ ಹಣವನ್ನು ಒಳಗೊಂಡಿರುತ್ತದೆ. ಆದರೆ ಸರ್ಕಾರ ಹಾಗೂ ಕೇಂದ್ರ ಬ್ಯಾಂಕಿನಲ್ಲಿರುವ ಹಣದ ಸಂಗ್ರಹವನ್ನು ಒಳಗೊಂಡಿರುವುದಿಲ್ಲ.
- ✦ 1977ರ ಏಪ್ರಿಲ್ ನಂತರ ಆರ್‌ಬಿಐ ಹಣದ ಪೂರೈಕೆಯನ್ನು 4 ಮಾನದಂಡಗಳಲ್ಲಿ ಅಳೆಯುತ್ತಿದೆ.

| |
|---|
| 1) M1=C+DD+OD |
| 2) M2=M1+POSBD |
| 3) M3 = M1+TD |
| 4) M4 = M3+TPOD |

- ✦ C ಎಂಬುದು ಸಾರ್ವಜನಿಕರ ಬಳಿ ಇರುವ ಕರೆನ್ಸಿ,
- ✦ DD ಎಂಬುದು ವಾಣಿಜ್ಯ ಬ್ಯಾಂಕುಗಳ ಬೇಡಿಕೆ ಠೇವಣಿ.
- ✦ OD ಎಂಬುದು RBI ಹೊಂದಿರುವ ಇತರೆ ಠೇವಣಿಗಳು
- ✦ POSBD-ಅಂಚೆಕಚೇರಿ ಉಳಿತಾಯ ಖಾತೆ ಠೇವಣಿ
- ✦ TD-ಎಲ್ಲಾ ಬ್ಯಾಂಕು ಹೊಂದಿರುವ ಅವಧಿ ಠೇವಣಿ
- ✦ TPOD – ಒಟ್ಟು ಅಂಚೆ ಕಚೇರಿ ಠೇವಣಿ

| |
|---|
| ಸಂಕುಚಿತ ಹಣ – MI |
| ವಿಶಾಲ ಹಣ – M3 |
| ಮೀಸಲು ಹಣ – M0 (ಚಲಾವಣೆಯಲ್ಲಿರುವ ಕರೆನ್ಸಿ + ಆರ್.ಬಿ.ಐ ನ ಬ್ಯಾಂಕ್ ಠೇವಣಿಗಳು + ಆರ್.ಬಿ.ಐ ನ ಇತರೆ ಠೇವಣಿಗಳು) |

- ✦ **ವೈ.ವಿ.ರೆಡ್ಡಿ ನೇತೃತ್ವದ ಕಾರ್ಯಕಾರಿ ಸಮಿತಿಯ ವ್ಯಾಖ್ಯಾನದ ಪ್ರಕಾರ ಹಣದ ಪೂರೈಕೆಯ ಹೊಸ ವ್ಯಾಖ್ಯಾನ.**
- ✦ NM1 = ಸಾರ್ವಜನಿಕರ ಬಳಿ ಇರುವ ಕರೆನ್ಸಿ + ಬೇಡಿಕೆ ಠೇವಣಿ + RBI ನ ಇತರೆ ಠೇವಣಿಗಳು
- ✦ NM2 = NM1+ ಒಂದು ವರ್ಷ ಅವಧಿಯ ಅಲ್ಪಾವಧಿ ವಾಯಿದೆ ಠೇವಣಿ.
- ✦ NM3 = NM2 + ದೀರ್ಘಾವಧಿ ವಾಯಿದೆ ಠೇವಣಿ+ಹಣಕಾಸು ಸಂಸ್ಥೆಗಳ ಕರೆ ಸಾಲಗಳು

## ಭಾರತದ ರೂಪಾಯಿ

- ➢ ಭಾರತದ ರೂಪಾಯಿಯನ್ನು ನಿಯಂತ್ರಿಸುವುದು **–ಭಾರತೀಯ ರಿಸರ್ವ್ ಬ್ಯಾಂಕ್**
- ➢ ಜೂನ್.30, 2011ರಿಂದ 50ಪೈಸೆಯು ಕನಿಷ್ಠ ಮೌಲ್ಯದ ನಾಣ್ಯವಾಗಿದೆ.
- ➢ ಜೂನ್.30, 2011ರಿಂದ 50 ಪೈಸೆಗಿಂತ ಕಡಿಮೆ ಮೌಲ್ಯದ ನಾಣ್ಯಗಳ ಚಲಾವಣೆ ನಿಲ್ಲಿಸಲಾಗಿದೆ.
- ➢ **ಜುಲೈ.8, 2011**ರಿಂದ ರೂಪಾಯಿ ಚಿಹ್ನೆ ಹೊಂದಿರುವ ಮೊದಲ ಸರಣಿ ನಾಣ್ಯವನ್ನು ರಿಸರ್ವ್ ಬ್ಯಾಂಕ್ ಬಿಡುಗಡೆ ಮಾಡಿದೆ.
- ➢ ಭಾರತದ ರೂಪಾಯಿಯ ಹೊಸ ಚಿಹ್ನೆಯನ್ನು ತಮಿಳುನಾಡಿನ **ಉದಯಕುಮಾರ್ ಧರ್ಮಲಿಂಗಮ್** ಎಂಬ ಐಐಟಿ ಗೌಹತಿಯ ಪ್ರೊಫೆಸರ್ ವಿನ್ಯಾಸ ಗೊಳಿಸಿದರು.
- ➢ ಭಾರತದ ರೂಪಾಯಿಯ ಹೊಸ ಚಿಹ್ನೆಯು ದೇವನಾಗರಿ ಲಿಪಿಯ ವ್ಯಂಜನಾಕ್ಷರವಾದ 'ರಾ' ದಿಂದ ಆಯ್ಕೆ ಮಾಡಲಾಗಿದೆ.
- ➢ ಭಾರತದ ರೂಪಾಯಿಯ ಹೊಸ ಚಿಹ್ನೆಯನ್ನು **ಜುಲೈ.15, 2010** ರಂದು ಕೇಂದ್ರ ಸಚಿವ ಸಂಪುಟ ಅಂಗೀಕರಿಸಿದೆ.

# ಸೆಕ್ಯುರಿಟಿ ಪ್ರಿಂಟಿಂಗ್ ಮತ್ತು ಮಿಂಟಿಂಗ್ ಕಾರ್ಪೋರೇಷನ್ ಆಫ್ ಇಂಡಿಯಾ ಲಿಮಿಟೆಡ್ (SPMCIL)




- ಭಾರತೀಯ ಸರ್ಕಾರ ಒಡೆತನದ ಕಾರ್ಪೋರೇಷನ್ ಆಗಿದ್ದು, ಬ್ಯಾಂಕ್ ನೋಟುಗಳು, ನಾಣ್ಯಗಳು, ನ್ಯಾಯಾಂಗೇತರ ಸ್ಟಾಂಪ್‌ಗಳು (Non-Judicial Stamp), ಪೋಸ್ಟೇಜ್ ಸ್ಟಾಂಪ್‌ಗಳು ಮತ್ತು ಭಾರತದ ಇತರೆ ಸರ್ಕಾರದ ದಾಖಲೆಗಳನ್ನು ಮುದ್ರಿಸುವ ಕಾರ್ಯನಿರ್ವಹಿಸುತ್ತದೆ.
- ಇದು **ಕೇಂದ್ರ ವಿತ್ತ ಸಚಿವಾಲಯ**ದಡಿಯಲ್ಲಿ ಕಾರ್ಯನಿರ್ವಹಿಸುತ್ತದೆ. ಇದು 9 ಘಟಕಗಳನ್ನು ಒಳಗೊಂಡಿದೆ. 4 ಪ್ರೆಸ್‌ಗಳು, 4 ಮಿಂಟ್‌ಗಳು ಮತ್ತು ಪೇಪರ್‌ಮಿಲ್ ಹೊಂದಿದೆ.

**ನಾಲ್ಕು ನೋಟು ಮುದ್ರಣಾಲಯಗಳು**

1) ಕರೆನ್ಸಿ ನೋಟು ಮುದ್ರಣಾಲಯ (CNP)
2) ಬ್ಯಾಂಕ್ ನೋಟು ಮುದ್ರಣಾಲಯ (BNP)
3) ಭಾರತ ಭದ್ರತಾ ಮುದ್ರಣಾಲಯ (ISP)
4) ಭದ್ರತಾ ಅಚ್ಚು ಮುದ್ರಣಾಲಯ (SPP)

### 1) ಕರೆನ್ಸಿ ನೋಟು ಮುದ್ರಣಾಲಯ (CNP)

- 1928ರ ಕರೆನ್ಸಿ ನೋಟು ಮುದ್ರಣಾಲಯವನ್ನು ಬ್ಯಾಂಕ್ ನೋಟನ್ನು ಮುದ್ರಿಸಲು ಸ್ಥಾಪಿಸಲಾಯಿತು.
- ಕರೆನ್ಸಿ ನೋಟುಗಳ ಮುದ್ರಣಾಲಯವು ಮಹಾರಾಷ್ಟ್ರದ ನಾಸಿಕ್‌ನಲ್ಲಿದೆ.

### 2) ಬ್ಯಾಂಕಿನ ನೋಟುಗಳ ಮುದ್ರಣಾಲಯ (BNP)

- ಆರ್.ಬಿ.ಐನ ಬ್ಯಾಂಕಿನ ನೋಟುಗಳನ್ನು ಮುದ್ರಿಸುತ್ತದೆ. ಇದು ಮಧ್ಯಪ್ರದೇಶದ ದೇವಾಸ್‌ನಲ್ಲಿದೆ. ಭಾರತೀಯ ರಿಸರ್ವ್‌ಬ್ಯಾಂಕ್‌ನ ಬೇಡಿಕೆ ಪೂರೈಸಲು 1995ರಲ್ಲಿ **ಭಾರತೀಯ ರಿಸರ್ವ್ ಬ್ಯಾಂಕ್ ನೋಟು ಮುದ್ರಣ ಪ್ರೈ. ಲಿಮಿಟೆಡ್‌**ನ್ನು ಸ್ಥಾಪಿಸಿತು. ಇದರಡಿಯಲ್ಲಿ ಎರಡು ಮುದ್ರಣಾಲಯ ಹೊಂದಿದೆ.
- ಅ) ಮೈಸೂರು (ಕರ್ನಾಟಕ)
- ಆ) ಸಲಬೋನಿ (ಪಶ್ಚಿಮಬಂಗಾಳ)

### 3) ಭದ್ರತಾ ಅಚ್ಚು ಮುದ್ರಣಾಲಯ (Security Printing Press)

- ಇದು **ಹೈದ್ರಾಬಾದ್**‌ನಲ್ಲಿದೆ. ಅಂಚೆ ಕಛೇರಿ ಸಲಕರಣೆಗಳು, ಕೇಂದ್ರೀಯ ಅಬಕಾರಿ ಸ್ಟಾಂಪ್‌ಗಳು, ಪೋಸ್ಟ್ ಕಾರ್ಡ್‌ಗಳು, ಇನ್‌ಲ್ಯಾಂಡ್ ಲೆಟರ್‌ಗಳು, ಎನ್‌ವೆಲಪ್‌ಗಳು, ಪ್ರಯಾಣದ ದಾಖಲೆಗಳು ಸೇರಿದಂತೆ ಸರ್ಕಾರಕ್ಕೆ ಸಂಬಂಧಿಸಿದ ದಾಖಲೆಗಳನ್ನು ಮುದ್ರಿಸುತ್ತದೆ.

### 4) ಭಾರತದ ಭದ್ರತಾ ಮುದ್ರಣಾಲಯ (India Security Press)

- ಇದು **ಮಹಾರಾಷ್ಟ್ರದ ನಾಸಿಕ್‌**ನಲ್ಲಿದೆ. ಸ್ಟಾಂಪ್‌ಗಳು, ಅಂಚೆ ಕಛೇರಿಗಳು, ನ್ಯಾಯಾಲಯದ ಸ್ಟಾಂಪ್‌ಗಳು, ರಾಷ್ಟ್ರೀಯ ಉಳಿತಾಯ ಪತ್ರ, ಕಿಸಾನ್‌ಪತ್ರ, ಪೋಸ್ಟಲ್ ಆರ್ಡರ್ಸ್, ಪಾಸ್‌ಪೋರ್ಟ್‌ನ್ನು ಮುದ್ರಿಸಲಾಗುತ್ತದೆ.

### ಭದ್ರತಾ ಪೇಪರ್‌ಮಿಲ್ (Security Paper mill)

- 1967ರಲ್ಲಿ ಭದ್ರತಾ ಪೇಪರ್ ಮಿಲ್‌ನ್ನು **ಮಧ್ಯಪ್ರದೇಶದ ಹೋಷಂಗಾಬಾದ್‌**ನಲ್ಲಿ ಸ್ಥಾಪಿಸಲಾಗಿದೆ. ಇಲ್ಲಿ ಬ್ಯಾಂಕ್ ನೋಟುಗಳು ಮತ್ತು ನ್ಯಾಯಾಂಗೇತರ ಸ್ಟಾಂಪ್‌ಗಳ ತಯಾರಿಕೆಗೆ ಬೇಕಾದ ಗುಣಮಟ್ಟದ ಕಾಗದವನ್ನು ತಯಾರಿಸುತ್ತದೆ.
- ನೋಟುಗಳ ಮುದ್ರಣಕ್ಕೆ ಬಳಸುವ ಕಾಗದ ತಯಾರಿಸಲು ಮೈಸೂರಿನಲ್ಲೂ ಕಾಗದ ಮಿಲ್ ಸ್ಥಾಪನೆಗೆ ಆರ್.ಬಿ.ಐ ಸಿದ್ಧತೆ ನಡೆಸಿದೆ.

### ಭಾರತದ ಟಂಕಶಾಲೆಗಳು (Mints)

- ಭಾರತದಲ್ಲಿ ನಾಲ್ಕು ಟಂಕಶಾಲೆಗಳಿವೆ.

  1) ಮುಂಬೈ 2) ಹೈದ್ರಾಬಾದ್ 3) ಕೋಲ್ಕತ್ತಾ 4) ನೋಯ್ಡಾ (ಉತ್ತರಪ್ರದೇಶ) ಈ ಟಂಕಶಾಲೆಗಳು ನಾಣ್ಯಗಳನ್ನು ಹಾಗೂ ಪದಕಗಳು, ಫಲಕಗಳನ್ನು ಟಂಕಿಸುತ್ತವೆ.

### ಸ್ಮರಣಾರ್ಥ ನಾಣ್ಯಗಳು (Commemorative Coins)

- ಭಾರತ ಸರ್ಕಾರವು 1964 ರಿಂದ ಮೊದಲ ಸ್ಮರಣಾರ್ಥ ನಾಣ್ಯವನ್ನು ಬಿಡುಗಡೆ ಮಾಡಿತು. ಜವಾಹರ್‌ಲಾಲ್ ನೆಹರೂ ಸ್ಮರಣಾರ್ಥ 1 ರೂಪಾಯಿ ನಾಣ್ಯಬಿಡುಗಡೆ ಮಾಡಿತು. ಭಾರತದ ಮಹಾನ್ ಪುರುಷರು, 1982ರಲ್ಲಿ ನಡೆದ ಏಷಿಯನ್ ಗೇಮ್ಸ್ ಮದರ್ ತೆರೆಸಾ ಜನ್ಮದಿನಾಚರಣೆ ಹೀಗೆ ಅನೇಕ ಘಟನೆಗಳು, ಸ್ಥಳಗಳ ಸ್ಮರಣಾರ್ಥ ನಾಣ್ಯಗಳನ್ನು ಬಿಡುಗಡೆ ಮಾಡಲಾಗಿದೆ.

## ವಿಶೇಷ ನಾಣ್ಯಗಳು

- ಆರ್.ಬಿ.ಐನವರು ಭಾರತ ಸ್ವಾತಂತ್ರ್ಯಾನಂತರ ಭಾರತದ ವಿದ್ವಾಂಸರು, ಐತಿಹಾಸಿಕ ಮತ್ತು ಧಾರ್ಮಿಕ ಪ್ರಸಿದ್ಧ ವ್ಯಕ್ತಿಗಳ ಭಾವಚಿತ್ರ ಒಳಗೊಂಡ ವಿಶೇಷ ನಾಣ್ಯಗಳನ್ನು ಬಿಡುಗಡೆ ಮಾಡಿದ್ದಾರೆ.
- **2010ರಲ್ಲಿ ಆರ್.ಬಿ.ಐನ 75ನೇ ವರ್ಷಾಚರಣೆಯ** ಅಂಗವಾಗಿ 75 ರೂಪಾಯಿ, 2011ರಲ್ಲಿ ರವೀಂದ್ರ ನಾಥ ಠಾಗೋರ್‌ರವರ ಜನ್ಮ ದಿನಾಚರಣೆಯ ಅಂಗವಾಗಿ 150 ರೂಪಾಯಿ ನಾಣ್ಯವನ್ನು ಠಂಕಿಸಲಾಗಿದೆ.
- 2010ರಲ್ಲಿ **ತಮಿಳುನಾಡಿನ ತಂಜಾವೂರಿನಲ್ಲಿರುವ** ಬೃಹದೇಶ್ವರ ದೇವಾಲಯವು ಒಂದು ಸಾವಿರ ವರ್ಷ ಪೂರ್ಣಗೊಳಿಸಿದ ಹಿನ್ನೆಲೆಯಲ್ಲಿ 1000 ರೂ. ಬೆಲೆಯ ನಾಣ್ಯವನ್ನು ಠಂಕಿಸಲಾಯಿತು.
- 2012ರಲ್ಲಿ **ಕೋಲ್ಕತ್ತಾದ** ಭಾರತ ಸರ್ಕಾರದ **ಠಂಕಶಾಲೆಯು** ಸ್ಥಾಪನೆಯಾಗಿ 60 ವರ್ಷಗಳ ಹಿನ್ನೆಲೆಯಲ್ಲಿ 60 ರೂಪಾಯಿ ನಾಣ್ಯವನ್ನು ಠಂಕಿಸಲಾಯಿತು.
- **2015ಕ್ಕೆ** ಮಹಾತ್ಮಾ ಗಾಂಧೀಜಿಯವರು ಭಾರತಕ್ಕೆ ಹಿಂತಿರುಗಿ 100 ವರ್ಷ (ಶತಮಾನೋತ್ಸವ)ದ ಆಚರಣೆಯ ಸ್ಮರಣಾರ್ಥ 100 ರೂ. ನಾಣ್ಯ ಬಿಡುಗಡೆ ಮಾಡಲಾಯಿತು.

## ಬ್ಯಾಂಕ್ ನೋಟಿನ ಮೇಲಿನ ಭಾಷೆಗಳು

- ಬ್ಯಾಂಕ್ ನೋಟಿನ ಮೇಲೆ ಭಾರತದ 22 ಅಧಿಕೃತ ಭಾಷೆಯಲ್ಲಿ ಕೇವಲ **17 ಭಾಷೆಗಳು** ಅದರ ಮುಖಬೆಲೆಯನ್ನು ನಮೂದಿಸಿರುತ್ತವೆ. ಹಿಂದಿ ಮತ್ತು ಇಂಗ್ಲೀಷ್ ಭಾಷೆಯಲ್ಲಿ ದೊಡ್ಡದಾಗಿ ಬರೆದಿರುತ್ತದೆ. ಮತ್ತೊಂದು ಬದಿಯಲ್ಲಿ 15 ಭಾಷೆಗಳಲ್ಲಿ ಮುಖಬೆಲೆ ನಮೂದಿಸಿರುತ್ತಾರೆ. ಅಂತಹ 15 ಭಾಷೆಯಲ್ಲಿ **ಕನ್ನಡ ಭಾಷೆ ನಾಲ್ಕನೇ ಸ್ಥಾನದಲ್ಲಿದೆ.**
- **ನೋಟಿನಲ್ಲಿರುವ 15 ಭಾಷೆಗಳು:-** ಅಸ್ಸಾಮಿ, ಬೆಂಗಾಲಿ, ಗುಜರಾತಿ, ಕನ್ನಡ, ಕಾಶ್ಮೀರಿ, ಕೊಂಕಣಿ, ಮಲೆಯಾಳಂ, ಮರಾಠಿ, ನೇಪಾಳಿ, ಒರಿಯಾ, ಪಂಜಾಬಿ, ಸಂಸ್ಕೃತ, ತಮಿಳು, ತೆಲುಗು & ಉರ್ದು.

## ನೋಟಿನ ಮೇಲೆ ಸಹಿ

- ಒಂದು ರೂಪಾಯಿ ನೋಟನ್ನು ಹೊರತುಪಡಿಸಿ ಉಳಿದೆಲ್ಲಾ ನೋಟುಗಳ ಮೇಲೆ **ಭಾರತದ ರಿಸರ್ವ್ ಬ್ಯಾಂಕ್‌ನ ಗೌರ್ನರ್ ಸಹಿ** ಇರುತ್ತದೆ. ಆದರೆ ಒಂದು ರೂಪಾಯಿ ನೋಟಿನ ಮೇಲೆ **ಭಾರತದ ಹಣಕಾಸು ಕಾರ್ಯದರ್ಶಿಯ ಸಹಿ** ಇರುತ್ತದೆ. (ಆದರೆ ಪ್ರಸ್ತುತ ಒಂದು ರೂಪಾಯಿ ನೋಟು ಚಲಾವಣೆಯಲ್ಲಿ ಇಲ್ಲ)

## ಚಿನ್ನದ ಡೆಪಾಸಿಟ - ನಾಗ್ಪುರ ಶಾಖೆ

- ಭಾರತ ದೇಶದ ಚಿನ್ನದ ಡೆಪಾಸಿಟ್ (Gold Deposits)ಗಳು **ಆರ್.ಬಿ.ಐನ ನಾಗ್ಪುರ ಶಾಖೆಯಲ್ಲಿ** ನಡೆಯುತ್ತವೆ.

## ಸೂಕ್ಷ್ಮ ಹಣಕಾಸು (Micro Finance)

- ಬಡ & ಕಡಿಮೆ ಆದಾಯವುಳ್ಳ ಕುಟುಂಬಗಳಿಗೆ ಉಳಿತಾಯ ಖಾತೆ, ಜೀವವಿಮೆ ನಿಧಿ & ಸಾಲ ಮುಂತಾದ ಆರ್ಥಿಕ ಸೇವೆಗಳನ್ನು ಒದಗಿಸುವ ಮೂಲಕ ಅವರ ಆದಾಯದ ಮಟ್ಟವನ್ನು ಹೆಚ್ಚಿಸಿ, ಜೀವನ ಮಟ್ಟ ಸುಧಾರಿಸಲು ನೆರವಾಗುವ ಪರಿಕಲ್ಪನೆಯೇ ಸೂಕ್ಷ್ಮ ಹಣಕಾಸು.
- ಕ್ರಿ.ಶ. 1970 ರಲ್ಲಿ ಬಾಂಗ್ಲಾ ದೇಶದ ಗ್ರಾಮೀಣ ಬ್ಯಾಂಕ್ ಆಧುನಿಕ ಸೂಕ್ಷ್ಮ ಹಣಕಾಸು ಎಂಬ ಪರಿಕಲ್ಪನೆಯನ್ನು **ಸೂಕ್ಷ್ಮ ಹಣಕಾಸಿನ ಅಗ್ರಗಣ್ಯ** ಎಂದು ಕರೆಯಲಾದ **ಮಹಮ್ಮದ್ ಯೂನಸ್** ಮೊದಲ ಬಾರಿಗೆ ಪರಿಚಯಿಸಿದನು.
- ಆರ್ಥಿಕ ಒಳಗೊಳ್ಳುವಿಕೆ & ಸಮಾನತೆಯ ದೃಷ್ಟಿಯನ್ನು ಹೊಂದಿರುವ ಸೂಕ್ಷ್ಮ ಹಣಕಾಸಿನ ಪರಿಕಲ್ಪನೆ, ಭದ್ರತೆಯಿಲ್ಲದ ಸಾಲ, ಬಡತನ ರೇಖೆಗಿಂತ ಕೆಳಗಿರುವವರಿಗೆ ಅಗತ್ಯಸಾಲ ನೀಡಿಕೆ, ಸ್ವ ಸಹಾಯ ಸಂಘಗಳಿಗೆ ಕಡಿಮೆ ಬಡ್ಡಿ ದರದಲ್ಲಿ ಸಾಲ, ಗರಿಷ್ಠ ಸಾಲದ ಮೊತ್ತ & ದೀರ್ಘಾವಧಿ ಪಾವತಿಗೆ ಅವಕಾಶ ಮುಂತಾದ ಲಕ್ಷಣಗಳನ್ನು ಹೊಂದಿದೆ.
- ಭಾರತದಲ್ಲಿ **ರಾಷ್ಟ್ರೀಯ ಕೃಷಿ & ಗ್ರಾಮೀಣಾಭಿವೃದ್ಧಿ ಬ್ಯಾಂಕ್** ಮೊದಲ ಬಾರಿಗೆ ಸೂಕ್ಷ್ಮ ಹಣಕಾಸು ಯೋಜನೆ ಜಾರಿಗೆ ತಂದು, 1992 ರಲ್ಲಿ ಬ್ಯಾಂಕುಗಳು & ಸ್ವ ಸಹಾಯ ಸಂಘಗಳ ನಡುವೆ ಜೋಡಣಾ ಕಾರ್ಯ ನಡೆದಿದೆ.
- ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು, ವಾಣಿಜ್ಯ ಬ್ಯಾಂಕುಗಳು, ಸ್ವ ಸಹಾಯ ಸಂಘಗಳು ಈ ವ್ಯವಸ್ಥೆಯಲ್ಲಿ ಭಾಗವಹಿಸುತ್ತಿರುವ ಹಣಕಾಸು ಸಂಸ್ಥೆಗಳಾಗಿವೆ.
- ವಿಶ್ವಸಂಸ್ಥೆ 2005 ನೇ ವರ್ಷವನ್ನು ಸೂಕ್ಷ್ಮ ಸಾಲದ ಅಂತರಾಷ್ಟ್ರೀಯ ವರ್ಷ ಎಂದು ಘೋಷಣೆ ಮಾಡಿತು.
- ಭಾರತ ಸರ್ಕಾರ 2000 ಆಗಸ್ಟ್ 29 ರಂದು ಸೂಕ್ಷ್ಮ ಸಾಲದ ಕ್ಷೇತ್ರವನ್ನು ಬ್ಯಾಂಕೇತರ ಹಣಕಾಸು ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡೆ ಮಾಡಿದ್ದು, ವಿದೇಶಿ ಬಂಡವಾಳ ಹೂಡಿಕೆಗೂ ಅವಕಾಶ ಕಲ್ಪಿಸಿದೆ.
- ಕೇಂದ್ರ ಸರ್ಕಾರ 2000-01 ರ ಬಜೆಟ್‌ನಲ್ಲಿ 100 ಕೋಟಿ ಮೂಲ ಬಂಡವಾಳದ ಸೂಕ್ಷ್ಮ ಹಣಕಾಸು ಅಭಿವೃದ್ಧಿ ನಿಧಿಯನ್ನು ಸ್ಥಾಪಿಸಿದ್ದು, ಆರ್.ಬಿ.ಐ & ನಬಾರ್ಡ್ ತಲಾ 40 ಕೋಟಿ ಹಾಗೂ ಉಳಿದ 20 ಕೋಟಿಯನ್ನು ಸಾರ್ವಜನಿಕ ವಲಯದ ಬ್ಯಾಂಕುಗಳು ಭರಿಸಿವೆ.

# ಪ್ಲಾಸ್ಟಿಕ್ ನೋಟುಗಳು (Plastic Currency)



- ಪ್ಲಾಸ್ಟಿಕ್ ನೋಟುಗಳನ್ನು ಪ್ರಸ್ತುತವಾಗಿ ಆಸ್ಟ್ರೇಲಿಯಾ, ಇಂಗ್ಲೆಂಡ್, ಚಿಲಿ, ರೊಮೇನಿಯಾ, ನ್ಯೂಜಿಲೆಂಡ್, ವಿಯೆಟ್ನಾಂ, ಕೆನಡಾ, ಪುಪುವಾ ನ್ಯೂಗಿನಿ, ಬ್ರೂನೆ. ಸೇರಿ 17 ರಾಷ್ಟ್ರಗಳಲ್ಲಿ ಚಾಲನೆಯಲ್ಲಿದೆ.
- 1988ರಲ್ಲಿ **ಆಸ್ಟ್ರೇಲಿಯಾ ದೇಶವು** ಪ್ಲಾಸ್ಟಿಕ್ ನೋಟನ್ನು ಮೊದಲು ಬಳಕೆಗೆ ತಂದಿತು.
- ಬ್ರಿಟನ್‌ನಲ್ಲಿ ಈಗ ಭಾಗಶಃ ಪ್ಲಾಸ್ಟಿಕ್ ನೋಟುಗಳಾಗಿದ್ದು, 2020ರ ವೇಳೆಗೆ ಸಂಪೂರ್ಣವಾಗಿ ಬಳಕೆಗೆ ಬರಲಿದೆ.

### ಪ್ಲಾಸ್ಟಿಕ್ ನೋಟನ್ನು ತಯಾರಿಸುವ ವಿಧಾನ:-

- **ಬೈಯಾಕ್ಸಿಯಲ್ ಓರಿಯಂಟೆಡ್ ಪಾಲಿಪ್ರೊಪೈಲಿನ್** ಎಂಬ ಪಾರದರ್ಶಕ ಪ್ಲಾಸ್ಟಿಕ್ ಹಾಳೆಗಳನ್ನು ಬಳಸಿ ಈ ನೋಟುಗಳನ್ನು ಮುದ್ರಿಸಲಾಗುತ್ತಿದೆ. ವಿವಿಧ ರಾಸಾಯನಿಕ & ಸಸ್ಯಜನ್ಯ ವಸ್ತುಗಳ ಸಂಯೋಜನೆಯ ಪ್ಲಾಸ್ಟಿಕ್‌ನ್ನು ಹೆಚ್ಚು ಉಷ್ಣತೆಯಲ್ಲಿ ಕಾಯಿಸಿ, ಹಿಗ್ಗಿಸಿ ಈ ಹಾಳೆಯಲ್ಲಿ ತಯಾರಿಸಲಾಗುತ್ತದೆ. ಈ ಹಾಳೆಗಳ ಎರಡು ಬದಿಗೆ ಬಿಳಿಬಣ್ಣದ ಲೇಪನ ಮಾಡಲಾಗುತ್ತದೆ.

### ಪ್ಲಾಸ್ಟಿಕ್ ನೋಟಿನ ವೈಶಿಷ್ಟ್ಯತೆಗಳು:-

- ಪ್ಲಾಸ್ಟಿಕ್ ನೋಟುಗಳ ಅಂದಾಜು ಜೀವಿತಾವಧಿಯು 5 ವರ್ಷಗಳಾಗಿದ್ದು ಇದನ್ನು ನಕಲಿ ಮಾಡುವುದು ಕಷ್ಟವಾಗುತ್ತದೆ. ಪೇಪರ್ ನೋಟಿಗಿಂತ ಹೆಚ್ಚು ಸ್ವಚ್ಛವಾಗಿರುತ್ತದೆ. ನೋಟಿನ ಸ್ವಲ್ಪ ಭಾಗ ಪಾರದರ್ಶಕವಾಗೇ ಇರುತ್ತದೆ. ಕಾಗದದ ನೋಟಿನಲ್ಲಿರುವ ಲೋಹದ ಪಟ್ಟಿಗಳಂತಹ ಪಟ್ಟಿಗಳನ್ನು ಇದರಲ್ಲೂ ಸೇರಿಸಲಾಗುತ್ತದೆ. ಇವು ಭಿನ್ನ ಕೋನದಲ್ಲಿ ಬೇರೆ ಬೇರೆ ಬಣ್ಣದಲ್ಲಿ ಗೋಚರಿಸುತ್ತವೆ.
- ನೋಟಿನ ಪಾರದರ್ಶಕ ಭಾಗದಲ್ಲಿ ಪಾರದರ್ಶಕ ಸಂಕೇತಗಳನ್ನು ಮುದ್ರಿಸಲಾಗುತ್ತದೆ. ತೀರಾ ಸೂಕ್ಷ್ಮವಾಗಿ ಗಮನಿಸಿದಾಗ ಮಾತ್ರ ಇವು ಗೋಚರಿಸುತ್ತವೆ. ಈ ನೋಟುಗಳಲ್ಲಿ ಮುದ್ರಣದ ಎಳೆಗಳ ಸಾಂದ್ರತೆ ಹೆಚ್ಚಿರುತ್ತದೆ. ನೋಟಿನ ಒಂದು ಸೆಂ.ಮೀ ಭಾಗದಲ್ಲಿ 12 ಸಾವಿರ ಮುದ್ರಣದ ಎಳೆಗಳಿರುತ್ತವೆ.
- ನೋಟು ಮುದ್ರಣದ ಗುಣಮಟ್ಟದ **ಬೈ ಆಕ್ಸಿಯಲ್ ಓರಿಯೆಂಟೆಡ್ ಪಾಲಿ ಪ್ರೊಫೈಲಿನ್** ಹಾಳೆಗಳು ಮಾರುಕಟ್ಟೆಯಲ್ಲಿ ಮುಕ್ತವಾಗಿ ಲಭ್ಯವಿಲ್ಲ & ಬಣ್ಣಗಳ ಸಂಯೋಜನೆ ಲಭ್ಯವಿಲ್ಲ.
- ಬಣ್ಣಗಳ ಸಂಯೋಜನೆ ವಿಶಿಷ್ಟವಾಗಿದ್ದು, ಮೇಲ್ನೋಟಕ್ಕೆ ಸಾಮಾನ್ಯವಾಗಿ ಕಂಡರೂ, ಅತಿ ನೇರಳೆ ಕಿರಣಗಳ ಸೂಕ್ಷ್ಮ ದರ್ಶಕದಲ್ಲಿ ಭಿನ್ನವಾಗಿ ಕಾಣುತ್ತವೆ. ಈ ರೀತಿಯ ಸಂಯೋಜನೆ ಕಷ್ಟ ಸಾಧ್ಯ.

### ಪ್ಲಾಸ್ಟಿಕ್ ನೋಟಿನಿಂದಾಗುವ ಅನುಕೂಲಗಳು:-

- ಈ ನೋಟುಗಳು ಹರಿಯುವುದಿಲ್ಲ, ಮಡಿಚಲು ಸಾಧ್ಯವಿಲ್ಲ, ಸುಕ್ಕು ಆಗುವುದಿಲ್ಲ, ನೀರಿನಲ್ಲಿ ಒದ್ದೆಯಾಗುವುದಿಲ್ಲ, ಹಾಗೂ ಇವುಗಳ ಬಳಕೆ ದೀರ್ಘಾವಧಿಯಾಗಿರುತ್ತದೆ.
- ಪ್ಲಾಸ್ಟಿಕ್ ನೋಟುಗಳು ಕಾಗದದ ನೋಟುಗಳಿಗಿಂತ ಮುದ್ರಣಕ್ಕೆ ಹೆಚ್ಚು ವೆಚ್ಚವಾಗುತ್ತದೆ. ಆದರೆ ಕಾಗದ ನೋಟುಗಳ ಬಾಳಿಕೆ ಅವಧಿಗಿಂತ ಹೆಚ್ಚು ಕಾಲ ಬಾಳಿಕೆ ಬರುವುದರಿಂದ ಒಟ್ಟಾರೆ ವೆಚ್ಚ ಕಡಿಮೆಯಾಗುತ್ತದೆ.
- ನಕಲಿ ನೋಟುಗಳ ಹಾವಳಿ ಕಡಿಮೆಯಾಗುತ್ತದೆ.
- ಆರ್.ಬಿ.ಐ 5 ನಗರಗಳಾದ **ಕೊಚ್ಚಿ, ಮೈಸೂರು, ಜೈಪುರ, ಸಿಮ್ಲಾ & ಭುವನೇಶ್ವರಗಳಲ್ಲಿ** ಪ್ರಾಯೋಗಿಕವಾಗಿ 10 ರೂ. ಮುಖಬೆಲೆಯ ಪ್ಲಾಸ್ಟಿಕ್ ನೋಟುಗಳನ್ನು ಜಾರಿಗೆ ತರಲು ಉದ್ದೇಶಿಸಿದೆ.

### ಅಂತರಾಷ್ಟ್ರೀಯ ಕೃಷಿ ಅಭಿವೃದ್ಧಿ ನಿಧಿ IFAD-International Fund for Agricultural Development




ವಿಶ್ವಸಂಸ್ಥೆಯ 13ನೇ ವಿಶೇಷ ಘಟಕ ಸಂಸ್ಥೆಯಾಗಿ **1974ರ** ವಿಶ್ವ ಆಹಾರ ಸಮ್ಮೇಳನದ ಫಲವಾಗಿ 1977 ರಲ್ಲಿ ಸ್ಥಾಪನೆಯಾಗಿದ್ದು, **ಇಟಲಿಯ ರೋಂ** ನಲ್ಲಿ ತನ್ನ ಕೇಂದ್ರ ಕಛೇರಿಹೊಂದಿದೆ. ಜಾಗತಿಕ ಮಟ್ಟದಲ್ಲಿ ಗ್ರಾಮೀಣ ಬಡವರ ಬಡತನವನ್ನು ನೀಗಿಸಿ ಜನರ ಜೀವನದ ಗುಣಮಟ್ಟವನ್ನು ಕೌಶಲ್ಯ ಭರಿತರನ್ನಾಗಿಸುವುದರ ಮೂಲಕ ಹೆಚ್ಚಿಸುವ ಉದ್ದೇಶ ಹೊಂದಿದೆ. & ಪರಿಣಾಮಕಾರಿ ಉತ್ಪಾದನಾ ಸೇವೆಗಳು & ಕೃಷಿ ತಂತ್ರಜ್ಞಾನವನ್ನು ಸುಧಾರಿಸುವ ಉದ್ದೇಶದಿಂದ ಹಣಕಾಸು ಸೇವೆ ಒದಗಿಸುವ ಸಂಸ್ಥೆಯಾಗಿದೆ. ಈ ಸಂಸ್ಥೆಯು One Family at a Time ಸಮೀಕ್ಷೆ ಅಧ್ಯಯನ ನಡೆಸಿದ್ದು, 2016 ರಲ್ಲಿ ಭಾರತವು 62.7 ಬಿಲಿಯನ್ ಅಮೆರಿಕನ್ ಡಾಲರ್ ಹಣವನ್ನು ಪಡೆದುಕೊಂಡಿರುವ ಮೊದಲ ದೇಶವಾಗಿದೆ. 2ನೇ ಸ್ಥಾನದಲ್ಲಿ ಚೀನಾ. 3ನೇ ಸ್ಥಾನದಲ್ಲಿ ಫಿಲಿಪೈನ್ಸ್ ದೇಶವಿದೆ. **ಅಮೆರಿಕ, ಸೌದಿ ಅರೇಬಿಯಾ** & ... ದೇಶಗಳು ಈ ಸಂಸ್ಥೆಗೆ ವಾರ್ಷಿಕವಾಗಿ ಹಣಕಾಸು ನೆರವು ನೀಡಿರುವ ಅಗ್ರ ಪಂಕ್ತಿಯ ರಾಷ್ಟ್ರಗಳಾಗಿವೆ.

# ನೈಜ ನಾಣ್ಯಗಳ ಪರೀಕ್ಷಾ ಚೌಕಟ್ಟು ಸಮಿತಿ ನೇಮಕ
## (Committee to Examine Frame work for Virtual Currency)




ಭಾರತ ಸರ್ಕಾರವು 2017 ಏಪ್ರಿಲ್ 12 ರಂದು ನೈಜ ನಾಣ್ಯ (Virtual Currency) ಗಳ ಪರೀಕ್ಷಾ ಚೌಕಟ್ಟು ಸಮಿತಿಯನ್ನು ದಿನೇಶ್ ಶರ್ಮಾ ಅವರ ಅಧ್ಯಕ್ಷತೆಯಲ್ಲಿ 9 ಜನರ ಸದಸ್ಯರನ್ನು ಒಳಗೊಂಡಂತೆ ನೇಮಿಸಿತ್ತು. ಈ ಸಮಿತಿಯು 3 ತಿಂಗಳೊಳಗೆ ತನ್ನ ವರದಿಯನ್ನು ಸಲ್ಲಿಸಬೇಕಾಗಿದೆ. ಈ ಸಮಿತಿಯಲ್ಲಿ ನೀತಿ ಆಯೋಗ, ಆರ್.ಬಿ.ಐ, ಎಸ್.ಬಿ.ಐ, ಆರ್ಥಿಕ ವಿದ್ಯಮಾನ ಇಲಾಖೆ, ಹಣಕಾಸಿನ ಸೇವಾ ಇಲಾಖೆ, ಕಂದಾಯ ವಿಭಾಗ, ಗೃಹ ಸಚಿವಾಲಯಗಳಿಂದ ಪ್ರತಿನಿಧಿಗಳನ್ನು ಒಳಗೊಂಡಿದೆ.

**ಉದ್ದೇಶಗಳು:-** ಈ ಸಮಿತಿಯು ಭಾರತ & ಜಾಗತಿಕ ಮಟ್ಟದಲ್ಲಿ ನೈಜ ನಾಣ್ಯಗಳ ಪ್ರಸ್ತುತ ಸ್ಥಿತಿಯ ಸ್ಟಾಕ್‌ನ್ನು ಪರಿಶೀಲಿಸುತ್ತದೆ.

- ನೈಜ ನಾಣ್ಯಗಳ ನಿರ್ವಹಣೆಯ ಕಾನೂನಾತ್ಮಕ ರಚನೆ & ಜಾಗತಿಕ ನಿರ್ವಹಣೆಯನ್ನು ಪರಿಶೀಲಿಸುತ್ತದೆ.
- ನೈಜ ನಾಣ್ಯಗಳಿಗೆ ಸಂಬಂಧಿಸಿದ ವಿಷಯಗಳನ್ನು ನಿರ್ವಹಿಸುವ ಬಗ್ಗೆ ಸಲಹೆ ನೀಡುತ್ತದೆ. & ನೈಜ ನಾಣ್ಯಗಳಿಗೆ ಸಂಬಂಧಿಸಿದ ಇತರೆ ವಿಷಯಗಳನ್ನು ಪರಿಶೀಲಿಸುತ್ತದೆ.
- ನೈಜ ನಾಣ್ಯಗಳ ಚಲಾವಣೆಗೆ ಸಂಬಂಧಿಸಿದಂತೆ ಕ್ರಿಯಾ ಯೋಜನೆಯನ್ನು ರೂಪಿಸಲು ಆಯೋಗವನ್ನು ರಚಿಸಲಾಗಿದ್ದು, ಈ ಆಯೋಗವು ಮುಂದಿನ ದಿನಗಳಲ್ಲಿ ನೈಜ ನಾಣ್ಯಗಳ ಚಲಾವಣೆಗೆ ಸಂಬಂಧಿಸಿದಂತೆ ನಿಯಮಗಳನ್ನು ರೂಪಿಸಲು ಸಹಕಾರಿಯಾಗುತ್ತದೆ.
- ಈಗಾಗಲೇ ಆರ್.ಬಿ.ಐ ನೈಜ ನಾಣ್ಯಗಳ ಬಳಕೆಗೆ ಸಂಬಂಧಿಸಿದಂತೆ ಬಳಕೆದಾರರು, ವ್ಯಾಪಾರಸ್ಥರಿಗೆ ಎಚ್ಚರಿಕೆಯನ್ನು ನೀಡಿದ್ದು, ಈ ಸಂಬಂಧ ಕೇಂದ್ರ ಸರ್ಕಾರವು ನೀತಿಯನ್ನು ರೂಪಿಸಲು ಈ ಸಮಿತಿಯನ್ನು ನೇಮಿಸಿದೆ.



**ದಿನೇಶ್ ಶರ್ಮಾ:-** ಇವರು ಆರ್ಥಿಕ ವಿದ್ಯಮಾನ ಇಲಾಖೆಯ ವಿಶೇಷ ಕಾರ್ಯದರ್ಶಿಯಾಗಿದ್ದು, ಇತ್ತೀಚೆಗೆ ಕೇಂದ್ರ ಸರ್ಕಾರವು ನೇಮಿಸಿದ **ನೈಜ ನಾಣ್ಯಗಳ ಪರೀಕ್ಷಾ ಚೌಕಟ್ಟು ಅಂತರ್ ಶಿಸ್ತು ಸಮಿತಿಯ** ಅಧ್ಯಕ್ಷರಾಗಿದ್ದಾರೆ.

**ನೈಜ ನಾಣ್ಯ:-** ಇದನ್ನು ಡಿಜಿಟಲ್ ಅಥವಾ ಕ್ರಿಪ್ಟೊ ಕರೆನ್ಸಿ ಎಂದು ಕರೆಯುತ್ತಾರೆ. ಇದೊಂದು **ಕೇಂದ್ರೀಯ ಬ್ಯಾಂಕ್ ಅಥವಾ ಸಾರ್ವಜನಿಕ ಪ್ರಾಧಿಕಾರಗಳು** ವಿತರಿಸುವ ಅನಿಯಂತ್ರಿತ ವಿಧದ ಡಿಜಿಟಲ್ ಕರೆನ್ಸಿಯಾಗಿದೆ. ಇದನ್ನು ಎಲೆಕ್ಟ್ರಾನಿಕ್ ಮೂಲಕ ವರ್ಗಾವಣೆ ಮಾಡುವ ಸಂಗ್ರಹಿಸುವ, ವ್ಯಾಪಾರ ಮಾಡಲು ಸಾಧ್ಯವಾಗುತ್ತದೆ.

**ನೈಜ ನಾಣ್ಯಗಳಿಗೆ ಉದಾ:-** ಬಿಟ್ ಕಾಯಿನ್, ಲಿಟೆ ಕಾಯಿನ್, ಡಾರ್ಕ್ ಕಾಯಿನ್, ಪೀರ್ ಕಾಯಿನ್, ಪ್ರೈಮೆ ಕಾಯಿನ್, ಡಾಗೆ ಕಾಯಿನ್, ರಿಪ್ಲೆ ಕಾಯಿನ್.

## ಬಿಟ್ ಕಾಯಿನ್ಸ್ (Virtual Currencies)




ರೂಪಾಯಿ, ಡಾಲರ್‌ಗಳಿಗೆ ಪರ್ಯಾಯವಾಗಿರುವ ಇಂಟರ್ನೆಟ್‌ನಲ್ಲಿ ಮಾತ್ರ ವಹಿವಾಟು ನಡೆಸುವ ಡಿಜಿಟಲ್ ಕರೆನ್ಸಿ ಅಥವಾ ಕ್ರಿಪ್ಟೊ ಕರೆನ್ಸಿ ಬಿಟ್‌ಕಾಯಿನ್‌ನ್ನು ನಿಷೇಧಿಸುವ ಮತ್ತು ನಿಯಂತ್ರಿಸುವ ಹಾಗೂ ಸ್ವಯಂ ನಿಯಂತ್ರಣಕ್ಕೆ ಒಳಪಡಿಸುವ ಕುರಿತು ಕೇಂದ್ರ ಸರ್ಕಾರ ಸಾರ್ವಜನಿಕರಿಂದ ಅಭಿಪ್ರಾಯವನ್ನು ಆಹ್ವಾನಿಸಿದೆ. ಇದಕ್ಕೆ ಸಂಬಂಧಿಸಿದ ವಹಿವಾಟಿನ ಕುರಿತು ಜನರು ಕೇಂದ್ರ ಸರ್ಕಾರದ ಅಂತರ್ಜಾಲ ತಾಣ My.Gov.in ನಲ್ಲಿ ತಮ್ಮ ಅನಿಸಿಕೆಗಳನ್ನು ದಾಖಲಿಸಿಬಹುದು. **ಮೊಬೈಲ್ ಆಪ್ ಆಧಾರಿತ ಬಿಟ್ ಕಾಯಿನ್ ವಿನಿಮಯ ಸಂಸ್ಥೆ ಜೆಬ್ ಪೇ (Zeb Pay)** ಈಗಾಗಲೇ ಬಿಟ್ ಕಾಯಿನ್ ವಹಿವಾಟು ನಡೆಸಲು ಆಪ್‌ನ್ನು ಬಿಡುಗಡೆ ಮಾಡಿದೆ.

# ವಾಣಿಜ್ಯ ಬ್ಯಾಂಕುಗಳು
# Commercial Banks

ವ್ಯಾಪಾರ ಮತ್ತು ವಾಣಿಜ್ಯ ವ್ಯವಹಾರಗಳಿಗೆ ಹಣಕಾಸು ಒದಗಿಸುವ ಮತ್ತು ಎಲ್ಲಾ ಪ್ರಕಾರದ ಬ್ಯಾಂಕಿಂಗ್ ವ್ಯವಹಾರವನ್ನು ನಿರ್ವಹಿಸುವ ಹಣಕಾಸು ಸಂಸ್ಥೆಗಳೇ ವಾಣಿಜ್ಯ ಬ್ಯಾಂಕುಗಳು. ಬ್ರಿಟಿಷ್ ಭಾರತದಲ್ಲಿ ಪ್ರಾರಂಭವಾದ ಬ್ಯಾಂಕುಗಳು ಹಂತ-ಹಂತವಾಗಿ ಬೆಳವಣಿಗೆಯನ್ನು ಹೊಂದುತ್ತಿದ್ದು, 1970-80 ರ ದಶಕದಲ್ಲಿ ಸರ್ಕಾರದ ನಿಯಂತ್ರಣಕ್ಕೆ ಒಳಪಡುವ ರಾಷ್ಟ್ರೀಕೃತ ಬ್ಯಾಂಕುಗಳಾಗಿ ಮಾರ್ಪಟ್ಟವು. ಭಾರತದ ಹಣಕಾಸು ವ್ಯವಸ್ಥೆಯಲ್ಲಿ ಕಾರ್ಯಾಚರಿಸುತ್ತಿರುವ ವಿವಿಧ ವಾಣಿಜ್ಯ ಬ್ಯಾಂಕುಗಳ ಲಕ್ಷಣಗಳನ್ನು ಕೂಲಂಕುಷವಾಗಿ ಚರ್ಚಿಸಲಾಗಿದೆ.

## 1934 ಆರ್‌ಬಿಐ ಕಾನೂನಿನ ಪ್ರಕಾರ ವಾಣಿಜ್ಯ ಬ್ಯಾಂಕುಗಳ ಪ್ರಕಾರಗಳು

1) **ಷೆಡ್ಯೂಲ್ಡ್ ವಾಣಿಜ್ಯ ಬ್ಯಾಂಕುಗಳು (Scheduled Comercial Banks)**- ಅಂದರೆ 1934ರ ಆರ್‌ಬಿಐ ಕಾಯಿದೆಯ 2ನೇ ಪರಿಚ್ಛೇದದಲ್ಲಿ ಯಾವ ಬ್ಯಾಂಕ್‌ನ ಹೆಸರು ಸೇರ್ಪಡೆಯಾಗಿರುತ್ತದೋ ಮತ್ತು ಅವುಗಳ ಪಾವತಿಯಾದ ಬಂಡವಾಳ ಮತ್ತು ಕಾಯ್ದಿಟ್ಟ ನಿಧಿಯು 5 ಲಕ್ಷ ಅಥವಾ ಅದಕ್ಕಿಂತ ಹೆಚ್ಚಾಗಿರುತ್ತದೋ ಅಂತಹ ಬ್ಯಾಂಕುಗಳನ್ನು **ಷೆಡ್ಯೂಲ್ಡ್** ವಾಣಿಜ್ಯ ಬ್ಯಾಂಕುಗಳೆನ್ನುವರು.

ಉದಾ:– ವಾಣಿಜ್ಯ ಬ್ಯಾಂಕು, ಸಹಕಾರಿ ಬ್ಯಾಂಕು, ವಿದೇಶಿ ಬ್ಯಾಂಕು, ಪ್ರಾದೇಶಿಕ ಗ್ರಾಮೀಣ ಬ್ಯಾಂಕು, ಸಾರ್ವಜನಿಕ & ಖಾಸಗಿ ವಲಯದ ಬ್ಯಾಂಕುಗಳು.

2) **ನಾನ್‌ಷೆಡ್ಯೂಲ್ಡ್ ವಾಣಿಜ್ಯ ಬ್ಯಾಂಕುಗಳು (Non - Scheduled Comercial Banks)** - ಅಂದರೆ 1934ರ ಆರ್‌ಬಿಐ ಕಾಯಿದೆಯ 2ನೇ ಪರಿಚ್ಛೇದದಲ್ಲಿ ಯಾವ ಬ್ಯಾಂಕ್‌ನ ಹೆಸರು ಸೇರ್ಪಡೆಯಾಗಿರದೇ ಮತ್ತು ಅವುಗಳ ಪಾವತಿಯಾದ ಬಂಡವಾಳ ಮತ್ತು ಕಾಯ್ದಿಟ್ಟ ನಿಧಿಯು 5 ಲಕ್ಷ ಅಥವಾ ಅದಕ್ಕಿಂತ ಕಡಿಮೆಯಾಗಿರುತ್ತದೋ ಅಂತಹ ಬ್ಯಾಂಕುಗಳನ್ನು **ನಾನ್ ಷೆಡ್ಯೂಲ್ಡ್** ವಾಣಿಜ್ಯ ಬ್ಯಾಂಕುಗಳೆನ್ನುವರು.

ಉದಾ:– ಭಾರತದಲ್ಲಿ ಕಾರ್ಯ ಕಛೇರಿಯನ್ನು ಹೊಂದಿರದ ವಿದೇಶಿ ಬ್ಯಾಂಕುಗಳು.

## ಒಡೆತನದ ಆಧಾರದ ಮೇಲೆ ವಾಣಿಜ್ಯ ಬ್ಯಾಂಕುಗಳ ವರ್ಗೀಕರಣ

1) **ಸಾರ್ವಜನಿಕ ವಲಯದ ಬ್ಯಾಂಕುಗಳು (Public Sector Banks)**:- ಯಾವ ಬ್ಯಾಂಕುಗಳು ಸರ್ಕಾರದ ಒಡೆತನ ಮತ್ತು ಆಡಳಿತಕ್ಕೆ ಒಳಪಟ್ಟಿರುತ್ತವೆಯೋ ಅಂತಹ ಬ್ಯಾಂಕುಗಳು. **ಉದಾ:** ಭಾರತೀಯ ಸ್ಟೇಟ್ ಬ್ಯಾಂಕ್, ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳು.

2) **ಖಾಸಗಿ ವಲಯದ ಬ್ಯಾಂಕುಗಳು (Private Sector Banks)**:- ಯಾವ ಬ್ಯಾಂಕುಗಳು ಖಾಸಗಿ ಒಡೆತನ ಮತ್ತು ಆಡಳಿತಕ್ಕೆ ಒಳಪಟ್ಟಿರುತ್ತವೆಯೋ ಅಂತಹ ಬ್ಯಾಂಕುಗಳು. **ಉದಾ:** ಕರ್ನಾಟಕ ಬ್ಯಾಂಕ್, ವೈಶ್ಯ ಕರೂರು, HSBC ಇತ್ಯಾದಿ.

## ವಾಣಿಜ್ಯ ಬ್ಯಾಂಕುಗಳ ಕಾರ್ಯಗಳು:-

### ಪ್ರಾಥಮಿಕ ಕಾರ್ಯಗಳು (Primary Functions)

**ಠೇವಣಿ ಸ್ವೀಕರಿಸುವುದು:**- ವಾಣಿಜ್ಯ ಬ್ಯಾಂಕುಗಳು ಸಾರ್ವಜನಿಕರಿಂದ ಈ ಕೆಳಗಿನ ವಿವಿಧ ಪ್ರಕಾರದ ಠೇವಣಿಗಳನ್ನು ಸ್ವೀಕರಿಸುತ್ತವೆ.

**ಚಾಲ್ತಿ ಖಾತೆ ಠೇವಣಿ:**- ವ್ಯಾಪಾರಸ್ಥರು, ವಾಣಿಜ್ಯೋದ್ಯಮಿಗಳು ಈ ರೀತಿಯ ಖಾತೆಯಲ್ಲಿ ಠೇವಣಿಯನ್ನು ಹೊಂದಿದ್ದು, ಇದನ್ನು ಬೇಡಿಕೆ ಠೇವಣಿ ಎಂತಲೂ ಕರೆಯುತ್ತಾರೆ.

**ಲಕ್ಷಣಗಳು:**- ಎಷ್ಟು ಬಾರಿ ಬೇಕಾದರೂ ಖಾತೆಯಿಂದ ಹಣವನ್ನು ಮರಳಿ ಪಡೆಯಲು ಅವಕಾಶ, ಬಡ್ಡಿ ನೀಡಲಾಗುವುದಿಲ್ಲ.

**ಉಳಿತಾಯ ಖಾತೆ ಠೇವಣಿ:**- ಕಡಿಮೆ & ನಿಗದಿತ ವರಮಾನ ಹೊಂದಿರುವ ಜನ, ಶಿಕ್ಷಣ ಸಂಸ್ಥೆಗಳು, ಈ ಖಾತೆಯನ್ನು ಹೊಂದಿರುತ್ತಾರೆ.

**ಲಕ್ಷಣಗಳು:**- ವಾರದಲ್ಲಿ ಹಣವನ್ನು ಹಿಂಪಡೆಯಲು ಒಂದು ಅಥವಾ ಎರಡು ಬಾರಿ ಮಾತ್ರ ಅವಕಾಶದ ನಿರ್ಬಂಧ, ಬಡ್ಡಿದರ ಕಡಿಮೆಯಿದ್ದು, ಸಣ್ಣ ಉಳಿತಾಯಗಳನ್ನು ಉತ್ತೇಜಿಸುತ್ತದೆ.

**ಮುದ್ದತಿ/ಅವಧಿ ಠೇವಣಿ:-** ಒಂದು ನಿರ್ದಿಷ್ಟ ಅವಧಿಗೆ ಠೇವಣಿಯಿಟ್ಟು, ಅವಧಿಗೆ ಮುನ್ನ ಹಣವನ್ನು ಮರಳಿ ಪಡೆಯಲು ಸಾಧ್ಯವಾಗದ ಠೇವಣಿ ಪ್ರಕಾರ.

**ಲಕ್ಷಣಗಳು:-** ಎಲ್ಲಾ ಠೇವಣಿಗಳಿಗಿಂತ ಬಡ್ಡಿದರ ಅಧಿಕವಾಗಿದ್ದು, ಅವಧಿ ಹೆಚ್ಚಾದಂತೆ ಬಡ್ಡಿದರವು ಹೆಚ್ಚಾಗಿರುತ್ತದೆ.

**ಆವರ್ತ ಠೇವಣಿ:-** ಒಂದು ವರ್ಷ ಅಥವಾ ಹೆಚ್ಚಿನ ಅವಧಿಗೆ ಹಣವನ್ನು ಮಾಸಿಕ ಕಂತುಗಳಲ್ಲಿ ಠೇವಣಿಯಿಡುವ ವಿಧವಾಗಿದೆ.

**ಲಕ್ಷಣಗಳು:-** ಬಡ್ಡಿದರವು ಅಧಿಕವಾಗಿದ್ದು, ಕೊನೆಯ ಕಂತು ಮುಗಿದಮೇಲೆ ಠೇವಣಿದಾರನಿಗೆ ಬಡ್ಡಿ ಸಮೇತ ಒಟ್ಟು ಮೊತ್ತವನ್ನು ನೀಡಲಾಗುತ್ತದೆ.

**ಸಾಲವನ್ನು ನೀಡುವುದು:-** ವಾಣಿಜ್ಯ ಬ್ಯಾಂಕುಗಳು ಸಾರ್ವಜನಿಕರಿಂದ ಸ್ವೀಕರಿಸಿದ ಠೇವಣಿ ಹಣದಲ್ಲಿ ನಿರ್ದಿಷ್ಟ ಹಣವನ್ನು ತನ್ನಲ್ಲಿರಿಸಿಕೊಂಡು ಉಳಿದ ಹಣವನ್ನು ಸಾಲವಾಗಿ ನೀಡುತ್ತದೆ.

**ಮಿತಿಮೀರಿದ ಸಾಲ (Over Draft):-** ಚಾಲ್ತಿ ಖಾತೆದಾರ ತನ್ನ ಖಾತೆಯಲ್ಲಿರುವ ಠೇವಣಿಗಿಂತ ಹೆಚ್ಚಿನ ಹಣವನ್ನು ನಿರ್ದಿಷ್ಟ ಮಿತಿಯವರೆಗೆ ಹಿಂಪಡೆಯಲು ಅವಕಾಶವಿರುವ ಸೌಲಭ್ಯ.

- ಷೇರು, ಸಾಲಪತ್ರ, ಮುಂತಾದ ಆಸ್ತಿಗಳ ಆಧಾರದ ಮೇಲೆ ಸಾಲವನ್ನು ನೀಡುವುದು.
- ಸಾಲಖಾತೆ ಎಂಬ ಪ್ರತ್ಯೇಕ ಖಾತೆಯ... ನಿರ್ದಿಷ್ಟ ಮೊತ್ತದ ಹಣವನ್ನು ವ್ಯಕ್ತಿ ಅಥವಾ ... ಸಂಸ್ಥೆಗೆ ಭದ್ರತೆ ಆಧಾರದ ಮೇಲೆ ಸಾಲ ನೀ...

**ಹುಂಡಿ ವಟಾಯಿಸುವಿಕೆ (Discounting of Bills of Exchange):-** ಬ್ಯಾಂಕುಗಳು ಅವಧಿ ... ಮುನ್ನ ಹುಂಡಿಗಳನ್ನು ನಗದು ರೂಪಕ್ಕೆ ಪರಿವ... ಸೌಲಭ್ಯವಾಗಿದೆ. ಕೊಳ್ಳುವವರು & ಮಾರುವವ... ವ್ಯವಹಾರದಲ್ಲಿ ಮಾಡಿಕೊಳ್ಳುವ ಹಣದ ... ಸಂಬಂಧಪಟ್ಟ ವಚನ ಪತ್ರವೇ ವಿನಿಮಯ ...

**ಮಾಧ್ಯಮಿಕ ಕಾರ್ಯಗಳು:-**

- **ಪ್ರಾತಿನಿಧಿಕ ಸೇವೆಗಳು:-** ಬ್ಯಾಂಕುಗಳು ಗ್ರಾಹಕರಿಗೆ ಚೆಕ್, ಡ್ರಾಫ್ಟ್‌ಗಳ ಮೂಲಕ ... ಸ್ಥಳದಿಂದ ಸ್ಥಳಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ ವರ್ಗಾ... ಸಹಾಯಕ.
- ಭದ್ರತಾ ಪತ್ರಗಳಾದ ಬಾಂಡ್, ಡಿಬೆಂ... ಕೊಳ್ಳುವಿಕೆ & ಮಾರಾಟ ಕಾರ್ಯ.
- ಗ್ರಾಹಕರ ವಿದ್ಯುತ್ ಬಿಲ್, ವಿಮಾಕಂತು, ... ಮೊದಲಾದವುಗಳ ಪಾವತಿ ಕಾರ್ಯ.

**ಸಾಮಾನ್ಯ ಉಪಯುಕ್ತ ಸೇವೆಗಳು:-**

- ಗ್ರಾಹಕರ ಬೆಲೆ ಬಾಳುವ ಬಂಗಾರ, ಒಡವೆ, ... ಕಾಗದ ಪತ್ರಗಳಿಗೆ ಭದ್ರತಾ ಸೌಲಭ್ಯ ನೀಡುವುದು.
- ಎ.ಟಿ.ಎಂ. & ಡೆಬಿಟ್ ಕಾರ್ಯಗಳ ಸೌಲಭ್ಯ ನೀಡು...

## ಭಾರತದಲ್ಲಿ ಬ್ಯಾಂಕಿಂಗ್ ಇತಿಹಾಸ

### ಭಾರತದಲ್ಲಿ ಬ್ಯಾಂಕಿಂಗ್‌ನ ವಿಕಾಸ

- ಆರಂಭದಲ್ಲಿ ವಾಣಿಜ್ಯ ವ್ಯವಹಾರಗಳನ್ನು ದೇಶೀಯ ಬ್ಯಾಂಕರ್‌ಗಳು, ಲೇವಾದೇವಿಗಾರರು, ಸೇಟು ಸಾಹುಕಾರರು ಶ್ರಾಫ್‌ಗಳು ಮಾಡುತ್ತಿದ್ದರು. ನಂತರ 18ನೇ ಶತಮಾನದಿಂದ ಬ್ಯಾಂಕಿಂಗ್ ವ್ಯವಹಾರವು ಪ್ರಾರಂಭವಾಯಿತು.

### ಭಾರತದಲ್ಲಿನ ಪ್ರಾರಂಭಿಕ ಬ್ಯಾಂಕುಗಳು

- 1786ರಲ್ಲಿ **'ಜನರಲ್ ಬ್ಯಾಂಕ್ ಆಫ್ ಇಂಡಿಯಾ'** ಮತ್ತು 1790ರಲ್ಲಿ **'ಬ್ಯಾಂಕ್ ಆಫ್ ಹಿಂದೂಸ್ತಾನ್'** ಎಂಬ ಬ್ಯಾಂಕುಗಳು ಭಾರತದ ಮೊಟ್ಟ ಮೊದಲ ಬ್ಯಾಂಕ್‌ಗಳಾಗಿ ಆರಂಭಗೊಂಡವು ಆದರೆ ಈ ಬ್ಯಾಂಕುಗಳು ಪ್ರಸ್ತುತವಾಗಿ ಕಾರ್ಯನಿರ್ವಹಿಸುತ್ತಿಲ್ಲ.
- 1881ರಲ್ಲಿ ಉತ್ತರಪ್ರದೇಶದ ಫೈಜಾಬಾದ್‌ನಲ್ಲಿ **ಔಧ್ ಕಮರ್ಷಿಯಲ್ ಬ್ಯಾಂಕ್**‌ನ್ನು ಸ್ಥಾಪಿಸಲಾಯಿತು. ಈ ಮೂಲಕ ಈ ಬ್ಯಾಂಕ್‌ನ್ನು ಭಾರತದ **ಮೊದಲ ವಾಣಿಜ್ಯ ಬ್ಯಾಂಕ್** ಎಂದು ಪರಿಗಣಿಸಲಾಗುತ್ತದೆ. ಆದರೆ ... ತನ್ನ ಕಾರ್ಯವನ್ನು 1958ರಲ್ಲಿ ಸ್ಥಗಿತಗೊಳಿಸಿತು.
- 1895ರಲ್ಲಿ ಲಾಹೋರ್‌ನಲ್ಲಿ **ಪಂಜಾಬ್ ನ್ಯಾ... ಬ್ಯಾಂಕ್** ಸ್ಥಾಪನೆಯಾಯಿತು. ಇದು **ಮೊದಲ ಭಾರ... ವಾಣಿಜ್ಯ ಬ್ಯಾಂಕ್** ಎಂದು ಪರಿಗಣಿಸಬಹು... ಪ್ರಸ್ತುತವಾಗಿ ಇದು **ಭಾರತದ 2 ನೇ ಅತಿ ದೊ... ಸಾರ್ವಜನಿಕ ವಲಯದ ಬ್ಯಾಂಕಾಗಿದೆ.** ಇದು 19... ರಾಷ್ಟ್ರೀಕರಣಗೊಂಡಿತು.
- 1906ರಿಂದ 1911ರ ವೇಳೆಗೆ ಸ್ವದೇಶಿ ... ಚಳುವಳಿಗಳು ಆರಂಭವಾದವು.
- ಇದರ ಫಲವಾಗಿ ಭಾರತದಲ್ಲಿ ಬ್ಯಾಂಕ್ ... ಇಂಡಿಯಾ(1906), ಕಾರ್ಪೋರೇಷನ್ ಬ್ಯಾಂಕ್(1... ಇಂಡಿಯನ್ ಬ್ಯಾಂಕ್(1907), ಬ್ಯಾಂಕ್ ... ಬರೋಡಾ (1908), ಕೆನರಾ ಬ್ಯಾಂಕ್(1906), ಸೆ... ಬ್ಯಾಂಕ್ ಆಫ್ ಇಂಡಿಯಾ(1911) ಬ್ಯಾಂಕ್... ಆರಂಭವಾದವು.

### ಭಾರತದ ಅತ್ಯಂತ ಹಳೆಯ ಬ್ಯಾಂಕ್

- ಜೂ.2, 1806 **ಬ್ಯಾಂಕ್ ಆಫ್ ಕಲ್ಕತ್ತಾ** ಎಂಬ **ಪ್ರೆಸಿಡೆನ್ಸಿ ಬ್ಯಾಂಕ್** ಕಲ್ಕತ್ತಾದಲ್ಲಿ ಆರಂಭವಾಯಿತು. ನಂತರ ಇದನ್ನು **ಬ್ಯಾಂಕ್ ಆಫ್ ಬೆಂಗಾಲ್** ಎಂದು ಹೆಸರಿಸಲಾಯಿತು.
- **ಬ್ಯಾಂಕ್ ಆಫ್ ಬಾಂಬೆ** (1840) & **ಬ್ಯಾಂಕ್ ಆಫ್ ಮದ್ರಾಸ್** (1843) ಎಂಬ ಎರಡು ಪ್ರೆಸಿಡೆನ್ಸಿ ಬ್ಯಾಂಕ್‌ಗಳು ಬಾಂಬೆ & ಮದ್ರಾಸ್ ಪ್ರಾಂತ್ಯದಲ್ಲಿ ಪ್ರಾರಂಭವಾದವು.
- ಬ್ಯಾಕ್ ಆಫ್ ಕಲ್ಕತ್ತಾ, ಬ್ಯಾಂಕ್ ಆಫ್ ಬಾಂಬೆ ಮತ್ತು ಬ್ಯಾಂಕ್ ಆಫ್ ಮದ್ರಾಸ್ ಈ ಮೂರು ಪ್ರೆಸಿಡೆನ್ಸಿ ಬ್ಯಾಂಕಗಳನ್ನು ಸೇರಿಸಿ **'ಇಂಪೀರಿಯಲ್ ಬ್ಯಾಂಕ್ ಆಫ್ ಇಂಡಿಯಾ'** ಎಂಬ ಹೆಸರಿನಲ್ಲಿ **ಜನವರಿ.27, 1921** ರಂದು ಸ್ಥಾಪನೆ ಮಾಡಲಾಯಿತು. ಆರ್.ಬಿ.ಐ ಸ್ಥಾಪನೆಯಾಗುವವರೆಗೆ ಈ ಬ್ಯಾಂಕ್ ಭಾರತದ ಕೇಂದ್ರ ಬ್ಯಾಂಕ್ ಆಗಿ ಕಾರ್ಯನಿರ್ವಹಿಸುತ್ತಿತ್ತು.
- ಭಾರತ ಸರ್ಕಾರವು **ಇಂಪೀರಿಯಲ್ ಬ್ಯಾಂಕನ್ನು 1955**ರಲ್ಲಿ ತನ್ನ ಅಧೀನಕ್ಕೆ ತೆಗೆದುಕೊಂಡು 1956 ರಲ್ಲಿ ರಾಷ್ಟ್ರೀಕರಣಗೊಳಿಸಿ, **ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ** ಎಂಬ ಹೆಸರನ್ನು ನೀಡಿ ರಿಸರ್ವ್ ಬ್ಯಾಂಕ್‌ನ ಅಧೀನಕ್ಕೆ ಒಳಪಡಿಸಿತು.
- ಈ ಸಂದರ್ಭದಲ್ಲಿ ಬೆನಗಲ್ ರಾಮರಾವ್ ಆರ್.ಬಿ.ಐ ನ ಗೌರ್‍ನರ್ ಆಗಿದ್ದರು.
- ಜಾಗತಿಕವಾಗಿ ಎಸ್.ಬಿ.ಐ ನ ಸ್ಥಾನಮಾನವನ್ನು ಉನ್ನತೀಕರಿಸಲು ಎಲ್ಲ ಸಹವರ್ತಿ ಬ್ಯಾಂಕುಗಳು ಹಾಗೂ ಭಾರತೀಯ ಮಹಿಳಾ ಬ್ಯಾಂಕ್‌ನ್ನು 2017 ಏಪ್ರಿಲ್ 1 ರಂದು ಎಸ್.ಬಿ.ಐ ನೊಂದಿಗೆ ವಿಲೀನಗೊಳಿಸಲಾಗಿದೆ. ಇದು **ಭಾರತದ ಮೊದಲನೇ ಅತಿ ದೊಡ್ಡ ಸಾರ್ವಜನಿಕ ವಲಯದ ಬ್ಯಾಂಕಾಗಿದೆ.**

### ವಾಣಿಜ್ಯ ಬ್ಯಾಂಕುಗಳ ರಾಷ್ಟ್ರೀಕರಣ (Nationalization)

- 1969ರ ಬ್ಯಾಂಕಿಂಗ್ ಕಂಪನಿಗಳ ಸುಗ್ರೀವಾಜ್ಞೆಯನ್ನು ಭಾರತದ ಕೇಂದ್ರ ಸರ್ಕಾರ ಹೊರಡಿಸಿದ್ದು, ಖಾಸಗಿ ಒಡೆತನದಲ್ಲಿದ್ದ ವಾಣಿಜ್ಯ ಬ್ಯಾಂಕುಗಳನ್ನು ಸರ್ಕಾರ ತನ್ನ ಅಧೀನಕ್ಕೆ ತೆಗೆದುಕೊಂಡಿತು ಇದನ್ನೇ ಬ್ಯಾಂಕುಗಳ ರಾಷ್ಟ್ರೀಕರಣ ಎನ್ನುವರು. ಇದು ದೇಶದಲ್ಲಿ 2 ಹಂತದಲ್ಲಿ ಜರುಗಿದೆ.
- 1969, ಜುಲೈ, 19 ರಂದು ಪ್ರಧಾನಿ ಇಂದಿರಾಗಾಂಧಿ ಯವರು ದೇಶದಲ್ಲಿ 50 ಕೋಟಿಗಿಂತ ಹೆಚ್ಚು ಬಂಡವಾಳ ವ್ಯವಹಾರ ಹೊಂದಿದ್ದ 14 ಬ್ಯಾಂಕ್‌ಗಳನ್ನು ರಾಷ್ಟ್ರೀಕರಣ ಗೊಳಿಸಿದರು. ಆದ್ದರಿಂದ ಜುಲೈ 19 ನ್ನು **ಬ್ಯಾಂಕುಗಳ ರಾಷ್ಟ್ರೀಕರಣ ದಿನ** ಎಂದು ಕರೆಯುತ್ತಾರೆ.
- ಈ ಸಂದರ್ಭದಲ್ಲಿ ಎಲ್.ಕೆ. ಝಾ ಆರ್.ಬಿ.ಐ ನ ಗೌರ್‍ನರ್ ಆಗಿದ್ದರು. ಈ ಬ್ಯಾಂಕುಗಳು ದೇಶದ ಒಟ್ಟು ಬ್ಯಾಂಕು ಠೇವಣಿಗಳಲ್ಲಿ ಶೇ 85 ರಷ್ಟು ಪಾಲನ್ನು ಹೊಂದಿದ್ದವು.

### 1969 ರಲ್ಲಿ ರಾಷ್ಟ್ರೀಕರಣಗೊಂಡಿರುವ ಬ್ಯಾಂಕ್‌ಗಳು

1) ಅಲಹಾಬಾದ್ ಬ್ಯಾಂಕ್
3) ಬ್ಯಾಂಕ್ ಆಫ್ ಬರೋಡಾ
3) ಬ್ಯಾಂಕ್ ಆಫ್ ಮಹಾರಾಷ್ಟ್ರ
4) ಕೆನರಾಬ್ಯಾಂಕ್
5) ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ
6) ದೆನಾ ಬ್ಯಾಂಕ್
7) ಬ್ಯಾಂಕ್ ಆಫ್ ಇಂಡಿಯಾ
8) ಇಂಡಿಯನ್ ಬ್ಯಾಂಕ್
9) ಇಂಡಿಯನ್ ಓವರ್‌ಸಿಸ್ ಬ್ಯಾಂಕ್
10) ಪಂಜಾಬ್ ನ್ಯಾಷನಲ್ ಬ್ಯಾಂಕ್
11) ಸಿಂಡಿಕೇಟ್ ಬ್ಯಾಂಕ್
12) ಯುನೈಟೆಡ್ ಕಮರ್ಷಿಯಲ್ ಬ್ಯಾಂಕ್
13) ಯೂನಿಯನ್ ಬ್ಯಾಂಕ್ ಆಫ್ ಇಂಡಿಯಾ
14) ಯುನೈಟೆಡ್ ಬ್ಯಾಂಕ್ ಆಫ್ ಇಂಡಿಯಾ

### 1980 ರಲ್ಲಿ ರಾಷ್ಟ್ರೀಕರಣಗೊಂಡಿರುವ ಬ್ಯಾಂಕ್‌ಗಳು

1980 ಏಪ್ರಿಲ್ 15 ರಂದು ಪ್ರಧಾನಿ ಇಂದಿರಾಗಾಂಧಿ 200 ಕೋಟಿಗಿಂತ ಹೆಚ್ಚು ಬಂಡವಾಳ ಹೊಂದಿದ್ದ 6 ಬ್ಯಾಂಕ್‌ಗಳನ್ನು ಮತ್ತೆ ರಾಷ್ಟ್ರೀಕರಣಗೊಳಿಸಲಾಯಿತು. ಈ ಸಂದರ್ಭದಲ್ಲಿ **ಐ.ಜಿ. ಪಟೇಲ್** ಆರ್.ಬಿ.ಐ ನ ಗೌರ್‍ನರ್ ಆಗಿದ್ದರು. ಇದರ ನಂತರ ಭಾರತದ ಶೇ 91 ರಷ್ಟು ಬ್ಯಾಂಕಿಂಗ್ ವ್ಯವಹಾರಗಳು ಕೇಂದ್ರ ಸರ್ಕಾರದ ಅಧೀನಕ್ಕೆ ಒಳಪಟ್ಟವು.

1) ಆಂಧ್ರಬ್ಯಾಂಕ್
2) ಕಾರ್ಪೋರೇಷನ್ ಬ್ಯಾಂಕ್
3) ಓರಿಯಂಟಲ್ ಬ್ಯಾಂಕ್ ಆಫ್ ಕಾಮರ್ಸ್
4) ಪಂಜಾಬ್ & ಸಿಂಧ್ ಬ್ಯಾಂಕ್
5) ವಿಜಯ ಬ್ಯಾಂಕ್
6) ನ್ಯೂ ಬ್ಯಾಂಕ್ ಆಫ್ ಇಂಡಿಯಾ

- 1980 ರ ವೇಳೆಗೆ ಒಟ್ಟು ದೇಶದಲ್ಲಿ 20 ಬ್ಯಾಂಕ್‌ಗಳು ರಾಷ್ಟ್ರೀಕರಣಗೊಂಡಿದ್ದವು.
- ಆದರೆ 1993 ಸೆಪ್ಟೆಂಬರ್ 4 ರಲ್ಲಿ ಸರ್ಕಾರವು **ನ್ಯೂ ಬ್ಯಾಂಕ್ ಆಫ್ ಇಂಡಿಯಾ**ವನ್ನು ಪಂಜಾಬ್ ನ್ಯಾಷನಲ್ ಬ್ಯಾಂಕ್‌ನೊಂದಿಗೆ ವಿಲೀನಗೊಳಿಸಿದ್ದರಿಂದ ರಾಷ್ಟ್ರೀಕರಣಗೊಂಡ ಬ್ಯಾಂಕ್‌ಗಳ ಸಂಖ್ಯೆಯು 20 ರಿಂದ 19 ಆಯಿತು.

# ಸ್ಟೇಟ್ ಬ್ಯಾಂಕ್ ಇಂಡಿಯಾ (SBI - State Bank of India)

- 2017ರ ಫೆಬ್ರವರಿ 15ರಂದು **ಪ್ರಧಾನಿ ನರೇಂದ್ರ ಮೋದಿ** ನೇತೃತ್ವದ ಕೇಂದ್ರ ಸಚಿವ ಸಂಪುಟವು **ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ 5 ಸೋದರ ಸಂಸ್ಥೆಗಳನ್ನು & 2017 ಮಾರ್ಚ್ 31** ರ ಅಂಗೀಕಾರದಿಂದ **ಭಾರತೀಯ ಮಹಿಳಾ ಬ್ಯಾಂಕ್** ನ್ನು ಎಸ್.ಬಿ.ಐ ನೊಂದಿಗೆ **2017 ಏಪ್ರಿಲ್ 1** ರಂದು ವಿಲೀನಗೊಳಿಸಲಾಗಿದೆ.
- ವಿಶ್ವದ ಅಗ್ರ ಬ್ಯಾಂಕ್‌ಗಳ ಪಟ್ಟಿಯಲ್ಲಿ ಸ್ಥಾನ ಪಡೆಯುವ ದೃಷ್ಟಿಯಿಂದ 5 ಸೋದರ ಸಂಸ್ಥೆಗಳು & ಭಾರತೀಯ ಮಹಿಳಾ ಬ್ಯಾಂಕ್‌ಗಳನ್ನು ವಿಲೀನಗೊಳಿಸಲಾಗಿದೆ. ಈ ಮೂಲಕ **ವಿಶ್ವದ ಪ್ರಮುಖ 50 ಬ್ಯಾಂಕ್‌ಗಳ ಪಟ್ಟಿಯಲ್ಲಿ** ಭಾರತೀಯ ಸ್ಟೇಟ್ ಬ್ಯಾಂಕ್ ಸ್ಥಾನ ಪಡೆಯಲಿದೆ.

## ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಬೆಳೆದು ಬಂದ ದಾರಿ

- **ಎಸ್.ಬಿ.ಐ ಭಾರತದ ಸಾರ್ವಜನಿಕ ವಲಯದ ಬ್ಯಾಂಕ್** ಆಗಿದ್ದು, ಈ ಬ್ಯಾಂಕ್ ತನ್ನದೇ ಆದ ಇತಿಹಾಸವನ್ನು ಹೊಂದಿದೆ. ಭಾರತದಲ್ಲಿ 3 ಪ್ರಾಂತ್ಯಗಳಲ್ಲಿ 3 ಬ್ಯಾಂಕ್‌ಗಳು ಆರಂಭವಾದವು. **1806** ರಲ್ಲಿ **'ಬ್ಯಾಂಕ್ ಆಫ್ ಕಲ್ಕತ್ತಾ'** ಎಂಬ ಹೆಸರಿನಿಂದ ಆರಂಭವಾಯಿತು. **1840 ಏಪ್ರಿಲ್ 15 ರಂದು 'ಬ್ಯಾಂಕ್ ಆಫ್ ಬಾಂಬೆ'** ಆರಂಭವಾಯಿತು. ತದನಂತರ **1843 ಜುಲೈ 1 ರಂದು 'ಬ್ಯಾಂಕ್ ಆಫ್ ಮದ್ರಾಸ್'** ಕೂಡ ಸ್ಥಾಪನೆಯಾಯಿತು. ನಂತರ ಈ ಮೂರು ಬ್ಯಾಂಕ್‌ಗಳು **1921 ಜನವರಿ 27** ರಂದು ವಿಲೀನಗೊಂಡು **"ಇಂಪೀರಿಯಲ್ ಬ್ಯಾಂಕ್"** ಎಂಬ ಹೆಸರಿನಲ್ಲಿ ಕಾರ್ಯ ನಿರ್ವಹಿಸಲು ಆರಂಭಿಸಿತು.
- ಇಂಪೀರಿಯಲ್ ಬ್ಯಾಂಕ್ 1955 ಜುಲೈ 1 ರಂದು ಭಾರತ ಸರ್ಕಾರವು ಆರ್.ಬಿ.ಐನ ಅಧೀನಕ್ಕೆ ಒಳಪಡಿಸಿ, **"ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ"** ಆಗಿ ಮರುನಾಮಕರಣಗೊಳಿಸಿ ಮುಂದುವರೆಸಿತು. ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾವು 1956 ಜೂನ್ 2 ರಂದು ರಾಷ್ಟ್ರೀಕರಣಗೊಂಡಿತು. ಪ್ರಸ್ತುತವಾಗಿ ಎಸ್.ಬಿ.ಐ ಭಾರತ ಸರ್ಕಾರದ ಒಡೆತನದ ದೇಶದ **ಅತಿದೊಡ್ಡ ಸಾರ್ವಜನಿಕ ವಲಯದ ಬ್ಯಾಂಕ್** ಆಗಿದೆ. ಇದರ ಕೇಂದ್ರ ಕಛೇರಿಯು **ಮಹಾರಾಷ್ಟ್ರದ ಮುಂಬೈನಲ್ಲಿದೆ.** ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾವು ವಿವಿಧ ದೇಶಗಳಲ್ಲಿಯೂ ಕೂಡ ಶಾಖೆಗಳನ್ನು ಒಳಗೊಂಡಿದ್ದು 36 **ದೇಶಗಳಲ್ಲಿ 191 ಶಾಖೆಗಳನ್ನು** ಹೊಂದಿದೆ.

## ವಿಲೀನದಿಂದ ಆಗುವ ಅನುಕೂಲಗಳು

- ಭಾರತೀಯ ಸ್ಟೇಟ್‌ಬ್ಯಾಂಕ್‌ನ 5 ಸೋದರ ಸಂಸ್ಥೆಗಳನ್ನು ವಿಲೀನಗೊಳಿಸುವುದರಿಂದ **ಎಸ್‌ಬಿಐ ನ ಮೌಲ್ಯವು 37ಲಕ್ಷ ಕೋಟಿ ರೂ. ಗಳಾಗಲಿದೆ.** ಈ ಮೂಲಕ ಎಸ್‌ಬಿಐ **ಜಗತ್ತಿನ ಅತೀ ದೊಡ್ಡ ಬ್ಯಾಂಕ್‌ಗಳ ಪಟ್ಟಿಯಲ್ಲಿ ಸೇರಲಿದೆ.**
- ಎಸ್‌ಬಿಐನ ಸಹವರ್ತಿ ಬ್ಯಾಂಕ್‌ಗಳು ವಿಲೀನವಾಗುವುದರಿಂದ ಒಂದೆಡೆ ಗ್ರಾಹಕರಿಗೆ ಉತ್ತಮ ಸೌಲಭ್ಯ ದೊರೆಯುತ್ತದೆ.

## ವಿಲೀನಕ್ಕೆ ಕಾರಣಗಳು

- ಸರ್ಕಾರಿ ಸಾಮ್ಯದ ಈ ಬ್ಯಾಂಕ್‌ಗಳ ವಹಿವಾಟು ಸಣ್ಣ ಪ್ರಮಾಣದ್ದಾಗಿದ್ದು, ಭಾರತದಂತಹ ಅಭಿವೃದ್ಧಿ ಹೊಂದಿದ ದೇಶದಲ್ಲಿ ಸಾಲಗಳನ್ನು ಸಮರ್ಪಕವಾಗಿ ನೀಡಲು ದೊಡ್ಡ ಬ್ಯಾಂಕ್‌ಗಳಿಂದ ಮಾತ್ರ ಸಾಧ್ಯ ಎಂದು ತಜ್ಞರು ಅಭಿಪ್ರಾಯ ಪಟ್ಟಿದ್ದಾರೆ. ಅಲ್ಲದೇ ಗ್ರಾಮೀಣ ಭಾಗಗಳಿಗೆ ಹೆಚ್ಚು ಸಶಕ್ತವಾಗಿ ಸೇವೆ ನೀಡಲು ದೊಡ್ಡ ಬ್ಯಾಂಕ್ ಸಾಮರ್ಥ್ಯ ಹೊಂದಿರುತ್ತದೆ.
- ಇವು ಪ್ರಾದೇಶಿಕ ಬ್ಯಾಂಕ್‌ಗಳಿಗೆ ಪೂರಕವಾಗಿ ಕೆಲಸ ಮಾಡುವುದರಿಂದ ಗ್ರಾಮೀಣ ಭಾಗದ ಜನರಿಗೆ ಹೆಚ್ಚಿನ ಸೌಲಭ್ಯ ಸಿಗುತ್ತದೆ. ಇನ್ನೊಂದೆಡೆ ಮರುಪಾವತಿ ಆಗದ ಸಾಲದ ಸಮಸ್ಯೆಯಿಂದ ಬಳಲುತ್ತಿರುವ 5 ಬ್ಯಾಂಕ್‌ಗಳಿಗೆ ಇದರಿಂದ ಸ್ವಲ್ಪ ನಿರಾಳವಾಗಲಿದೆ.

## ಇಂದ್ರಧನುಷ್ ಯೋಜನೆ

- ಸ್ಟೇಟ್‌ಬ್ಯಾಂಕ್‌ಗಳ 5 ಸಹವರ್ತಿ ಬ್ಯಾಂಕ್ & ಭಾರತೀಯ ಮಹಿಳಾ ಬ್ಯಾಂಕ್‌ಗಳು ವಿಲೀನಗೊಂಡಿರುವುದು ಬ್ಯಾಂಕಿಂಗ್ ವಲಯದಲ್ಲಿ **ಇಂದ್ರಧನುಷ್ ಯೋಜನೆಗೂ** ಕೂಡ ಪೂರಕವಾಗಿದೆ
- ಸಾರ್ವಜನಿಕ ಕ್ಷೇತ್ರದ **ಬ್ಯಾಂಕ್‌ಗಳ ಪುನಃಶ್ಚೇತನಕ್ಕಾಗಿ** ಕೇಂದ್ರ ಸರ್ಕಾರವು 2015 ರ ಆಗಸ್ಟ್‌ನಲ್ಲಿ ಘೋಷಿಸಿದೆ.

✦ ಜೆ.ಪಿ ನಾಯಕ್ ಸಮಿತಿ ಸಲ್ಲಿಸಿದ ವರದಿಯ ಶಿಫಾರಸ್ಸಿನನುಗುಣವಾಗಿ ಈ ಯೋಜನೆಯನ್ನು ಸರ್ಕಾರ ಸಿದ್ಧಪಡಿಸಿದೆ. ಬ್ಯಾಂಕ್‌ಗಳ ಎಂ.ಡಿ., ಸಿ.ಇ.ಓ ಗಳ ನೇಮಕ ಪ್ರಕ್ರಿಯೆಯನ್ನು ಸರಳಗೊಳಿಸುವುದು, ಬ್ಯಾಂಕ್ ಬೋರ್ಡ್ ಬ್ಯೂರೋ ರಚನೆ, ಸಾಲಪೀಡಿತ ಬ್ಯಾಂಕ್‌ಗಳಿಗೆ ಹಂತ-ಹಂತವಾಗಿ ಬಂಡವಾಳ ಪೂರೈಕೆ, ಸಾರ್ವಜನಿಕ ಸ್ವಾಮ್ಯದ ಬ್ಯಾಂಕ್‌ಗಳ ಮೇಲಿನ ಅನುತ್ಪಾದಕ ಆಸ್ತಿಯ ಹೊರೆಯನ್ನು ತಗ್ಗಿಸುವುದು. ಅವುಗಳ ಮೂಲ ಸೌಕರ್ಯವನ್ನು ಹೆಚ್ಚಿಸುವುದು. ಸಾರ್ವಜನಿಕ ವಲಯ ಬ್ಯಾಂಕ್‌ಗಳ ಸಂಪನ್ಮೂಲದ ನೇಮಕದಲ್ಲಿ ಫ್ಲೆಕ್ಸಿಬಿಲಿಟಿ ಒದಗಿಸುವುದು, ಸಿಬ್ಬಂದಿಯಲ್ಲಿ ಬದ್ಧತೆಯನ್ನು ಹೆಚ್ಚಿಸುವಂತಹ ನೀತಿ ಚೌಕಟ್ಟನ್ನು ರೂಪಿಸುವುದು. ಬ್ಯಾಂಕ್‌ಗಳ ಆಡಳಿತ ಸುಧಾರಣೆ ಇತ್ಯಾದಿಗಳನ್ನು ಪೂರೈಸುವುದು ಇದರ ಉದ್ದೇಶವಾಗಿದೆ.

## ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಸಹವರ್ತಿ ಬ್ಯಾಂಕ್‌ಗಳು

✦ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾವು 8 ಸಹವರ್ತಿ ಬ್ಯಾಂಕ್‌ಗಳನ್ನು ಹೊಂದಿತ್ತು. ಕಾಲ ಕ್ರಮೇಣ ಈ ಸಹವರ್ತಿ ಬ್ಯಾಂಕ್‌ಗಳು ಎಸ್.ಬಿ.ಐ ನಲ್ಲಿ ವಿಲೀನಗೊಳ್ಳುತ್ತಾ ಸಾಗಿದವು. ಎಲ್ಲ ಸಹವರ್ತಿ ಬ್ಯಾಂಕ್‌ಗಳು ಎಸ್.ಬಿ.ಐನ ಲೋಗೋವನ್ನು ಬಳಕೆ ಮಾಡುತ್ತಿದ್ದವು. ಅವುಗಳು ನೀಲಿ ವೃತ್ತವನ್ನು ಮತ್ತು **ಸ್ಟೇಟ್ ಬ್ಯಾಂಕ್ ಆಫ್** ಎಂಬ ಪದವನ್ನು ತಮ್ಮ ಪ್ರಾದೇಶಿಕ ಕೇಂದ್ರದ ಹೆಸರನ್ನು ಹೊಂದಿದ್ದು, ಕಾರ್ಯನಿರ್ವಹಿಸುತ್ತಿದ್ದವು. ಪ್ರಸ್ತುತವಾಗಿ ಎಸ್.ಬಿ.ಐನ ಸಹವರ್ತಿ ಬ್ಯಾಂಕ್‌ಗಳಲ್ಲಿ ಮಹಿಳಾ ಬ್ಯಾಂಕ್ ಸಹವರ್ತಿ ಬ್ಯಾಂಕ್ ಆಗಿ ಉಳಿದಿದೆ. ಉಳಿದೆಲ್ಲಾ ಬ್ಯಾಂಕ್‌ಗಳು ಕೂಡ ಕಾಲಕ್ರಮೇಣ ವಿಲೀನಗೊಳ್ಳುತ್ತಾ ಸಾಗಿವೆ. ಈ ಹಿಂದೆಯೂ ಉತ್ತಮ ಸಾಧನೆ ತೋರದ ಎಸ್‌ಬಿಐನ ಸೋದರ ಸಂಸ್ಥೆಗಳನ್ನು ವಿಲೀನಗೊಳಿಸಲಾಗಿದೆ.

### ವಿಲೀನಗೊಂಡ ಮೊದಲ 2 ಬ್ಯಾಂಕ್‌ಗಳು:-

✦ 2008ರಲ್ಲಿ **'ಸ್ಟೇಟ್ ಬ್ಯಾಂಕ್ ಆಫ್ ಸೌರಾಷ್ಟ್ರ'** ಹಾಗೂ 2010ರಲ್ಲಿ **'ಸ್ಟೇಟ್ ಬ್ಯಾಂಕ್ ಆಫ್ ಇಂಧೋರ್'**ನ್ನು ಎಸ್‌ಬಿಐ ತನ್ನಲ್ಲಿ ವಿಲೀನಗೊಳಿಸಿಕೊಂಡಿದೆ. ಖಾಸಗಿ ಬ್ಯಾಂಕ್‌ಗಳಲ್ಲಿ ಈ ಪ್ರಕ್ರಿಯೆ ಆಗಾಗ್ಗೆ ನಡೆದಿವೆ. ನಷ್ಟ ಹೊಂದಿದ ಹಾಗೂ ಉತ್ತಮ ಸಾಧನೆ ತೋರುತ್ತಿಲ್ಲದ ಖಾಸಗಿ ಬ್ಯಾಂಕ್‌ಗಳನ್ನು ಇತರ ರಾಷ್ಟ್ರೀಕೃತ ಅಥವಾ ಖಾಸಗಿ ಬ್ಯಾಂಕ್‌ನಲ್ಲಿ ವಿಲೀನಗೊಳಿಸಿದ ಉದಾಹರಣೆಗಳು ಸಾಕಷ್ಟಿವೆ. ಹಣಕಾಸು ಮಾರುಕಟ್ಟೆಯಲ್ಲಿ ಆರೋಗ್ಯಕರ ಬೆಳವಣಿಗೆ ಇದಾಗಿದೆ.

### ಸ್ಟೇಟ್ ಬ್ಯಾಂಕ್ ಆಫ್ ಮೈಸೂರು:-

● ಈ ಬ್ಯಾಂಕ್ 1913 ಅಕ್ಟೋಬರ್ 2ರಂದು **"ದಿ ಬ್ಯಾಂಕ್ ಆಫ್ ಮೈಸೂರು ಲಿಮಿಟೆಡ್"** ಎಂದು ಬೆಂಗಳೂರಿನಲ್ಲಿ ಸ್ಥಾಪನೆಗೊಂಡಿತು. ಈ ಬ್ಯಾಂಕ್‌ನ್ನು ಅಂದಿನ **ಮಹಾರಾಜರಾದ ನಾಲ್ವಡಿ ಕೃಷ್ಣರಾಜ ಒಡೆಯರ** ಅವಧಿಯಲ್ಲಿ ಭಾರತರತ್ನ **ಸರ್.ಎಂ. ವಿಶ್ವೇಶ್ವರಯ್ಯ**ನವರು ಸ್ಥಾಪಿಸಿದರು. ಎಸ್.ಬಿ.ಎಂ **1960** ರಿಂದ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಸಹವರ್ತಿ ಬ್ಯಾಂಕ್ ಆಗಿ ಕಾರ್ಯನಿರ್ವಹಿಸುತ್ತಾ ಬಂದಿದೆ. ಈ




ಬ್ಯಾಂಕ್ 2 ಪ್ರಾದೇಶಿಕ ಗ್ರಾಮೀಣ ಬ್ಯಾಂಕ್ ಗಳನ್ನು ಹೊಂದಿದ್ದು, ಅವುಗಳೆಂದರೆ - **ಕಾವೇರಿ ಗ್ರಾಮೀಣ ಬ್ಯಾಂಕ್, ಕಲ್ಪತರು ಗ್ರಾಮೀಣ ಬ್ಯಾಂಕ್**. ಈ ಎರಡೂ ಬ್ಯಾಂಕ್‌ಗಳು ವಿಲೀನಗೊಂಡು **'ಕಾವೇರಿ ಕಲ್ಪತರು ಬ್ಯಾಂಕ್'** ಆಗಿ ಮೈಸೂರಿನಲ್ಲಿ ಕೇಂದ್ರ ಕಛೇರಿಯನ್ನು ಹೊಂದಿದ್ದು, ಇದರಡಿಯಲ್ಲಿ 250 ಶಾಖೆಗಳು ಕಾರ್ಯನಿರ್ವಹಿಸುತ್ತಿವೆ. **2012 ಅಕ್ಟೋಬರ್ 2 ರಿಂದ 2013 ರ ಅಕ್ಟೋಬರ್ 1 ರವರೆಗೆ** ಈ ಬ್ಯಾಂಕ್ ಶತಮಾನೋತ್ಸವ ವರ್ಷವನ್ನು ಆಚರಿಸಿಕೊಂಡಿತು.

### 'ನೆನಪು' ಎಂಬ ವಸ್ತು ಸಂಗ್ರಹಾಲಯ

ಮೈಸೂರ್ ಬ್ಯಾಂಕ್‌ನ 1913 ರಿಂದ ಮೈಸೂರು ಪ್ರಾಂತ್ಯದ **ರಾಜ್ಯ ಮಟ್ಟದ ಮೊದಲ ಸರ್ಕಾರಿ ಬ್ಯಾಂಕ್** ಆಗಿ ಕಾರ್ಯ ನಿರ್ವಹಿಸಿದ ಬ್ಯಾಂಕ್‌ನ ಸಮಗ್ರ ಇತಿಹಾಸವನ್ನು ಹೇಳುವ ನೆನಪು ವಸ್ತು ಸಂಗ್ರಹಾಲಯವನ್ನು **ಬೆಂಗಳೂರಿನ ಪ್ರಧಾನ ಕಚೇರಿಯಲ್ಲಿ** ತೆರೆಯಲಾಗಿದೆ. ಈ ವಸ್ತು ಸಂಗ್ರಹಾಲಯವು ಬ್ಯಾಂಕ್‌ನ ಇತಿಹಾಸದ ಬಗ್ಗೆ ಮಾಹಿತಿಯನ್ನು ಒಳಗೊಂಡಿದೆ.

ಪ್ರಧಾನ ಕಚೇರಿಯಲ್ಲಿ 2 ಕೊಠಡಿಯನ್ನು ಸಂಸ್ಥಾಪಕರಿಗೆ ಮೀಸಲಿಡಲಾಗಿದೆ. ಇದರೊಂದಿಗೆ ಸರ್.ಎಂ.ವಿ ಜೀವನ ಚಿತ್ರಗಳ ಬಗ್ಗೆ ವಿವರಿಸಲಾಗಿದೆ. ಮೈಸೂರು ರಾಜ್ಯದ ರಾಜರ ವಂಶವೃಕ್ಷ, ದಿವಾನರುಗಳ ವಿವರಗಳನ್ನು ಹಾಕಲಾಗಿದೆ.

## ಸ್ಟೇಟ್ ಬ್ಯಾಂಕ್ ಆಫ್ ಬಿಕಾನೇರ್ & ಜೈಪುರ:-

1963 ರಲ್ಲಿ ಸ್ಥಾಪನೆಯಾಯಿತು. ಇದರ ಕೇಂದ್ರ ಕಛೇರಿಯು ರಾಜಸ್ಥಾನದ ಜೈಪುರದಲ್ಲಿದೆ. 1944 ರಲ್ಲಿ ಸ್ಥಾಪನೆಗೊಂಡ ಸ್ಟೇಟ್ ಬ್ಯಾಂಕ್ ಆಫ್ ಬಿಕಾನೇರ್ & 1943 ರಲ್ಲಿ ಸ್ಥಾಪನೆಯಾಗಿದ್ದ ಸ್ಟೇಟ್ ಬ್ಯಾಂಕ್ ಆಫ್ ಜೈಪುರಗಳು ವಿಲೀನಗೊಂಡವು. ಈ ಬ್ಯಾಂಕ್ ಎಸ್.ಬಿ.ಐ ನ ಸಹವರ್ತಿ ಬ್ಯಾಂಕ್ ಆಗಿ ಕಾರ್ಯನಿರ್ವಹಿಸುತ್ತಿತ್ತು. ಇತ್ತೀಚೆಗೆ ವಿಲೀನಗೊಂಡ ಬ್ಯಾಂಕ್‌ಗಳಲ್ಲಿ ಇದೂ ಒಂದಾಗಿದೆ.

## ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್:-

ಈ ಬ್ಯಾಂಕ್ 1941 ಆಗಸ್ಟ್ 8 ರಂದು ಹೈದರಾಬಾದ್‌ನ ದೊರೆ ಮೀರ್ ಒಸ್ಮಾನ್ ಆಲಿಖಾನ್ ಅವರಿಂದ ಸ್ಥಾಪನೆಗೊಂಡಿತು. ಇದರ ಕೇಂದ್ರ ಕಛೇರಿಯು ಹೈದರಾಬಾದ್‌ನಲ್ಲಿದೆ. ಈ ಬ್ಯಾಂಕ್ 1956 ರಿಂದ ಎಸ್.ಬಿ.ಐನ ಸಹವರ್ತಿ ಬ್ಯಾಂಕ್ ಆಗಿ ಕಾರ್ಯನಿರ್ವಹಿಸುತ್ತಾ ಬಂದಿದೆ. ಪ್ರಸ್ತುತವಾಗಿ ಎಸ್.ಬಿ.ಐ ದ ಸಹವರ್ತಿ ಬ್ಯಾಂಕ್‌ಗಳಲ್ಲೇ ಅತಿ ದೊಡ್ಡ ಬ್ಯಾಂಕ್ ಆಗಿದೆ.

## ಸ್ಟೇಟ್ ಬ್ಯಾಂಕ್ ಆಫ್ ಪಾಟಿಯಾಲ:-

ಈ ಬ್ಯಾಂಕ್ 1917 ನವೆಂಬರ್ 17 ರಂದು ಪಾಟಿಯಾಲದ ಮಹಾರಾಜ ಭೂಪೇಂದರ್ ಸಿಂಗ್ ಅವರಿಂದ ಪಂಜಾಬ್‌ನ ಪಾಟಿಯಾಲದಲ್ಲಿ ಆರಂಭಗೊಂಡಿತು. ಮೂಲತಃವಾಗಿ ಕೃಷಿ, ವ್ಯಾಪಾರ ಮತ್ತು ವಾಣಿಜ್ಯವನ್ನು ವೃದ್ಧಿಸುವ ಉದ್ದೇಶದಿಂದ ಈ ಬ್ಯಾಂಕ್‌ನ್ನು ಸ್ಥಾಪಿಸಲಾಯಿತು. ಈ ಬ್ಯಾಂಕ್ ದೇಶದ ಪ್ರಮುಖ ನಗರಗಳಲ್ಲಿ ಶಾಖೆಗಳನ್ನು ಹೊಂದಿದೆ. 1960 ಏಪ್ರಿಲ್ 1 ರಂದು ಪಾಟಿಯಾಲ ಬ್ಯಾಂಕ್ ಎಸ್.ಬಿ.ಐ ನೊಂದಿಗೆ ವಿಲೀನಗೊಂಡು ಸ್ಟೇಟ್ ಬ್ಯಾಂಕ್ ಆಫ್ ಪಾಟಿಯಾಲ ವಾಯಿತು.

## ಸ್ಟೇಟ್ ಬ್ಯಾಂಕ್ ಆಫ್ ತಿರುವಾಂಕೂರು:-

ಈ ಬ್ಯಾಂಕ್ 1945 ಸೆಪ್ಟೆಂಬರ್ 12 ರಂದು ತಿರುವಾಂಕೂರು ದಿವಾನ ಸಿ.ಪಿ. ರಾಮಸ್ವಾಮಿ ಅಯ್ಯರ್ ಅವರ ಉತ್ತೇಜನದಿಂದಾಗಿ ಟ್ರಿವಾಂಕೂರು ಬ್ಯಾಂಕ್ ಲಿಮಿಟೆಡ್ ಎಂಬ ಹೆಸರಿನಲ್ಲಿ ಕೇರಳ ರಾಜ್ಯದ 'ತ್ರಿವೇಂಡಂ' ನಲ್ಲಿ ಸ್ಥಾಪನೆಗೊಂಡಿತು. ನಂತರ 1960 ರಲ್ಲಿ ಈ ಬ್ಯಾಂಕ್ ಎಸ್.ಬಿ.ಐ ನಲ್ಲಿ ವಿಲೀನಗೊಂಡು ಸ್ಟೇಟ್ ಬ್ಯಾಂಕ್ ಆಫ್ ತಿರುವಾಂಕೂರು ಎಂಬ ಹೆಸರಿನಲ್ಲಿ ಸ್ಥಾಪನೆಗೊಂಡಿತು.

2017 ಮಾರ್ಚ್ 31 ರಂದು ಭಾರತ ಸರ್ಕಾರವು ಕೇಂದ್ರ ಸರ್ಕಾರ ಸಚಿವ ಸಂಪುಟದ ಅಂಗೀಕಾರದಿಂದ 2017 ಏಪ್ರಿಲ್ 1 ರಂದು ಎಸ್.ಬಿ.ಐನ 5 ಸಹವರ್ತಿ ಬ್ಯಾಂಕುಗಳ ಜೊತೆಯಲ್ಲಿಯೇ ಭಾರತೀಯ ಮಹಿಳಾ ಬ್ಯಾಂಕ್ ಕೂಡ ವಿಲೀನಗೊಂಡಿತು.

## ಭಾರತೀಯ ಮಹಿಳಾ ಬ್ಯಾಂಕ್ (BMB-Bharatiya Mahila Bank)




- ಕಾರ್ಯಾರಂಭ:- **ನವೆಂಬರ್ 19, 2013** (ಮಾಜಿ ಪ್ರಧಾನಿ ಇಂದಿರಾಗಾಂಧಿ ಅವರ 96 ನೇ ಜನ್ಮ ದಿನೋತ್ಸವ)
- ಕೇಂದ್ರ ಕಛೇರಿ:- **ನವದೆಹಲಿ**
- ಬ್ಯಾಂಕಿನ ಧ್ಯೇಯ ವಾಕ್ಯ:- **"ಮಹಿಳಾ ಸಬಲೀಕರಣ ಮತ್ತು ಭಾರತ ಸಬಲೀಕರಣ"**
- ಅಧ್ಯಕ್ಷರು ಮತ್ತು ಮುಖ್ಯ ವ್ಯವಸ್ಥಾಪಕ ನಿರ್ದೇಶಕಿ: **ಉಷಾ ಅನಂತ ಸುಬ್ರಹ್ಮಣಿಯನ್**
- ಏಳು ಶಾಖೆಗಳು:- **ಬೆಂಗಳೂರು, ಚೆನ್ನೈ, ಕೊಲ್ಕತ್ತಾ, ದೆಹಲಿ, ಅಹಮದಾಬಾದ್, ಲಕ್ನೋ, ಗುವಾಹಟಿ.**
- ಬ್ಯಾಂಕಿನ ಸಿಬ್ಬಂದಿ ಸಂಪೂರ್ಣ ಮಹಿಳೆಯರು.
- ಬ್ಯಾಂಕಿನ ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕಿ ಕೂಡ ಮಹಿಳೆಯರೇ ಆಗಿದ್ದಾರೆ.
- **ದೇಶದ ಮೊದಲ ಮಹಿಳಾ ಬ್ಯಾಂಕ್**, ತಂತ್ರಜ್ಞಾನ ಮೂಲಕ ಸೌಲಭ್ಯವನ್ನು ಬಳಸಿದ **ಮೊದಲ ಭಾರತೀಯ ಬ್ಯಾಂಕ್** ಎನ್ನುವ ಹೆಗ್ಗಳಿಕೆಗೆ ಪಾತ್ರವಾಗಿದೆ.
- ಒಪ್ಪಂದದ ಅವಧಿ ಮುಗಿದ ಮೇಲೆ ಎಲ್ಲ ಮೂಲ ಸೌಕರ್ಯಗಳನ್ನು ಬ್ಯಾಂಕ್‌ಗೆ ಹಸ್ತಾಂತರಿಸಲಾಗುತ್ತದೆ. ಇದರಿಂದ ಬ್ಯಾಂಕ್ ಆರಂಭಿಕ ಹಂತದಲ್ಲಿ ತಂತ್ರಜ್ಞಾನಕ್ಕಾಗಿ ಮಾಡುವ ಹೂಡಿಕೆಯನ್ನು ಬೇರೆ ಉದ್ದೇಶಕ್ಕೆ ಬಳಸಬಹುದಾಗಿದೆ.
- **ಮಹಿಳೆಯರಿಗೆ ಹೆಚ್ಚಿನ ಬಡ್ಡಿ:-** ಮಹಿಳೆಯರಲ್ಲಿ ಉಳಿತಾಯ ಉತ್ತೇಜಿಸಲು ಮಹಿಳಾ ಬ್ಯಾಂಕ್ ಉಳಿತಾಯ ಖಾತೆಯಲ್ಲಿನ 1 ಲಕ್ಷದವರೆಗಿನ ಮೊತ್ತಕ್ಕೆ ಶೇ4.5% ರಷ್ಟು ಮತ್ತು 1 ಲಕ್ಷಕ್ಕಿಂತ ಹೆಚ್ಚಿನ ಮೊತ್ತಕ್ಕೆ ಶೇ5% ರಷ್ಟು ಬಡ್ಡಿದರ ನೀಡಲಿದೆ.
- **ಮಹಿಳೆಯ ಬ್ಯಾಂಕ್ ಖಾತೆ ಸಂಖ್ಯೆ ಹೆಚ್ಚಿಸುವುದು:-** ದೇಶದ ಒಟ್ಟಾರೆ ಜನಸಂಖ್ಯೆಯಲ್ಲಿ ಶೇ26% ರಷ್ಟು ಮಹಿಳೆಯರು ಮಾತ್ರ ಬ್ಯಾಂಕ್ ಖಾತೆಗಳನ್ನು ಹೊಂದಿದ್ದಾರೆ.
- **ಪಾರ್ಲಿಮೆಂಟ್‌ನಲ್ಲಿ ಕಾಯಿದೆ ರೂಪಿಸಿ ಸ್ಥಾಪನೆಗೊಂಡ ಮೊದಲ ಸಾರ್ವಜನಿಕ ವಲಯದ ಬ್ಯಾಂಕು.**

# ಎಸ್‌ಬಿಐಗೆ ಸಹವರ್ತಿ ಬ್ಯಾಂಕ್‌ಗಳ ವಿಲೀನದ ಪರಿಣಾಮ

✦ ಪ್ರಧಾನಿ ನೇತೃತ್ವದ ಕೇಂದ್ರ ಸಚಿವ ಸಂಪುಟವು ಎಸ್‌ಬಿಐ ಹಾಗೂ ಅದರ ವಿಲೀನಕ್ಕೆ ಒಪ್ಪಿಗೆ ಸೂಚಿಸುತ್ತಿದ್ದಂತೆ ಸಹವರ್ತಿ ಬ್ಯಾಂಕ್‌ಗಳ ಷೇರುಗಳ ಮೌಲ್ಯವು ಶೇ 3ರಿಂದ ಶೇ 13ರಷ್ಟು ಏರಿಕೆ ದಾಖಲಿಸಿದೆ. ಬ್ಯಾಂಕಿಂಗ್ ಕ್ಷೇತ್ರಕ್ಕೆ ಪೂರಕವಾಗಿರುವ ನಿರ್ಧಾರವಾಗಿದ್ದು, ಇದರಿಂದ ಉಳಿತಾಯ ಪ್ರಮಾಣದಲ್ಲೂ ಕೂಡ ಏರಿಕೆ ಕಂಡು ಬರಲಿದೆ.

**ಸ್ವಾಪ್ ಅನುಪಾತ:-**

✦ **ವಿಲೀನಗೊಳ್ಳುತ್ತಿರುವ ಷೇರುಗಳಿಗೆ ಬದಲಾಗಿ ಸ್ವಾಧೀನ ಪಡಿಸಿಕೊಳ್ಳುತ್ತಿರುವ ಸಂಸ್ಥೆಯು ನೀಡುವ ತನ್ನ ಷೇರುಗಳ ಪ್ರಮಾಣವನ್ನು ಸ್ವಾಪ್ ಅನುಪಾತ** ಎಂದು ಹೇಳಲಾಗುತ್ತದೆ. ಇದು ಈ ಹಿಂದೆ ನಿರ್ಧರಿಸಿದಂತೆ ಇರುತ್ತದೆ. ಈ ಹಿಂದಿನ ನಿರ್ಧಾರದಂತೆ ಸ್ಟೇಟ್ ಬ್ಯಾಂಕ್ ಆಫ್ ಬಿಕಾನೇರ್ ಅಂಡ್ ಜೈಪುರದ 10 ಷೇರುಗಳಿಗೆ (ತಲಾ 10 ರೂ ಮೌಲ್ಯದ ಷೇರುಗಳು) ಪ್ರತಿಯಾಗಿ ಎಸ್‌ಬಿಐ 28 ಷೇರುಗಳನ್ನು (ತಲಾ 1ರೂ ಮೌಲ್ಯದ್ದು) ನೀಡಲಿದೆ. ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್ ಮತ್ತು ತಿರುವಂಕೂರ್‌ಗೆ 10 ಷೇರುಗಳಿಗೆ ಪ್ರತಿಯಾಗಿ 22 ಷೇರುಗಳನ್ನು ನೀಡಲಿದೆ. **ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್ ಮತ್ತು ಸ್ಟೇಟ್ ಬ್ಯಾಂಕ್ ಆಫ್ ಪಾಟಿಯಾಲ** ಪೂರ್ಣ ಪ್ರಮಾಣದಲ್ಲಿ ಎಸ್‌ಬಿಐ ನ ಅಧೀನದಲ್ಲಿ ಇವೆ.

**ನೌಕರರ ವಿರೋಧ:-**

✦ ಬ್ಯಾಂಕ್‌ಗಳ ವಿಲೀನಕ್ಕೆ ನೌಕರ ಸಂಘಟನೆಗಳು ವಿರೋಧ ವ್ಯಕ್ತಪಡಿಸಿವೆ. ವಿಲೀನದ ಪರಿಣಾಮವಾಗಿ ನೇರವಾಗಿ ಉದ್ಯೋಗಿಗಳ ಮೇಲೆ ಉಂಟಾಗಲಿದೆ. ವಿಲೀನದಿಂದ ಹೆಚ್ಚುವರಿ ಉದ್ಯೋಗಿಗಳನ್ನು ತೆಗೆದುಹಾಕಲು ಬ್ಯಾಂಕ್‌ಗಳು ಮುಂದಾಗಿವೆ. ಅಲ್ಲದೇ, ಒಂದೇ ಪ್ರದೇಶದಲ್ಲಿರುವ ಹಲವು ಶಾಖೆಗಳನ್ನು ಸಂಯೋಜಿಸುವುದರಿಂದ ಉದ್ಯೋಗಿಗಳು ಬೇರೆ ಕಡೆ ಕೆಲಸ ಮಾಡುವುದಕ್ಕೂ ಕೂಡ ತಯಾರಾಗಿರಬೇಕಾಗುತ್ತದೆ. ಇವೆಲ್ಲವೂ ಕೂಡ ನೌಕರರಿಗೆ ಅನಾನುಕೂಲ ಉಂಟು ಮಾಡುತ್ತವೆ.

**ಗ್ರಾಹಕರಿಗೆ ಉತ್ತಮ ಸೌಲಭ್ಯ:-**

✦ ಎಸ್‌ಬಿಐನ ಸಹವರ್ತಿ ಬ್ಯಾಂಕ್‌ಗಳನ್ನು ವಿಲೀನ ಮಾಡುವುದರ ಪ್ರಮುಖ ಉದ್ದೇಶವೇ ಉತ್ತಮ ಸೇವೆ ನೀಡುವುದಾಗಿದೆ. ಈ ಪ್ರಕ್ರಿಯೆ ನಂತರ 5 ಬ್ಯಾಂಕ್‌ಗಳಲ್ಲಿನ ಗ್ರಾಹಕರು ಎಸ್‌ಬಿಐ ನ ಗ್ರಾಹಕರಾಗಿ ಬದಲಾಗುತ್ತಾರೆ. ಎಲ್ಲಾ ಖಾತೆಗಳ ಮಾಹಿತಿಗಳು ಎಸ್‌ಬಿಐಗೆ ರವಾನೆ ಆಗುತ್ತವೆ. ಈ ಪ್ರಕ್ರಿಯೆಗೆ ಕೆಲವು ತಿಂಗಳು ಬೇಕಾಗಬಹುದಾದರೂ ಉತ್ತಮ ಸೇವೆ ಪಡೆಯಲು ಗ್ರಾಹಕರಿಗೆ ಸಾಧ್ಯವಾಗುತ್ತದೆ.

✦ ಆರ್ಥಿಕ ತಜ್ಞರ ಅಭಿಪ್ರಾಯದಂತೆ ಬ್ಯಾಂಕ್ ವಿಲೀನದಿಂದ ಎಸ್‌ಬಿಐ ಜಾಗತಿಕ ಮಟ್ಟದ ಬ್ಯಾಂಕ್ ಆಗಿ ರೂಪಗೊಳ್ಳಲಿದೆ. ಸಧ್ಯ ಅಧೀನ ಬ್ಯಾಂಕ್‌ಗಳಲ್ಲಿರುವ ಗ್ರಾಹಕರಿಗೆ ಎಸ್‌ಬಿಐನ ಗ್ಲೋಬಲ್ ನೆಟ್‌ವರ್ಕ್‌ನ ಸಾಫ್ಟ್ ಲಾಭ ದೊರೆಯಲಿದೆ. ವಿಲೀನದಿಂದಾಗಿ ಹಣಕಾಸಿನ ಹರಿವು ಮತ್ತು ಸೇವೆಯಲ್ಲಿ ಉತ್ಕೃಷ್ಟತೆ ಕಂಡು ಬರಲಿದೆ. ಸಮಸ್ಯೆಗಳ ನಿರ್ವಹಣೆ, ಏಕೀಕೃತ ಖಜಾನೆ ಕಾರ್ಯಾಚರಣೆ, ಆಡಳಿತ ನಿರ್ವಹಣೆ ಖರ್ಚು ಮತ್ತು ಕಾರ್ಯಕಾರಿ ಖರ್ಚಿನಲ್ಲಿ ಉಳಿತಾಯ ಆಗಲಿದೆ.

✦ ಸಹವರ್ತಿ ಬ್ಯಾಂಕುಗಳು ವಿಲೀನಗೊಂಡ ನಂತರ ಅವುಗಳ ಕೇಂದ್ರ ಕಛೇರಿಯು ಮುಂಬೈನಲ್ಲಿರುತ್ತದೆ.

## ಎಸ್.ಬಿ.ಐನ ಮುಖ್ಯಸ್ಥರು: ಅರುಂಧತಿ ಭಟ್ಟಾಚಾರ್ಯ



ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಮುಖ್ಯಸ್ಥರಾಗಿ **ಅರುಂಧತಿ ಭಟ್ಟಾಚಾರ್ಯ** ಅವರು 2013 ಅಕ್ಟೋಬರ್ 7 ರಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಇವರು **ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಮೊದಲ ಮಹಿಳಾ ಮುಖ್ಯಸ್ಥರಾಗಿದ್ದಾರೆ.** ಇವರು **2016 ರ ಫೋರ್ಬ್ಸ್ ಪಟ್ಟಿಯಲ್ಲಿನ** 25 ಮಂದಿ ಪ್ರಬಲ ಮಹಿಳೆಯರ ಪಟ್ಟಿಯಲ್ಲಿ ಸ್ಥಾನ ಪಡೆದಿದ್ದಾರೆ. ಎಸ್.ಬಿ.ಐನ ಇತಿಹಾಸದಲ್ಲೇ ಮೊದಲ ಬಾರಿಗೆ ಮಹಿಳೆಯೊಬ್ಬರು ಅತ್ಯುನ್ನತ ಸ್ಥಾನವನ್ನು ಪಡೆದ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. 1977 ರಲ್ಲಿ ಎಸ್.ಬಿ.ಐ ನ ಸೇವೆಗೆ ಸೇರಿದ ಇವರು ಎಸ್.ಬಿ.ಐನ ವಿವಿಧ ವಿಭಾಗದಲ್ಲಿ ಸೇವೆಯನ್ನು ಸಲ್ಲಿಸಿದ್ದಾರೆ.

## ವಿಶ್ವದ ಅಗ್ರ ಸ್ಥಾನದಲ್ಲಿರುವ 5 ಬ್ಯಾಂಕ್‌ಗಳು

1. **ಇಂಡಸ್ಟ್ರಿಯಲ್ ಅಂಡ್ ಕಮರ್ಷಿಯಲ್ ಬ್ಯಾಂಕ್ ಆಫ್ ಚೀನಾ,** 2. ಚೀನಾ ಕನ್‌ಸ್ಟ್ರಕ್ಷನ್ ಬ್ಯಾಂಕ್ ಕಾರ್ಪೊರೇಷನ್, 3. ಅಗ್ರಿಕಲ್ಚರ್ ಬ್ಯಾಂಕ್ ಆಫ್ ಚೀನಾ, 4. ಹೆಚ್‌ಎಸ್‌ಬಿಸಿ ಹೋಲ್ಡಿಂಗ್ಸ್, 5. ಬ್ಯಾಂಕ್ ಆಫ್ ಚೀನಾ

## ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಬಗ್ಗೆ ಮಾಹಿತಿ




ಕೇಂದ್ರ ಕಛೇರಿ:- **ಮುಂಬೈ**

ಸ್ಥಾಪನೆ:- 1806 ರಲ್ಲಿ **ಬ್ಯಾಂಕ್ ಆಫ್ ಕಲ್ಕತ್ತಾ**

1921 ರಲ್ಲಿ **ಇಂಪೀರಿಯಲ್ ಬ್ಯಾಂಕ್**

1955 ಜುಲೈ 1 ರಂದು **ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ**

1956 ಜೂನ್ 2 ರಂದು **ರಾಷ್ಟ್ರೀಕರಣ**

ಶಾಖೆಗಳು:- **36 ದೇಶಗಳಲ್ಲಿ 191 ಶಾಖೆಗಳು**

ಭಾರತದಲ್ಲಿ **14,000 ಶಾಖೆಗಳು**

ಆಸ್ತಿ:- **22,59,063 ಕೋಟಿ ರೂ.ಗಳು**

ಉದ್ಯೋಗಿಗಳು:- **2,07,739 (2016 ರ ವೇಳೆಗೆ)**

ಆದಾಯ (2016):- **9,950 ಕೋಟಿ ರೂ.**

**ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ** ಅಡಿಯಲ್ಲಿ ಕಾರ್ಯನಿರ್ವಹಿಸುವ ಭಾರತ ಸರ್ಕಾರದ ಒಡೆತನದ ಸಾರ್ವಜನಿಕ ಬ್ಯಾಂಕ್ ಆಗಿದೆ.

ಎಸ್.ಬಿ.ಐ ನ ಲೋಗೋ ವನ್ನು 1971 ಅಕ್ಟೋಬರ್ 1 ರಂದು **"ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಡಿಸೈನ್, ಅಹಮದಾಬಾದ್"** ನ **'ಶೇಖರ್ ಕಾಮತ್'** ಅವರು ವಿನ್ಯಾಸಗೊಳಿಸಿದರು.

ಎಸ್.ಬಿ.ಐ 14 ಪ್ರಾದೇಶಿಕ ಕೇಂದ್ರಗಳು, 57 ವಲಯ ಕಛೇರಿಗಳನ್ನು ದೇಶಾದ್ಯಂತ ಹೊಂದಿದೆ.

### ವಿಲೀನಗೊಂಡ ಎಸ್‌ಬಿಐ & ಅಂಗಸಂಸ್ಥೆಗಳ ಒಟ್ಟು ಬಂಡವಾಳ

- **ಒಟ್ಟು ಠೇವಣಿ:-** 21,80,020 ಕೋಟಿ ರೂಗಳು.
- **ಮುಂಗಡ:-** 17,73,646 ಕೋಟಿ ರೂಗಳು
- **ಒಟ್ಟು ಶಾಖೆಗಳು:-** 22,927, ಸಿಬ್ಬಂದಿ: 2,52,388
- **ಮರುಪಾವತಿ ಆಗದ ಸಾಲ:-** 96,558 ಕೋಟಿ ರೂ

## ಬ್ಯಾಂಕ್‌ಗಳ ವಿಶೇಷತೆ

ದೇಶದ ಮೊದಲ ವಾಣಿಜ್ಯ ಬ್ಯಾಂಕ್ – **ಔದ್** (1881)

ದೇಶದ ಮೊದಲ ಭಾರತೀಯ ವಾಣಿಜ್ಯ ಬ್ಯಾಂಕ್– **ಪಂಜಾಬ್ ನ್ಯಾಷನಲ್ ಬ್ಯಾಂಕ್** (1894)

ದೇಶದ ಮೊದಲ ಕೇಂದ್ರ ಬ್ಯಾಂಕ್ – **ಇಂಪೀರಿಯಲ್ ಬ್ಯಾಂಕ್ ಆಫ್ ಇಂಡಿಯಾ** (1921)

**ಭಾರತದ ಮೊದಲ ಮಹಿಳಾ ಬ್ಯಾಂಕ್** – ಭಾರತೀಯ ಮಹಿಳಾ ಬ್ಯಾಂಕ್ (ನವೆಂಬರ್ 19, 2013 ಸ್ಥಾಪನೆ) ಪಾರ್ಲಿಮೆಂಟ್‌ನಲ್ಲಿ ಕಾಯಿದೆ ರೂಪಿಸಿ ಸ್ಥಾಪನೆಯಾದ **ಮೊದಲ ಮತ್ತು ಏಕೈಕ** ಸಾರ್ವಜನಿಕ ವಲಯದ ಬ್ಯಾಂಕ್. ಇದು **2017 ಏಪ್ರಿಲ್ 1** ರಂದು ಎಸ್.ಬಿ.ಐ ನೊಂದಿಗೆ ವಿಲೀನಗೊಂಡಿತು.

» ಅತ್ಯಂತ ದೊಡ್ಡ ಖಾಸಗಿ ವಲಯದ ಬ್ಯಾಂಕ್ – **ICICI (1995)**

» ಡೆಬಿಟ್ ಕಾರ್ಡ್ ಇಲ್ಲದೇ ಹಣ ವರ್ಗಾವಣೆ/ಹಿಂಪಡೆಯಲು ಅವಕಾಶ ಮಾಡಿಕೊಟ್ಟ ಮೊದಲ ಬ್ಯಾಂಕ್ – **ICICI**

» ಮೊಬೈಲ್ ಬ್ಯಾಂಕಿಂಗ್ ಜಾರಿಗೆ ತಂದ ಮೊದಲ ಬ್ಯಾಂಕ್- **HDFC**

» 1 ರೂ. ನೋಟು ಮುದ್ರಣ ಮಾಡುವ ಜವಾಬ್ದಾರಿ **ಕೇಂದ್ರ ಹಣಕಾಸು ಸಚಿವಾಲಯ** & ಸಚಿವಾಲಯದ ಕಾರ್ಯದರ್ಶಿಗಳ ಸಹಿ ನೋಟಿನ ಮೇಲಿರುತ್ತದೆ. ಪ್ರಸ್ತುತ **ಅಶೋಕ್ ಲವಾಸ** ಕಾರ್ಯದರ್ಶಿಗಳಾಗಿದ್ದಾರೆ.

» ಕೈಗಾರಿಕೆಗೆ ಹಣಕಾಸು ಕೊಡುವ ಅಗ್ರ ಬ್ಯಾಂಕ್ – **IDBI (1964)**

» ಕೃಷಿ ಹಣಕಾಸು ಸೌಲಭ್ಯದ ಅಪೆಕ್ಸ್ ಬ್ಯಾಂಕ್ – **ನಬಾರ್ಡ್ (1982)**

» ವಿದೇಶೀ ವ್ಯಾಪಾರಕ್ಕೆ ಸಂಬಂಧಿಸಿದ ದೊಡ್ಡ ಬ್ಯಾಂಕ್ - **(EXIM-1982)**

» ಸಣ್ಣ ಕೈಗಾರಿಕೆಗೆ ಹಣಕಾಸು ಕೊಡುವ ದೊಡ್ಡ ಬ್ಯಾಂಕ್ - **(SIDBI – 1990)**

» ಗೃಹ ಹಣಕಾಸು ನೋಡಿಕೊಳ್ಳುವ ಅಪೆಕ್ಸ್ ಬ್ಯಾಂಕ್ - **NHB - National Housing Bank (1988)**

» ಅನನ್ಯ ಎಂಬ ಡಿಜಿಟಲ್ ಬ್ಯಾಂಕಿಂಗ್ ಸೇವೆ ಜಾರಿಗೆ ತಂದ ಬ್ಯಾಂಕ್ – **ಸಿಂಡಿಕೇಟ್**

» ಇತ್ತೀಚೆಗೆ UTI ಈ ಬ್ಯಾಂಕ್‌ನೊಂದಿಗೆ ವಿಲೀನಗೊಂಡಿದೆ- **AXIS**

» ವಾಣಿಜ್ಯ ಬ್ಯಾಂಕ್‌ಗಳ ಮೊದಲ ಹಂತದ ರಾಷ್ಟ್ರೀಕರಣ **–1969ರ ಜುಲೈ 19 (ಇಂದಿರಾಗಾಂಧಿ ಅವರ ಅಧಿಕಾರಾವಧಿಯಲ್ಲಿ)**

» ವಾಣಿಜ್ಯ ಬ್ಯಾಂಕುಗಳ 2ನೇ ಹಂತದ ರಾಷ್ಟ್ರೀಕರಣ – **1980ರ ಏಪ್ರಿಲ್ 15 (ಇಂದಿರಾಗಾಂಧಿ ಅವರ ಅಧಿಕಾರಾವಧಿಯಲ್ಲಿ)**

## ಮುದ್ರಾ ಬ್ಯಾಂಕ್

## (MUDRA BANK - Micro units development and Refinance Agency)




✦ ಭಾರತದ ಕೈಗಾರಿಕಾಭಿವೃದ್ಧಿ ಇತಿಹಾಸದಲ್ಲಿ ಸಣ್ಣ ಕೈಗಾರಿಕೆಗಳಿಗೆ ಹಣಕಾಸು ಸೌಲಭ್ಯ ಒದಗಿಸುವ ದೊಡ್ಡ ಬ್ಯಾಂಕ್ ಆದ **ಭಾರತೀಯ ಸಣ್ಣ ಕೈಗಾರಿಕಾ ಅಭಿವೃದ್ಧಿ ಬ್ಯಾಂಕ್** (SSDBI–1990)

✦ ಈ ಬ್ಯಾಂಕ್‌ನಡಿಯಲ್ಲಿ ಸ್ಥಾಪಿತವಾದ ಸಣ್ಣ ಉದ್ದಿಮೆಗಳ ಅಭಿವೃದ್ಧಿ & ಅವುಗಳಿಗೆ ಅಗತ್ಯವಿರುವ ಮರು ಹಣಕಾಸು ಸೌಲಭ್ಯ ಒದಗಿಸುವ ಉದ್ದೇಶದಿಂದ ಕೇಂದ್ರ ಸರ್ಕಾರ **2015–16** ರ ಬಜೆಟ್‌ನಲ್ಲಿ ಪ್ರಸ್ತಾಪಿಸಿದ ಪ್ರಮುಖ ಘೋಷಣೆಗಳಲ್ಲಿ ಮುದ್ರಾ ಬ್ಯಾಂಕ್ ಸ್ಥಾಪನೆಯೂ ಒಂದಾಗಿದೆ.

➤ **ಬ್ಯಾಂಕಿನ ಧ್ಯೇಯವಾಕ್ಯ:-** Funding the Unfunded

➤ **ಮೂಲಬಂಡವಾಳ:- 20 ಸಾವಿರ ಕೋಟಿ**

➤ **ಪ್ರಮುಖ ಧ್ಯೇಯ:-** ಏಕವ್ಯಕ್ತಿ ಮಾಲೀಕತ್ವದ ವ್ಯಾಪಾರೋದ್ಯಮಿಗಳಿಗೆ ಹಣಕಾಸು ನೆರವು ಒದಗಿಸುವ ಉದ್ದೇಶ.

➤ **ಸ್ಥಾಪನೆಯ ಘೋಷಣೆ:-** 2015–16ರ ಕೇಂದ್ರ ಬಜೆಟ್‌ನಲ್ಲಿ ವಿತ್ತಸಚಿವ ಅರುಣ್ ಜೇಟ್ಲಿ ಘೋಷಣೆ.

➤ **ಫಲಾನುಭವಿಗಳು:-** 5.77 ಕೋಟಿ ಸಣ್ಣ ವ್ಯಾಪಾರ ಘಟಕಗಳು

➤ **ಉದ್ಘಾಟನೆಯಾದ ದಿನಾಂಕ:- ಏಪ್ರಿಲ್ 8, 2015**

➤ **ಉದ್ಘಾಟಿಸಿದವರು:-** ಭಾರತದ ಪ್ರಧಾನಿ ನರೇಂದ್ರ ಮೋದಿ

### ಮುದ್ರಾ ಬ್ಯಾಂಕ್‌ನ ಪ್ರಮುಖ ಯೋಜನೆಗಳು

➤ 1) **ಶಿಶು** - 50 ಸಾವಿರದವರೆಗೆ ಸಾಲ ಒದಗಿಸುವುದು

➤ 2) **ಕಿಶೋರ** :- 50 ಸಾವಿರದಿಂದ 5 ಲಕ್ಷದವರೆಗೆ ಸಾಲ ಒದಗಿಸುವುದು

➤ 3) **ತರುಣ:-** 5 ಲಕ್ಷದಿಂದ 10 ಲಕ್ಷದವರೆಗೆ ಸಾಲ ಒದಗಿಸುವುದು.

➤ ಕೇಂದ್ರ ಸರ್ಕಾರದ ಸ್ಟಾರ್ಟ್ ಅಪ್ ಇಂಡಿಯಾ ಯೋಜನೆಯಡಿಯಲ್ಲಿ **ಪ.ಜಾತಿ, ಪ.ಪಂಗಡ & ಹಿಂದುಳಿದ** ವರ್ಗದವರಿಗೆ ಸ್ವ ಉದ್ದಿಮೆ ಕೈಗೊಳ್ಳಲು ಈ ಬ್ಯಾಂಕ್ ಮೇಲಿನ 3 ಹಂತಗಳ ರೀತಿಯಲ್ಲಿ ಸಾಲ ಸೌಲಭ್ಯ ಒದಗಿಸುತ್ತಿದೆ.

## ಹಣಕಾಸು ಸಮನ್ವಯತೆ/ಪ್ರಧಾನ ಮಂತ್ರಿ ಜನಧನ. ಯೋಜನೆ (PMJDY)




✦ 2014 ಆಗಸ್ಟ್ 15 ರಂದು ಸ್ವಾತಂತ್ರ್ಯ ಭಾಷಣದಲ್ಲಿ ಯೋಜನೆ ಬಗ್ಗೆ ಪ್ರಸ್ತಾಪ

✦ **ಆಗಸ್ಟ್ 28, 2014** ರಂದು ಯೋಜನೆ ಉದ್ಘಾಟನೆ

✦ ಹೊಸ ಮೂಲ ಉಳಿತಾಯ ಬ್ಯಾಂಕು ಖಾತೆ (BSBDA's) ತೆರೆಯುವುದರ ಮೂಲಕ **ಸಾಲ, ವಿಮಾ ಸೌಲಭ್ಯ ನೀಡಿಕೆ** ಹಾಗೂ ಬ್ಯಾಂಕಿಂಗ್ ಹವ್ಯಾಸವನ್ನು ಕೃಷಿಕರಲ್ಲಿ ಮೂಡಿಸುವ ಉದ್ದೇಶ.

✦ **ರೂ 1** ಲಕ್ಷದವರೆಗೆ ಆಕಸ್ಮಿಕ ಅಪಘಾತ ವಿಮಾ, **ರೂ 30,000** ಜೀವ ವಿಮೆ, **5000 ಓವರ್ ಡ್ರಾಫ್ಟ್** ಸೌಲಭ್ಯ.

✦ **ಆಗಸ್ಟ್ 15 2015 ರಿಂದ ಆಗಸ್ಟ್ 15 2018** ರವರೆಗೆ 2ನೇ ಹಂತದ ಕಾರ್ಯ ಯೋಜನೆ

✦ ರುಪೇ ಡೆಬಿಟ್ ಕಾರ್ಡ್ ಯೋಜನೆ ಆರಂಭ **2015 ಜನವರಿ 26.**

✦ **ಅತಿ ಹೆಚ್ಚು ಅಕೌಂಟು ತೆರೆದಿರುವ ಬ್ಯಾಂಕ್ – SBI**

✦ ಪ್ರತಿಯೊಂದು ಮನೆಯಲ್ಲೂ ಬ್ಯಾಂಕ್ ಖಾತೆಯನ್ನು ಹೊಂದಿರುವ ರಾಜ್ಯಗಳು: **ಕೇರಳ ಮತ್ತು ಗೋವಾ.** 2015ರ ಜನವರಿ 20ರಂದು ಈ ಯೋಜನೆಯು ಗಿನ್ನಿಸ್ ದಾಖಲೆಗೆ ಸೇರ್ಪಡೆಯಾಯಿತು.

✦ **ಛತ್ತೀಸ್‌ಗಡ** - 26.5 ಕೋಟಿ ಬ್ಯಾಂಕ್ ಖಾತೆ, 57% ಆಧಾರ್ ಕಾರ್ಡ್ ಸಂಪರ್ಕ ಕಲ್ಪಿಸಿದ ದೊಡ್ಡ ರಾಜ್ಯವಾಗಿದೆ.

✦ **ಹಣಕಾಸು ಸಮನ್ವಯತೆ** ಎಂದರೆ ದೇಶದ ಪ್ರತಿಯೊಂದು ಕುಟುಂಬದಲ್ಲಿ ಬ್ಯಾಂಕ್ ಖಾತೆಗಳನ್ನು ತೆರೆಸಿ, ದೇಶದಾದ್ಯಂತ ಬ್ಯಾಂಕಿಂಗ್ ವ್ಯವಹಾರ ಅಭಿವೃದ್ಧಿಪಡಿಸುವುದು.

# ಪೇಮೆಂಟ್ ಬ್ಯಾಂಕಿಂಗ್ (Payment Banking)

✦ ಭಾರತದಲ್ಲಿ ಪರಿಚಯಿಸಿದವರು: **ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ**

## ಪೇಮೆಂಟ್ ಬ್ಯಾಂಕ್ ಕಾರ್ಯನಿರ್ವಹಣಾ ವಿಶೇಷತೆ

✦ ಈ ಬ್ಯಾಂಕ್‌ಗಳು ನಿರ್ಬಂಧಿತ ಮೊತ್ತದ ಠೇವಣಿಗಳನ್ನು ಗ್ರಾಹಕರಿಂದ ಸಂಗ್ರಹಿಸುತ್ತವೆ. ಪ್ರಸ್ತುತವಾಗಿ **1 ಲಕ್ಷ ರೂಪಾಯಿ ಗರಿಷ್ಠ ಠೇವಣಿಯನ್ನು** ನಿಗದಿ ಮಾಡಲಾಗಿದೆ. ಮುಂದಿನ ದಿನಗಳಲ್ಲಿ ಈ ಮೊತ್ತವನ್ನು ಹೆಚ್ಚಿಸಲಾಗುತ್ತದೆ. ಈ ಬ್ಯಾಂಕ್‌ಗಳು ಸಾಲಗಳನ್ನು ವಿತರಿಸುವುದಾಗಲೀ, ಕ್ರೆಡಿಟ್ ಕಾರ್ಡ್‌ಗಳನ್ನು ವಿತರಿಸುವುದನ್ನು ಮಾಡುವುದಿಲ್ಲ.

✦ ಈ ಬ್ಯಾಂಕ್‌ಗಳು ಉಳಿತಾಯ ಖಾತೆ ಮತ್ತು ಚಾಲ್ತಿ ಖಾತೆಗಳನ್ನು ನಿರ್ವಹಿಸುತ್ತವೆ. ಇವುಗಳು ಎಟಿಎಂ ಕಾರ್ಡ್‌ಗಳನ್ನು, ಡೆಬಿಟ್ ಕಾರ್ಡ್‌ಗಳನ್ನು, ಆನ್‌ಲೈನ್ ಬ್ಯಾಂಕಿಂಗ್ ಮತ್ತು ಮೊಬೈಲ್ ಬ್ಯಾಂಕಿಂಗ್ ಸೇವೆಗಳನ್ನು ಒದಗಿಸುತ್ತವೆ.

✦ **ಕಡಿಮೆ ಮೊತ್ತದ ಹಣ ಸಂಗ್ರಹಣೆಗೆ ಮಾಡುವ ಬ್ಯಾಂಕ್**

✦ ಉತ್ತೇಜಕರ ಉದ್ದೇಶದಿಂದಾಗಿ ಎಫ್‌ಡಿಐ ನಿಯಮಾವಳಿಯಂತೆ ಭಾರತದ ಖಾಸಗಿ ಬ್ಯಾಂಕ್‌ಗಳಲ್ಲಿ ಕನಿಷ್ಠ ಶೇ40 ರಷ್ಟು ವಿದೇಶಿ ಹೂಡಿಕೆದಾರರಿಗೆ ಅವಕಾಶ ಕಲ್ಪಿಸಲಾಗಿದೆ. ಇದರ ಮತದಾನದ ಹಕ್ಕನ್ನು **ಬ್ಯಾಂಕಿಂಗ್ ನಿಯಂತ್ರಣ ಕಾಯಿದೆ–1949** ರಂತೆ ನಿಯಂತ್ರಿಸಲಾಗಿದೆ.

✦ 2013ರ ಸೆಪ್ಟೆಂಬರ್ 23ರಂದು ಆರ್‌ಬಿಐ ನೇಮಿಸಿದ **'ನಚಿಕೇಟ್ ಮಾರ್' (NACHIKET MOR)** ರವರ ನೇತೃತ್ವದಲ್ಲಿ ನೇಮಿಸಲಾದ "Committee on Comprehensive Financial Services for Small Businesses and Low Income Households" ಸಮಿತಿಯು 2014ರ ಜನವರಿ 7ರಂದು ಸಲ್ಲಿಸಿದ ಅಂತಿಮ ವರದಿಯಲ್ಲಿನ ಶಿಫಾರಸ್ಸುಗಳಲ್ಲಿ **ಪೇಮೆಂಟ್ ಬ್ಯಾಂಕ್‌ನಂತಹ** ಹೊಸ ಮಾದರಿಯ ಬ್ಯಾಂಕ್‌ನ್ನು ಸ್ಥಾಪಿಸಲು ಶಿಫಾರಸ್ಸು ಮಾಡಲಾಯಿತು.

### ಪೇಟಿಮ್ (Pay Through Mobile)

✦ ಸ್ಥಾಪನೆ: 2010,

✦ ಕೇಂದ್ರ ಕಚೇರಿ: ಉತ್ತರ ಪ್ರದೇಶದ ನೋಯ್ಡಾ

✦ ಖಾಸಗಿ ಒಡೆತನದ ಭಾರತೀಯ ಪೇಮೆಂಟ್ ಮತ್ತು ವಾಣಿಜ್ಯ ಕಂಪನಿ.

✦ ಸ್ಥಾಪಕರು: ವಿಜಯ್ ಶೇಖರ್ ಶರ್ಮಾ



✦ 2014ರ ಜುಲೈ 17ರಂದು ಆರ್‌ಬಿಐನವರು ಪೇಮೆಂಟ್ ಬ್ಯಾಂಕ್‌ನ ಕರಡು ನಿಯಮಾವಳಿಗಳನ್ನು ಬಿಡುಗಡೆ ಮಾಡಿದರು. ನಂತರ 2014ರ ನವೆಂಬರ್ 27ರಂದು ಅಂತಿಮ ನಿಯಮಾವಳಿಗಳನ್ನು ಆರ್‌ಬಿಐ ಬಿಡುಗಡೆ ಮಾಡಿತು.

✦ **2015ರ ಫೆಬ್ರವರಿ 28ರಂದು** ಮಂಡನೆಯಾದ ಬಜೆಟ್‌ನಲ್ಲಿ ಭಾರತದಲ್ಲಿ **"ಭಾರತದ ಅಂಚೆ"ಯನ್ನು** ಪೇಮೆಂಟ್ ಬ್ಯಾಂಕ್ ಆಗಿ ಮಾಡುವುದಾಗಿ ಪ್ರಸ್ತಾಪಿಸಲಾಗಿತ್ತು. ಈ ಹಿನ್ನೆಲೆಯಲ್ಲಿ ಭಾರತೀಯ ಅಂಚೆಯು **2017 ಜನವರಿ 30** ರಿಂದ ಪೇಮೆಂಟ್ ಬ್ಯಾಂಕ್ ಆಗಿ ಕಾರ್ಯ ನಿರ್ವಹಿಸುತ್ತಿದೆ.

✦ ಭಾರತದಲ್ಲಿ **ಏರ್‌ಟೆಲ್ ಮೊದಲ ಪೇಮೆಂಟ್ ಬ್ಯಾಂಕಿಂಗ್‌ನ್ನು 2017ರ ಜನವರಿ 12ರಂದು** ನವದೆಹಲಿಯಲ್ಲಿ ವಿತ್ತ ಸಚಿವ ಅರುಣ್ ಜೇಟ್ಲಿ ಅವರು ಉದ್ಘಾಟಿಸಿದರು. ಈ ಬ್ಯಾಂಕ್ ರಾಜಸ್ಥಾನದಲ್ಲಿ ತನ್ನ ಪೈಲೆಟ್‌ಯೋಜನೆ ಆರಂಭಿಸಿದೆ.

✦ **ಪೇಟಿಎಂ (PAYTM-Pay Through Mobile) ದೇಶದ 2ನೇ ಪೇಮೆಂಟ್ ಬ್ಯಾಂಕ್** ಆಗಿ ನೋಯ್ಡಾದಲ್ಲಿ ಕಾರ್ಯ ಆರಂಭಿಸಿತು. ಪೇಮೆಂಟ್ ಬ್ಯಾಂಕ್‌ಗಳು ಆರಂಭದ 5 ವರ್ಷಗಳಲ್ಲಿ ಕನಿಷ್ಠ ಮೂಲಬಂಡವಾಳವು 100 ಕೋಟಿಗಳನ್ನು ಹೊಂದಿರಬೇಕು.

**ಕಾರ್ಯಾಚರಣೆಯಲ್ಲಿರುವ ಪೇಮೆಂಟ್ ಬ್ಯಾಂಕ್ (2017 ಜೂನ್)**

| ಬ್ಯಾಂಕ್ ಹೆಸರು | ಠೇವಣಿ ಬಡ್ಡಿ | ಗರಿಷ್ಠ ಠೇವಣಿ |
|---|---|---|
| ಏರ್‌ಟೆಲ್ | 7.25% | 1 ಲಕ್ಷ |
| ಪೇಟಿಮ್ | 4% | 1 ಲಕ್ಷ |
| ಭಾರತೀಯ ಅಂಚೆ | 5.5% | 1 ಲಕ್ಷ |

# ಭಾರತೀಯ ಅಂಚೆ ಪಾವತಿ ಬ್ಯಾಂಕ್ (IPPB - Indian Post Payment Bank)

- ಭಾರತದ ಮೊಟ್ಟ ಮೊದಲ ಸಾರ್ವಜನಿಕ ವಲಯದ ಪೇಮೆಂಟ್ ಬ್ಯಾಂಕ್ ಆಗಿದೆ.
- 2017ರ ಜನವರಿ 30 ರಂದು **ಭಾರತೀಯ ಅಂಚೆ ಪೇಮೆಂಟ್ಸ್ ಬ್ಯಾಂಕ್ ರಾಂಚಿ ಮತ್ತು ರಾಯಪುರದಲ್ಲಿ** ಪ್ರಾಯೋಗಿಕವಾಗಿ ತಮ್ಮ ಕಾರ್ಯವನ್ನು ಆರಂಭಿಸಿವೆ. ಭಾರತೀಯ ಅಂಚೆ ಪೇಮೆಂಟ್ಸ್ ಬ್ಯಾಂಕ್ 800 ಕೋಟಿ ಮೂಲ ಬಂಡವಾಳ ಹೊಂದಲಿದ್ದು, ಇದ–ಕ್ಕೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರವು 275 ಕೋಟಿ ರೂಗಳನ್ನು ಒದಗಿಸಿದೆ.
- ಪ್ರತಿಯೊಂದು ಜಿಲ್ಲೆಯಲ್ಲಿ ಒಂದಾದರೂ ಅಂಚೆ ಪೇಮೆಂಟ್ಸ್ ಬ್ಯಾಂಕ್ ಹೊಂದುವುದು ಭಾರತೀಯ ಅಂಚೆ ಇಲಾಖೆಯ ಉದ್ದೇಶವಾಗಿದ್ದು, ಅಂಚೆ ಇಲಾಖೆಯ ಸಾವಿರ ಎಟಿಎಂಗಳನ್ನು IPPB ಗೆ ವರ್ಗಾಯಿಸಲಾಗುವುದು. ಈ ಬ್ಯಾಂಕ್‌ಗಳು ಗ್ರಾಮೀಣ ಪ್ರದೇಶದಲ್ಲಿ ಜನರ ಬಾಗಿಲಿಗೆ ಅತೀ ಕಡಿಮೆ ವೆಚ್ಚದಲ್ಲಿ ಬ್ಯಾಂಕಿಂಗ್ ಸೌಲಭ್ಯವನ್ನು ಕಲ್ಪಿಸಲಿವೆ. ಮುಂದಿನ ದಿನಗಳಲ್ಲಿ ಈ ಬ್ಯಾಂಕ್‌ಗಳು **ಆರ್ಥಿಕ ಸೇರ್ಪಡೆ ಮತ್ತು ಬ್ಯಾಂಕಿಂಗ್ ವ್ಯವಸ್ಥೆಯ** ಮೇಲೆ ಬಹು ಬಗೆಯ ಪರಿಣಾಮ ಬೀರಲಿವೆ.
- 2017ರ ಸೆಪ್ಟೆಂಬರ್ ವೇಳೆಗೆ ದೇಶಾದ್ಯಂತ ಭಾರತೀಯ ಅಂಚೆ ಪೇಮೆಂಟ್ಸ್ ಬ್ಯಾಂಕ್‌ಗಳ 650 ಶಾಖೆಗಳನ್ನು ತೆರೆಯಲು ಉದ್ದೇಶಿಸಲಾಗಿದೆ. ಪೇಮೆಂಟ್ಸ್ ಬ್ಯಾಂಕ್‌ಗಳು ಪ್ರತೀ ಖಾತೆಯಲ್ಲಿ ವ್ಯಯಕ್ತಿಕವಾಗಿ ಮತ್ತು ಸಣ್ಣ ಉದ್ದಿಮೆಗಳು ಗರಿಷ್ಠ 1ಲಕ್ಷದಷ್ಟು ಠೇವಣಿಯನ್ನು ಸ್ವೀಕರಿಸಲಿವೆ.
- ಭಾರತೀಯ ಅಂಚೆ ಪೇಮೆಂಟ್ಸ್ ಬ್ಯಾಂಕ್‌ಗಳು 25ಸಾವಿರದವರೆಗಿನ ಠೇವಣಿಗೆ ಶೇ 4.5ರಷ್ಟು, 25ರಿಂದ 50 ಸಾವಿರದವರೆಗೆ ಶೇ 5ರಷ್ಟು ಬಡ್ಡಿಯನ್ನು, 50ಸಾವಿರದಿಂದ 1 ಲಕ್ಷದವರೆಗೆ ಶೇ5.5 ರಷ್ಟು ಬಡ್ಡಿಯನ್ನು ನೀಡಲಿವೆ.

**ಪ್ರಮುಖ ಪೇಮೆಂಟ್ ಬ್ಯಾಂಕ್‌ಗಳು** ರಿಲಾಯನ್ಸ್, ಆದಿತ್ಯ ಬಿರ್ಲಾ, ವೊಡಾಫೋನ್, ಏರ್‌ಟೆಲ್, ಟೆಕ್ ಮಹೇಂದ್ರ, ದಿಲೀಪ್ ಸಾಂಘ್ವಿ, ಚೋಳ ಮಂಡಲ್ಂ ಡಿಸ್ಟ್ರಿಬ್ಯೂಷನ್, ಸನ್ ಫಾರ್ಮಾಸ್ಯುಟಿಕಲ್ಸ್, NSD (National Securi-ty Depositories) ಭಾರತೀಯ ಅಂಚೆ ಇಲಾಖೆ.




**ಪೇಟಿಎಂ ಪೇಮೆಂಟ್ಸ್ ಬ್ಯಾಂಕ್ ಆರಂಭಿಸಿದ 2 ನೇ ಸಂಸ್ಥೆ**

- ಮೊಬೈಲ್ ವ್ಯಾಲೆಟ್ ಸಂಸ್ಥೆ ಪೇಟಿಎಂ 2017ರ ಮೇ 23ರಂದು ಪೇಮೆಂಟ್ ಬ್ಯಾಂಕ್‌ಗೆ ಚಾಲನೆ ನೀಡಿತು. ಈ ಮೂಲಕ **ಏರ್‌ಟೆಲ್ ನಂತರ** ಪೇಟಿಎಂ ಪೇಮೆಂಟ್ಸ್ ಬ್ಯಾಂಕ್ ಆರಂಭಿಸಿದ 2 ನೇ ಸಂಸ್ಥೆಯಾಗಿದೆ. ಈ ಪೇಮೆಂಟ್ ಬ್ಯಾಂಕ್‌ನಲ್ಲಿ ಖಾತೆಯಲ್ಲಿ ಕನಿಷ್ಠ ಮೊತ್ತ ಇರಿಸಬೇಕಾದ ಅಗತ್ಯ ಇಲ್ಲ. ಠೇವಣಿಗಳ ಮೇಲೆ **ಶೇ 4ರಷ್ಟು ಬಡ್ಡಿ** ಮತ್ತು **25ಸಾವಿರ ರೂ ಠೇವಣಿ ಇರಿಸಿದರೆ 250ರೂ ಹಣ** ಮರಳಿಸುವುದಾಗಿ ಸಂಸ್ಥೆ ಹೇಳಿದೆ. ಠೇವಣಿಗಳ ಮೇಲೆ ನಗದುಪಡೆಯುವ ಸೌಲಭ್ಯವನ್ನು ಆರಂಭಿಸಿದ ಮೊಟ್ಟ ಮೊದಲ ಪೇಮೆಂಟ್ ಬ್ಯಾಂಕ್ ಎಂಬ ಕೀರ್ತಿಗೆ ಪೇಟಿಎಂ ಪಾತ್ರವಾಗಿದೆ.
- ಈಗಾಗಲೇ ಗ್ರಾಹಕರು ಬಳಸುತ್ತಿರುವ ಪೇಟಿಎಂ ಮೊಬೈಲ್ ಆಪ್‌ನ್ನು ಮೇಲ್ದರ್ಜೆಗೇರಿಸಿ ಆಧಾರ್ ಸಂಖ್ಯೆ ಮತ್ತು ಹೆಸರುಗಳನ್ನು ನಮೂದಿಸಿ, ದೃಢೀಕರಿಸಿ, ಬ್ಯಾಂಕಿಂಗ್ ಸೇವೆ ಬಳಸಬಹುದು. ಪೇಟಿಎಂ ಗ್ರಾಹಕರು ಈ ಮೊದಲಿನಂತೆ ತಮ್ಮ ಆ್ಯಪ್‌ನ ಬಳಕೆ ಮುಂದುವರೆಸಬಹುದು. ಬ್ಯಾಂಕ್‌ನಿಂದ ಗ್ರಾಹಕರಿಗೆ ವರ್ಚುಯಲ್ ರೂಪೇ ಡೆಬಿಟ್ ಕಾರ್ಡ್ ಮತ್ತು ಗ್ರಾಹಕರ ಕೋರಿಕೆ ಮೇರೆಗೆ ಭೌತಿಕ ಸ್ವರೂಪದ ಕಾರ್ಡ್‌ನ್ನು ವಿತರಿಸಲಿದೆ.
- ಆನ್‌ಲೈನ್ ಮೂಲಕ ನಡೆಸುವ ನೆಫ್ಟ್ (NEFT, RTGS, IMPS) ವಹಿವಾಟುಗಳಿಗೆ ಯಾವುದೇ ಶುಲ್ಕ ಇರುವುದಿಲ್ಲ. ವರ್ತಕರಿಗೆ ಚಾಲ್ತಿ ಖಾತೆಯ ಸೌಲಭ್ಯವಿರುತ್ತದೆ. ಹೊಸ ರೂಪದ ಬ್ಯಾಂಕಿಂಗ್ ಮಾದರಿ ರೂಪಿಸಲು ಆರ್‌ಬಿಐ ಪೇಟಿ–ಎಂ ಗೆ ಅವಕಾಶ ನೀಡಿದೆ. ಪೇಟಿಎಂ ಗ್ರಾಹಕರ ಠೇವಣಿ ಹಣವನ್ನು ಸರ್ಕಾರಿ ಬಾಂಡ್‌ಗಳಲ್ಲಿ ತೊಡಗಿಸಿ ದೇಶ ನಿರ್ಮಾಣಕ್ಕೆ ಬಳಸುವುದು. ಅಂಚೆ ಇಲಾಖೆ ಅಧೀನದಲ್ಲಿ ಸಾರ್ವಜನಿಕ ವಲಯದ ನಿಗಮವಾಗಿ ಭಾರತೀಯ ಅಂಚೆ ಪಾವತಿ ಬ್ಯಾಂಕ್ ಭಾರತ ಸರ್ಕಾರದ ಶೇ 100 ರಷ್ಟು ಈಕ್ವಿಟಿ ಆಧಾರದಲ್ಲಿ ಸ್ಥಾಪಿತವಾಗಿದೆ.

## ಚಂದ್ರಬಾಬು ನಾಯ್ಡು ಸಮಿತಿ - ಡಿಜಿಟಲ್ ಪಾವತಿ (Digital Payments)



+ ಡಿಜಿಟಲ್ ಪಾವತಿ ಉತ್ತೇಜಿಸುವ ವರದಿಯು 2017 ಜನವರಿ 24 ರಂದು ಆಂಧ್ರಪ್ರದೇಶದ ಮುಖ್ಯಮಂತ್ರಿ ಚಂದ್ರಬಾಬು ನಾಯ್ಡು ಅವರ ನೇತೃತ್ವದ ಸಮಿತಿ ಡಿಜಿಟಲ್ ಪಾವತಿಗೆ ಸಂಬಂಧಿಸಿದಂತೆ ವರದಿ ಸಲ್ಲಿಸಿದೆ.

+ ಪ್ರಧಾನ ಮಂತ್ರಿ ನರೇಂದ್ರ ಮೋದಿಯವರು 2016 ನವೆಂಬರ್ 8 ರಂದು ನೋಟು ಅಮಾನ್ಯೀಕರಣ ನೀತಿಯ ಘೋಷಣೆ ನಂತರ ನಗದು ಹಣದ ಬಳಕೆ ನಿಯಂತ್ರಣ & ಡಿಜಿಟಲ್ ಸಾಧನಗಳ ಮೂಲಕ ನಗದು ವ್ಯವಹಾರ ಉತ್ತೇಜಿಸಲು ಅಗತ್ಯವಿರುವ ಕ್ರಮಗಳನ್ನು ಸೂಚಿಸುವಂತೆ ಈ ಸಮಿತಿಯನ್ನು ನೇಮಕ ಮಾಡಲಾಗಿತ್ತು.

+ ಈ ಸಮಿತಿ ವರದಿಯ ಪ್ರಕಾರ 50,000 ಕ್ಕಿಂತ ಹೆಚ್ಚು ನಗದು ಹಣದ ವ್ಯವಹಾರಗಳಿಗೆ ಬ್ಯಾಂಕ್ ವ್ಯವಹಾರ ತೆರಿಗೆಯನ್ನು ವಿಧಿಸುವುದು, ಅಧಿಕ ನಗದು ಹಣದ ವ್ಯವಹಾರಗಳ ಮೇಲೆ ಗರಿಷ್ಠ ಮಿತಿ ನಿರ್ಧಾರ, ಸರ್ಕಾರಗಳು ಡಿಜಿಟಲ್ ಪಾವತಿ ಸಾಧನಗಳ ಮೂಲಕ ಸರ್ಕಾರಿ ಯೋಜನೆಗಳ ಪಾವತಿಗಳನ್ನು ಫಲಾನುಭವಿಗಳಿಗೆ ನೀಡುವುದು, ಆಧಾರ್ ಕಾರ್ಡ್‌ನ್ನು ಬ್ಯಾಂಕ್ ವ್ಯವಹಾರಗಳಲ್ಲಿ ಕಡ್ಡಾಯಗೊಳಿಸುವುದು ಮುಖ್ಯ ಶಿಫಾರಸ್ಸುಗಳಾಗಿವೆ.

### ಎ.ಟಿ.ಎಂ - Automated Teller Machine (ATM)

ಇದನ್ನು ಸ್ಕಾಟಿಷ್ ದೇಶದ **ಜಾನ್ ಶೆಫರ್ಡ್ ಬರಾನ್**ರವರು 1967ರಲ್ಲಿ ಕಂಡುಹಿಡಿದರು. 1967 ರಲ್ಲಿ ಲಂಡನ್ ಬಳಿ ಬಾರ್ಕ್ಲೆಸ್ ಬ್ಯಾಂಕ್ ಮೊದಲ ಬಾರಿಗೆ ಎ.ಟಿ.ಎಂ. ಸ್ಥಾಪಿಸಿದ ಕೀರ್ತಿಗೆ ಪಾತ್ರವಾಗಿದೆ.

ಭಾರತದಲ್ಲಿ 1987 ರಲ್ಲಿ **ಹೆಚ್.ಎಸ್.ಬಿ.ಸಿ** (ಹಾಂಕಾಂಗ್ & ಶಾಂಘೈ ಬ್ಯಾಂಕಿಂಗ್ ಕಾರ್ಪೋರೇಷನ್) ಗೆ ಎ.ಟಿ.ಎಂ ಪರಿಕಲ್ಪನೆಯನ್ನು ಮೊದಲ ಬಾರಿಗೆ ಪರಿಚಯಿಸಿದ್ದು, ಮೊದಲ ಎ.ಟಿ.ಎಂ ಅನ್ನು **ಮುಂಬೈನಲ್ಲಿ** ಸ್ಥಾಪಿಸಿದ ಕೀರ್ತಿ ಸಲ್ಲುತ್ತದೆ.

ಪ್ರಸ್ತುತ ಭಾರತದಲ್ಲಿ ಹೆಚ್ಚು ಎ.ಟಿ.ಎಂ ಸ್ಥಾಪಿಸಿದ ಕೀರ್ತಿಗೆ ಎಸ್.ಬಿ.ಐ ಪಾತ್ರವಾಗಿದೆ.

ಭಾರತದಲ್ಲಿ ಅಂತರ ಬ್ಯಾಂಕ್ ಎ.ಟಿ.ಎಂ ಸೇವೆಗಳನ್ನು ಗರಿಷ್ಠ ಜನರಿಗೆ ಒದಗಿಸುವ ಉದ್ದೇಶದಿಂದ ಇರುವ ಸಂಪರ್ಕ ವ್ಯವಸ್ಥೆಯನ್ನು **ಭಾರತ ರಾಷ್ಟ್ರೀಯ ಪಾವತಿ ನಿಗಮ (ಎನ್.ಪಿ.ಸಿ.ಐ)** ದ ಮೂಲಕ ರಾಷ್ಟ್ರೀಯ ಹಣಕಾಸು ವ್ಯವಸ್ಥೆ (ಎನ್.ಎಫ್.ಎಸ್) ಕಾರ್ಯಾಚರಣೆ ನಡೆಸುತ್ತಿದೆ. ಇದು 2004 ಆಗಸ್ಟ್ 27 ರಂದು ಕಾರ್ಪೋರೇಷನ್ ಬ್ಯಾಂಕ್, ಬ್ಯಾಂಕ್ ಆಫ್ ಬರೋಡಾ & ಐಸಿಐಸಿಐ ಬ್ಯಾಂಕುಗಳ ಎ.ಟಿ.ಎಂ.ಗಳನ್ನು ಸಂಪರ್ಕಿಸುವುದರ ಮೂಲಕ ಕಾರ್ಯಾರಂಭ ಮಾಡಿತು. ಇದು ವಿದ್ಯುನ್ಮಾನ ವಾಣಿಜ್ಯ & ಅಂತರ ಬ್ಯಾಂಕು ಎ.ಟಿ.ಎಂ. ವ್ಯವಹಾರಗಳನ್ನು ವಿಸ್ತರಿಸುವ ಉದ್ದೇಶ ಹೊಂದಿದೆ.

ಭಾರತದ ಅತ್ಯಂತ ದೊಡ್ಡ ಎ.ಟಿ.ಎಂ. ಸೇವೆಗಳ ಸಂಪರ್ಕ ಜಾಲವನ್ನು ಕಲ್ಪಿಸುವ ವ್ಯವಸ್ಥೆ **ನ್ಯಾಷನಲ್ ಫೈನಾನ್ಸಿಯಲ್ ಸ್ವಿಚ್** ಆಗಿದೆ.

### ವಿದೇಶಿ ಬ್ಯಾಂಕ್‌ಗಳು Foreign Banks

ವಿದೇಶದಲ್ಲಿ ಸ್ಥಾಪಿತವಾಗಿದ್ದು, ಭಾರತದಲ್ಲಿ ಕಾರ್ಯನಿರ್ವಹಿಸುತ್ತಿವೆ. ಇಂತಹ ಬ್ಯಾಂಕ್‌ಗಳನ್ನು ವಿದೇಶಿ ಬ್ಯಾಂಕ್‌ಗಳು ಎಂದು ಕರೆಯುತ್ತೇವೆ. ಪ್ರಸ್ತುತವಾಗಿ ಭಾರತದಲ್ಲಿ 40 ವಿದೇಶಿ ಬ್ಯಾಂಕ್‌ಗಳು ಕಾರ್ಯನಿರ್ವಹಿಸುತ್ತಿವೆ. ಇವುಗಳು ಭಾರತದಲ್ಲಿ ತಮ್ಮ ಶಾಖೆಗಳನ್ನು ಹೊಂದಿದ್ದು, ಭಾರತ ದಲ್ಲಿ ವ್ಯವಹಾರವನ್ನು ನಡೆಸುತ್ತಿವೆ. ಅವುಗಳೆಂದರೆ -

1) ಎಚ್.ಎಸ್.ಬಿ.ಸಿ (ಯು.ಕೆ) 2) ಸಿಟಿ ಬ್ಯಾಂಕ್ (ನ್ಯೂಯಾರ್ಕ್) 3) ಯುಬಿ ಎಸ್(ಸ್ವಿರ್ಜಲ್ಯಾಂಡ್)
4) ಅಬುದುಬೈ ಕಮರ್ಷಿಯಲ್ ಬ್ಯಾಂಕ್ ಲಿ(ದುಬೈ)
5) ಸೋನಾಲಿ ಬ್ಯಾಂಕ್(ಬಾಂಗ್ಲಾದೇಶ)
6) ಸ್ಟಾಂಡರ್ಡ್ ಚಾರ್ಟೆಡ್ ಬ್ಯಾಂಕ್ (ಯುಕೆ)
7) ಡಿಬಿಎಸ್ ಬ್ಯಾಂಕ್(ಸಿಂಗಾಪೂರ)
8) ಬ್ಯಾಂಕ್ ಆಫ್ ಅಮೇರಿಕಾ(ಅಮೇರಿಕಾ)

### ಸ್ವಾಭಿಮಾನ್ ಯೋಜನೆ-2011ರ ಫೆಬ್ರವರಿ 10

ಭಾರತ ಸರ್ಕಾರವು ತಂತ್ರಜ್ಞಾನದ ಮೂಲಕ ಗ್ರಾಮೀಣ ಪ್ರದೇಶಗಳಲ್ಲಿ **ಶಾಖಾ ರಹಿತ ಬ್ಯಾಂಕಿಂಗ್ ವ್ಯವಸ್ಥೆ** ಒದಗಿಸುವ ಉದ್ದೇಶದಿಂದ ರೂಪಿಸಿದ ಯೋಜನೆ. ಇದನ್ನು ಕೇಂದ್ರ ಹಣಕಾಸು ಸಚಿವ ಪ್ರಣಬ್ ಮುಖರ್ಜಿ & ರಾಜ್ಯ ಹಣಕಾಸು ಸಚಿವರಾದ **ನಮೋನರೈನ್ ಮೀನಾ** ಅವರ ಉಪಸ್ಥಿತಿಯಲ್ಲಿ ಯು.ಪಿ.ಎ ಅಧ್ಯಕ್ಷೆ **ಶ್ರೀಮತಿ ಸೋನಿಯಾ ಗಾಂಧಿ** 2011 ಫೆಬ್ರವರಿ 10 ರಂದು ಉದ್ಘಾಟಿಸಿದರು.

## ಮೊಬೈಲ್ ಬ್ಯಾಂಕಿಂಗ್ (Mobile Banking) – ದೀಪಕ್ ಮೊಹಾಂತಿ ಸಮಿತಿ



+ ಬ್ಯಾಂಕಿಂಗ್ ಕಾರ್ಯನಿರ್ವಹಣೆ ಸುಧಾರಣೆಗೆ ಸಂಬಂಧಿಸಿದಂತೆ ಸಲಹೆ ನೀಡಲು ಆರ್.ಬಿ.ಐ ನ ಕಾರ್ಯನಿರ್ವಾಹಕ ನಿರ್ದೇಶಕ **ದೀಪಕ್ ಮೊಹಾಂತಿ** ನೇತೃತ್ವದಲ್ಲಿ ಸಮಿತಿಯನ್ನು ನೇಮಿಸಲಾಗಿದೆ.
+ ಸಮಿತಿಯು ಆರ್ಥಿಕ ಸೇರ್ಪಡೆಯತ್ತ ಮಧ್ಯಂತರ ಮಾರ್ಗ (Medium Term Path on Financial Inclusion) ಎಂಬ ತನ್ನ ವರದಿಯಲ್ಲಿ ತನ್ನ ಸಲಹೆಗಳನ್ನು ನೀಡಿದೆ.
+ ಈ ಸಮಿತಿಯನ್ನು ಜುಲೈ 15, 2015ರಂದು ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ ನೇಮಕ ಮಾಡಿತ್ತು. 14 ತಜ್ಞರನ್ನೊಳಗೊಂಡ ದೀಪಕ್ ಮೊಹಾಂತಿ ನೇತೃತ್ವದ ಸಮಿತಿಯು ಬ್ಯಾಂಕಿಂಗ್ ಹೊಂದಿಲ್ಲದ, ಜನಸಂಖ್ಯೆಗೆ ಆರ್ಥಿಕ ಸೇವೆ ಒದಗಿಸುವ ಬಗ್ಗೆ ಅಧ್ಯಯನ ನಡೆಸಿ, ಡಿಸೆಂಬರ್ 28, 2015 ರಂದು ವರದಿ ಸಲ್ಲಿಸಿದೆ.

### ಮೊಬೈಲ್ ಬ್ಯಾಂಕಿಂಗ್

+ ಮೊಬೈಲ್ ದೂರ ಸಂಪರ್ಕ ಸಾಧನದ ಮೂಲಕ ಬ್ಯಾಂಕಿಂಗ್ & ಹಣಕಾಸು ಸೇವೆಗಳನ್ನು ಒದಗಿಸುವ ಬ್ಯಾಂಕಿಂಗ್ ಸೌಲಭ್ಯವೇ ಮೊಬೈಲ್ ಬ್ಯಾಂಕಿಂಗ್. ಇದು ಮೊಬೈಲ್ ಹಣಕಾಸು ಮಾಹಿತಿ ಸೇವೆ, ಮೊಬೈಲ್ ಅಕೌಂಟಿಂಗ್, ಮೊಬೈಲ್ ಬ್ರೋಕರೇಜ್ ಸೇವೆಗಳನ್ನು ಒದಗಿಸುತ್ತದೆ.
+ ಇದು ಬ್ಯಾಂಕ್ ಖಾತೆಯ ಮಾಹಿತಿ, ಹಣ ವರ್ಗಾವಣೆ, ಹೂಡಿಕೆ, ಚೆಕ್ ಅಥವಾ ಎ.ಟಿ.ಎಂ. ಕಾರ್ಡು ಇನ್ನಿತರ ಮಾಹಿತಿ ಸೇವೆ & ಇತರೆ ಸಾಮಾನ್ಯಮಾಹಿತಿಗಳನ್ನು ದಿನದ 24 ಗಂಟೆಯೂ ಗ್ರಾಹಕರಿಗೆ ಒದಗಿಸುತ್ತದೆ.
+ ಇದು ಮೊಬೈಲ್ ಪಾವತಿ ವ್ಯವಸ್ಥೆಗಿಂತ ಭಿನ್ನವಾದ ಪರಿಕಲ್ಪನೆಯಾಗಿದೆ.

**ವರದಿಯಲ್ಲಿ ನೀಡಿರುವ ಪ್ರಮುಖ ಶಿಫಾರಸ್ಸುಗಳು** -

+ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಬ್ಯಾಂಕ್ ಖಾತೆ ಆರಂಭಿಸಲು ವಿಶೇಷ ಪ್ರಯತ್ನ ಮಾಡಬೇಕು.
+ ಎಲ್ಲರಿಗೂ ಅಭಿವೃದ್ಧಿಯ ಪ್ರಯೋಜನ ದೊರಕಲು ಮತ್ತು ಬ್ಯಾಂಕಿಂಗ್ ಸೌಲಭ್ಯ ಒದಗಿಸಲು (ಆರ್ಥಿಕ ಸೇರ್ಪಡೆ) ಮೊಬೈಲ್ ಬ್ಯಾಂಕಿಂಗ್ ತಂತ್ರಜ್ಞಾನಕ್ಕೆ ಹೆಚ್ಚಿನ ಗಮನ ನೀಡಲು ಸಲಹೆ ನೀಡಿದೆ.
+ ಕೃಷಿ ಸಾಲಗಳ ಮೇಲಿನ ಬಡ್ಡಿ ಸಬ್ಸಿಡಿಯನ್ನು ಕಡಿಮೆ ಮಾಡಲು ಸಲಹೆ ಮಾಡಿದೆ.
+ ಎಲ್ಲ ಬೆಳೆಗಳಿಗೆ ಏಕರೂಪದ ವಿಮೆ ಸೌಲಭ್ಯ ವಿಸ್ತರಿಸಲು ಸಲಹೆ ನೀಡಿದೆ.
+ ಬ್ಯಾಂಕಿಂಗ್ ಗ್ರಾಹಕರ ಜೊತೆಗಿನ ಪ್ರಕ್ರಿಯೆಗಳನ್ನು ಸರಳಗೊಳಿಸಲು ಸಲಹೆ ನೀಡಿದೆ.
+ ಡೆಬಿಟ್ ಮತ್ತು ಕ್ರೆಡಿಟ್ ಕಾರ್ಡ್ ಮೂಲಕ ನಡೆಯುವ ವಹಿವಾಟುಗಳ ಮೇಲೆ ಸರ್ಚಾರ್ಜ್ ವಿಧಿಸುವುದನ್ನು ಕೈ ಬಿಡಲು ಸಲಹೆ ನೀಡಿದೆ.
+ ಬ್ಯಾಂಕ್‌ಗಳಲ್ಲಿನ ವೈಯಕ್ತಿಕ ಸಾಲ ಖಾತೆಗಳಿಗೆ ಆಧಾರ ಸಂಖ್ಯೆ ಜೋಡಿಸಿ ವಿವರಗಳನ್ನು ಸಾಲ ಮಾಹಿತಿ ಸಂಸ್ಥೆಗಳ ಜತೆ ಹಂಚಿಕೊಳ್ಳುವುದರಿಂದ ಬ್ಯಾಂಕ್‌ಗಳ ಸಾಲ ವ್ಯವಸ್ಥೆಯ ಸ್ಥಿರತೆ ಹೆಚ್ಚುತ್ತದೆ.
+ ಗ್ರಾಮೀಣ ಮತ್ತು ಅರೆ ನಗರ ಪ್ರದೇಶಗಳಲ್ಲಿ ಸದ್ಯಕ್ಕೆ ಎಟಿಎಂಗಳ ಸಂಖ್ಯೆ ಕಡಿಮೆ ಇರುವುದರಿಂದ ಗ್ರಾಹಕರಿಗೆ ಹೆಚ್ಚಿನ ಸಂಖ್ಯೆಯ ಎಟಿಎಂ ಸೌಲಭ್ಯಗಳನ್ನು ವಿಸ್ತರಿಸಬೇಕು. ಈ ಉದ್ದೇಶಕ್ಕೆ ಆರ್ಥಿಕ ಸೇರ್ಪಡೆ ನಿಧಿ (ಎಫ್‌ಐಎಫ್) ಬಳಸಿಕೊಳ್ಳಬೇಕು ಎಂದು ಸಮಿತಿ ಶಿಫಾರಸ್ಸು ಮಾಡಿದೆ.
+ ಕಿರು ಹಣಕಾಸು ಸಂಸ್ಥೆಗಳಿಗೆ ಬ್ಯಾಂಕ್ ಸಾಲದ ಪ್ರಮಾಣ ಹೆಚ್ಚಬೇಕು. ಗ್ರಾಹಕರಿಂದ ದೂರುಗಳನ್ನು ನೇರವಾಗಿ ಪಡೆಯಲು ಬ್ಯಾಂಕಿಂಗ್ 'ಓಂಬುಡ್ಸ್‌ಮನ್' ರವರನ್ನು(ದೂರುಗಳ ತನಿಖಾಧಿಕಾರಿ) ಬ್ಯಾಂಕ್‌ಗಳ ಪ್ರಾದೇಶಿಕ ಕಛೇರಿಗಳಲ್ಲಿ ನೇಮಿಸಬೇಕು ಎಂದು ಸಮಿತಿ ಶಿಫಾರಸ್ಸು ಮಾಡಿದೆ.
+ ಕೃಷಿ ಸಾಲ ಸೌಲಭ್ಯವನ್ನು ಕೃಷಿ ಕ್ಷೇತ್ರದ ಎಲ್ ವಲಯಗಳಿಗೆ ವಿಸ್ತರಿಸಲು ಭೂದಾಖಲೆಗಳನ್ನು ಆದ್ಯತೆ ಮೇರೆಗೆ ಡಿಜಿಟಲೈಜೇಷನ್ ಮಾಡಬೇಕು.
+ ಕೆಲವು ಪ್ರದೇಶಗಳಲ್ಲಿ ಮೊಬೈಲ್ ಸಂಪರ್ಕ ಒದಗಿಸುವುದು ಆರ್ಥಿಕವಾಗಿ ಲಾಭದಾಯಕವಾಗಿರುವುದಿಲ್ಲ. ದೂರಸಂಪರ್ಕ ಸಂಸ್ಥೆಗಳು ಮತ್ತು ಸಾಮಾಜಿಕ ಹೊಣೆಗಾರಿಕೆ ನಿಧಿಗಳನ್ನು (ಸಿ.ಎಸ್.ಆರ್) ಮೊಬೈಲ್ ಸಂಪರ್ಕ ಒದಗಿಸಲು ಬಳಸಿದರೆ ಮೊಬೈಲ್ ಬ್ಯಾಂಕಿಂಗ್‌ನ ಚಿತ್ರಣ ಗಮನಾರ್ಹವಾಗಿ ಬದಲಾಗಲಿದೆ.
+ ಇಂತಹ ಬ್ಯಾಂಕಿಂಗ್ ಮೂಲ ಸೌಕರ್ಯ ಸಮಸ್ಯೆಗಳನ್ನು ಬಗೆಹರಿಸಲು ರಾಜ್ಯ ಮಟ್ಟದ ಬ್ಯಾಂಕ್ ಮುಖ್ಯಸ್ಥರ ಸಮಿತಿ ಸೂಕ್ತ ವೇದಿಕೆಯಾಗಿದೆ ಎಂದು ವರದಿಯಲ್ಲಿ ತಿಳಿಸಿದೆ.

# ಪ್ರಮುಖ ಬ್ಯಾಂಕಿಂಗ್ ಸೇವೆಗಳು (Major Banking Services)

+ **ಬ್ಯಾಂಕ್ ಡ್ರಾಫ್ಟ್ (Bank Draft) :-** ಇದು ಒಂದು ಸಾಂಪ್ರದಾಯಿಕ ಚೆಕ್ ಆಗಿದ್ದು, ಬೇಡಿಕೆಯನ್ನಿರಿಸಿದಾಗ ಪಾವತಿಸಬೇಕಾದ ಒಂದು ಬ್ಯಾಂಕ್‌ನಿಂದ ಇನ್ನೊಂದು ಬ್ಯಾಂಕ್‌ಗೆ ಬರೆಯಲಾದ ವಿನಿಮಯ ಹುಂಡಿ.
+ **ಬ್ಯಾಂಕರ್ಸ್ ಚೆಕ್/ಪೇ ಆರ್ಡರ್ (Bankers Cheque):-** ಇದೊಂದು ನೆಗೋಷಿಯೇಬಲ್ ಇನ್ಸ್ಟ್ರುಮೆಂಟ್ ಆಗಿದ್ದು, ಈ ಸಾಧನವನ್ನು ಹೊಂದಿದವರಿಗೆ ತಿಳಿಸಲಾದ ಮೊತ್ತದ ಹಣವನ್ನು ನೀಡುವಂತೆ ಬರೆಯಲಾದ ಒಂದು ಆದೇಶ.
+ **R.T.G.S (Real Time Gross Settlement):-** ಹಣದ ವರ್ಗಾವಣೆ ಯಾವುದೇ ನಿರ್ಬಂಧವಿಲ್ಲದೆ ನೀಡಿದ ಸೂಚನೆಗನುಗುಣವಾಗಿ ನಿರಂತರವಾಗಿ ನಡೆಯುವ ಒಂದು ಹಣ ಪಾವತಿ ಪ್ರಕ್ರಿಯೆ.
+ **NEFT - National Electronic Funds Transfer:-** ವಿದ್ಯುನ್ಮಾನ ಹಣ ವರ್ಗಾವಣೆಯ ವಿಧಾನವಾಗಿದ್ದು, ಒಂದು ನಿರ್ಧಿಷ್ಟ ಕಾಲಮಿತಿಯೊಳಗೆ ವಹಿವಾಟನ್ನು ನಡೆಸುವ ವ್ಯವಸ್ಥೆ.
+ **ಬ್ಯಾಂಕ್ ಓವರ್ ಡ್ರಾಫ್ಟ್/ಮೀರೆಳೆತ ಸೌಲಭ್ಯ (Bank over Draft):-** ಚಾಲ್ತಿ ಖಾತೆದಾರನು ತನ್ನ ಖಾತೆಯಲ್ಲಿರುವ ಹಣಕ್ಕಿಂತ ಹೆಚ್ಚಿನ ಹಣವನ್ನು ಹಿಂತೆಗೆಯಲು ಬ್ಯಾಂಕ್ ಕಲ್ಪಿಸಿರುವ ಸೌಲಭ್ಯ.
+ **ನಗದು ಉದ್ದರಿ ಸಾಲ (Cash Credit):-** ಒಂದು ನಿರ್ಧಿಷ್ಟಪಡಿಸಿದ ಮಿತಿವರೆಗೆ ನಗದು ಉದ್ದರಿ ಖಾತೆಯಿಂದ ಒಬ್ಬ ವ್ಯಕ್ತಿ ಪಡೆಯಬಹುದಾದ ಸಾಲ.
+ **ಎಸ್.ಎಂ.ಎಸ್ ಅಲರ್ಟ್ಸ್ (SMS alerts):-** ಬ್ಯಾಂಕ್‌ಗಳು ಗ್ರಾಹಕರಿಗೆ ತನ್ನ ಖಾತೆಗೆ ಸಂಬಂಧಿಸಿದ ವ್ಯವಹಾರಗಳ ಮಾಹಿತಿಯನ್ನು ಮೊಬೈಲ್ ಸಂದೇಶದ ರೂಪದಲ್ಲಿ ನೀಡುವ ವ್ಯವಸ್ಥೆ.
+ **M.I.C.R – Magnetic Inc Character Recongnision:-** ಚೆಕ್‌ಗಳನ್ನು ಶೀಘ್ರವಾಗಿ ವಿಲೇವಾರಿ ಮಾಡಲು ಬ್ಯಾಂಕುಗಳು ಉಪಯೋಗಿಸುವ ಸಂಕೇತ ಗುರುತಿಸುವ ತಂತ್ರಜ್ಞಾನ.
+ **I.F.S.C – Indian Finacial System Code:-** ಭಾರತದ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಪ್ರತಿಯೊಂದು ಬ್ಯಾಂಕಿನ ಶಾಖೆಗಳನ್ನು ಗುರುತಿಸಲು ಆರ್.ಬಿ.ಐ ಬ್ಯಾಂಕ್‌ಗಳಿಗೆ ನೀಡಿರುವ 11 ಅಂಕಿಗಳ ಸಂಕೇತವಾಗಿದೆ.

## ವಿದ್ಯುನ್ಮಾನ ಬ್ಯಾಂಕಿಂಗ್ ವ್ಯವಸ್ಥೆ (e- Banking)

+ ಅಂತರ್ಜಾಲದ ಮೂಲಕ ಬ್ಯಾಂಕುಗಳ ಗ್ರಾಹಕರು ಹಣ ರವಾನೆ, ಬಳಕೆ ವಸ್ತುಗಳ ಖರೀದಿಯ ಜೊ ಖಾತೆಯಲ್ಲಿರುವ ಉಳಿಕೆ ಮೊತ್ತದ ವಿವರಗಳ ತಿಳಿದುಕೊಳ್ಳುವ ವಿನೂತನ ಸೌಲಭ್ಯ.

**ಈ ವ್ಯವಸ್ಥೆಯಲ್ಲಿ ಲಭ್ಯವಿರುವ ಸೌಲಭ್ಯಗಳು:-**

+ 365X24X7 ಬ್ಯಾಂಕಿನ ಸೌಲಭ್ಯಗಳ ಪೂರೈಸುವುದು.
+ ಬ್ಯಾಂಕ್ ತನ್ನ ಗ್ರಾಹಕರಿಗೆ ಕೆಲವೊಂ ವಹಿವಾಟುಗಳನ್ನು ಮೊಬೈಲ್ ಮೂಲಕ ನಡೆಸು ಸೌಲಭ್ಯ.
+ ಆರ್ಥಿಕ ಶಿಸ್ತು ಬದ್ಧತೆ ಕಾಪಾಡುವುದು
+ ಬ್ಯಾಂಕ್‌ಗಳ ನಡುವೆ ಆರೋಗ್ಯಕರ ಸ್ಪರ್ಧೆ ಏರ್ಪಡಿಸುತ್ತದೆ.
+ ಗ್ರಾಹಕರು ನಗದಿನೊಂದಿಗೆ ಪ್ರಯಾಣಿಸು ವ್ಯವಸ್ಥೆಯಲ್ಲಿ ಉಂಟಾಗಬಹುದಾದ ಅನಾಹುತಗಳ ತಪ್ಪಿಸುತ್ತದೆ.

## ಕೋರ್ ಬ್ಯಾಂಕಿಂಗ್ (Core Banking):-

+ ಬ್ಯಾಂಕ್ ನ ಪ್ರಮುಖ ಸೇವೆಗಳನ್ನು ಗ್ರಾಹಕ ಸಂಪರ್ಕ ಜಾಲದಿಂದ ಬೇಕಾದ ಸ್ಥಳದಲ್ಲಿ ಬೇಕಾ ಸಮಯದಲ್ಲಿ ಒದಗಿಸುವ ವ್ಯವಸ್ಥೆಯೇ ಕೋ ಬ್ಯಾಂಕಿಂಗ್.
+ 24/7 ತತ್ವದಡಿಯಲ್ಲಿ ಗ್ರಾಹಕನಿಗೆ ಎಲ್ಲಾ ಬ್ಯಾಂಕಿಂ ವ್ಯವಹಾರವನ್ನು ಅಂತರ್ಜಾಲ ಆಧಾರಿತ ಎ.ಟಿ.ಎಂ., ಟೆಲಿ ಬ್ಯಾಂಕಿಂಗ್, ಮೊಬೈಲ್ ಬ್ಯಾಂಕಿಂ ಮುಂತಾದ ಸೇವೆಗಳನ್ನು ಪೂರೈಸುತ್ತದೆ.
+ ಗ್ರಾಹಕರ ವಹಿವಾಟುಗಳನ್ನು ಗಣಕಯಂತ್ರದ ಮೂ ನಿರ್ಧರಿಸುವ, ಚೆಕ್ ನೀಡಿದವರ ಖಾತೆಯಿಂ ಗ್ರಾಹಕನ ಖಾತೆಗೆ ತಕ್ಷಣವೇ ಹಣ ರವಾನೆ ಮಾಡು ಸೌಲಭ್ಯವೂ ಇದೆ.
+ ಒಂದು ಬ್ಯಾಂಕ್‌ನ ಎಲ್ಲಾ ಶಾಖೆಗಳ ವ್ಯವಹಾರವ ವಿಶಾಲ ಪ್ರದೇಶ ಜಾಲ (WAN) ಮೂಲಕ ಸಂಪರ್ಕ ಕಲ್ಪಿಸಿ, ಗ್ರಾಹಕರಿಗೆ ಶೀಘ್ರ ಬ್ಯಾಂಕಿಂಗ್ ಸೇ ಒದಗಿಸುತ್ತದೆ.
+ **ಪ್ರಮುಖ ಸೇವೆಗಳು:-** ಬ್ಯಾಂಕುಗಳಲ್ಲಿ ವ್ಯವಹಾ ದಾಖಲೆ, ಪಾಸ್‌ಬುಕ್ ನಿರ್ವಹಣೆ, ಸಾಲ ತೇವಣಿಗಳ ಮೇಲೆ ಬಡ್ಡಿ ಲೆಕ್ಕಾಚಾರ, ಗ್ರಾಹ ದಾಖಲೆಗಳು, ಬ್ಯಾಂಕುಗಳ ದಕ್ಷತೆ ಸೇರಿಳವಾಗಿದೆ.

**ವಣಿಕ ಬ್ಯಾಂಕಿಂಗ್ ಸೇವೆ (Merchant Banking):-**

+ ಉದ್ಯಮ ಘಟಕಗಳಿಗೆ ಸಾಲದ ವ್ಯವಸ್ಥೆಗೆ ಬದಲಾಗಿ ಷೇರು ಮಾಲೀಕತ್ವದ ರೂಪದಲ್ಲಿ ಬಂಡವಾಳವನ್ನು ಪೂರೈಸುವ ಹಣಕಾಸು ಸಂಸ್ಥೆಯಾಗಿದೆ. ಇದು ಕಾರ್ಪೋರೇಟ್ ಉದ್ಯಮಗಳಿಗೆ ಬಂಡವಾಳ ಹೂಡಿಕೆ ಬಗ್ಗೆ ಸಲಹೆ ಕೊಡುವ ಕಾರ್ಯವನ್ನು ನಿರ್ವಹಿಸುತ್ತದೆ.
+ ಗ್ರೇಟ್‌ಬ್ರಿಟನ್ನಿನಲ್ಲಿ ಐತಿಹಾಸಿಕವಾಗಿ ಇದನ್ನು **ಹೂಡಿಕೆ ಬ್ಯಾಂಕ್** ಎಂದು ಕರೆಯುತ್ತಾರೆ.

**ಹೂಡಿಕೆ ಬ್ಯಾಂಕಿಂಗ್ (Investment Banking):-**

+ ವ್ಯಕ್ತಿ, ನಿಗಮ & ಸರ್ಕಾರಗಳಿಗೆ ಅಗತ್ಯವಿರುವ ಹಣಕಾಸು ಸೇವೆಯನ್ನು ಒದಗಿಸುವ ಖಾಸಗಿ ಬ್ಯಾಂಕಿಂಗ್ ವ್ಯವಸ್ಥೆ.
+ ಇದರ ಮೂಲಕ ಹಣಕಾಸು ಬಂಡವಾಳ, ಸೆಕ್ಯೂರಿಟಿಗಳ ಬಗ್ಗೆ ಮಾಹಿತಿ, ವಿಲೀನ & ಸ್ವಾಧೀನಪಡಿಸಿಕೊಳ್ಳುವಿಕೆ, ಈಕ್ವಿಟಿ ಸೆಕ್ಯೂರಿಟಿ, ಡಿರೈವೇಟಿವ್, ಮಾರುಕಟ್ಟೆ ವ್ಯವಸ್ಥೆಯ ಬಗ್ಗೆ ಸೇವೆಗಳನ್ನು ಪೂರೈಸುತ್ತದೆ.

**ಮೊಬೈಲ್ ಬ್ಯಾಂಕಿಂಗ್ ( Mobile Banking):-:-**

+ ಇ-ಬ್ಯಾಂಕಿಂಗ್ ವ್ಯವಹಾರಗಳನ್ನು ಸಂಚಾರಿ ದೂರವಾಣಿಗಳ ಮೂಲಕ ಒದಗಿಸುವ ವ್ಯವಸ್ಥೆ.
+ ಖಾತೆಯ ಮೊತ್ತದ ವಿವರ, ನಿಗದಿತ ಮಿತಿಯ ವ್ಯವಹಾರಗಳ ಬಗ್ಗೆ ತಿಳಿಯಲು ಸಹಾಯಕವಾಗಿದೆ.

**ಟೆಲಿ ಬ್ಯಾಂಕಿಂಗ್ (Tele-Banking):-**

+ ದೂರವಾಣಿ ಮುಖಾಂತರ 365X24X7 ಗ್ರಾಹಕರಿಗೆ ಒದಗಿಸುವ ಬ್ಯಾಂಕಿಂಗ್ ಸೇವೆ.
+ ಖಾತೆದಾರ ತನ್ನ ಪರ್ಸನಲ್ ಆಕ್ಸೆಸ್ ಕೋಡ್ ಉಪಯೋಗಿಸಿ ಪಾಸ್‌ವರ್ಡ್ ಮೂಲಕ ಪಾವತಿ, ಸಾಲದ ವಿವರಣೆ, ಹಣ ವರ್ಗಾವಣೆ, ಖಾತೆಯ ವಿವರಗಳ ಬಗ್ಗೆ ತಿಳಿಯಲು ಸಹಾಯಕ.

**ವಿದ್ಯುನ್ಮಾನ ಹಣ ವರ್ಗಾವಣೆ (Electronic Fund Transfer):-**

+ ವಿದ್ಯುನ್ಮಾನ ಮಾಧ್ಯಮಗಳ ಮೂಲಕ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ, ಒಂದು ಖಾತೆಯಿಂದ ಇನ್ನೊಂದು ಖಾತೆಗೆ ಹಣವನ್ನು ವರ್ಗಾಯಿಸುವ ತಾಂತ್ರಿಕ ವ್ಯವಸ್ಥೆ
+ ಅಂತರ್ಜಾಲ ಸೇವೆಯ ಮೂಲಕ ಕಡಿಮೆ ಸಮಯದಲ್ಲಿ ಕಡಿಮೆ ಖರ್ಚಿನಲ್ಲಿ ಹಣ ರವಾನೆ ಮಾಡುವ ವ್ಯವಸ್ಥೆ

**ಡೆಬಿಟ್ ಕಾರ್ಡ್ (Debit Cards):-**

+ ಇದೊಂದು ಪ್ಲಾಸ್ಟಿಕ್ ಕಾರ್ಡ್ ಆಗಿದ್ದು, ಬ್ಯಾಂಕ್ ಖಾತೆಯಿಂದ ಸಂಬಂಧಿಸಿದ ವೆಚ್ಚವನ್ನು ವ್ಯಾಪಾರಿ ಮಳಿಗೆಗಳಲ್ಲಿ ಪಾವತಿಸಲು ಅವಕಾಶ ಕಲ್ಪಿಸುತ್ತದೆ.

**ಕ್ರೆಡಿಟ್ ಕಾರ್ಡ್ (Credit Cards):-**

+ ವಸ್ತುಗಳ ಖರೀದಿ ವ್ಯವಹಾರಗಳಲ್ಲಿ ಹಣ ಪಾವತಿಗಾಗಿ ಉಪಯೋಗಿಸಲ್ಪಡುವ ಪ್ಲಾಸ್ಟಿಕ್ ಹಣದ ಮತ್ತೊಂದು ಸ್ವರೂಪವೇ ಕ್ರೆಡಿಟ್ ಕಾರ್ಡ್.
+ ಈಗ ಖರೀದಿಸಿ ನಂತರ ಪಾವತಿಸಿ, ತತ್ವದ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿದೆ.

**ಬ್ಯಾಂಕಿಂಗ್ ಓಂಬುಡ್ಸ್‌ಮನ್ (Banking Ombudsman)**

+ ಆರ್.ಬಿ.ಐ 1995 ಜೂನ್ 14 ರಂದು ದೇಶದಾದ್ಯಂತ ಈ ಸೇವೆಯನ್ನು ಜಾರಿಗೆ ತಂದಿದ್ದು, ಬ್ಯಾಂಕ್‌ಗಳ ಗ್ರಾಹಕರ ದೂರುಗಳನ್ನು ಪರಿಹರಿಸುವ ಮುಖ್ಯ ಉದ್ದೇಶ ಹೊಂದಿದೆ. ದೇಶದ ಪ್ರಮುಖ 15 ಪ್ರದೇಶಗಳಲ್ಲಿ ಈ ಯೋಜನೆಯನ್ನು ಆರಂಭಿಸಿದ್ದು, ಎಲ್ಲಾ ಪರಿಶಿಷ್ಟ ವಾಣಿಜ್ಯ ಬ್ಯಾಂಕುಗಳು, ಪ್ರಾಥಮಿಕ ಸಹಕಾರಿ ಸಂಘಗಳು ಈ ಯೋಜನಾ ವ್ಯಾಪ್ತಿಗೆ ಒಳಪಟ್ಟಿದ್ದು, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಯೋಜನೆಯಿಂದ ಹೊರಗುಳಿದಿವೆ.
+ 2009 ಫೆಬ್ರವರಿ 3 ರಂದು ಆರ್.ಬಿ.ಐ ಈ ಯೋಜನೆಯನ್ನು ಪರಿಷ್ಕರಿಸಿದ್ದು, ಬ್ಯಾಂಕುಗಳ ದೂರುಗಳನ್ನು ಶೀಘ್ರವಾಗಿ ಪರಿಹರಿಸಲು ಬೇಕಾದ ಸೂಕ್ತ ಕ್ರಮಗಳನ್ನು ಕೈಗೊಳ್ಳುವಂತೆ ಸೂಚಿಸಿದೆ.

**ಸುವರ್ಣ ಹಸ್ತ ಲಾಘವ ಯೋಜನೆ (Golden Hand Shake Scheme):-**

+ 1991 ರ ಕೈಗಾರಿಕಾ ನೀತಿ ಅನ್ವಯ ಸಾರ್ವಜನಿಕ ವಲಯದ ಉದ್ದಿಮೆಗಳ ಮೇಲೆ ನೌಕರರ ಒತ್ತಡವನ್ನು ನಿಯಂತ್ರಿಸಲು ಭಾರತ ಸರ್ಕಾರ **ಸ್ವಯಂ ನಿವೃತ್ತಿ ಘೋಷಣೆ** (VRS) ಯೋಜನೆಯಾಗಿದೆ. ಇದು ಸ್ವಯಂನಿವೃತ್ತಿ, ಖುದ್ದ್ ರಜೆ, ಇನ್ನಿತರ ಕಾರಣಗಳಿಂದ ಕೆಲಸ ಕಳೆದುಕೊಂಡ ಸಂದರ್ಭದಲ್ಲಿ ನೀಡುವ ಗಮನಾರ್ಹ ಪ್ಯಾಕೇಜು ಯೋಜನೆಯಾಗಿದೆ.

**ಓಪನ್ ಸ್ಕೈ ಯೋಜನೆ (Open Sky Scheme):-**

+ ಭಾರತ ಸರ್ಕಾರ ಈ ಯೋಜನೆಯನ್ನು ರಫ್ತುಗಳನ್ನು ಉತ್ತೇಜಿಸಲು **ವಾಯು ಸಾರಿಗೆ** ವಲಯದಲ್ಲಿ ರೂಪಿಸಿತು. ಈ ಯೋಜನೆ ಅನ್ವಯ ದೇಶೀಯ & ವಿದೇಶಿ ವಾಯು ಸಾರಿಗೆ ವ್ಯವಸ್ಥೆಯಲ್ಲಿ ರಫ್ತು ಒಕ್ಕೂಟ ಅಥವಾ ಖಾಸಗಿ ರಫ್ತುದಾರರು, ಸರಕುಗಳನ್ನು ರಫ್ತು ಮಾಡಲು ಅವಕಾಶ ಕಲ್ಪಿಸಿತು. 2016 ರ **ರಾಷ್ಟ್ರೀಯ ನಾಗರಿಕ ವಾಯುಯಾನ** ನೀತಿಯಡಿ ... (ಸಮುದ್ರದಿಂದ 5,000 ಕಿ.ಮೀ ದೂರ) ಅನ್ವಯ

## ಬ್ಯಾಸೆಲ್ - I II III (Basel - I II III)

- ಬ್ಯಾಂಕುಗಳ ಅಗತ್ಯಕ್ಕನುಗುಣವಾಗಿ ದ್ರವ್ಯತೆಯನ್ನು ಹೆಚ್ಚಿಸಿ, & ಬ್ಯಾಂಕುಗಳ ಮೇಲಿನ ಹತೋಟಿಯನ್ನು ಕಟ್ಟುಗೊಳಿಸಿ, ಸಾಮರ್ಥ್ಯತೆಯನ್ನು ವಿಸ್ತರಿಸುವುದೇ ಬ್ಯಾಸೆಲ್‌ನ ಉದ್ದೇಶವಾಗಿದೆ.
- ಇದು ವಿಶ್ವದಾದ್ಯಂತ ಬ್ಯಾಂಕಿಂಗ್ ವ್ಯವಹಾರಗಳ ಗುಣಮಟ್ಟವನ್ನು ಉತ್ತಮಪಡಿಸುವ ಉದ್ದೇಶದಿಂದ 1974 ರಲ್ಲಿ 10 ರಾಷ್ಟ್ರಗಳ ಕೇಂದ್ರ ಬ್ಯಾಂಕು ಗೌರ್ನರ್ ನೇತೃತ್ವದ **ಬ್ಯಾಸೆಲ್ ಕಮಿಟಿ ಆನ್ ಬ್ಯಾಂಕಿಂಗ್ ಸೂಪರ್ ವಿಷನ್** ನೇಮಿಸಿದೆ. Bureau of Bank for International Settlements ಸಚಿವಾಲಯವು ಸ್ವಿಟ್ಜರ್ಲೆಂಡ್‌ನ ಬ್ಯಾಸೆಲ್ ನಲ್ಲಿದೆ.
- **ಬ್ಯಾಸೆಲ್-1:-** 1988 ರಲ್ಲಿ ಬ್ಯಾಸೆಲ್ ಬಂಡವಾಳ ನಿರ್ವಹಣಾ ವ್ಯವಸ್ಥೆಯನ್ನು ಜಾರಿಗೆ ತಂದಿದ್ದು, ಇದನ್ನು ಬ್ಯಾಸೆಲ್-I ಎನ್ನುತ್ತಾರೆ.
- ಭಾರತ ಈ ಬ್ಯಾಸೆಲ್-I ಮಾರ್ಗದರ್ಶಿ ಸೂತ್ರಗಳನ್ನು 1999 ರಲ್ಲಿ ಅಳವಡಿಸಿಕೊಂಡಿತು. ಬ್ಯಾಂಕುಗಳ ಕನಿಷ್ಠ ಬಂಡವಾಳ ಅಗತ್ಯತೆಯನ್ನು ಇದು ನಿರ್ಧರಿಸಿತು.
- **ಬ್ಯಾಸೆಲ್-2:-** 2004 ರಲ್ಲಿ ಸಮಿತಿ ನೀಡಿದ ನಿಯಮಗಳಾದ ಶೇ 8 ರಷ್ಟು ಕನಿಷ್ಠ ಬಂಡವಾಳ ಅಗತ್ಯತೆ, ಗಂಡಾಂತರ ನಿರ್ವಹಣಾ ತಂತ್ರಗಳು ಮುಂತಾದವುಗಳನ್ನು ಭಾರತವು ಅಳವಡಿಸಿಕೊಂಡಿದೆ.
- **ಬ್ಯಾಸೆಲ್-3:-** 2010 ರಲ್ಲಿ ವಿಶ್ವ ಮಟ್ಟದಲ್ಲಿ ಬ್ಯಾಸೆಲ್ ಮಾರ್ಗದರ್ಶಿ ಸೂತ್ರಗಳನ್ನು 2008 ರ ಜಾಗತಿಕ ಹಣಕಾಸು ಹಿಂಜರಿತದ ನಂತರ ರೂಪಿಸಲಾಯಿತು. ಇದಕ್ಕೆ ಮುಖ್ಯ ಕಾರಣವಾದ ಬ್ಯಾಂಕ್ ಲೆಹಮಾನ್ ಬ್ರದರ್ಸ್
- ಭಾರತದಲ್ಲಿ ಆರ್.ಬಿ.ಐ ಬ್ಯಾಸೆಲ್-3 ಮಾನದಂಡಗಳನ್ನು 2013 ರ ಜನವರಿ 1 ರಂದು ಕಾರ್ಯ ರೂಪಕ್ಕೆ ತಂದಿದ್ದು, 2018 ರ ಮಾರ್ಚ್ 31 ರ ವೇಳೆಗೆ ಸಂಪೂರ್ಣವಾಗಿ ಅನುಷ್ಠಾನಕ್ಕೆ ತರುವ ಉದ್ದೇಶ ಹೊಂದಿದೆ. ಹಾಗೂ 2019 ಮಾರ್ಚ್ 31 ಕ್ಕೆ ವಿಸ್ತರಿಸಬಹುದಾಗಿದೆ.
- **ಬ್ಯಾಸೆಲ್-3 ನ ಮುಖ್ಯ ನಿಯಮಗಳೆಂದರೆ** – ಗಂಡಾಂತರ ಆಸ್ತಿಗಳ ವಿರುದ್ಧ ಕನಿಷ್ಠ ಶೇ 7 ರ ಮೂಲ ಬಂಡವಾಳವನ್ನು ಬ್ಯಾಂಕುಗಳು ಹೊಂದಿರುವುದು, ಒಟ್ಟು ಬಂಡವಾಳ ಅನುಪಾತವು ಶೇ 9 ರಷ್ಟು ಹೊಂದಿರುವುದು.

## ಡಿಜಿಟಲ್ ಹಳ್ಳಿ - ವಿಜಯಾ ಬ್ಯಾಂಕ್

- ಭಾರತದ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಒಂದಾದ ವಿಜಯಾ ಬ್ಯಾಂಕ್ ಕರ್ನಾಟಕದ ಬೆಂಗಳೂರಿನಲ್ಲಿ ತನ್ನ ಕಾರ್ಪೊರೇಟ್ ಕಛೇರಿಯನ್ನು ಹೊಂದಿದೆ. 1931 ಅಕ್ಟೋಬರ್ 23 ರಂದು ಮಂಗಳೂರಿನಲ್ಲಿ ಎ. ಬಾಲಕೃಷ್ಣ ಶೆಟ್ಟಿ ಅವರಿಂದ ವಿಜಯದಶಮಿ ಹಬ್ಬದ ದಿನದಂದು ಸ್ಥಾಪಿಸಲಾಯಿತು. ಆದ್ದರಿಂದ ಈ ಬ್ಯಾಂಕಿಗೆ ವಿಜಯಾ ಬ್ಯಾಂಕ್ ಎಂದು ಕರೆಯಲಾಗುತ್ತದೆ.
- 1958 ರಲ್ಲಿ ಆರ್.ಬಿ.ಐ ನ ಶೆಡ್ಯೂಲ್ಡ್ ಬ್ಯಾಂಕ್ ಆಗಿ ಸೇರ್ಪಡೆಗೊಂಡಿತು. 1980 ಏಪ್ರಿಲ್ 15 ರಂದು 6 ಬ್ಯಾಂಕ್‌ಗಳ ರಾಷ್ಟ್ರೀಕರಣ ಸಂದರ್ಭದಲ್ಲಿ ಈ ಬ್ಯಾಂಕ್ ರಾಷ್ಟ್ರೀಕರಣಗೊಂಡಿತು.
- 2017 ಜೂನ್ 6 ರ ಅಂಕಿ ಅಂಶದ ಪ್ರಕಾರ ಗ್ರಾಮೀಣ ಭಾಗದ ಜನಸಂಖ್ಯೆಗೆ ಡಿಜಿಟಲ್ ಬ್ಯಾಂಕಿಂಗ್ ವ್ಯವಹಾರವನ್ನು ಉತ್ತೇಜಿಸಿದ ದೇಶದ **ಮೊದಲ ಸಾರ್ವಜನಿಕ ವಲಯದ ಬ್ಯಾಂಕ್** ಎಂಬ ಕೀರ್ತಿಗೆ ಈ ಬ್ಯಾಂಕ್ ಪಾತ್ರವಾಗಿದೆ.
- ಈಗಾಗಲೇ 5 ಹಳ್ಳಿಗಳನ್ನು ಡಿಜಿಟಲ್ ಹಳ್ಳಿಗಳಾಗಿ ಮಾರ್ಪಡಿಸಿರುವ ವಿಜಯಾ ಬ್ಯಾಂಕ್ ಮುಂದಿನ ದಿನಗಳಲ್ಲಿ ಈ ಸಂಖ್ಯೆಯನ್ನು 100 ಕ್ಕೆ ಹೆಚ್ಚಿಸುವ ಉದ್ದೇಶ ಹೊಂದಿದೆ.

**ಡಿಜಿಟಲ್ ಹಳ್ಳಿಯ ವಿಶೇಷತೆಗಳು:-**

- ಉಚಿತ ವೈ-ಫೈ ಸಂಪರ್ಕ. ಅಂತರ್ಜಾಲ ಮೊಬೈಲ್ ಪಾವತಿ ಸೌಲಭ್ಯ, ಎ.ಟಿ.ಎಂ ಕಾರ್ಡ್, ಆನ್‌ಲೈನ್ ಬ್ಯಾಂಕಿಂಗ್, ಬಾಗಿಲಿನಿಂದ ಬಾಗಿಲಿಗೆ ಬ್ಯಾಂಕ್ ಸೇವೆ ಒದಗಿಸುವುದು

## ವಿಶ್ವ ಬ್ಯಾಂಕ್‌ನ ಜಾಗತಿಕ ಆರ್ಥಿಕ ಪ್ರವೃತ್ತಿ (Global Economic Prospects - World Bank)

ವಿಶ್ವ ಬ್ಯಾಂಕ್ ಜಗತ್ತಿನ ಪ್ರಮುಖ ರಾಷ್ಟ್ರಗಳಾದ ಭಾರತ & ಚೀನಾ ಹಾಗೂ ಜಗತ್ತಿನ ಆರ್ಥಿಕತೆಗಳ ಬೆಳವಣಿಗೆ ದರವನ್ನು, 2017 ಜೂನ್ ವೇಳೆಗೆ ಈ ಕೆಳಗಿನ ಶೇಕಡಾ ಪ್ರಮಾಣದಲ್ಲಿ ಅಂದಾಜಿಸಿದೆ.

| ರಾಷ್ಟ್ರ | 2016 | 2017 | 2018 |
|---|---|---|---|
| ಭಾರತ | 6.8 | 7.2 | 7.5 |
| ಚೀನಾ | 6.7 | 6.5 | 6.3 |
| ವಿಶ್ವ | 2.4 | 2.7 | 2.9 |

# ಭಾರತದ ರಿಸರ್ವ್ ಬ್ಯಾಂಕ್
# Reserve Bank of India

'ಬ್ಯಾಂಕರ್ಸ್ ಬ್ಯಾಂಕ್' ಎಂದೇ ಖ್ಯಾತವಾದ ದೇಶದ ಹಣಕಾಸು ನೀತಿಯನ್ನು ರೂಪಿಸಿ, ಹಣಕಾಸು ವ್ಯವಸ್ಥೆಯನ್ನು ನಿಯಂತ್ರಿಸುವ ದೇಶದ ಅತ್ಯುನ್ನತ ಹಣಕಾಸು ಪ್ರಾಧಿಕಾರ. ಬಹು ಉದ್ದೇಶಿತ ಹಣಕಾಸಿನ ವ್ಯವಹಾರವನ್ನು ನಿರ್ವಹಿಸುವ ಆರ್.ಬಿ.ಐ ಭಾರತದ ಅರ್ಥ ವ್ಯವಸ್ಥೆಗೆ ನೇರವಾದ ಪರಿಣಾಮ ಬೀರುತ್ತದೆ. ಆರ್.ಬಿ.ಐ ನೋಟುಗಳ ಮುದ್ರಣ ಮಾತ್ರವಲ್ಲದೇ ಸ್ಮರಣಾರ್ಥ ನಾಣ್ಯ ಬಿಡುಗಡೆ, ಹಣದುಬ್ಬರ ನಿಯಂತ್ರಣ & ಆರ್ಥಿಕ ಸ್ಥಿರತೆಯನ್ನು ತರುವ ಉದ್ದೇಶದಿಂದ ಪರಿಮಾಣಾತ್ಮಕ & ಗುಣಾತ್ಮಕ ಸಾಧನಗಳಾದ ಬ್ಯಾಂಕುದರ, ಸಿ.ಆರ್.ಆರ್., ಎಸ್.ಎಲ್.ಆರ್, ರೆಪೋ, ರಿವರ್ಸ್ ರೆಪೋ ದರಗಳನ್ನು ತ್ರೈ ಮಾಸಿಕವಾಗಿ ಪರಿಷ್ಕರಣೆ ಮಾಡುವ ಒಂದು ಸಂಸ್ಥೆಯೇ ಆರ್.ಬಿ.ಐ.

- ಭಾರತೀಯ ರಿಸರ್ವ್ ಬ್ಯಾಂಕ್ ಮೊದಲ ಮಹಾಯುದ್ಧದ ನಂತರ ದೇಶದಲ್ಲಿ ಸಂಭವಿಸಿದ ಆರ್ಥಿಕ ಸಮಸ್ಯೆಗಳನ್ನು ಬಗೆಹರಿಸಲು ಸ್ಥಾಪನೆಯಾದ ಕೇಂದ್ರ ಹಣಕಾಸು ಸಂಸ್ಥೆಯಾಗಿದೆ. 1934 ರ ಆರ್.ಬಿ.ಐ ಕಾಯ್ದೆಯಲ್ಲಿ ಕೇಂದ್ರ ಶಾಸಕಾಂಗಸಭೆ ಹಲವಾರು ಮಾರ್ಗದರ್ಶಿ ತತ್ವಗಳನ್ನು ಪ್ರಸ್ತುತ ಪಡಿಸಿದರು.
- ಇದರ ಮಾರ್ಗದರ್ಶಿಸೂತ್ರಗಳು, ಕಾರ್ಯವೈಖರಿಯನ್ನು ಮೊಟ್ಟ ಮೊದಲ ಬಾರಿಗೆ ಡಾ॥ ಬಿ.ಆರ್. ಅಂಬೇಡ್ಕರ್ ಅವರು ತಮ್ಮ The Problem of the Rupee -Its Origin and Its Solution ಕೃತಿಯಲ್ಲಿ ತಿಳಿಸಿದ್ದರು.
- 1926 ರಲ್ಲಿ ಭಾರತೀಯ ಕರೆನ್ಸಿ & ಹಣಕಾಸಿನ ಮೇಲಿನ ರಾಯಲ್ ಆಯೋಗವು ಹಿಲ್ಟನ್ ಯಂಗ್ ನೇತೃತ್ವದಲ್ಲಿ ನೇಮಕಗೊಂಡಿದ್ದು, ಇವರು ನೀಡಿದ ಶಿಫಾರಸ್ಸುಗಳ ಆಧಾರದ ಮೇಲೆ 1934 ರ ಆರ್.ಬಿ.ಐ ಕಾಯ್ದೆಗನುಗುಣವಾಗಿ 1935 ಏಪ್ರಿಲ್ 1 ರಂದು ಷೇರುದಾರರ ಬ್ಯಾಂಕ್ ಆಗಿ 5 ಕೋಟಿ ಮೂಲ ಬಂಡವಾಳದೊಂದಿಗೆ ಸ್ಥಾಪನೆಗೊಂಡಿತು.
- ಆರ್.ಬಿ.ಐ ನ ಮೊದಲ ಗೌರ್ನರ್ ಆಗಿ ಸರ್. ಓಸ್‌ಬರ್ನ್ ಸ್ಮಿತ್ ಕಾರ್ಯನಿರ್ವಹಿಸಿದ್ದರು.
- ಇದರ ಮೊದಲ ಕೇಂದ್ರ ಕಛೇರಿ ಕೋಲ್ಕತ್ತಾದಲ್ಲಿದ್ದು, 1937 ರಲ್ಲಿ ಮುಂಬೈಗೆ ವರ್ಗಾವಣೆಯಾಗಿದ್ದು, ಪ್ರಸ್ತುತವಾಗಿ ಮುಂಬೈನಲ್ಲಿ ಕೇಂದ್ರ ಕಛೇರಿ ಹೊಂದಿದೆ.
- 1947 ಏಪ್ರಿಲ್ ವರೆಗೆ ಮಯನ್ಮಾರ್ ನ ಕೇಂದ್ರ ಬ್ಯಾಂಕ್ ಆಗಿಯೂ ಆರ್.ಬಿ.ಐ ಕಾರ್ಯನಿರ್ವಹಿಸಿತ್ತು.
- 1949 ಜನವರಿ 1 ರಂದು ಭಾರತದ ಕೇಂದ್ರ ಸರ್ಕಾರ ಆರ್.ಬಿ.ಐ ನ್ನು ಬ್ಯಾಂಕಿಂಗ್ ನಿಯಂತ್ರಣ ಕಾಯ್ದೆ–1949 ಅನ್ವಯ ರಾಷ್ಟ್ರೀಕರಣ ಮಾಡಿ ಸಂಪೂರ್ಣವಾಗಿ ತನ್ನ ಒಡೆತನಕ್ಕೆ ತೆಗೆದುಕೊಂಡಿತು.




**ಆರ್‌ಬಿಐ (RBI) ಬಗ್ಗೆ ಸಂಕ್ಷಿಪ್ತ ಮಾಹಿತಿ:–**

- ವಿಸ್ತೃತ ರೂಪ:– **ಭಾರತೀಯ ರಿಸರ್ವ್ ಬ್ಯಾಂಕ್ (Reserve Bank of India)**
- ಸ್ಥಾಪನೆ:– **1935ರ ಏಪ್ರಿಲ್ 1** (ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾದ ಕಾಯ್ದೆ–1934ರ ಅನ್ವಯ ಹಿಲ್ಟನ್ ಯಂಗ್ ಸಮಿತಿಯ ಶಿಫಾರಸ್ಸಿನ ಮೇರೆಗೆ ಸ್ಥಾಪಿಸಲಾಯಿತು)
- ಕೇಂದ್ರ ಕಚೇರಿ:– **ಮುಂಬೈ** (ಆರಂಭದಲ್ಲಿ ಇದರ ಕೇಂದ್ರ ಕಚೇರಿಯು ಕಲ್ಕತ್ತಾದಲ್ಲಿತ್ತು. 1937ರಲ್ಲಿ ಮುಂಬೈಗೆ ಸ್ಥಳಾಂತರಿಸಲಾಯಿತು)
- ರಾಷ್ಟ್ರೀಕರಣಗೊಂಡಿದ್ದು:– **1949 ಜನವರಿ 1**
- ಈ ಬ್ಯಾಂಕ್ ಏಷಿಯನ್ ಕ್ಲಿಯರಿಂಗ್ ಬ್ಯಾಂಕ್‌ನ ಸದಸ್ಯ ಬ್ಯಾಂಕ್ ಆಗಿದೆ.

- ಈ ಸಂದರ್ಭದಲ್ಲಿ ಸಿ.ಡಿ. ದೇಶ್ ಮುಖ್ ಆರ್.ಬಿ.ಐನ ಗೌರ್ನರ್ ಆಗಿದ್ದು, ಆರ್.ಬಿ.ಐನ **ಮೊಟ್ಟ ಮೊದಲ ಭಾರತೀಯ ಗೌರ್ನರ್** ಎಂಬ ಕೀರ್ತಿಗೆ ಪಾತ್ರರಾಗಿದ್ದಾರೆ.

## ಸಂರಚನೆ

- ಒಂದು ಗೌವರ್ನರ್ ಹುದ್ದೆ (ಪ್ರಸ್ತುತ ಗೌರ್‍ನರ್ ಊರ್ಜಿತ್ ಆರ್ ಪಟೇಲ್)
- 4 ಜನ ಡೆಪ್ಯುಟಿ ಗೌವರ್ನರ್‍ಸ್

1. ಆರ್.ಗಾಂಧಿ (2014 ಏಪ್ರಿಲ್ 3 ರಿಂದ)
2. ಎಸ್.ಎಸ್.ಮುಂದ್ರಾ (2014 ಜುಲೈ 30 ರಿಂದ)
3. ಎನ್.ಎಸ್ ವಿಶ್ವನಾಥನ್ (2016 ಜುಲೈ 4 ರಿಂದ)
4. ವಿರಲ್ ಆಚಾರ್ಯ (2017 ಜನವರಿ 23 ರಿಂದ) ಇತ್ತೀಚೆಗೆ ನೇಮಕಗೊಂಡ ಡೆಪ್ಯುಟಿ ಗೌರ್‍ನರ್ ಆಗಿದ್ದಾರೆ.

- ಈ ಡೆಪ್ಯುಟಿ ಗೌರ್‍ನರ್ ಗಳಲ್ಲಿ ಇಬ್ಬರನ್ನು ಕಾರ್ಯ ನಿರ್ವಾಹಕ ನಿರ್ದೇಶಕ ಮಂಡಳಿಯಿಂದ, ಒಬ್ಬರು ಗೌರ್‍ನರ್ ರವರಿಂದ, ಮತ್ತೊಬ್ಬರು ಅರ್ಥಶಾಸ್ತ್ರದಲ್ಲಿ ಪರಿಣಿತರಾದವರನ್ನು ನೇಮಕ ಮಾಡಲಾಗುತ್ತದೆ.
- 4 ಪ್ರಾದೇಶಿಕ ಮಂಡಳಿಗಳಿಂದ 4 ಜನ ನಿರ್ದೇಶಕರು ಹಾಗೂ 10 ಜನ ನಿರ್ದೇಶಕರು, ಸರ್ಕಾರದ ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದವರನ್ನು ಕೇಂದ್ರ ಸರ್ಕಾರ ನಾಮಕರಣ ಮಾಡುತ್ತದೆ.
- 2 ಜನ ನಿರ್ದೇಶಕರು, ಹಣಕಾಸು ಸಚಿವಾಲಯದಿಂದ ನೇಮಕ
- ನಿರ್ದೇಶಕರುಗಳ ಅಧಿಕಾರಾವಧಿ 4 ವರ್ಷಗಳು.
- ಒಟ್ಟು 21 ಜನ ಸದಸ್ಯರನ್ನು ಒಳಗೊಂಡ ಆರ್.ಬಿ.ಐ ಮಂಡಳಿಯು ಕಾರ್ಯನಿರ್ವಹಿಸುತ್ತದೆ.
- **ಪ್ರಾದೇಶಿಕ ಕಚೇರಿಗಳು:** ಮುಂಬೈ, ಕೋಲ್ಕತ್ತ, ಚೆನ್ನೈ, ದೆಹಲಿ.
- **ಶಾಖಾ ಕಚೇರಿಗಳು:** ಹೈದರಾಬಾದ್, ಬೆಂಗಳೂರು, ಲಕ್ನೋ, ಕಾನ್ಪುರ.
- ಗೌವರ್ನರ್‌ನ ಅಧಿಕಾರಾವಧಿ ಕನಿಷ್ಠ 3 ವರ್ಷ, ಗರಿಷ್ಠ 5 ವರ್ಷಗಳು. ಇದನ್ನು ಕೇಂದ್ರ ಸರ್ಕಾರ ನೇಮಕ ಮಾಡುವ ಅವಧಿಯಲ್ಲಿಯೇ ನಿರ್ಧರಿಸುತ್ತದೆ.
- ಪ್ರಧಾನಮಂತ್ರಿ ಕಛೇರಿಯು ಕೇಂದ್ರ ಸರ್ಕಾರದ ಹಣಕಾಸು ಸಚಿವಾಲಯದ ಶಿಫಾರಸ್ಸಿನ ಮೇರೆಗೆ ಆರ್.ಬಿ.ಐ ಗೌರ್‍ನರ್ ನ್ನು ನೇಮಕ ಮಾಡುತ್ತದೆ.
- ಊರ್ಜಿತ್ ಆರ್ ಪಟೇಲ್ ಆರ್‌ಬಿಐನ 24ನೇ ಗೌವರ್ನರ್ ಆಗಿ 2016ರ ಸೆಪ್ಟೆಂಬರ್ 4ರಂದು ಅಧಿಕಾರ ಸ್ವೀಕಾರ.
- ಆರ್‌ಬಿಐನ 70 ವರ್ಷಗಳ ಇತಿಹಾಸದಲ್ಲಿ ಡೆಪ್ಯುಟಿ ಗೌವರ್ನರ್ ಹುದ್ದೆಯಿಂದ ನೇರವಾಗಿ ಪೂರ್ಣ ಪ್ರಮಾಣದ ಗೌವರ್ನರ್ ಹುದ್ದೆಗೆ ಏರಿದ ಪ್ರಥಮ ಆರ್ಥಿಕ ತಜ್ಞ – **ಊರ್ಜಿತ್ ಪಟೇಲ್.**

## ಆರ್‌ಬಿಐ ಗೌರ್‍ನರ್‌ಗೆ ಸಂಬಂಧಿಸಿದ ವಿಶೇಷ ಮಾಹಿತಿ



**ಮೊದಲ ಗೌರ್‍ನರ್-ಸರ್ ಓಸ್‌ಬರ್ನ್ ಸ್ಮಿತ್:-**

- 1935ರ ಏಪ್ರಿಲ್ 1ರಿಂದ 1937 ಜೂನ್ 30ರವರೆಗೆ ಆರ್‌ಬಿಐನ ಮೊದಲ ಗೌರ್‍ನರ್ ಆಗಿ ಕಾರ್ಯ ನಿರ್ವಹಿಸಿದ್ದಾರೆ.

**ಸಿ.ಡಿ. ದೇಶ್‌ಮುಖ್:-**

- ಆರ್‌ಬಿಐಗೆ ನೇಮಕಗೊಂಡ ಮೊದಲ ಭಾರತೀಯ ಗೌರ್‍ನರ್ & ಒಟ್ಟಾರೆ 3ನೇ ಗೌರ್‍ನರ್ ಆಗಿ ನೇಮಕಗೊಂಡಿದ್ದರು. **1943ರ ಆಗಸ್ಟ್ 11 ರಿಂದ 1949 ಜೂನ್ 30**ರವರೆಗೆ ಕಾರ್ಯ ನಿರ್ವಹಿಸಿದ್ದಾರೆ. ಇವರು ಆರ್.ಬಿ.ಐ ನ ಗೌರ್‍ನರ್ ಆಗಿ, ಜಾನ್ ಮಥಾಯಿ ನಂತರ 1950 ರಿಂದ 1956 ರವರೆಗೆ ಹಣಕಾಸು ಸಚಿವರಾಗಿ ಕೇಂದ್ರ ಸರ್ಕಾರದ 1951–52ರ ಬಜೆಟ್‌ನ್ನು ಮಂಡಿಸಿದ ಮೊದಲ ವ್ಯಕ್ತಿಯಾಗಿದ್ದಾರೆ.



- 1956 ರಲ್ಲಿ ಭಾರತದ ಆರ್ಥಿಕ ನೀತಿ ಸಂಸ್ಥೆ ಸ್ಥಾಪಕರಾಗಿದ್ದಾರೆ.
- 1945 ರಿಂದ 1964 ರವರೆಗೆ ಭಾರತದ ಸಾಂಖ್ಯಿಕ ಸಂಸ್ಥೆಯ ಅಧ್ಯಕ್ಷರಾಗಿ, 1959 ರಲ್ಲಿ ಇಂಡಿಯನ್ ಇಂಟರ್‌ನ್ಯಾಷನಲ್ ಸೆಂಟರ್ ಸ್ಥಾಪಕರಾಗಿ, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಪಬ್ಲಿಕ್ ಅಡ್ಮಿನಿಸ್ಟ್ರೇಷನ್ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸಿದ್ದಾರೆ.
- 1949 ರಲ್ಲಿ ಬ್ಯಾಂಕಿಂಗ್ ಕಾಯ್ದೆಯನ್ನು ಹಾಗೂ 1949 ಜನವರಿ 1 ರಂದು 1948 ರ ಆರ್.ಬಿ.ಐ ಕಾಯ್ದೆಯನ್ವಯ ಆರ್.ಬಿ.ಐ ನ್ನು ರಾಷ್ಟ್ರೀಕರಣಗೊಳಿಸಿದ ಕೀರ್ತಿಗೆ ಪಾತ್ರರಾದರು.

**ಮನಮೋಹನ್ ಸಿಂಗ್ (1982 ಸೆಪ್ಟೆಂಬರ್ 16 ರಿಂದ 85 ಜನವರಿ 14):-**



- ಯೋಜನಾ ಆಯೋಗದ ಉಪಾಧ್ಯಕ್ಷರಾಗಿ, 1972–76 ರವರೆಗೆ ಭಾರತ ಸರ್ಕಾರದಲ್ಲಿ ಮುಖ್ಯ ಆರ್ಥಿಕ ಸಲಹೆಗಾರರಾಗಿ

ಕಾರ್ಯನಿರ್ವಹಿಸಿದ್ದರು.

- ಆರ್.ಬಿ.ಐ ನ 15ನೇ ಗೌರ್ನರ್ ಆಗಿ (1982-85), ಪ್ರಧಾನಮಂತ್ರಿ ಹುದ್ದೆಗೆ ಏರಿದ ಏಕೈಕ & ಮೊದಲ ವ್ಯಕ್ತಿಯಾಗಿದ್ದಾರೆ.
- ಪಿ.ವಿ. ನರಸಿಂಹರಾವ್ ಅವರ ಅವಧಿಯಲ್ಲಿ ಹಣಕಾಸು ಸಚಿವರಾಗಿ, ಹೊಸ ಆರ್ಥಿಕ ನೀತಿಯ ಶಿಲ್ಪಿಯಾಗಿದ್ದಾರೆ. ಆದ್ದರಿಂದ 1993 ರಲ್ಲಿ ಉತ್ತಮ ಹಣಕಾಸು ಸಚಿವ ಎಂಬ ಪ್ರಶಸ್ತಿಗೆ ಭಾಜನರಾಗಿದ್ದರು.
- 2004 ರಿಂದ 2014 ರವರೆಗೆ ಅಂದರೆ 10, 11, 12 ನೇ ಪಂಚವಾರ್ಷಿಕ ಯೋಜನೆಗಳ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದಾರೆ.

**ಡಿ. ಸುಬ್ಬರಾವ್ (2008 ಸೆಪ್ಟೆಂಬರ್ 5 ರಿಂದ 2013 ಸೆಪ್ಟೆಂಬರ್ 4):-**



- ಮನಮೋಹನ್ ಸಿಂಗ್ ಪ್ರಧಾನಿ ಯಾಗಿದ್ದ ಅವಧಿಯಲ್ಲಿ ಆರ್.ಬಿ.ಐ ನ 22 ನೇ ಗೌರ್ನರ್ ಆಗಿ 5 ವರ್ಷಗಳ ಕಾಲ ಕಾರ್ಯ ನಿರ್ವಹಿಸಿದವರಾಗಿದ್ದಾರೆ.
- ಹಣಕಾಸು ಸಚಿವಾಲಯದ ಆರ್ಥಿಕ ವ್ಯವಹಾರ ವಿಭಾಗದ ಜಂಟಿ ಕಾರ್ಯದರ್ಶಿಯಾಗಿ, ಹಣಕಾಸು ಕಾರ್ಯದರ್ಶಿಯಾಗಿ, 1994 ರಿಂದ 2004 ರವರೆಗೆ ವಿಶ್ವ ಬ್ಯಾಂಕ್‌ನ ಆರ್ಥಿಕ ತಜ್ಞರಾಗಿ, 2005 ರಿಂದ 2007 ರವರೆಗೆ ಪ್ರಧಾನಮಂತ್ರಿ ಆರ್ಥಿಕ ಸಲಹೆಗಾರ ಮಂಡಳಿ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದಾರೆ.
- 2008ರ ಜಾಗತಿಕ ಹಣಕಾಸು ಬಿಕ್ಕಟ್ಟು ಸನ್ನಿವೇಶದಲ್ಲಿ ಭಾರತದ ಆರ್ಥಿಕತೆಯನ್ನು ರಕ್ಷಿಸಿದ ಕೀರ್ತಿ ಸಲ್ಲುತ್ತದೆ.

**ಆರ್.ಎನ್. ಮಲ್ಹೋತ್ರ (1985 - 90):-**



- ಆರ್.ಬಿ.ಐನ 17 ನೇ ಗೌರ್ನರ್ ಆಗಿ ಹಾಗೂ ವಿಮಾ ಕ್ಷೇತ್ರ ಸುಧಾರಣೆಗೆ ಸಂಬಂಧಿಸಿದ ಸಮಿತಿಯ ಅಧ್ಯಕ್ಷರಾಗಿ ಭಾರತೀಯ ವಿಮಾ ನಿಯಂತ್ರಣ ಪ್ರಾಧಿಕಾರದ ಸ್ಥಾಪನೆಗೆ ಕಾರಣ ಕರ್ತರಾದವರು. ಇವರ ಅವಧಿಯಲ್ಲಿ 500 ರೂ. ಮೌಲ್ಯದ ನೋಟು ಪರಿಚಯಿಸಲಾಯಿತು.
- 1990 ರಲ್ಲಿ ಪದ್ಮಭೂಷಣ ಪ್ರಶಸ್ತಿ ನೀಡಲಾಗಿದೆ. ಇವರ ಪತ್ನಿ ಅನ್ನಾರಾಜಂ ಮಲ್ಹೋತ್ರ, ಇವರು ಐ.ಎ.ಎಸ್. ನಲ್ಲಿ ಮೊದಲ ಮಹಿಳಾ ಸದಸ್ಯರಾಗಿ ಆಯ್ಕೆಯಾದವರು.

**ಬಿಮಲ್ ಜಲಾನ್ (1997-2003):-**



- ಆರ್.ಬಿ.ಐ ನ 20 ನೇ ಗೌರ್ನರ್ ಆಗಿ, 2003 ರಿಂದ 2009 ರವರೆಗೆ ರಾಜ್ಯಸಭಾ ಸದಸ್ಯರಾಗಿ, 1980 ರಲ್ಲಿ ಮುಖ್ಯ ಆರ್ಥಿಕ ಸಲಹೆಗಾರರಾಗಿ, 1991-92 ರವರೆಗೆ ಹಣಕಾಸು ಕಾರ್ಯದರ್ಶಿಯಾಗಿ, ಐ.ಎಂ.ಎಫ್ & ವಿಶ್ವ ಬ್ಯಾಂಕ್‌ಗಳಲ್ಲಿ ಕಾರ್ಯನಿರ್ವಾಹಕ ನಿರ್ದೇಶಕರಾಗಿ, ಯೋಜನಾ ಆಯೋಗದ ಸದಸ್ಯ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸಿದ್ದಾರೆ.
- ಇವರ ಅಧಿಕಾರಾವಧಿಯಲ್ಲಿ 1000 ರೂ. ಮೌಲ್ಯದ ಭಾರತದ ರೂಪಾಯಿ ಚಲಾವಣೆಗೆ ಬಂದಿತು.
- **ಇವರ ಮುಖ್ಯ ಕೃತಿಗಳು:-** The Future of India, The Indian Economy Problems & Prospects, India's Economic Policy ಮುಂತಾದವು.

**ಎಲ್. ಕೆ. ಝಾ (1967 ಜುಲೈ 1 - 1970 ಮೇ 3):-**



- ಆರ್.ಬಿ.ಐ 8ನೇ ಗೌರ್ನರ್ ಆಗಿ & ಸಾರ್ವಜನಿಕ ಹಣಕಾಸು ಕ್ಷೇತ್ರದ ಸುಧಾರಣೆಗೆ ಸಂಬಂಧಿಸಿದ ಸಮಿತಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದಾರೆ. ಇವರ ಶಿಫಾರಸ್ಸಿನ ಮೇರೆಗೆ 1986 ರಲ್ಲಿ ಮಾರ್ಪಡಿತ ಮೌಲ್ಯ ವರ್ಧಿತ ತೆರಿಗೆಯನ್ನು ಭಾರತದಲ್ಲಿ ಜಾರಿಗೆ ತರಲಾಯಿತು.
- ಇವರ ಅವಧಿಯಲ್ಲಿ **1969 ಅಕ್ಟೋಬರ್ 2** ರಂದು ಮಹಾತ್ಮ ಗಾಂಧೀಜಿಯವರ ಜನ್ಮ ದಿನಾಚರಣೆ ಅಂಗವಾಗಿ 2, 5, 10, 100 ರೂ. ಮೌಲ್ಯದ ರೂಪಾಯಿ ನೋಟುಗಳನ್ನು ಪರಿಚಯಿಸಲಾಯಿತು.
- ಇವುಗಳಲ್ಲಿ ಮೊದಲ ಬಾರಿಗೆ ಇಂಗ್ಲೀಷ್ & ಹಿಂದಿ ಭಾಷೆಯಲ್ಲಿ ಆರ್.ಬಿ.ಐ ನ ಗೌರ್ನರ್ ಸಹಿ ನೋಟಿನ ಮೇಲೆ ಇರುವುದನ್ನು ಜಾರಿಗೆ ತಂದರು.
- ಇವರ ಅಧಿಕಾರಾವಧಿಯಲ್ಲಿ 14 ವಾಣಿಜ್ಯ ಬ್ಯಾಂಕ್‌ಗಳ ರಾಷ್ಟ್ರೀಕರಣ, ವಾಣಿಜ್ಯ ಬ್ಯಾಂಕುಗಳ ಮೇಲೆ ಸಾಮಾಜಿಕ ನಿಯಂತ್ರಣ, ಲೀಡ್ ಬ್ಯಾಂಕ್ ಯೋಜನೆ ಜಾರಿಗೆ ಬಂದವು.
- 1970 ರ ದಶಕದಲ್ಲಿ ಕೆ.ಎನ್. ವಾಂಛೂ (ನೇರತೆರಿಗೆ) & ಎಲ್.ಕೆ. ಝಾ (ಪರೋಕ್ಷ ತೆರಿಗೆ) ಸಮಿತಿಯನ್ನು ನೇಮಿಸಿದ್ದು, ಇವರಿಬ್ಬರನ್ನು ಭಾರತದಲ್ಲಿ ತೆರಿಗೆ ಸುಧಾರಣೆಗಳ ಪಿತೃಗಳು ಎನ್ನಬಹುದು.

**ಸಿ. ರಂಗರಾಜನ್ (1992 ಡಿಸೆಂಬರ್ 22 ರಿಂದ 1997 ನವೆಂಬರ್ 21):-**



✦ ಆರ್.ಬಿ.ಐನ 19ನೇ ಗೌರ್ನರ್ ಆಗಿ ಹಾಗೂ ಬಡತನ ಸುಧಾರಣೆಗೆ ಸಂಬಂಧಿಸಿದ ಸಮಿತಿಯ ಅಧ್ಯಕ್ಷರಾಗಿ. ಯೋಜನಾ ಆಯೋಗದ ಸದಸ್ಯರಾಗಿ. 1982 ರಿಂದ 1991 ರವರೆಗೆ ಆರ್.ಬಿ.ಐ ನ ಡೆಪ್ಯುಟಿ ಗೌರ್ನರ್ ಆಗಿ. ಪ್ರಧಾನಮಂತ್ರಿ ಆರ್ಥಿಕ ಸಲಹೆಗಾರರ ಮಂಡಳಿಯ ಕೊನೆಯ ಅಧ್ಯಕ್ಷರಾಗಿ 2009 ರಿಂದ 2014 ರವರೆಗೆ ಕಾರ್ಯನಿರ್ವಹಿಸಿದ್ದಾರೆ. 12 ನೇ ಹಣಕಾಸು ಆಯೋಗದ ಅಧ್ಯಕ್ಷರಾಗಿಯೂ ಕಾರ್ಯನಿರ್ವಹಿಸಿದ್ದಾರೆ. 2002 ರಲ್ಲಿ ಪದ್ಮವಿಭೂಷಣ ಪ್ರಶಸ್ತಿ ನೀಡಲಾಗಿದೆ.

**ಎಂ. ನರಸಿಂಹನ್ (1977 ಮೇ 3 ರಿಂದ 1977 ನವೆಂಬರ್ 30):-**



✦ ಆರ್.ಬಿ.ಐ ನ 13 ನೇ ಗೌರ್ನರ್ ಆಗಿ, 1991 (ಮನಮೋಹನ್ ಸಿಂಗ್ ರವರಿಂದ ನೇಮಕ) & 1998 (ಪಿ.ಚಿದಂಬರಂ ಅವರಿಂದ ನೇಮಕ) ರಲ್ಲಿ 2 ಬಾರಿ ಬ್ಯಾಂಕಿಂಗ್ ವಲಯದ ಸುಧಾರಣೆಗೆ ಸಂಬಂಧಿಸಿದ ಸಮಿತಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದರು. ಈ ಸಂದರ್ಭದಲ್ಲಿ ನಿಯಂತ್ರಕನ ಸ್ಥಾನಕ್ಕೆ ಬದಲಾಗಿ ಆರ್ಥಿಕತೆಯ ಸೌಲಭ್ಯಧಾತನಾಗಿ ಹಣಕಾಸು ವಲಯದಲ್ಲಿ ಹೊಸ ಆರ್ಥಿಕ ನೀತಿಯ ಉದಾರೀಕರಣ & ಖಾಸಗೀಕರಣ ನೀತಿಗಳನ್ನು ಅಳವಡಿಸಲು ಶಿಫಾರಸ್ಸು ಮಾಡಿದ್ದರು.

✦ ದ್ರವ್ಯತಾ ಹೊಂದಾಣಿಕಾ ಸೌಲಭ್ಯ (LAF) ಇದು ರೆಪೋದರ & ರಿವರ್ಸ್ ರೆಪೋ ದರಗಳ ಮೂಲಕ ಆರ್.ಬಿ.ಐ ನಿರ್ವಹಿಸಬೇಕೆಂದು ಮೊದಲ ಬಾರಿ ಸಲಹೆ ನೀಡಿದರು.

✦ ಇವರು ನೀಡಿದ ಸಾರ್ವತ್ರಿಕ ಬ್ಯಾಂಕು ಪರಿಕಲ್ಪನೆಯನ್ನು 1998 ರಲ್ಲಿ ಆರ್.ಬಿ.ಐ ಗೌರ್ನರ್ ಬಿಮಲ್ ಜಲನ್ ಅನುಷ್ಠಾನಕ್ಕೆ ತಂದರು. ಇದರನ್ವಯ ಸ್ಥಾಪಿತವಾದ ಮೊಟ್ಟ ಮೊದಲ ಸಾರ್ವತ್ರಿಕ ಬ್ಯಾಂಕ್ ಆಗಿ ಐ.ಸಿ.ಐ.ಸಿ.ಐ ಬ್ಯಾಂಕ್‌ನ್ನು ಗುರುತಿಸಬಹುದು.

✦ ಇವರು ಐ.ಎಂ.ಎಫ್ & ವಿಶ್ವ ಬ್ಯಾಂಕ್‌ಗಳಲ್ಲಿ ಕಾರ್ಯನಿರ್ವಾಹಕ ನಿರ್ದೇಶಕರಾಗಿ, ಹಣಕಾಸು ಸಚಿವಾಲಯದ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸಿದ್ದಾರೆ.

✦ 2000 ರಲ್ಲಿ ಇವರಿಗೆ ಪದ್ಮವಿಭೂಷಣ ಪ್ರಶಸ್ತಿ ನೀಡಿ ಗೌರವಿಸಲಾಗಿದೆ.

**ಐ.ಜಿ. ಪಟೇಲ್ (1977 ಡಿಸೆಂಬರ್ 1 ರಿಂದ 1982 ಸೆಪ್ಟೆಂಬರ್ 15):**



✦ ಆರ್.ಬಿ.ಐ ನ 14 ನೇ ಗೌರ್ನರ್ ಆಗಿ ಕಾರ್ಯನಿರ್ವಹಿಸಿದ್ದರು.

✦ 1000, 10,000, 5,000 ರೂ. ಮುಖಬೆಲೆಯ ನೋಟು ಅಮಾನ್ಯೀಕರಣ ಮಾಡಿದರು.

✦ 1991 ರಲ್ಲಿ ಪದ್ಮವಿಭೂಷಣ ಪ್ರಶಸ್ತಿ.

✦ 1980 ಏಪ್ರಿಲ್ 15 ರಂದು 2ನೇ ಹಂತದ 6 ಬ್ಯಾಂಕುಗಳ ರಾಷ್ಟ್ರೀಕರಣ ಸಂದರ್ಭದಲ್ಲಿ ಆರ್.ಬಿ.ಐ ನ ಗೌರ್ನರ್ ಆಗಿದ್ದರು.

**ಎಸ್. ವೆಂಕಿಟರಮಣನ್ (1990 ಡಿಸೆಂಬರ್ 22 ರಿಂದ 1992 ಡಿಸೆಂಬರ್ 21):-**



✦ ಆರ್.ಬಿ.ಐ ನ 18 ನೇ ಗೌರ್ನರ್ ಆಗಿ, ಹಣಕಾಸು ಸಚಿವಾಲಯದ ಹಣಕಾಸು ಕಾರ್ಯದರ್ಶಿ (1985–89) ಆಗಿ, ಕರ್ನಾಟಕ ರಾಜ್ಯ ಸರ್ಕಾರದ ಹಣಕಾಸು ಕಾರ್ಯದರ್ಶಿಗಳಾಗಿಯೂ ಕಾರ್ಯನಿರ್ವಹಿಸಿದ್ದರು.

✦ ಇವರು ಗೌರ್ನರ್ ಆಗಿದ್ದ ಅವಧಿಯಲ್ಲಿ ದೇಶದಲ್ಲಿ ಹೊಸ ಆರ್ಥಿಕ ನೀತಿ 1991 ಜುಲೈ 24 ರಂದು ಅನುಷ್ಠಾನಕ್ಕೆ ಬಂದಿತು.

**ಅತ್ಯಂತ ಹೆಚ್ಚು ಅವಧಿ ಗೌರ್ನರ್ - ಬೆನಗಲ್ ರಾಮರಾವ್ (1949 ಜುಲೈ 1 ರಿಂದ 1957 ಜನವರಿ 14):-**

✦ ಆರ್.ಬಿ.ಐ ನ 4ನೇ ಗೌರ್ನರ್‌ನ ಇತಿಹಾಸದಲ್ಲಿ ಅತ್ಯಂತ ಹೆಚ್ಚು ಅವಧಿಗೆ ಗೌರ್ನರ್ ಆಗಿ ಕಾರ್ಯನಿರ್ವಹಿಸಿದ್ದಾರೆ.

✦ ಇವರ ಕಾಲದಲ್ಲಿ 1955 ರಲ್ಲಿ ಇಂಪೀರಿಯಲ್ ಬ್ಯಾಂಕ್ ಎಸ್.ಬಿ.ಐ ಆಗಿ ಮರುನಾಮಕರಣಗೊಂಡಿತು.

### ಅತ್ಯಂತ ಕಡಿಮೆ ಅವಧಿ ಗೌರ್ನರ್ - ಅಮಿತಾಬ್ ಘೋಷ್ (1985 ಜನವರಿ 15 ರಿಂದ 1985 ಫೆಬ್ರವರಿ 4):-



✦ ಆರ್.ಬಿ.ಐ. ನ 16 ನೇ ಗೌರ್ನರ್ ಆಗಿ, ಡೆಪ್ಯುಟಿ ಗೌರ್ನರ್ ಆಗಿ, ಅಲಹಾಬಾದ್‌ನ ಮುಖ್ಯಸ್ಥರಾಗಿ, ಐ.ಡಿ.ಬಿ.ಐನ ನಿರ್ದೇಶಕರಾಗಿ ಕಾರ್ಯನಿರ್ವಹಿಸಿದ್ದರು.

### ವೈ.ವಿ. ರೆಡ್ಡಿ (2003 ಸೆಪ್ಟೆಂಬರ್ 6 ರಿಂದ 2008 ಸೆಪ್ಟೆಂಬರ್ 5)



✦ 1996 ರಲ್ಲಿ ಆರ್.ಬಿ.ಐನ ಡೆಪ್ಯುಟಿ ಗೌರ್ನರ್ ಆಗಿ, 2002 ರಲ್ಲಿ ಐ.ಎಂ.ಎಫ್ ನ ಕಾರ್ಯಕಾರಿ ನಿರ್ದೇಶಕರಾಗಿ, 2007 ರಲ್ಲಿ ಬ್ಯಾಂಕ್ ಫಾರ್ ಇಂಟರ್ ನ್ಯಾಷನಲ್ ಸೆಟಲ್‌ಮೆಂಟ್ಸ್, ವಿಷ್ಯನ್ ಕನ್ಸಲ್ಟೇಟಿವ್ ಕೌನ್ಸಿಲ್ ನ ಅಧ್ಯಕ್ಷರಾಗಿಯೂ ಕಾರ್ಯನಿರ್ವಹಿಸಿದ್ದಾರೆ.

✦ 2014 ರ ಇಂಡಿಯನ್ ಎಕನಾಮಿಕ್ ಅಸೋಸಿಯೇಷನ್ ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು.

✦ ಜಿ-20 ಹಣಕಾಸು ಸಚಿವರ ಗುಂಪಿನ ಸಲಹಾ ಮಂಡಳಿಯಲ್ಲಿ ಸದಸ್ಯರಾಗಿಯೂ ಕಾರ್ಯನಿರ್ವಹಿಸಿದ್ದಾರೆ.

✦ 2005 ಏಪ್ರಿಲ್ ನಲ್ಲಿ **ಹಣಕಾಸು ಸಮನ್ವಯತೆ** ಎಂಬ ಪರಿಕಲ್ಪನೆಯನ್ನು ಮೊಟ್ಟ ಮೊದಲ ಬಾರಿಗೆ ಪರಿಚಯಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ.

✦ 5 ವರ್ಷಗಳ ಅವಧಿ ಆರ್.ಬಿ.ಐ ನ 21 ನೇ ಗೌರ್ನರ್ ಆಗಿ ಹಾಗೂ ಪ್ರಸ್ತುತ 14 ನೇ ಹಣಕಾಸು ಆಯೋಗ (2015-20) ದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

✦ 2010 ರ 2ನೇ ನಾಗರಿಕ ಅತ್ಯುನ್ನತ ಪ್ರಶಸ್ತಿ ಪದ್ಮವಿಭೂಷಣ ಪ್ರಶಸ್ತಿಗೆ ಭಾಜನರಾಗಿದ್ದಾರೆ.

### ಆರ್.ಬಿ.ಐ. ನ ಮೂಲ ಪ್ರಸ್ತಾವನೆ

ಭಾರತದಲ್ಲಿ ಹಣಕಾಸು ಸ್ಥಿರತೆ ತರುವ ಉದ್ದೇಶದಿಂದ ವಿತರಿಸಲು ಹಣ & ಬ್ಯಾಂಕು ನೋಟುಗಳ ಚಲಾವಣೆ ನಿಯಂತ್ರಣ ಹಾಗೂ ದೇಶದ ಹಣಕಾಸು ವ್ಯವಸ್ಥೆಯ ಕಾರ್ಯಾಚರಣೆಯ ನಿಯಂತ್ರಣವನ್ನು ಸಾಧಿಸುವ ಮೂಲ ಕಾರ್ಯಗಳನ್ನು ಪ್ರಸ್ತಾಪಿಸುತ್ತದೆ.

### ರಘುರಾಂ. ಜಿ. ರಾಜನ್ (2013ರ ಸೆಪ್ಟೆಂಬರ್ 4ರಿಂದ 2016 ಸೆಪ್ಟೆಂಬರ್ 4):-



✦ ರಘುರಾಂ. ಜಿ. ರಾಜನ್ ಅವರು ಆರ್‌ಬಿಐನ 23ನೇ ಗೌವರ್ನರ್ ಆಗಿ ಆರ್‌ಬಿಐನಲ್ಲಿ ಅನೇಕ ಸುಧಾರಣಾ ಕ್ರಮ ಗಳನ್ನು ಕೈಗೊಂಡಿದ್ದಾರೆ.

✦ ಜಗತ್ತಿನಾದ್ಯಂತ ಸೆಂಟ್ರಲ್ ಬ್ಯಾಂಕ್‌ಗಳಲ್ಲಿ ಅತ್ಯುತ್ತಮ ಗೌವರ್ನರ್ ಎಂದು ಪ್ರಶಸ್ತಿಗಳನ್ನು ಪಡೆದಿದ್ದಾರೆ.

✦ ಜಾಗತಿಕ ಮಟ್ಟದಲ್ಲಿ & ಬ್ಯಾಂಕಿಂಗ್ ವಲಯದಲ್ಲಿ **ಸೆಂಟ್ರಲ್ ಬ್ಯಾಂಕ್‌ನ ಉತ್ತಮ ಗೌವರ್ನರ್** ಎಂದೇ ಪ್ರಸಿದ್ಧಿಯಾಗಿದೆ. ಇವರು ಮಧ್ಯಪ್ರದೇಶದಲ್ಲಿ ಜನಿಸಿದರು. 2007ರಿಂದ ಅಮೆರಿಕಾದಿಂದ ಗ್ರೀನ್ ಕಾರ್ಡ್‌ನ್ನು ಪಡೆದುಕೊಂಡಿದ್ದಾರೆಂಬ ಆಪಾದನೆ ಇವರ ಮೇಲಿತ್ತು. ಇದನ್ನು ಇತ್ತೀಚೆಗೆ ಬಿಜೆಪಿ ಮುಖಂಡ ಸುಬ್ರಮಣ್ಯ ಸ್ವಾಮಿ ಅವರು ಆಪಾದಿಸಿದ್ದರು.

✦ 2008 ರ ಅಮೆರಿಕ & ಯುರೋಪ್ ರಾಷ್ಟ್ರಗಳ ಜಾಗತಿಕ ಆರ್ಥಿಕ ಹಿಂಜರಿತದ ಸನ್ನಿವೇಶದಲ್ಲಿ ದೀರ್ಘಾವಧಿ ಆರ್ಥಿಕ ಸುಧಾರಣೆಗಳಿಗೆ **ಪೂರೈಕೆ ಭಾಗದ ಆರ್ಥಿಕ** ವಿಚಾರ ಧಾರೆಗಳನ್ನು ನೀಡಿದ ವ್ಯಕ್ತಿಯನ್ನಾಗಿ ರಾಜನ್ ಅವರನ್ನು ಕಾಣಬಹುದು.

✦ ರಘುರಾಂ ರಾಜನ್ ಅವರು ಭಾರತದ ಆರ್ಥಿಕ ಸಲಹೆಗಾರರಾಗಿ ಕೂಡ **2012ರ ಆಗಸ್ಟ್ 10** ರಿಂದ **2013ರ ಸೆಪ್ಟೆಂಬರ್** 4ರವರೆಗೆ ಕಾರ್ಯ ನಿರ್ವಹಿಸಿದ್ದಾರೆ. ಇವರು 2012-13ರ ಭಾರತದ ಆರ್ಥಿಕ ಸಮೀಕ್ಷೆಯನ್ನು ತಯಾರಿಸಿದ್ದರು.

✦ ಇವರಿಗೆ ಲಂಡನ್ ಮೂಲದ ಸೆಂಟ್ರಲ್ ಬ್ಯಾಂಕ್‌ನ ಆರ್ಥಿಕ ನಿಯತಕಾಲಿಕವು **ಗೌವರ್ನರ್ ಆಫ್ ದಿ ಇಯರ್-2014**ನ್ನು ನೀಡಿ ಗೌರವಿಸಲಾಗಿದೆ.

✦ **2016ರ ಟೈಮ್ಸ್ ಮ್ಯಾಗಜೀನ್** ನ 100 ಪ್ರಭಾವಿ ವ್ಯಕ್ತಿಗಳಲ್ಲಿ ರಘುರಾಂ ಜಿ. ರಾಜನ್ ಒಬ್ಬರೆನಿಸಿದ್ದರು.

✦ ಇವರು ಆರ್.ಬಿ.ಐ ಗೌರ್ನರ್ ಹುದ್ದೆಯಿಂದ ನಿರ್ಗಮಿತರಾದ ಸಂದರ್ಭವನ್ನು ಭಾರತದ ಆರ್ಥಿಕತೆಯಲ್ಲಿ **ರೆಕ್ಸಿಟ್** (ರಾಜನ್ ನಿರ್ಗಮನದ ಪರಿಣಾಮ) ಎನ್ನಬಹುದು.

## ಊರ್ಜಿತ್ ಆರ್ ಪಟೇಲ್ - 24ನೇ ಗೌರ್ನರ್ (2016 ಸೆಪ್ಟೆಂಬರ್ 4 ರಿಂದ)



- ಊರ್ಜಿತ್ ಆರ್. ಪಟೇಲ್ ಅವರನ್ನು ಆರ್‌ಬಿಐನ ನೂತನ ಗೌವರ್ನರ್ ಆಗಿ ಊರ್ಜಿತ್ 2016ರ ಆಗಸ್ಟ್ 20ರಂದು ನೇಮಕ ಮಾಡಲಾಗಿದೆ. ಈ ಮೂಲಕ ಊರ್ಜಿತ್ ಆರ್ ಪಟೇಲ್ ಅವರು ರಿಸರ್ವ್ ಬ್ಯಾಂಕ್‌ನ 24ನೇ ಗೌವರ್ನರ್ ಆಗಿ 2016ರ ಸೆಪ್ಟೆಂಬರ್ 4ರಿಂದ 3 ವರ್ಷಗಳ ಅವಧಿಗೆ ಕಾರ್ಯ ನಿರ್ವಹಿಸಲಿದ್ದಾರೆ.
- 2016 ನವೆಂಬರ್ 8 ರಂದು ಚಲಾವಣೆಯಲ್ಲಿದ್ದ 500, 1000 ರೂ ಮುಖಬೆಲೆಯ ನೋಟು ಗಳನ್ನು ಅಮಾನ್ಯೀಕರಣ ಮಾಡಿ, & ಹೊಸ ವಿನ್ಯಾಸದ 500 & 2,000 ರೂ. ಮುಖಬೆಲೆಯ ಗರಿಷ್ಠ ಮೊತ್ತದ ಕರೆನ್ಸಿಯನ್ನು ಜಾರಿಗೆ ತಂದ ಕೀರ್ತಿ ಇವರಿಗೆ ಸಲ್ಲುತ್ತದೆ.
- ಹಣದುಬ್ಬರ ಹತ್ತಿಕ್ಕುವ ಸೇನಾನಿ' ಎಂದೇ ಜನಪ್ರಿಯವಾಗಿರುವ ಅವರು ಆರ್ಥಿಕ ತಜ್ಞರಾಗಿ, ಆರ್ಥಿಕ ಸಲಹೆಗಾರರಾಗಿ & ಖ್ಯಾತ ಬ್ಯಾಂಕರ್ ಆಗಿ ಅಪಾರ ಅನುಭವ ಹೊಂದಿದ್ದಾರೆ. ಭಾರತದ ಆರ್ಥಿಕ ವಲಯದಲ್ಲಿ ಅಪಾರ ಭರವಸೆಯನ್ನು ಮೂಡಿಸಿದೆ. **ಅಂತರಾಷ್ಟ್ರೀಯ ಹಣಕಾಸು ನಿಧಿ (ಐಎಂಎಫ್)** ಸಂಸ್ಥೆಯಲ್ಲಿ ಕೆಲಸ ಮಾಡಿ ನಂತರ ಆರ್‌ಬಿಐನ ಗೌವರ್ನರ್ ಸ್ಥಾನಕ್ಕೆ ನೇಮಕಗೊಂಡ 6ನೇ ವ್ಯಕ್ತಿಯಾಗಿದ್ದಾರೆ.
- "70 ವರ್ಷಗಳ ಆರ್‌ಬಿಐನ ಇತಿಹಾಸಲ್ಲಿ **ಡೆಪ್ಯುಟಿ ಗೌವರ್ನರ್ ಹುದ್ದೆಯಿಂದ ನೇರವಾಗಿ ಪೂರ್ಣ ಪ್ರಮಾಣದ ಗೌವರ್ನರ್ ಹುದ್ದೆಗೆ ಏರಿದ ಪ್ರಥಮ** ಆರ್ಥಿಕ ತಜ್ಞ"ರಾಗಿದ್ದಾರೆ.

### ಊರ್ಜಿತ್ ಆರ್ ಪಟೇಲ್ ಅವರ ಪರಿಚಯ:-

- **1963ರ ಅಕ್ಟೋಬರ್ 28ರಂದು ಕೀನ್ಯಾದ ನೈರೋಬಿದಲ್ಲಿ** ಸಣ್ಣ ಉದ್ಯಮಗಳ ಕುಟುಂಬದಲ್ಲಿ **ಊರ್ಜಿತ್ ಆರ್** ಪಟೇಲ್ ಅವರು ಜನಿಸಿದರು.

### ಪಟೇಲ್ ಅವರ ವಿದ್ಯಾಭ್ಯಾಸ:-

- ಕೀನ್ಯಾದಲ್ಲಿ ಪ್ರಾಥಮಿಕ ಶಿಕ್ಷಣ ಪೂರೈಸಿರುವ ಊರ್ಜಿತ್ ಉನ್ನತ ಶಿಕ್ಷಣಕ್ಕಾಗಿ ಬ್ರಿಟನ್‌ಗೆ ತೆರಳಿ ಅಲ್ಲಿ ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್‌ನಲ್ಲಿ ಪದವಿ ಗಳಿಸಿದರು.
- 1986ರಲ್ಲಿ ಆಕ್ಸ್‌ಫರ್ಡ್ ವಿ.ವಿ. ಯಿಂದ ಎಂ.ಫಿಲ್ ಪದವಿ ಪಡೆದರು. ಡಾಕ್ಟರೇಟ್ ಪದವಿಗಾಗಿ ಅಮೆರಿಕಾಕ್ಕೆ ತೆರಳಿದ ಪಟೇಲ್ ಅವರು 199... ವಿ.ವಿ.ಯಲ್ಲಿ ಪಿ.ಹೆಚ್.ಡಿ ಪದವಿ ...

### ಊರ್ಜಿತ್ ಅವರ ವಿದೇಶಿ ...ಪ್ರತಿಕ್ರಿಯೆ:-

- ಊರ್ಜಿತ್ ಪಟೇಲ್ ... ವಿದೇಶಿದಲ್ಲಿ ಜನಿಸಿದ್ದರೂ ಆರ್‌ಬಿಐ... ಹುದ್ದೆಗೆ ಏರಿರುವುದಕ್ಕೆ ಸಂಬಂಧಿಸಿ... ಮೋದಿ ಅವರು "ಈ ಹುದ್ದೆಗೆ ... ಬೇಕಾದದ್ದು, ರಾಷ್ಟ್ರೀ... ಮಿಗಿಲಾಗಿ ಪ್ರತಿಭೆ" ... ಅಭಿಪ್ರಾಯ ವ್ಯಕ್ತಪ...
- ಡಾ|| ... ಸಿಂಗ್ ಅವರು ... ಡೆಪ್ಯುಟಿ ಗೌವರ್... ಪಟೇಲ್ ಅವರನ್ನು ನೇಮಿಸುವಾಗ "ದೇ... ಬಹುಮುಖ್ಯ" ಎಂಬ ಹೇಳಿಕೆಯನ್ನು ...
- ಡಾ|| ಪಿ.ವಿ.ನರಸಿಂಹರಾವ್, ಪಿ.ಚಿದಂಬ... ಕೂಡಾ ಪಟೇಲ್ ಅವರ ಅಪಾರ ಜ್ಞಾ... ನೀತಿ ರೂಪಿಸುವ ತಾಕತ್ತನ್ನು ಪ್ರಶಂಸಿದ...
- 1995ರವರೆಗೆ ಐಎಂಎಫ್‌ನ, ಅಮೆರಿಕ, ... ಮ್ಯಾನ್ಮಾರ್ ವಿಭಾಗಗಳಲ್ಲಿ ಕೆಲಸ ಮಾಡಿ... ಪದನಿಯೋಜನೆ ಮೇರೆಗೆ ಆರ್‌ಬಿಐಗೆ ...
- 1998 ರಿಂದ 2001ರವರೆಗೆ ಹಣಕಾಸು ... ಸಲಹೆಗಾರರಾಗಿ ಕಾರ್ಯ ನಿರ್ವಹಿಸಿದ್ದಾ... ಗುಜರಾತಿನ ಅಂದಿನ ಮುಖ್ಯಮಂತ್ರಿ ನರೇ... ಅವರು ಗುಜರಾತ್ ರಾಜ್ಯ ಪೆಟ್ರೋಲಿಯ... ಕಾರ್ಯ ನಿರ್ವಾಹಕೇತರ ... ನಿಯುಕ್ತಿಗೊಂಡರು.

### ಯುಪಿಎ ಸರ್ಕಾರದ 100 ದಿನದ ಕ್ರಿಯಾ ...

- 2009ರಲ್ಲಿ ಯುಪಿಎ ಸರ್ಕಾರದ ... ಆರಂಭದಲ್ಲಿ 100 ದಿನಗಳ ಕ್ರಿಯಾ ... ಪರಿಶೀಲನೆಗಾಗಿ ಪರಿಣಿತರ ತಂಡ... ಸಂದರ್ಭದಲ್ಲಿ ಇವರು ಟಿವಿಯಲ್ಲಿ ... ಯೋಜನೆಗಳ ವಿಶ್ಲೇಷಕರಾಗಿ ಗಮನ ...

### ಹಣದುಬ್ಬರ ನೀತಿಗೆ ಸಂಬಂಧಿಸಿದ ವರದಿ...

- 2012ರಲ್ಲಿ ಹಣದುಬ್ಬರ ನೀತಿ ... ದಬ್ಬಾರ್ ಅವರೊಂದಿಗೆ ಸೇರಿ ಸಿದ್ಧಪಡಿ... ಅವರ ಸೂಕ್ಷ್ಮ ಸಂವೇದನೆಗೆ ಸಾಕ್ಷಿಯಾ... ವರದಿಯು ಊರ್ಜಿತ್ ಪಟೇಲ್ ಅವರನ್ನು ... ಡೆಪ್ಯುಟಿ ಗೌವರ್ನರ್ ಹುದ್ದೆ ಪಡೆಯುವಂತೆ ...

## ಹಣಕಾಸು ನೀತಿ ಚೌಕಟ್ಟು ಪರಿಷ್ಕರಣೆ ಸಮಿತಿ
## Monetary Policy Frame work Review Committee - MPC

- 2013ರ ಸೆಪ್ಟೆಂಬರ್ ನಲ್ಲಿ ರಘುರಾಂ ರಾಜನ್ ಅವರು ಗೌವರ್ನರ್ ಆದ ವಾರದೊಳಗೆ ಹಣಕಾಸು ನೀತಿ ಚೌಕಟ್ಟನ್ನು ಪರಿಷ್ಕರಿಸುವುದಕ್ಕಾಗಿ ಪರಿಣಿತ ಸಮಿತಿಯನ್ನು ನೇಮಿಸಲಾಗಿತ್ತು. ಆ ಸಮಿತಿಯ ಅಧ್ಯಕ್ಷರಾಗಿ ಊರ್ಜಿತ್ ಪಟೇಲ್ ಅವರು ಕಾರ್ಯ ನಿರ್ವಹಿಸಿದ್ದರು. ಈ ಸಮಿತಿಯು 2014ರ ಜನವರಿಯಲ್ಲಿ ತನ್ನ ವರದಿಯನ್ನು ಸಲ್ಲಿಸಿತ್ತು. ಮುಂದಿನ 2 ವರ್ಷಗಳಲ್ಲಿ ರಘುರಾಂ ರಾಜನ್ ಅವರು ಈ ಶಿಫಾರಸ್ಸುಗಳನ್ನು ಜಾರಿಗೆ ತಂದರು.
- ಕೇಂದ್ರ ಸರ್ಕಾರ **2016 ಸೆಪ್ಟೆಂಬರ್ 29** ರಲ್ಲಿ ನೇಮಕ, ಮೊದಲಸಭೆ–**2016 ಅಕ್ಟೋಬರ್ 4,** ಇತ್ತೀಚಿನಸಭೆ: **2016 ಡಿಸೆಂಬರ್ 7,** ಪದನಿಮಿತ್ತ ಅಧ್ಯಕ್ಷರು:– **ಆರ್.ಬಿ.ಐ ಗೌರ್‍ನರ್ (ಊರ್ಜಿತ್ ಆರ್. ಪಟೇಲ್)**
- ವಾರ್ಷಿಕವಾಗಿ **ಕನಿಷ್ಠ 4 ಬಾರಿ ಸಭೆ** ಸೇರುವ ಉದ್ದೇಶ.
- ಈ ಸಮಿತಿಯಲ್ಲಿ ಒಟ್ಟು 6 ಜನ ಸದಸ್ಯರಿದ್ದು, **ತಲಾ 3 ಜನ ಆರ್‌ಬಿಐ ನಿಂದ ಹಾಗೂ ಉಳಿದ 3 ಜನರನ್ನು ಕೇಂದ್ರ ಸರ್ಕಾರ ನೇಮಿಸುತ್ತದೆ.** (ಅಧಿಕಾರಾವಧಿ 4 ವರ್ಷಗಳು)
- **2016 ಆಗಸ್ಟ್ 5 ರಿಂದ 2021 ಮಾರ್ಚ್ ವರೆಗಿನ** ಅವಧಿಯಲ್ಲಿ ಸರ್ಕಾರ ಹಣದುಬ್ಬರದ ದರವನ್ನು ಶೇ 4 ರಷ್ಟು ನಿರ್ಧರಿಸಿದ್ದು, ಇದು ಶೇ 2 ರಷ್ಟು ದರವನ್ನು ಕನಿಷ್ಠ ಮತ್ತು ಶೇ 6 ರಷ್ಟು ಗರಿಷ್ಠ ಮಿತಿಯಲ್ಲಿ ವ್ಯತ್ಯಾಸಗೊಳ್ಳಬಹುದು.
- ಕೇಂದ್ರ ಸರ್ಕಾರವು 1934 ರ ಆರ್‌ಬಿಐ ಕಾಯ್ದೆಯನ್ನು 2016–17 ರ ಹಣಕಾಸು ವರ್ಷದಲ್ಲಿ ಪರಿಷ್ಕರಣೆ ಮಾಡಿದ್ದು, ಆರ್.ಬಿ.ಐ ನ ಸಲಹೆ ಮೇರೆಗೆ ಹಣದುಬ್ಬರದ ದರವನ್ನು **ಪ್ರತಿ 5 ವರ್ಷಗಳಿಗೊಮ್ಮೆ** ಗುರಿ ನಿರ್ಧರಿಸುವ ಜವಾಬ್ದಾರಿಯನ್ನು ಈ ಸಮಿತಿಯು ಹೊಂದಿದೆ.
- ಹಣದುಬ್ಬರದ ನಿಯಂತ್ರಣದೊಂದಿಗೆ ಆರ್ಥಿಕ ಬೆಳವಣಿಗೆ ಸಾಧಿಸುವ ಉದ್ದೇಶದಿಂದ **ರೆಪೋ ದರವನ್ನು ನಿರ್ಧರಿಸುವ** ಮತ್ತು ಹಣಕಾಸು ನೀತಿಯಲ್ಲಿ ಪಾರದರ್ಶಕತೆ ತರುವ ಉದ್ದೇಶ ಹೊಂದಿದೆ
- 2017–18 ರ ಅವಧಿಯಲ್ಲಿ ದೇಶದ ಆರ್ಥಿಕ ಬೆಳವಣಿಗೆ ದರ ಶೇ 7.3 ರಷ್ಟಿದೆ.
- ಆರ್.ಬಿ.ಐ 2017 ಜೂನ್ ಹಣಕಾಸು ನೀತಿಯ ಪ್ರಕಾರ ಚಿಲ್ಲರೆ ಹಣದುಬ್ಬರವು 2017–18 ರ ಮೊದಲಾರ್ಧ ಭಾಗದಲ್ಲಿ ಶೇ 2 ರಿಂದ ಶೇ 3.5 ಹಾಗೂ ದ್ವಿತೀಯಾರ್ಧದಲ್ಲಿ ಶೇ 3.5 ರಿಂದ ಶೇ 4.5 ರವರೆಗೆ ಇರುತ್ತದೆ ಎಂದು ಅಂದಾಜಿಸಿದೆ.

### ವಿಶ್ವದ ಪ್ರಮುಖ ಕೇಂದ್ರ ಬ್ಯಾಂಕುಗಳು

| ರಾಷ್ಟ್ರ | ಕೇಂದ್ರ ಬ್ಯಾಂಕು |
|---|---|
| ಆಸ್ಟ್ರೇಲಿಯಾ | ರಿಸರ್ವ್ ಬ್ಯಾಂಕ್ ಆಫ್ ಆಸ್ಟ್ರೇಲಿಯಾ |
| ಬಾಂಗ್ಲಾದೇಶ | ಬಾಂಗ್ಲಾದೇಶ ಬ್ಯಾಂಕು |
| ಭೂತಾನ್ | ರಾಯಲ್ ಮಾನಿಟರಿ ಅಥಾರಿಟಿ ಆಫ್ ಭೂತಾನ್ |
| ಬ್ರೆಜಿಲ್ | ಸೆಂಟ್ರಲ್ ಬ್ಯಾಂಕ್ ಆಫ್ ಬ್ರೆಜಿಲ್ |
| ಚೀನಾ | ಪೀಪಲ್ಸ್ ಬ್ಯಾಂಕ್ ಆಫ್ ಚೀನಾ |
| ಜರ್ಮನಿ | ಡ್ಯೂಶ್ ಬುಂಡೇಸ್ ಬ್ಯಾಂಕ್ |
| ಇಟಲಿ | ಬ್ಯಾಂಕ್ ಆಫ್ ಇಟಲಿ |
| ಯು.ಕೆ | ಬ್ಯಾಂಕ್ ಆಫ್ ಇಂಗ್ಲೆಂಡ್ |
| ಸ್ವೀಡನ್ | Sveriges Riks bank |
| ಭಾರತ | ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ |
| ಜಪಾನ್ | ಬ್ಯಾಂಕ್ ಆಫ್ ಜಪಾನ್ |
| ಪಾಕಿಸ್ತಾನ | ಸ್ಟೇಟ್ ಬ್ಯಾಂಕ್ ಆಫ್ ಪಾಕಿಸ್ತಾನ |
| ರಷ್ಯಾ | ಬ್ಯಾಂಕ್ ಆಫ್ ರಷ್ಯಾ |
| ಸಿಂಗಪುರ | ಮಾನಿಟರಿ ಅಥಾರಿಟಿ ಆಫ್ ಸಿಂಗಪುರ |
| ದ. ಆಫ್ರಿಕಾ | ಸೌತ್ ಆಫ್ರಿಕನ್ ರಿಸರ್ವ್ ಬ್ಯಾಂಕ್ |
| ಶ್ರೀಲಂಕಾ | ಸೆಂಟ್ರಲ್ ಬ್ಯಾಂಕ್ ಆಫ್ ಶ್ರೀಲಂಕಾ |
| ಸ್ವಿಡ್ಜರ್ಲೆಂಡ್ | ಸ್ವಿಸ್ ನ್ಯಾಷನಲ್ ಬ್ಯಾಂಕ್ |
| ಥೈವಾನ್ | ಸೆಂಟ್ರಲ್ ಬ್ಯಾಂಕ್ ಆಫ್ ದ ರಿಪಬ್ಲಿಕ್ ಆಫ್ ದ ಚೈನಾ (ಥೈವಾನ್) |
| ಥೈಲ್ಯಾಂಡ್ | ಬ್ಯಾಂಕ್ ಆಫ್ ಥೈಲ್ಯಾಂಡ್ |
| ಯು.ಎಸ್.ಎ | ಫೆಡರಲ್ ರಿಸರ್ವ್ ಬ್ಯಾಂಕ್ |
| ವೆನಿಜುವೆಲಾ | ಸೆಂಟ್ರಲ್ ಬ್ಯಾಂಕ್ ಆಫ್ ವೆನಿಜುವೆಲಾ |
| ದ.ಸೂಡಾನ್ | ಬ್ಯಾಂಕ್ ಆಫ್ ಸೌತ್ ಸೂಡಾನ್ |
| ಸರ್ಬಿಯಾ | ನ್ಯಾಷನಲ್ ಬ್ಯಾಂಕ್ ಆಫ್ ಸರ್ಬಿಯಾ |
| ಡೆನ್ಮಾರ್ಕ್ | ಡ್ಯಾನ್ಮಾರ್ಕ್ ನ್ಯಾಷನಲ್ ಬ್ಯಾಂಕ್ |

**ಕೇಂದ್ರ ಬ್ಯಾಂಕ್ ಹೊಂದಿಲ್ಲದ ಕೆಲವು ದೇಶಗಳು**

ಮೊನಾಕೊ, ನೌರು, ಕಿರಿಬಾಟಿ, ಮಾರ್ಷಲ್ ಐಲ್ಯಾಂಡ್ ಫೆಡರೇಟೆಡ್ ಸ್ಟೇಟ್ ಆಫ್ ಮೈಕ್ರೋನೇಷಿಯಾ, Palau

## ಆರ್‌ಬಿಐ ನ ಕಾರ್ಯಗಳು (Functions of RBI)

ಆರ್‌ಬಿಐ ಒಂದು ಕೇಂದ್ರೀಯ ಬ್ಯಾಂಕ್ ಆಗಿದ್ದು, ಇದು ಅನೇಕ ಕಾರ್ಯಗಳನ್ನು ನಿರ್ವಹಿಸುತ್ತದೆ. ಆ ಕಾರ್ಯಗಳನ್ನು ಪ್ರಮುಖವಾಗಿ ೩ ವಿಭಾಗಗಳಾಗಿ ವಿಂಗಡಿಸಬಹುದು.

ಕಾರ್ಯಗಳು

1) ಸಾಂಪ್ರದಾಯಿಕ ಕಾರ್ಯಗಳು (Traditional Functions)

2) ಅಭಿವೃದ್ಧಿ ಕಾರ್ಯಗಳು (Developmental Functions)

3) ಇತರೆ ಕಾರ್ಯಗಳು (Other Functions)

### ಸಾಂಪ್ರದಾಯಿಕ ಕಾರ್ಯಗಳು:-

✦ **ನೋಟು ಮುದ್ರಣ & ಚಲಾವಣೆಯ ಅಧಿಕಾರ** :- ಆರ್‌ಬಿಐ ದೇಶದಲ್ಲಿ ನೋಟುಗಳನ್ನು ಮುದ್ರಿಸಿ ಚಲಾವಣೆಗೆ ತರುವ ಪರಮಾಧಿಕಾರವನ್ನು ಹೊಂದಿದೆ. ಒಂದು ರೂಪಾಯಿ ನೋಟುಗಳನ್ನು ಹೊರತುಪಡಿಸಿ 2 ರೂ ನಿಂದ 2 ಸಾವಿರದವರೆಗಿನ ನೋಟುಗಳನ್ನು ಮುದ್ರಿಸಿ ಚಲಾವಣೆಗೆ ತರುತ್ತದೆ.

✦ ನಾಣ್ಯಗಳು & ಒಂದು ರೂ ನೋಟನ್ನು (ಪ್ರಸ್ತುತವಾಗಿ ಚಲಾವಣೆಯಲ್ಲಿಲ್ಲ) ಕೇಂದ್ರ ಹಣಕಾಸು ಸಚಿವಾಲಯವು ಮುದ್ರಿಸುತ್ತದೆ. **'ಕನಿಷ್ಠ ಆಪದ್ಧನ ಮೀಸಲು ಅನುಪಾತ'** ಅಂದರೆ 115 ಕೋಟಿ ಮೌಲ್ಯದ ಚಿನ್ನ & 85 ಕೋಟಿ ಮೌಲ್ಯದ ಸಾಲ ಪತ್ರಗಳ ಆಧಾರದ ಮೇಲೆ ನೋಟು ಮುದ್ರಿಸುವ ಏಕಸ್ವಾಮ್ಯ ಅಧಿಕಾರ ಹೊಂದಿದೆ.

✦ **ಸರ್ಕಾರದ ಬ್ಯಾಂಕ್**:- ಇದು ಸರ್ಕಾರದ ಬ್ಯಾಂಕ್ ಪ್ರತಿನಿಧಿ ಆಗಿ & ಸಲಹೆಗಾರರಾಗಿ ಕಾರ್ಯ ನಿರ್ವಹಿಸುತ್ತದೆ. ಸರ್ಕಾರದ ಸಲಹೆಗಾರರಾಗಿ ಆರ್‌ಬಿಐ ಎಲ್ಲಾ ಹಣಕಾಸಿನ ವಿಚಾರಗಳ ಮೇಲೆ ಸರ್ಕಾರಕ್ಕೆ ಸಲಹೆ ನೀಡುತ್ತದೆ.

✦ **ಬ್ಯಾಂಕ್‌ಗಳ ಬ್ಯಾಂಕ್**:- ಆರ್‌ಬಿಐ ಬ್ಯಾಂಕ್‌ಗಳ ಬ್ಯಾಂಕ್ ಆಗಿ, ಮಾತೃ ಬ್ಯಾಂಕ್ ಆಗಿ ಕಾರ್ಯ ನಿರ್ವಹಿಸುತ್ತದೆ. 1949ರ ಬ್ಯಾಂಕಿಂಗ್ ನಿಯಂತ್ರಣ ಕಾಯ್ದೆ ಪ್ರಕಾರ ವಾಣಿಜ್ಯ ಬ್ಯಾಂಕ್‌ಗಳು ಕೇಂದ್ರ ಬ್ಯಾಂಕ್ ಜೊತೆಗೆ ತಮ್ಮ ಠೇವಣಿಯ ಒಂದಂಶವನ್ನು ಕಾಯ್ದಿರಿಸಿದ ಅಂಶವಾಗಿ ಇಟ್ಟಿರತಕ್ಕದ್ದು.

✦ **ಸಾಲ ನಿಯಂತ್ರಣ**:- ಪರಿಮಾಣಾತ್ಮಕ & ಗುಣಾತ್ಮಕ ಕ್ರಮಗಳ ಮೂಲಕ ಆರ್.ಬಿ.ಐ ಆರ್ಥಿಕ ಸ್ಥಿರತೆ & ಅಭಿವೃದ್ಧಿಗಾಗಿ ಸಾಲದ ಪೂರೈಕೆ ಮೇಲೆ ಸೂಕ್ತ ನಿಯಂತ್ರಣವನ್ನು ಸಾಧಿಸಲು ತ್ರೈಮಾಸಿಕವಾಗಿ ಹಣಕಾಸು ನೀತಿಯನ್ನು ಪ್ರಕಟಿಸುತ್ತದೆ.

✦ ಹಣದ ಮಾರುಕಟ್ಟೆಯ ನೇತಾರರಾಗಿ ಕಾರ್ಯ ನಿರ್ವಹಿಸುತ್ತದೆ.

✦ ಕಟ್ಟಕಡೆಯ ಸಾಲದಾತನಾಗಿ ಕಾರ್ಯ ನಿರ್ವಹಿಸುತ್ತದೆ.

✦ ವಿದೇಶಿ ವಿನಿಮಯ ಪಾಲಕ

✦ ಆರ್‌ಬಿಐ ವಾಣಿಜ್ಯ ಬ್ಯಾಂಕ್‌ಗಳಿಗೆ ತೀರುವೆ ಮನೆಯಾಗಿದೆ.

### ಅಭಿವೃದ್ಧಿ ಕಾರ್ಯಗಳು:-

1) ಕೃಷಿ ಹಣಕಾಸು ಕಾರ್ಯಗಳು

2) ಕೈಗಾರಿಕಾ ಹಣಕಾಸು ಕಾರ್ಯಗಳು

### ಇತರೆ ಕಾರ್ಯಗಳು:-

✦ ದೇಶದ ಒಟ್ಟಾರೆ ಬ್ಯಾಂಕಿಂಗ್ ವ್ಯವಸ್ಥೆಯನ್ನು ನಿಯಂತ್ರಿಸುತ್ತದೆ.

✦ ಹಣದುಬ್ಬರ, ದೇಶದ ಹಣಕಾಸು ನೀತಿ, ವಿದೇಶಿ ವಿನಿಮಯ ನಿಯಂತ್ರಣ ಮಾಡುತ್ತದೆ.

✦ ಸೆಬಿ ಜೊತೆಗೂಡಿ ಆಂಶಿಕವಾಗಿ ಷೇರುಪೇಟೆಗೆ ನಿಯಂತ್ರಣ ಮಾಡುತ್ತದೆ.

ಬ್ಯಾಂಕ್‌ನ ಅಧಿಕಾರಿಗಳಿಗೆ 2 ತರಬೇತಿ ಕಾಲೇಜುಗಳಿವೆ.

1) ರಿಸರ್ವ್ ಬ್ಯಾಂಕ್ ಸ್ಟಾಫ್ ಕಾಲೇಜು – ಚೆನ್ನೈ

2) ಕಾಲೇಜ್ ಆಫ್ ಅಗ್ರಿಕಲ್ಚರ್ ಬ್ಯಾಂಕಿಂಗ್ – ಪೂನ.

### ಆರ್‌ಬಿಐನಿಂದ ನಡೆಸಲ್ಪಡುವ 3 ಸ್ವಾಯತ್ತತಾ ಸಂಸ್ಥೆಗಳು:-

1. **ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಬ್ಯಾಂಕ್ ಮ್ಯಾನೇಜ್‌ಮೆಂಟ್** – 1969ರಲ್ಲಿ ಸ್ಥಾಪನೆಯಾಯಿತು. ಇದು ಪೂನಾದಲ್ಲಿದೆ.
2. **ಇಂದಿರಾಗಾಂಧಿ ಇನ್‌ಸ್ಟಿಟ್ಯೂಟ್ ಆಫ್ ಡೆವಲಪ್‌ಮೆಂಟ್ ರೀಸರ್ಚ್** – 1987ರಲ್ಲಿ ಸ್ಥಾಪನೆಯಾಯಿತು. ಇದು ಮುಂಬೈನಲ್ಲಿದೆ.
3. **ಇನ್‌ಸ್ಟಿಟ್ಯೂಟ್ ಫಾರ್ ಡೆವಲಪ್‌ಮೆಂಟ್ ಅಂಡ್ ರೀಸರ್ಚ್ ಇನ್ ಬ್ಯಾಂಕಿಂಗ್ ಟೆಕ್ನಾಲಜಿ** – ಇದು ಬ್ಯಾಂಕಿಂಗ್ ಸಂಶೋಧನಾ ಸಂಸ್ಥೆಯಾಗಿದ್ದು ಇದು 1996ರಲ್ಲಿ ರಿಸರ್ವ್ ಬ್ಯಾಂಕ್‌ನಿಂದ ಸ್ಥಾಪನೆಯಾಗಿದೆ. ಇದರ ಕೇಂದ್ರ ಕಚೇರಿಯು ಹೈದರಾಬಾದ್‌ನಲ್ಲಿದೆ.

# ಹಣಕಾಸು ನೀತಿ (Monetary Policy of RBI)

ಭಾರತದ ಆರ್ಥಿಕ ಅಭಿವೃದ್ಧಿ & ಸ್ಥಿರತೆಗಾಗಿ ದೇಶದ ಅಭಿವೃದ್ಧಿಯ 2 ಆಧಾರ ಸ್ತಂಭಗಳಾದ ಕೇಂದ್ರ ಸರ್ಕಾರ & ಕೇಂದ್ರ ಬ್ಯಾಂಕು ಅನುಸರಿಸುವ ಆರ್ಥಿಕ ತಂತ್ರ, ರೀತಿ-ನೀತಿಗಳನ್ನು ಸಮಗ್ರ ಆರ್ಥಿಕ ನೀತಿ ಎನ್ನಬಹುದು. ಇದರಲ್ಲಿ ಹಣಕಾಸು ನೀತಿ ಅಥವಾ ವಿತ್ತ ನೀತಿ ಮುಖ್ಯವಾಗಿದ್ದು, ದೇಶದ ಕೇಂದ್ರ ಬ್ಯಾಂಕ್ ಎನಿಸಿದ ಭಾರತದ ರಿಸರ್ವ್ ಬ್ಯಾಂಕ್ ತ್ರೈಮಾಸಿಕವಾಗಿ ರೂಪಿಸುತ್ತದೆ.

**ಅರ್ಥ:-** ಹಣದ ಪೂರೈಕೆ, ಹಣದ ಮುದ್ರಣ, ಚಲಾವಣೆ ಮತ್ತು ನಿಯಂತ್ರಣದ ಬಗ್ಗೆ ಕೇಂದ್ರ ಬ್ಯಾಂಕ್ ಅನುಸರಿಸುವ ನೀತಿಯಾಗಿದೆ. ಈ ನೀತಿಯು ಕೇವಲ **ವಾಣಿಜ್ಯ ಬ್ಯಾಂಕುಗಳಿಗೆ ಅನ್ವಯಿಸುತ್ತದೆ.**

**ಉದ್ದೇಶಗಳು:-**

+ ತಟಸ್ಥ ಹಣಕಾಸು ನೀತಿ
+ ವಿನಿಮಯ ದರದಲ್ಲಿ ಸ್ಥಿರತೆ
+ ಪೂರ್ಣ ಉದ್ಯೋಗ ಸ್ಥಾಪನೆ
+ ವ್ಯಾಪಾರಿ ಚಕ್ರಗಳ ನಿಯಂತ್ರಣ
+ ಆರ್ಥಿಕ ಅಭಿವೃದ್ಧಿ ಸ್ಥಾಪನೆ

## ಹಣಕಾಸು ನೀತಿಯ ಸಾಧನಗಳು/ಸಾಲನಿಯಂತ್ರಣ ಸಾಧನಗಳು (Instruments of Monetary Policy)

**ಪರಿಮಾಣಾತ್ಮಕ ಕ್ರಮಗಳು (Quatitive Measures):-**

+ ಆರ್.ಬಿ.ಐ ನ ಹಣಕಾಸು ನೀತಿಯ ಅತ್ಯಂತ ಪರಿಣಾಮಕಾರಿ ಸಾಧನ ವಾಗಿದ್ದು, ಆರ್ಥಿಕ ಪರಿಸ್ಥಿತಿಗೆ ತಕ್ಕಂತೆ ಹಣಕಾಸು ನೀತಿಯ ಪರಿಷ್ಕರಣೆ ಸಮಿತಿಯ ನಿರ್ದೇಶನದ ಮೇರೆಗೆ ನಿರ್ಧರಿಸುತ್ತವೆ. ಅವುಗಳೆಂದರೆ –
+ ಬ್ಯಾಂಕು ದರ ನೀತಿ (Bank Rate Policy)
+ ಮುಕ್ತ ಪೇಟೆ ಕಾರ್ಯಾಚರಣೆ (Open Market Operation)
+ ನಗದು ಮೀಸಲು ಅನುಪಾತ (CRR- Cash Reserve Ratio)
+ ಶಾಸನಬದ್ಧ ದ್ರವ್ಯತೆ ಅನುಪಾತ (SLR - Statutory Liquidity Ratio)
+ ರೆಪೋ ಮತ್ತು ರಿವರ್ಸ್ ರೆಪೋ ದರ (Repo & Reverse Repo Rate)

### ಬ್ಯಾಂಕ್‌ದರ ನೀತಿ (Bank Rate Policy)

+ ವಾಣಿಜ್ಯ ಬ್ಯಾಂಕ್‌ಗಳು ಇಡುವ ಹುಂಡಿಗಳು ಅಥವಾ ಒದಗಿಸುವ ಪತ್ರಗಳ ಮೇಲೆ ಒಂದು ನಿರ್ಧಿಷ್ಟ ಬಡ್ಡಿ ದರದಲ್ಲಿ ಕೇಂದ್ರ ಬ್ಯಾಂಕು ಸಾಲ ನೀಡುತ್ತದೆ. ಅದಕ್ಕೆ ಬ್ಯಾಂಕ್ ದರ / ವಟ್ಟದ ದರ ಎನ್ನುವರು. ಇದಕ್ಕೆ ಸಂಬಂಧಿಸಿದ ನೀತಿಯೇ **ಬ್ಯಾಂಕ್ ದರ** ನೀತಿಯಾಗಿದೆ.
+ ರಿಸರ್ವ್ ಬ್ಯಾಂಕ್ ಹಣದುಬ್ಬರದ ಸಂದರ್ಭದಲ್ಲಿ ಬ್ಯಾಂಕ್‌ದರವನ್ನು ಹೆಚ್ಚಿಸಿ ಹಣದ ಹರಿವನ್ನು ನಿಯಂತ್ರಿಸುತ್ತದೆ. ಅದೇ ರೀತಿ ಆರ್ಥಿಕ ಹಿಂಜರಿತ ಅಥವಾ ಅನಪ್ರಸರಣದ ಸಮಯದಲ್ಲಿ ಬ್ಯಾಂಕ್‌ದರ ಕಡಿಮೆ ಮಾಡಿ ಹಣದ ಹರಿವನ್ನು ಹೆಚ್ಚಿಸುತ್ತದೆ.
+ ಪ್ರಸ್ತುತ ಬ್ಯಾಂಕ್ ದರ – 6.50% (2017 ಜೂನ್ ಹಣಕಾಸು ನೀತಿ)

### ಮುಕ್ತ ಮಾರುಕಟ್ಟೆ ನೀತಿ (Open Market Operation)

+ ರಿಸರ್ವ್ ಬ್ಯಾಂಕ್ ಮುಕ್ತ ಮಾರುಕಟ್ಟೆಯಲ್ಲಿ ಸಾಲದ ಪತ್ರಗಳನ್ನು ಮತ್ತು ಭದ್ರತೆಗಳನ್ನು ಮಾರುವ ಮತ್ತು ಕೊಳ್ಳುವ ಕ್ರಿಯೆಯನ್ನು **"ಮುಕ್ತ ಮಾರುಕಟ್ಟೆ"** ಕಾರ್ಯಾಚರಣೆ ಎನ್ನುವರು.
+ ದೇಶದಲ್ಲಿ ಹಣದುಬ್ಬರ ಉಂಟಾದಾಗ ಸಾಲ ಪತ್ರಗಳನ್ನು ಮತ್ತು ಮತ್ತಿತರ ಭದ್ರತಾ ಪತ್ರಗಳನ್ನು ಮಾರಿದಾಗ ಹಣದ ಹರಿವು ಪ್ರಮಾಣ ಕಡಿಮೆಯಾಗುತ್ತದೆ. ಹಾಗೂ ಅವುಗಳನ್ನು ಮತ್ತೆ ಆರ್.ಬಿ.ಐ ಕೊಂಡಾಗ ದೇಶದಲ್ಲಿ ಹಣದ ಹರಿವು ಹೆಚ್ಚಾಗುತ್ತದೆ. ಹೀಗೆ ಆರ್ಥಿಕತೆಯಲ್ಲಿ ಸ್ಥಿರತೆ ತರುವ ಕಾರ್ಯವನ್ನು ಆರ್.ಬಿ.ಐ ನಿರ್ವಹಿಸುತ್ತದೆ.

### ನಗದು ಮೀಸಲು ಅನುಪಾತ (Cash Reserve Ratio)

+ ವಾಣಿಜ್ಯ ಬ್ಯಾಂಕ್‌ಗಳು ಸಾರ್ವಜನಿಕರಿಂದ ಸ್ವೀಕರಿಸಿದ ಠೇವಣಿ ಹಣದಲ್ಲಿ ರಿಸರ್ವ್‌ಬ್ಯಾಂಕ್‌ನಲ್ಲಿ ಇಡಬೇಕಾದ ನಿರ್ಧಿಷ್ಟ ಮೊತ್ತದ ಠೇವಣಿಯನ್ನು **ನಗದು ಮೀಸಲು ಅನುಪಾತ** ಎನ್ನುವರು.
+ ಪ್ರಸ್ತುತ (2017 ಜೂನ್) ಸಿ.ಆರ್.ಆರ್ – **ಶೇ 4**
+ ರಿಸರ್ವ್ ಬ್ಯಾಂಕ್ ಹಣದುಬ್ಬರದ ಸಂದರ್ಭದಲ್ಲಿ ನಗದು ಮೀಸಲು ಅನುಪಾತವನ್ನು ಹೆಚ್ಚಿಸಿ ಹಣದ ಹರಿವನ್ನು ನಿಯಂತ್ರಿಸುತ್ತದೆ.
+ ಅದೇ ರೀತಿ ಆರ್ಥಿಕ ಹಿಂಜರಿತ ಅಥವಾ ಅನಪ್ರಸರಣದ ಸಮಯದಲ್ಲಿ ನಗದು ಮೀಸಲು ಅನುಪಾತ ಕಡಿಮೆ ಮಾಡಿ ಹಣದ ಹರಿವನ್ನು ಹೆಚ್ಚಿಸುತ್ತದೆ.

## ಶಾಸನ ಬದ್ಧ ದ್ರವ್ಯತೆಯ ಅನುಪಾತ

**(Statutory Liquidity Ratio)**

- ವಾಣಿಜ್ಯ ಬ್ಯಾಂಕ್‌ಗಳು ಕಾನೂನು ರೀತ್ಯಾ ಠೇವಣಿಗಳಿಗೆ ಅನುಗುಣವಾಗಿ ಎಷ್ಟು ನಗದು ಹಣವನ್ನು ತಮ್ಮಲ್ಲಿಯೇ ಇಟ್ಟುಕೊಳ್ಳಬೇಕೆಂದು ನಿರ್ಧರಿಸುವುದೇ ಶಾಸನ ಬದ್ಧ ದ್ರವ್ಯತಾ ಅನುಪಾತ ಎನ್ನುವರು.
- ಪ್ರಸ್ತುತ ಶಾಸನ ಬದ್ಧ ದ್ರವ್ಯತೆ ಅನುಪಾತ (SLR) – 20% (2017 ರ ಜೂನ್ 7 ರ ಹಣಕಾಸು ನೀತಿಯ ಪ್ರಕಾರ ಆರ್.ಬಿ.ಐ 50 ಅಂಶಗಳಷ್ಟು ಎಸ್.ಎಲ್.ಆರ್ ದರವನ್ನು ಕಡಿಮೆಗೊಳಿಸಿದೆ.
- ರಿಸರ್ವ್ ಬ್ಯಾಂಕ್ ಹಣದುಬ್ಬರದ ಸಂದರ್ಭದಲ್ಲಿ ಶಾಸನ ಬದ್ಧ ದ್ರವ್ಯತೆ ಅನುಪಾತವನ್ನು ಹೆಚ್ಚಿಸಿ ಸಾಲದ ಪೂರೈಕೆಯನ್ನು ನಿಯಂತ್ರಿಸುತ್ತದೆ. ಅದೇ ರೀತಿ ಆರ್ಥಿಕ ಹಿಂಜರಿತ ಅಥವಾ ಅನಪ್ರಸರಣದ ಸಮಯದಲ್ಲಿ ಶಾಸನ ಬದ್ಧ ದ್ರವ್ಯತೆ ಅನುಪಾತ ಕಡಿಮೆ ಮಾಡಿ ಹಣದ ಹರಿವನ್ನು ಹೆಚ್ಚಿಸುತ್ತದೆ.

## ರಿಪೋದರ (Repo - Re Purchase Option Rate)

- ರಿಸರ್ವ್‌ಬ್ಯಾಂಕ್ ವಾಣಿಜ್ಯ ಬ್ಯಾಂಕ್‌ಗಳಿಗೆ ನೀಡುವ ಸಾಲಕ್ಕೆ ವಿಧಿಸುವ ಅಲ್ಪಾವಧಿ ಬಡ್ಡಿದರವೇ ರಿಪೋದರ.
- ವಾಣಿಜ್ಯ ಬ್ಯಾಂಕುಗಳು ರಿಸರ್ವ್ ಬ್ಯಾಂಕ್‌ನಿಂದ ಅಲ್ಪಾವಧಿ ಸಾಲ ಪಡೆಯುತ್ತವೆ. ಈ ಸಾಲಕ್ಕೆ ವಾಣಿಜ್ಯ ಬ್ಯಾಂಕುಗಳು ಕೊಡಬೇಕಾದ ಬಡ್ಡಿದರ.
- ರಿಸರ್ವ್ ಬ್ಯಾಂಕ್ ಹಣದುಬ್ಬರದ ಸಂದರ್ಭದಲ್ಲಿ ರಿಪೋ ದರವನ್ನು ಹೆಚ್ಚಿಸಿ ಹಣದ ಹರಿವನ್ನು ನಿಯಂತ್ರಿಸುತ್ತದೆ. ಅದೇ ರೀತಿ ಆರ್ಥಿಕ ಹಿಂಜರಿತ ಅಥವಾ ಅನಪ್ರಸರಣದ ಸಮಯದಲ್ಲಿ ರಿಪೋ ದರ ಕಡಿಮೆ ಮಾಡಿ ಹಣದ ಹರಿವನ್ನು ಹೆಚ್ಚಿಸುತ್ತದೆ.
- ಪ್ರಸ್ತುತ ರಿಪೋ ದರ – 6.25% (2017 ಜೂನ್ ಪ್ರಕಾರ)

## ರಿವರ್ಸ್ ರಿಪೋದರ (Reverse Repo Rate)

- ವಾಣಿಜ್ಯ ಬ್ಯಾಂಕ್‌ಗಳು ರಿಸರ್ವ್‌ಬ್ಯಾಂಕ್‌ನಲ್ಲಿ ಇಟ್ಟ ಹಣಕ್ಕೆ ರಿಸರ್ವ್‌ಬ್ಯಾಂಕ್ ನೀಡುವ ಬಡ್ಡಿ ಅಥವಾ ವಾಣಿಜ್ಯ ಬ್ಯಾಂಕ್‌ಗಳಿಂದ ರಿಸರ್ವ್ ಬ್ಯಾಂಕ್ ಪಡೆಯುವ ಸಾಲಕ್ಕೆ ನೀಡುವ ಬಡ್ಡಿ "ರಿವರ್ಸ್ ರಿಪೋ ದರ".
- ರಿಸರ್ವ್ ಬ್ಯಾಂಕ್ ಹಣದುಬ್ಬರದ ಸಂದರ್ಭದಲ್ಲಿ ರಿವರ್ಸ್ ರಿಪೋ ದರವನ್ನು ಹೆಚ್ಚಿಸಿ ಹಣದ ಹರಿವನ್ನು ನಿಯಂತ್ರಿಸುತ್ತದೆ. ಅದೇ ರೀತಿ ಆರ್ಥಿಕ ಹಿಂಜರಿತ ಅಥವಾ ಅನಪ್ರಸರಣದ ಸಮಯದಲ್ಲಿ ರಿವರ್ಸ್ ರಿಪೋ ದರ ಕಡಿಮೆ ಮಾಡಿ ಹಣದ ಹರಿವನ್ನು ಹೆಚ್ಚಿಸುತ್ತದೆ.
- ಪ್ರಸ್ತುತ ರಿವರ್ಸ್ ರಿಪೋ ದರ – [illegible] (2017 ಜೂನ್ ನಲ್ಲಿ ಹಿಂದೆ ಇದ್ದ [illegible] ಬದಲಾಗಿ 25 ಅಂಶಗಳನ್ನು ಹೆಚ್ಚಿಸಲಾಗಿದೆ)

## ಗುಣಾತ್ಮಕ ಕ್ರಮಗಳು/ಆಯ್ದ ಸಾಲ ನಿಯಂತ್ರಣ ಕ್ರಮಗಳು (Qualititive / Selective Measures)

- ಅನುಭೋಗಿ ಸಾಲ ನಿಯಂತ್ರಣ
- ಸಾಲ ಪಡಿತರ
- ನಿರ್ದೇಶನ ನೀಡಿಕೆ
- ಅಂಚಿನ ಅಗತ್ಯ ಹಣ ನಿರ್ಧಾರ
- ನೈತಿಕ ಪ್ರೇರಣೆ
- ಪ್ರಚಾರ & ಜಾಹೀರಾತು
- ನೇರ ಕ್ರಮ

| 2017 ಜೂನ್ ಹಣಕಾಸು ನೀತಿ ಪ್ರಕಾರ | |
|---|---|
| ಬ್ಯಾಂಕುದರ | 6.5% |
| ರೆಪೋದರ | 6.25% |
| ರಿವರ್ಸ್ ರೆಪೋ ದರ | 6% |
| ಶಾಸನಬದ್ಧ ದ್ರವ್ಯತೆ ಅನುಪಾತ | 20% |
| ನಗದು ಮೀಸಲು ಅನುಪಾತ | 4% |
| ಎಂ.ಎಸ್.ಎಫ್ | 6.5% |

## ಆರ್.ಬಿ.ಐ ನ ಪ್ರಕಟಣೆ

Trend and Progress of Banking in India ಶೀರ್ಷಿಕೆಯಡಿಯಲ್ಲಿ ವಾರ್ಷಿಕವಾಗಿ ಕೇಂದ್ರ ಸರ್ಕಾರಕ್ಕೆ 1949 ರ ಬ್ಯಾಂಕಿಂಗ್ ನಿಯಂತ್ರಣ ಕಾಯ್ದೆಯನ್ವಯ ವರದಿಯನ್ನು ಪ್ರಕಟಪಡಿಸುತ್ತಿದ್ದು, ದೇಶದ ಬ್ಯಾಂಕಿಂಗ್ ವಲಯದ ಪ್ರವೃತ್ತಿ & ಅಭಿವೃದ್ಧಿಗಳ ಮೇಲೆ ಬೆಳಕು ಚೆಲ್ಲುತ್ತದೆ. 2014 ಏಪ್ರಿಲ್‌ನಿಂದ ಈ ವರದಿಯನ್ನು ದ್ವೈಮಾಸಿಕವಾಗಿ ಆರ್.ಬಿ.ಐ ಪ್ರಕಟಪಡಿಸುತ್ತಿದೆ.

**ಕರೆ ದರ (Call Rate):-** ಅಂತರ್ ಬ್ಯಾಂಕು ಪಡೆದುಕೊಳ್ಳುವ ದರ ಅಂದರೆ, ಬ್ಯಾಂಕುಗಳು ಒಂದು ದಿನದಿಂದ 14 ದಿನಗಳ ಒಳಗೆ ಪರಿಪಕ್ವತೆ ಅವಧಿ ಹೊಂದಿರುವ ನಿಧಿಯ ಕೊಳ್ಳುವಿಕೆ & ನೀಡುವಿಕೆಯ ಮೇಲೆ ವಿಧಿಸುವ ಅಲ್ಪಾವಧಿ ಬಡ್ಡಿದರ

**MSF-Marginal Standing Facility:-** ಬ್ಯಾಂಕುಗಳು ತುರ್ತು ಸಂದರ್ಭ (ನಗದು ಕೊರತೆ) ಗಳಲ್ಲಿ ಸರ್ಕಾರದ ಅನುಮೋದಿತ ಸಾಲ ಪತ್ರಗಳ ವಿರುದ್ಧವಾಗಿ ಸಾಲ ಪಡೆಯುವ ವಿಶೇಷ ಗವಾಕ್ಷಿ ವ್ಯವಸ್ಥೆ.

# ಭಾರತದ ಹಣಕಾಸು ವ್ಯವಸ್ಥೆ
# Indian Financial System

ಭಾರತದ ಹಣಕಾಸು ವ್ಯವಸ್ಥೆಯಲ್ಲಿ ಹಣದ ಮಾರುಕಟ್ಟೆ & ಬಂಡವಾಳದ ಮಾರುಕಟ್ಟೆಗಳು ಅವಿಭಾಜ್ಯ ಅಂಗಗಳಾಗಿವೆ. ಅಲ್ಪಾವಧಿ ಸಾಲಿಗರು ಮತ್ತು ಸಾಲಗಾರರ ವ್ಯವಹಾರಕ್ಕೆ ಸಂಬಂಧಿಸಿರುವುದು ಹಣದ ಮಾರುಕಟ್ಟೆಯಾದರೆ, ಇದರ ನಿಯಂತ್ರಕ ಆರ್.ಬಿ.ಐ ಹಾಗೂ ದೀರ್ಘಾವಧಿ ವ್ಯವಹಾರಗಳ ಕ್ಷೇತ್ರಗಳಿಗೆ ಸಂಬಂಧಿಸಿದ್ದು ಬಂಡವಾಳ ಮಾರುಕಟ್ಟೆಯಾಗಿರುತ್ತದೆ. ಇದರಲ್ಲಿ ಪ್ರಾಥಮಿಕ ಬಂಡವಾಳ ಮಾರುಕಟ್ಟೆ ಅಥವಾ ಹೊಸ ವಟಾವಣೆ ಮಾರುಕಟ್ಟೆ ಹಾಗೂ ಮಾಧ್ಯಮಿಕ ಅಥವಾ ಹಳೆಯ ವಟಾವಣೆ ಮಾರುಕಟ್ಟೆ ಎಂಬ 2 ಪರಿಕಲ್ಪನೆಗಳಿವೆ. ಈ ಮಾರುಕಟ್ಟೆಯ ಸಂಪೂರ್ಣ ನಿಯಂತ್ರಣ, ಮೇಲ್ವಿಚಾರಣೆ & ವ್ಯವಹಾರಗಳನ್ನು ನಿರ್ವಹಣೆ ಮಾಡುವ ಸಂಸ್ಥೆಯಾಗಿ ಭಾರತೀಯ ಷೇರು ವಿಕ್ರಯ ಮಂಡಳಿ (ಸೆಬಿ)ಯನ್ನು ಗುರ್ತಿಸಬಹುದು. ಇವುಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಈ ಕೆಳಗಿನಂತೆ ಚರ್ಚಿಸಲಾಗಿದೆ.

+ ಹಣಕಾಸು ಆಸ್ತಿಗಳಾದ ಠೇವಣಿ, ಸಾಲ, ಮುಂಗಡ, ಸ್ಟಾಕು, ಬಾಂಡು, ಚೆಕ್, ವಿನಿಮಯ ಹುಂಡಿ, ಸರ್ಕಾರಿ ಸಾಲ ಪತ್ರಗಳ ವಿನಿಮಯ ಸಾಂಸ್ಥಿಕ ವ್ಯವಸ್ಥೆಯಾಗಿದೆ. ಇದರಲ್ಲಿ ಹಣದ ಮಾರುಕಟ್ಟೆ & ಬಂಡವಾಳ ಮಾರುಕಟ್ಟೆ ಎಂಬ 2 ವಿಧಗಳಿವೆ.

### ಹಣದ ಮಾರುಕಟ್ಟೆ & ಬಂಡವಾಳ ಮಾರುಕಟ್ಟೆ ನಡುವೆ ವ್ಯತ್ಯಾಸ

| ಹಣದ ಮಾರುಕಟ್ಟೆ | ಬಂಡವಾಳ ಮಾರುಕಟ್ಟೆ |
|---|---|
| ಅಲ್ಪಾವಧಿ ಸಾಲಿಗರು & ಸಾಲಗಾರರು ಸಂಧಿಸುವ ಸ್ಥಳ | ದೀರ್ಘಾವಧಿ ಸಾಲಿಗರು & ಸಾಲಗಾರರು ಸಂಧಿಸುವ ಸ್ಥಳ |
| ಒಂದು ವರ್ಷಕ್ಕಿಂತ ಕಡಿಮೆ ಅವಧಿಯ ಅಲ್ಪಾವಧಿ ಹಣಕಾಸು ವ್ಯವಹಾರಗಳಿಗೆ ಸಂಬಂಧಿಸಿದೆ. | ಒಂದು ವರ್ಷಕ್ಕಿಂತ ಅಧಿಕ ಅವಧಿಯ ದೀರ್ಘಾವಧಿ ಹಣಕಾಸು ವ್ಯವಹಾರಗಳಿಗೆ ಸಂಬಂಧಿಸಿದೆ. |
| ಕೇಂದ್ರ ಬ್ಯಾಂಕು, ವಾಣಿಜ್ಯ ಬ್ಯಾಂಕುಗಳು, ಬ್ಯಾಂಕೇತರ ಹಣಕಾಸು ಸಂಸ್ಥೆಗಳು ಪ್ರಮುಖವಾಗಿ ಭಾಗವಹಿಸುತ್ತವೆ. | ಹೂಡಿಕೆ ಕಂಪನಿಗಳು, ಸ್ಟಾಕು ವಿನಿಮಯ, ಮ್ಯೂಚುಯಲ್ ಫಂಡ್ ಭಾಗವಹಿಸುತ್ತವೆ. |
| ಖಜಾನೆ ಪತ್ರಗಳು, ವಾಣಿಜ್ಯ ಪತ್ರಗಳು, ವಿನಿಮಯ ಹುಂಡಿಗಳು, ಠೇವಣಿ ಮಾನ್ಯತಾ ಪತ್ರಗಳು, ವಾಗ್ದಾನ ಪತ್ರಗಳು ಪ್ರಮುಖ ಸಾಧನಗಳು | ಷೇರು, ಡಿಬೆಂಚರು, ಬಾಂಡು, ಸೆಕ್ಯುರಿಟಿ ಪತ್ರಗಳು ಪ್ರಮುಖ ಸಾಧನಗಳಾಗಿವೆ. |

### ಹಣದ ಮಾರುಕಟ್ಟೆಯ ಅರ್ಥ (Meaning of Money Market)

+ ಭಾರತದ ಹಣಕಾಸು ಮಾರುಕಟ್ಟೆಯಲ್ಲಿ ಅಲ್ಪಾವಧಿ ಸಾಲಿಗರು & ಸಾಲಗಾರರು ಹಣಕಾಸು ವ್ಯವಹಾರ ನಡೆಸಲು ಸಂಧಿಸುವ ಸಾಂಸ್ಥಿಕ ವ್ಯವಸ್ಥೆಯೇ ಹಣದ ಮಾರುಕಟ್ಟೆಯಾಗಿದೆ.
+ ಇದರಲ್ಲಿ ಭಾರತದ ಕೇಂದ್ರ ಬ್ಯಾಂಕು ನಿಯಂತ್ರಕ ಕಾರ್ಯವನ್ನು ನಿರ್ವಹಿಸುತ್ತಿದ್ದು, ವಾಣಿಜ್ಯ ಬ್ಯಾಂಕುಗಳು & ಇತರ ಬ್ಯಾಂಕೇತರ ಹಣಕಾಸು ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ.

### ಹಣದ ಮಾರುಕಟ್ಟೆಯ ಸಾಧನಗಳು

**ಖಜಾನೆ ಹುಂಡಿಗಳು (Tresury Bills):-** 14 ದಿನಗಳಿಂದ 364 ದಿನಗಳವರೆಗೆ ಭಾರತ ಸರ್ಕಾರವು ಅಲ್ಪಾವಧಿ ಸಾಲವನ್ನು ಪಡೆದುಕೊಳ್ಳುವ ವಾಗ್ದಾನ ಪತ್ರದ ರೂಪದ ಸಾಧನವಾಗಿದೆ.

**ಲಕ್ಷಣಗಳು:-**

+ ಹೆಚ್ಚಿನ ದ್ರವ್ಯತೆ, ಖಾತರಿಯಾದ ಪ್ರತಿಫಲ, ಅತ್ಯಲ್ಪ ಪ್ರಮಾಣದ ನಷ್ಟಭಯ, ಮುಕ್ತ ವರ್ಗಾವಣೆ ಸಾಧ್ಯ.
+ ಮುಖಬೆಲೆ & ಕೊಂಡುಕೊಳ್ಳುವ ಬೆಲೆಯ ನಡುವಿನ ವ್ಯತ್ಯಾಸವನ್ನು ಸೋಡಿದರ ಎನ್ನುವರು.

**ಕರೆ ಹಣ (Call Money):-**

+ ಒಂದು ದಿನದಿಂದ 15 ದಿನಗಳವರೆಗೆ ಅತ್ಯಂತ ಅಲ್ಪಾವಧಿಗೆ ಬ್ಯಾಂಕುಗಳು ಇತರೆ ಬ್ಯಾಂಕುಗಳಿಂದ ಸಾಲ ಪಡೆದುಕೊಳ್ಳುವ ವಿಧಾನ. ಕರೆಹಣ ಸಾಲದ ಮೇಲೆ ವಿಧಿಸುವ ಬಡ್ಡಿಯೇ ಕರೆದರ.

+ ಆರ್.ಬಿ.ಐ ತನ್ನ ನಗದು ಮೀಸಲು ಅನುಪಾತವನ್ನು ಬದಲಾಯಿಸುವಾಗ ಸಾಲವನ್ನು ಕೊಡಲು ವಾಣಿಜ್ಯ ಬ್ಯಾಂಕುಗಳು ವಿತ್ತೀಯ ಕೊರತೆಯನ್ನು ಎದುರಿಸಬೇಕಾಗುತ್ತದೆ.

**ಠೇವಣಿ ಪ್ರಮಾಣ ಪತ್ರ (Certificate of Deposit):-**

+ 3 ತಿಂಗಳಿನಿಂದ 1 ವರ್ಷದ ಒಳಗೆ ವಾಣಿಜ್ಯ ಬ್ಯಾಂಕುಗಳು ನೀಡುವ ಅಲ್ಪಾವಧಿಯ ಭದ್ರತೆ ಇಲ್ಲದ ವರ್ಗಾವಣಾ ಪತ್ರಗಳಾಗಿವೆ. ವ್ಯಕ್ತಿ, ನಿಗಮ, ಕಂಪನಿಗಳಿಗೆ ಇವುಗಳನ್ನು ವಿತರಿಸಲಾಗಿದ್ದು, ಇವುಗಳಿಂದ ಸಿಗುವ ಪ್ರತಿಫಲ ಖಜಾನೆ ಬಿಲ್ಲುಗಳಿಗಿಂತ ಹೆಚ್ಚಾಗಿರುತ್ತವೆ ಹಾಗೆಯೇ ನಷ್ಟದ ಭಯವು ಹೆಚ್ಚಾಗಿರುತ್ತದೆ.

**ವಾಣಿಜ್ಯ ಪತ್ರಗಳು (Comercial Papers):-**

+ 1990 ರಲ್ಲಿ ಭಾರತದಲ್ಲಿ ಇವುಗಳನ್ನು ಪರಿಚಯಿಸಲಾಗಿದ್ದು, ಅಲ್ಪಾವಧಿಯ ಅಂದರೆ, 15 ದಿನಗಳಿಂದ 1 ವರ್ಷದ ಒಳಗಿನ ಭದ್ರತಾ ರಹಿತ ವಾಗ್ದಾನ ಪತ್ರವಾಗಿದೆ.
+ ಇದು ನಿಶ್ಚಿತ ಅವಧಿಯನ್ನು ಹೊಂದಿದೆ. ಹಿಂಬರಹದೊಂದಿಗೆ ಸ್ವಾಮಿತ್ವ ವರ್ಗಾವಣೆ ಮಾಡಬಹುದಾದ ಸಾಧನವಾಗಿದೆ.

**ವಾಣಿಜ್ಯ ಹುಂಡಿಗಳು (Commercial Bills):-**

+ ಅಲ್ಪಾವಧಿಯ & ಸ್ವ ದ್ರವೀಕರಣ ಹೊಂದಿರುವ ಕಡಿಮೆ ನಷ್ಟ ಭಯವಿರುವ ಹಣಕಾಸು ಮಾರುಕಟ್ಟೆ ಸಾಧನವಾಗಿದೆ.
+ ಸರಕಿನ ಮಾರಾಟಗಾರ & ಖರೀದಿಗಾರರ ನಡುವಿನ ವಿನಿಮಯ ಪತ್ರ ಇದಾಗಿದ್ದು, ವ್ಯವಹಾರಗಳಿಗೆ ಕಾರ್ಯಶೀಲ ಬಂಡವಾಳವನ್ನು ಒದಗಿಸುತ್ತದೆ.
+ **Gilt Edged Securities:-** ದೇಶದ ಸರ್ಕಾರಗಳು ವಿತರಿಸುವ ಬಾಂಡುಗಳಾಗಿದ್ದು, ಮೊದಲ ಬಾರಿಗೆ ಬ್ಯಾಂಕ್ ಆಫ್ ಇಂಗ್ಲೆಂಡ್ 1694 ರಲ್ಲಿ ವಿತರಿಸಿದ ಸಾಲ ಪತ್ರಗಳು ಉತ್ತಮ ಉದಾಹರಣೆಯಾಗಿವೆ. ಪ್ರಸ್ತುತ ಇಂಗ್ಲೆಂಡ್, ದ. ಆಫ್ರಿಕಾ & ಭಾರತದಲ್ಲಿ ಅಸ್ತಿತ್ವದಲ್ಲಿವೆ. ಇವು ಅಧಿಕ ಶ್ರೇಣಿಯ ಸೆಕ್ಯುರಿಟಿಗಳಾಗಿದ್ದು, ಕಡಿಮೆ ಮಟ್ಟದ ಪ್ರತಿಫಲ ನೀಡುತ್ತವೆ. ಹಾಗು ಹೂಡಿಕೆ ಸಾಲ ಪತ್ರಗಳಿಗೆ ಹೋಲಿಸಿದರೆ, ಹೆಚ್ಚಿನ ಗಂಡಾಂತರವನ್ನು ಹೊಂದಿರುತ್ತವೆ. ಭಾರತದ ರಿಸರ್ವ್ ಬ್ಯಾಂಕ್ Gilt Account ಪದವನ್ನು ಬಳಸಿದ್ದು, ಸರ್ಕಾರಿ ಸಾಲಪತ್ರಗಳ ಭೌತಿಕವಲ್ಲದ, ನಿರ್ವಹಣೆ & ಸೇವೆಗಳನ್ನು ಪೂರೈಸುವ ಪಾಲಕ ಬ್ಯಾಂಕ್ ಆಗಿ ಈ ಖಾತೆಯನ್ನು ನಿರ್ವಹಿಸುತ್ತದೆ. ಸರ್ಕಾರವು ತನ್ನ ಸಾರ್ವಜನಿಕ ವೆಚ್ಚವು ಆದಾಯವನ್ನು ಮೀರಿದಾಗ ಅದನ್ನು ಸರಿದೂಗಿಸಲು ಉದಾಹರಣೆ ಯುದ್ಧ ಸಂದರ್ಭದಲ್ಲಿ ಹಣ ಪಡೆಯುವಿಕೆ ನಂತರ ಮೂಲ ಸೌಕರ್ಯ ಯೋಜನೆಗಳಿಗೆ ಹಣ ಬಳಕೆ. ಇದಕ್ಕಾಗಿ ಈ ರೀತಿಯ ಸೆಕ್ಯುರಿಟಿಗಳ ಮಾರಾಟ ವ್ಯವಹಾರದಲ್ಲಿ ಭಾಗವಹಿಸುತ್ತದೆ.
+ **ಭವಿಷ್ಯ ಒಪ್ಪಂದ ಪತ್ರಗಳು (Ready Forward Contract):-** ಬ್ಯಾಂಕುಗಳು ಹಣದ ಕೊರತೆಯನ್ನು ಎದುರಿಸುವಾಗ ಆರ್.ಬಿ.ಐ ಅಥವಾ ಇತರ ಬ್ಯಾಂಕುಗಳಿಂದ ಹಣವನ್ನು ಪಡೆಯಲು ಏಕ ಕಾಲದಲ್ಲಿ ಈ ಪತ್ರಗಳ ಮಾರಾಟ & ಕೊಳ್ಳುವಿಕೆಯ ಒಪ್ಪಂದಗಳನ್ನು ಮಾಡಿಕೊಳ್ಳುತ್ತವೆ. ಇದನ್ನೇ ಕೇಂದ್ರ ಬ್ಯಾಂಕು ವಾಣಿಜ್ಯ ಬ್ಯಾಂಕುಗಳಿಗೆ ನೀಡುವ ಸಾಲದ ಮೇಲೆ ವಿಧಿಸುವ ಬಡ್ಡಿಯನ್ನು **ರೆಪೋದರ** ಎನ್ನುವರು.
+ **ಹಣದ ಮಾರುಕಟ್ಟೆಯ ಮ್ಯೂಚುಯಲ್ ಫಂಡ್ಸ್ :-** ಅಧಿಕ ಗುಣಮಟ್ಟದ & ಅತ್ಯಂತ ಅಲ್ಪಾವಧಿ ಪರಿಪಕ್ವತೆ ಹೊಂದಿರುವ ಮ್ಯೂಚುಯಲ್ ಫಂಡ್‌ಗಳ ಮೇಲೆ ಹಣವನ್ನು ತೊಡಗಿಸುವ ವಿಧಾನವಾಗಿದೆ. ಭಾರತದಲ್ಲಿ ಆರ್.ಬಿ.ಐ ಈ ರೀತಿಯ ಸಾಧನಗಳನ್ನು ಅನುಷ್ಠಾನಕ್ಕೆ ತಂದಿದೆ.

**ಹಣದ ಮಾರುಕಟ್ಟೆಯ ಸುಧಾರಣೆಗಳು:-**

+ ಹಣಕಾಸು ವ್ಯವಸ್ಥೆಯ ಕಾರ್ಯನಿರ್ವಹಣೆಯನ್ನು ಪರಿಶೀಲಿಸಲು, 1982 ಡಿಸೆಂಬರ್‌ನಲ್ಲಿ **ಸುಖಮಾರ್ ಚಕ್ರವರ್ತಿ** ಸಮಿತಿಯ ನೇಮಕ. ಇದು ಬೆಳವಣಿಗೆ & ಸಾಮಾಜಿಕ ಉದ್ದೇಶಗಳ ಸಾಧನೆಗೆ ಬೆಲೆ ಸ್ಥಿರತೆ ಅವಶ್ಯಕ ಎಂದಿದೆ.
+ 1991 ರಲ್ಲಿ ಹಣಕಾಸು ವ್ಯವಸ್ಥೆಯ ಉದಾರೀಕರಣ & ಆಧುನೀಕರಣಕ್ಕಾಗಿ **ನರಸಿಂಹನ್ ಸಮಿತಿಯ ನೇಮಕ**
+ ಅಲ್ಪಾವಧಿ ಠೇವಣಿ, ಹುಂಡಿ ವಟಾಯಿಸುವಿಕೆ, ಕರೆ ದರದ ಮಿತಿಗಳ ಏರಿಕೆ.
+ 1992 ಏಪ್ರಿಲ್‌ನಿಂದ ಹಣದ ಮಾರುಕಟ್ಟೆಯ **ಮ್ಯೂಚುಯಲ್ ಫಂಡ್ ಸಾಧನಗಳನ್ನು** ಕಾರ್ಯರೂಪಕ್ಕೆ ತರುವುದು.
+ 1988 ಏಪ್ರಿಲ್ ನಲ್ಲಿ ಹಣದ ಮಾರುಕಟ್ಟೆಯ ದ್ರವ್ಯತೆಯ ಮೇಲ್ವಿಚಾರಣೆಗೆ & ಹಣದ ಮಾರುಕಟ್ಟೆಯ ಸ್ಥಿರೀಕರಣಕ್ಕಾಗಿ Discount and Finance House of India-DFHI ಸ್ಥಾಪನೆ. 1988 ಜುಲೈ 28 ರಿಂದ ಸಾಲಿಗ & ಸಾಲಗಾರನಾಗಿ ಕಾರ್ಯ ನಿರ್ವಹಿಸುತ್ತದೆ.
+ 2001 ರಲ್ಲಿ ಸರ್ಕಾರಿ ಸಾಲಪತ್ರ & ರೆಪೋ ಪತ್ರಗಳ ಸೂಕ್ತ ವ್ಯವಹಾರಕ್ಕೆ CCIL- Clearing Corporation of India Limited ಸ್ಥಾಪನೆ.

# ಬಂಡವಾಳ ಮಾರುಕಟ್ಟೆ (Capital Market)

**ಬಂಡವಾಳ ಮಾರುಕಟ್ಟೆಯ ಅರ್ಥ:-**

- ದೀರ್ಘಾವಧಿ & ಮಧ್ಯಮ ಹಣಕಾಸನ್ನು ಒಟ್ಟು ಸೇರಿಸಿ, ವ್ಯಕ್ತಿ ವ್ಯವಹಾರಗಳಿಗೆ & ಸರ್ಕಾರಕ್ಕೆ ಒದಗಿಸುವ ಹಣಕಾಸು ವ್ಯವಸ್ಥೆಯ ಒಂದು ಭಾಗವೇ ಬಂಡವಾಳ ಮಾರುಕಟ್ಟೆ.
- ಈ ಮಾರುಕಟ್ಟೆಯಲ್ಲಿ ಪ್ರಾಥಮಿಕ & ಅನುಷಂಗಿಕ ಬಂಡವಾಳ ಮಾರುಕಟ್ಟೆ ಎಂಬ 2 ವಿಧಗಳಿವೆ.

**ಪ್ರಾಥಮಿಕ ಅಥವಾ ಹೊಸ ಬಂಡವಾಳ ಪತ್ರಗಳ ನೀಡಿಕೆ ಮಾರುಕಟ್ಟೆ (Primary/New Issues Market):-**

- ಕಂಪನಿ ಅಥವಾ ಹಣಕಾಸು ಸಂಸ್ಥೆಗಳು ಷೇರು, ಸಾಲಪತ್ರ, ಬಾಂಡುಗಳನ್ನು ಹೂಡಿಕೆದಾರರಿಗೆ ನೇರವಾಗಿ ಮಾರಾಟ ಮಾಡುವ ಮಾರುಕಟ್ಟೆಯೇ ಪ್ರಾಥಮಿಕ ಅಥವಾ ಹೊಸ ಬಂಡವಾಳ ಪತ್ರಗಳ ನೀಡಿಕೆ ಮಾರುಕಟ್ಟೆ.

**ಮಾಧ್ಯಮಿಕ ಅಥವಾ ಹಳೆಯ ಬಂಡವಾಳ ಪತ್ರಗಳ ನೀಡಿಕೆ ಮಾರುಕಟ್ಟೆ (Secondary/Old Issues Market):-**

- ಈಗಾಗಲೇ ಅಸ್ತಿತ್ವದಲ್ಲಿರುವ ಭದ್ರತಾ ಪತ್ರಗಳ ಖರೀದಿ & ಮಾರಾಟಗಳಿಗಿರುವ ಮಾರುಕಟ್ಟೆಯೇ **ಅನುಷಂಗಿಕ** ಬಂಡವಾಳ ಮಾರುಕಟ್ಟೆ/ಷೇರು ಮಾರುಕಟ್ಟೆ/ಷೇರು ವಿನಿಮಯ ಕೇಂದ್ರ.

**ಷೇರು ವಿನಿಮಯ ಕೇಂದ್ರ (Stock Exchange Market):-**

- ಬಂಡವಾಳ ಮಾರುಕಟ್ಟೆಯಲ್ಲಿ ಒಂದು ಅಂಗವಾಗಿದ್ದು, ಸರ್ಕಾರಿ & ಕೈಗಾರಿಕಾ ಹಣಕಾಸು ಬಂಡವಾಳ ಪತ್ರಗಳ ಖರೀದಿ & ಮಾರಾಟ ಮಾಡುವ ಸ್ಥಳವಾಗಿದೆ.

**ಜಗತ್ತಿನ ಮೊದಲ ಷೇರು ಮಾರುಕಟ್ಟೆ:-**

- ಜಗತ್ತಿನ ಮೊಟ್ಟ ಮೊದಲ ಷೇರು ಮಾರುಕಟ್ಟೆಯು 1773ರಲ್ಲಿ ಲಂಡನ್ ನಲ್ಲಿ ರೂಪಿತಗೊಂಡಿತು.

**ಭಾರತದ ಮೊದಲ ಷೇರು ಮಾರುಕಟ್ಟೆ:-**

- ಭಾರತದಲ್ಲಿ ಮೊದಲ ಷೇರು ಮಾರುಕಟ್ಟೆಯು 1875ರಲ್ಲಿ ಮುಂಬೈನಲ್ಲಿ ಷೇರು ದಲ್ಲಾಳಿಗಳಿಂದ ಆರಂಭವಾಯಿತು.
- 1894ರಲ್ಲಿ ಅಲಹಾಬಾದ್ ಸ್ಟಾಕ್ ಎಕ್ಸ್‌ಚೇಂಜ್ ಮತ್ತು 1908ರಲ್ಲಿ ಕೊಲ್ಕತ್ತಾ ಸ್ಟಾಕ್ ಎಕ್ಸ್‌ಚೇಂಜ್ ಕಾರ್ಯಾರಂಭ ಮಾಡಿತು.
- 1956 ರ ಸೆಕ್ಯುರಿಟೀಸ್ ಕಾಂಟ್ರಾಕ್ಟ್ (ರೆಗ್ಯುಲೇಷನ್) ಆಕ್ಟ್ ಪ್ರಕಾರ ಭಾರತ ಸರ್ಕಾರ ಇದುವರೆಗೆ 15 ಷೇರು ವಿನಿಮಯ ಕೇಂದ್ರವನ್ನು ಅಂಗೀಕರಿಸಿದೆ. ಅಲ್ಲದೇ ಕೆಲವು ನಿಯಮಿತ ಕಂಪನಿಗಳಿವೆ. ಕೆಲವು ಸ್ವಪ್ರೇರಣೆಯ ಲಾಭ ಗಳಿಕೆಯ ಸಂಸ್ಥೆಗಳಾಗಿವೆ. ಕೆಲವು ತಮ್ಮ ಇರುವಿಕೆಯನ್ನು ಪ್ರತಿ ವರ್ಷವೂ ನವೀಕರಿಸಬೇಕಾಗುತ್ತದೆ.

## ಸ್ಟಾಕುಗಳು ಮತ್ತು ಷೇರುಗಳು (Stocks and Shares)

**ಸ್ಟಾಕುಗಳು (Stocks):**

- ವ್ಯವಹಾರದೊಳಗೆ ಪಾವತಿಸಲ್ಪಟ್ಟ ಅಥವಾ ಅದರ ಸಂಸ್ಥಾಪಕರಿಂದ ಹೂಡಿಕೆ ಮಾಡಲ್ಪಟ್ಟ ಬಂಡವಾಳವನ್ನು ಪ್ರತಿನಿಧಿಸುತ್ತದೆ.
- ಸಾಲದಾತರಿಗೆ ಹಾನಿಯಾಗುವಂತೆ ಇದನ್ನು ಹಿಂತೆಗೆದುಕೊಳ್ಳಲು ಸಾಧ್ಯವಿಲ್ಲವಾದುದ್ದರಿಂದ ವ್ಯವಹಾರವೊಂದರ ಸಾಲದಾತರಿಗೆ ಸಂಬಂಧಿಸಿದಂತೆ ಇದು ಒಂದು ಭದ್ರತೆಯಾಗಿ ಕಾರ್ಯನಿರ್ವಹಿಸುತ್ತದೆ.
- ಪರಿಮಾಣ ಹಾಗೂ ಮೌಲ್ಯಗಳಲ್ಲಿ ಅನಿಶ್ಚಿತವಾಗಿರುವ ವ್ಯವಹಾರವೊಂದರ ಆಸ್ತಿ ಮತ್ತು ಸ್ವತ್ತುಗಳಿಂದ ಸ್ಟಾಕು ತನ್ನ ಭಿನ್ನತೆಯನ್ನು ಅಥವಾ ಪ್ರತ್ಯೇಕತೆಯನ್ನು ಕಾಯ್ದುಕೊಂಡಿದೆ.

**ಷೇರುಗಳು (Shares):**

- ಕಂಪನಿಯು ಷೇರು ಬಂಡವಾಳವನ್ನು ನಿರ್ದಿಷ್ಟ ಮುಖಬೆಲೆಯ ಸಣ್ಣ ಸಣ್ಣ ಘಟಕಗಳನ್ನಾಗಿ ವಿಭಾಗಿಸಿ, ಪ್ರತಿ ಘಟಕವನ್ನು ಷೇರು ಎನ್ನುತ್ತಾರೆ. ಹೊಸ ಕಂಪನಿಯು ತನ್ನ ಮೂಲ ಬಂಡವಾಳವನ್ನು ಸಂಗ್ರಹಿಸಲು ಈ ಷೇರುಗಳನ್ನು ಮಾರಾಟ ಮಾಡುತ್ತದೆ.
- ಷೇರುಗಳಲ್ಲಿ ಮುಖ್ಯವಾಗಿ 2 ಪ್ರಕಾರಗಳಿದ್ದು, ಅವುಗಳು ಈ ಕೆಳಕಂಡಂತಿವೆ.
- **ಸಾಮಾನ್ಯ/ಈಕ್ವಿಟಿ ಷೇರುಗಳು (Equity / Ordinary Shares):-** ಅತ್ಯಂತ ದೀರ್ಘಾವಧಿ ಹಣಕಾಸು ಮೂಲ ಇದಾಗಿದ್ದು, ಕಂಪನಿ ವಿಸರ್ಜನೆ ಸಂದರ್ಭದಲ್ಲಿ ಮಾತ್ರ ಮರುಪಾವತಿ ಮಾಡುವುದರಿಂದ ಕಂಪನಿಗೆ ಶಾಶ್ವತ ಬಂಡವಾಳ ನೀಡುವ ಷೇರುಗಳೆನಿಸಿವೆ ಇದನ್ನೇ ನಷ್ಟ ಭಯ ಹೊಂದಿರದ ಬಂಡವಾಳ ಎನ್ನುವರು. ಇದು ಷೇರುದಾರರು ಕಂಪನಿಯ ನಿರ್ಧಾರ, ವಿಲೀನ ಅಥವಾ ಸ್ವಾಧೀನ ಸಂದರ್ಭದಲ್ಲಿ ಮತಚಲಾಯಿಸುವ ಹಕ್ಕನ್ನು ಪಡೆಯುತ್ತಾರೆ.
- **ಪ್ರಾಶಸ್ತ್ಯ ಷೇರು (Preference Shares):-** ಕಂಪನಿಯು ಅಸ್ತಿತ್ವದಲ್ಲಿರುವಾಗ ಲಾಭಾಂಶವನ್ನು ಬಿಡುಗಡೆ ಮಾಡಿ, ಸಂಗ್ರಹಿಸಿದ ಬಂಡವಾಳ, ಕಂಪನಿಯ ವಿಸರ್ಜನೆ ಸಂದರ್ಭದಲ್ಲಿ ಬಂಡವಾಳ ಮರುಪಾವತಿಯನ್ನು ಮೊದಲಿಗೆ ಪಡೆಯಲಾಗುತ್ತದೆ.

+ ವ್ಯವಹಾರವೊಂದರ ಸ್ಟಾಕ್‌ಗಳನ್ನು ಷೇರುಗಳಾಗಿ ವಿಂಗಡಿಸಲಾಗುತ್ತದೆ.
+ ಒಂದು ಷೇರು ಘೋಷಿಸಲ್ಪಟ್ಟ ನಿರ್ದಿಷ್ಟ ಮುಖಬೆಲೆಯನ್ನು ಹೊಂದಿರುತ್ತದೆ.
+ ಬೇರೆ ಬೇರೆ ಕಂಪನಿಗಳ ಷೇರುಗಳು ಬೇರೆ ಬೇರೆ ಮುಖಬೆಲೆ ಹೊಂದಿರುತ್ತವೆ. ಆದರೆ ಮಾರುಕಟ್ಟೆ ಬೆಲೆಯು ಕಂಪನಿಯ ಮಾರುಕಟ್ಟೆಯ ಬೇಡಿಕೆ ಪೂರೈಕೆಗಳ ಏರಿಳಿತಗಳ ಮೇಲೆ ನಿರ್ಧರಿತವಾಗುತ್ತದೆ.
+ ಷೇರುಗಳ ಮಾಲೀಕತ್ವವು ಸ್ಟಾಕು ಪ್ರಮಾಣ ಪತ್ರವೊಂದರ ನೀಡಿಕೆಯ ಮೂಲಕ ಆಧಾರಗಳಿಂದ ಪ್ರಮಾಣೀಕರಿಸಲ್ಪಡುತ್ತದೆ.
+ ಒಂದು ಸ್ಟಾಕು ಪ್ರಮಾಣ ಪತ್ರವು ಒಂದು ಕಾನೂನು ಬದ್ಧ ದಾಸ್ತಾವೇಜು ಆಗಿದ್ದು, ಷೇರುದಾರರ ಸಾಮ್ಯದಲ್ಲಿರುವ ಷೇರುಗಳ ಮೊತ್ತವನ್ನು ನಿರ್ದಿಷ್ಟವಾಗಿ ನಮೂದಿಸುತ್ತದೆ

## ಸೆನ್ಸೆಕ್ಸ್ (SENSEX)

+ ಬಾಂಬೆ ಷೇರು ಮಾರುಕಟ್ಟೆಯ ಷೇರು ಪೇಟೆಯ ಸೂಚ್ಯಂಕವಾಗಿದೆ.
+ ಸೆನ್ಸೆಕ್ಸನ್ನು ಮೊದಲ ಬಾರಿಗೆ ಜನವರಿ 1, 1986 ರಂದು 1978–79 (=100) ನ್ನು ಆಧಾರ ವರ್ಷವೆಂದು ಪರಿಗಣಿಸಿ ಮಂಡಿಸಲಾಯಿತು.
+ 'Sensex' ಷೇರು ಸೂಚ್ಯಂಕವು ಮುಂಬೈ ಷೇರು ವಿನಿಮಯ ಕೇಂದ್ರ (ಬಿಎಸ್‌ಇ) ದ Sensitive Index (Sen-Ex) ದ ವಿಸ್ತೃತ ರೂಪವಾಗಿದೆ.
+ Sensex ವು BSE ಷೇರು ಪೇಟೆಯ ಪ್ರಮುಖ 30 ಕಂಪನಿಗಳ **"ಮುಕ್ತವಾಗಿ ತೇಲಾಡುವ ಮಾರುಕಟ್ಟೆ ಬಂಡವಾಳೀಕರಣ"**ದ ಸೂಚ್ಯಂಕವಾಗಿದೆ. ಇದನ್ನು "BSE 30", ಸೆನ್ಸೆಕ್ಸ್ ಎಂದು ಕೂಡಾ ಕರೆಯುತ್ತಾರೆ.
+ Sensex is a free - Float market weighted stock market index of 30 well established and financially sound companies listed on BSE"
+ Sensex ಲೆಕ್ಕಾಚಾರಕ್ಕೆ ಜಾಗತಿಕ ಮಟ್ಟದಲ್ಲಿ ಒಪ್ಪಿಗೆಯಾಗುವ ರೀತಿಯಲ್ಲಿ ವೈಜ್ಞಾನಿಕವಾಗಿ ಲೆಕ್ಕಾಚಾರ ವಿಧಾನ ಅಳವಡಿಸಲಾಗಿದೆ.

Sensex = (Sum of Free float market capital of 30 major companies of BSE)

$$X = \frac{\text{Index value of 1978-79}}{\text{market cap value in 1978-79}}$$

### SENSEX ಕಂಡು ಹಿಡಿಯುವುದು:–

+ ಉದಾ:– ಎ ಎಂಬ ಕಂಪನಿಯು 1000 ಷೇರು ಹೊಂದಿದೆ.
+ ಇವುಗಳಲ್ಲಿ 200 ಷೇರುಗಳನ್ನು ಉತ್ತೇಜಕರಿಗೆ (Promoters) ನೀಡಲಾಗಿದೆ. ಉಳಿದ 800 ಷೇರುಗಳನ್ನು ಸಾರ್ವಜನಿಕರಿಗೆ (Public) ಒದಗಿಸಿದೆ.
+ 800 ಷೇರುಗಳು ಮುಕ್ತವಾಗಿ ತೇಲಾಡುವ ಷೇರುಗಳು (Free Floating Shares)
+ ಪ್ರಸ್ತುತವಾಗಿ ಷೇರುಗಳ ಬೆಲೆ 120 ರೂ. ಇರಲಿ.
+ ಒಟ್ಟು ಮಾರುಕಟ್ಟೆ ಬಂಡವಾಳ = 120 X 1000 = 120,000 ರೂ.
+ ಮುಕ್ತವಾಗಿ ತೇಲಾಡುವ ಷೇರುಗಳು = 800 X 120 = 96,000 ರೂ.
+ ಬಿ ಕಂಪನಿಯು 2000 ಷೇರುಗಳನ್ನು ಹೊಂದಿದೆ.
+ 1000 ಷೇರುಗಳನ್ನು ಉತ್ತೇಜಕರಿಗೆ 1000 ಷೇರುಗಳನ್ನು ಸಾರ್ವಜನಿಕರಿಗೆ ಒದಗಿಸಲಾಗಿದೆ.
+ ಪ್ರಸ್ತುತವಾಗಿ ಷೇರುಗಳ ಬೆಲೆ = **200 ರೂ.**

**ಒಟ್ಟು ಮಾರುಕಟ್ಟೆ ಬಂಡವಾಳ:-**

200X 2000 = 4,00,000 ರೂಗಳು.

ಮುಕ್ತವಾಗಿ ತೇಲಾಡುವ ಷೇರುಗಳು = 1000 X 200 = 2,00,000 ರೂ.

ಎ ಮತ್ತು ಬಿ ಕಂಪನಿಗಳ ಒಟ್ಟು ಮಾರುಕಟ್ಟೆ ಬಂಡವಾಳ = 1,20,000 + 4,00,000 = 5,20,000 ರೂ.

ಎ ಮತ್ತು ಬಿ ಕಂಪನಿಗಳ ಮುಕ್ತವಾಗಿ ತೇಲಾಡುವ ಷೇರುಗಳ ಮಾರುಕಟ್ಟೆ ಬೆಲೆ = 96,000 + 2,00,000 = 2,96,000 ರೂ.

1978–79 ರ ಆಧಾರ ವರ್ಷದ ಸೂಚ್ಯಂಕ 100 ಆಗಿದೆ. ಅದು 60 ಸಾವಿರವಾಗಿದ್ದರೆ $\frac{100}{60,000}$ ಆಗಿದೆ.

The Factor X $\frac{100}{60,000}$ = Index divison

$=2,96,000 \times \frac{100}{60,000} = 493.33$

# ಬಾಂಬೆ ಸ್ಟಾಕ್ ಎಕ್ಸ್‌ಚೇಂಜ್ (BSE - Bombay Stock Exchange)

BSE

- ಇದು ಭಾರತೀಯ ಷೇರು ವಿನಿಮಯ ಕೇಂದ್ರ
- ಮಹಾರಾಷ್ಟ್ರದ ಮುಂಬೈನ ದಲಾಲ್ ಸ್ಟ್ರೀಟ್‌ನಲ್ಲಿದೆ.
- 1875 ಜುಲೈ 9 ರಂದು ಅಧಿಕೃತವಾಗಿ "The Native Share and Stock Brokers Association" ಆಯಿತು.
- 19 ನೇ ಶತಮಾನದ ಮುಂಬೈನ ಪ್ರಭಾವಿ ಉದ್ಯಮಿಗಳಾದ **ಪ್ರೇಮ್‌ಚಂದ್ ರಾಯ್‌ಚಂದ್** ಈ ವಿನಿಮಯ ಕೇಂದ್ರವನ್ನು ಸ್ಥಾಪಿಸಿದರು.
- ಆಗಸ್ಟ್ 31, 1957 ರಂದು ಭಾರತ ಸರ್ಕಾರವು **"ಸೆಕ್ಯುರಿಟೀಸ್ ಕಾಂಟ್ರಾಕ್ಟ್ ರೆಗ್ಯುಲೇಷನ್ ಆಕ್ಟ್"** ಅನ್ವಯ ಅಂಗೀಕರಿಸಿದ **ಭಾರತದ ಮೊದಲ & ಹಳೆಯ ಷೇರು ವಿನಿಮಯ ಕೇಂದ್ರವಾಗಿದೆ.**
- ಇದು **ಏಷ್ಯಾದ & ಭಾರತದ ಅತಿ ಹಳೆಯ ವಿನಿಮಯ ಕೇಂದ್ರವಾಗಿದೆ.**
- 1986 ರಲ್ಲಿ **BSE SENSEX** (ಬಿಎಸ್‌ಇ ಸೆನ್ಸೆಕ್ಸ್) ಸೂಚ್ಯಂಕವನ್ನು ಅಭಿವೃದ್ಧಿಪಡಿಸಿದೆ. ಇದು ಜಗತ್ತಿನ **11ನೇ ಅತಿ ದೊಡ್ಡ ಷೇರು ವಿನಿಮಯ ಕೇಂದ್ರವಾಗಿದೆ.**
- 2010 ಸೆಪ್ಟೆಂಬರ್ 21 ರಂದು ಷೇರು ಮಾರುಕಟ್ಟೆಯಲ್ಲಿ ಮೊಬೈಲ್ ಆಧಾರಿತ ವ್ಯಾಪಾರವನ್ನು ಪ್ರಾರಂಭಿಸಿತು.
- 2012 ಸೆಪ್ಟೆಂಬರ್‌ನಲ್ಲಿ ವಿಶ್ವದ ಸುಸ್ಥಿರ ಸ್ಟಾಕು ವಿನಿಮಯದ ಪಾಲುದಾರಿ ಸಂಸ್ಥೆಯಾಗಿ ಬಿ.ಎಸ್.ಇ ಸೇರ್ಪಡೆಯಾಯಿತು.
- 2015 ಏಪ್ರಿಲ್ 22 ರಂದು ಸ್ವಚ್ಛ ಭಾರತ್ ಕೋಶಕ್ಕೆ ಬಿ.ಎಸ್.ಇ 1.01 ಕೋಟಿ ರೂ. ನೀಡಿತು.
- **2015 ಜುಲೈ 9** ರಂದು ಬಿ.ಎಸ್.ಇ ತನ್ನ 140 ನೇ ಉದ್ಘಾಟನಾ ದಿನವನ್ನು ಆಚರಿಸಿತು.
- 2015 ಅಕ್ಟೋಬರ್ 13 ರಂದು ಬಿ.ಎಸ್.ಇ 6 ಮೈಕ್ರೋಸೆಕೆಂಡ್ ವೇಗದಲ್ಲಿ ವ್ಯವಹಾರ ನಡೆಸಿ, ಜಗತ್ತಿನ ಅತ್ಯಂತ ವೇಗದ ವಿನಿಮಯ ಕೇಂದ್ರವಾಗಿ ದಾಖಲೆ ನಿರ್ಮಿಸಿತು.
- 2016 ಏಪ್ರಿಲ್ 5 ರಂದು CMIE -Centre for Monitoring of Indian Economy ಸಂಸ್ಥೆಯೊಂದಿಗೆ ಬಿ.ಎಸ್.ಇ ದೇಶದಲ್ಲಿ ಮೊದಲ ಬಾರಿಗೆ **ನಿರುದ್ಯೋಗವನ್ನು ಮಾಪನ ಮಾಡಿದ ಮೊದಲ ಸರ್ಕಾರೇತರ ಸಂಸ್ಥೆಯಾಗಿ** ಹೊರ ಹೊಮ್ಮಿತು.
- ಇದು ಜಗತ್ತಿನ ಅತ್ಯಂತ ಹೆಚ್ಚು ನಿರುದ್ಯೋಗ ಅವ್ಯಕ್ತಿ ದತ್ತಾಂಶವನ್ನು ಸಮೀಕ್ಷೆ ಮಾಡಿತು.
- 2016 ಜೂನ್ 9 ರಂದು **Soverign Gold Bond** ವ್ಯಾಪಾರದ ಯೋಜನೆಯನ್ನು ಪ್ರಕಟಪಡಿಸಿತು.
- **ಬಿಎಸ್‌ಇಯ ಸೂಚ್ಯಂಕಗಳು:** BSE SENSEX, BSE Small Cap, BSE mid cap, BSE 500, S & P.
- 1986 ರಲ್ಲಿ ಸೆನ್ಸೆಕ್ಸ್ ಪ್ರಾರಂಭವಾಗಿದ್ದು, 1989 ಜನವರಿಯಲ್ಲಿ **ಬಿ.ಎಸ್.ಇ ರಾಷ್ಟ್ರೀಯ ಸೂಚ್ಯಂಕ** ಪ್ರಕಟಗೊಂಡಿತು. ಇದು ದೇಶದ 5 ಪ್ರಮುಖ ಸ್ಟಾಕು ಕೇಂದ್ರಗಳಾದ **ಮುಂಬೈ, ಕೋಲ್ಕತ್ತ, ದೆಹಲಿ, ಅಹಮದಾಬಾದ್ & ಚೆನ್ನೈ** ಗಳ 100 ನೊಂದಾಯಿತ ಕಂಪನಿಗಳನ್ನು ಒಳಗೊಂಡಿದೆ.
- 1996 ಅಕ್ಟೋಬರ್ 14 ರಂದು ಬಿ.ಎಸ್.ಇ ರಾಷ್ಟ್ರೀಯ ಸೂಚ್ಯಂಕವು ಬಿ.ಎಸ್.ಇ - 100 ಎಂದು ಮರು ನಾಮಕರಣಗೊಂಡಿತು.
- ಜುಲೈ 25, 2001 ರಿಂದ ಬಿಎಸ್‌ಇ ಯು 'DOLLEX-300' ಯನ್ನು ಬಿಡುಗಡೆ ಗೊಳಿಸಿದ್ದು, ಡಾಲರ್‌ಗೆ ಸಂಪರ್ಕ ಕಲ್ಪಿಸಿದೆ.
- 2017 ಮಾರ್ಚ್ ವೇಳೆಗೆ 1.83 ಟ್ರಿಲಿಯನ್ ಅಮೆರಿಕನ್ ಡಾಲರ್ ವ್ಯವಹಾರ ನಡೆದಿದ್ದು, ಸುಮಾರು 5,500 ಕಂಪನಿಗಳು ನೊಂದಾಯಿಸಲ್ಪಟ್ಟಿವೆ.

**ಮುಂಬೈಷೇರು ಪೇಟೆಯ ಕಾರ್ಯಾಚರಣೆ ಅವಧಿ**

| ಅಧಿವೇಶನ | ಸಮಯ |
|---|---|
| ಪೂರ್ವ ಪ್ರಾರಂಭ ವ್ಯಾಪಾರ | 9:00 ರಿಂದ 9:15 |
| ವ್ಯಾಪಾರ | 9:15 ರಿಂದ 3:30 |
| ಸ್ಥಾನ ವರ್ಗಾವಣೆ | 3:30 ರಿಂದ 3:40 |
| ಮುಕ್ತಾಯದ ಅವಧಿ | 3:40 ರಿಂದ 4:00 |
| ಆಯ್ಕೆ ಅಭ್ಯಾಸ | 5 ರಿಂದ 7 |

ಮುಂಬೈ ಷೇರು ಪೇಟೆಯು ಬೆಳಿಗ್ಗೆ 9 ಗಂಟೆಯಿಂದ ಮಧ್ಯಾಹ್ನ 4:00 ರವರೆಗೆ ವಾರದಲ್ಲಿ ಐದು ದಿನ (ಶನಿವಾರ, ಭಾನುವಾರ ಹೊರತುಪಡಿಸಿ) ಕಾರ್ಯನಿರ್ವಹಿಸುತ್ತದೆ.

**ಸಂದ ಪ್ರಶಸ್ತಿಗಳು:-**

Infosec Maestors Award - 2016
Loins CSR Precious Award - 2016
Golden Peacock Global CSR award - 2007
Skoch Achiever award - 2016

## INX – India International Exchange - ಭಾರತದ ಮೊದಲ ಅಂತರಾಷ್ಟ್ರೀಯ ಸ್ಟಾಕ್ ಎಕ್ಸ್‌ಚೇಂಜ್

✦ ಗುಜರಾತಿನ ಗಾಂಧಿ ನಗರದಲ್ಲಿ ಭಾರತದ ಮೊದಲ ಅಂತರಾಷ್ಟ್ರೀಯ ಷೇರು ವಿನಿಮಯ ಕೇಂದ್ರವಾದ – INX – India International Exchange ನ್ನು ಭಾರತದ ಪ್ರಧಾನಿ ನರೇಂದ್ರ ಮೋದಿ ಅವರು ಗುಜರಾತ್‌ನ ಗಾಂಧಿ ನಗರದಲ್ಲಿರುವ "Gujarat International Tec-city-GIFT" ನ International Service Centre (IFSC)ನಲ್ಲಿ 2017ರ ಜನವರಿ 9 ರಂದು ಉದ್ಘಾಟಿಸಿದರು.

✦ INX ಸಂಸ್ಥೆಯು 2017ರ ಜನವರಿ 16ರಂದು ತನ್ನ ಕಾರ್ಯಾರಂಭವನ್ನು ಆರಂಭಿಸಿದೆ. ಇದು ಅಂತರಾಷ್ಟ್ರೀಯ ವಿನಿಮಯ ಕೇಂದ್ರವಾದ ಇದು ದಿನದ 24 ಗಂಟೆ ಕಾರ್ಯ ನಿರ್ವಹಿಸಲಿದೆ. ಜಪಾನ್ ಮಾರುಕಟ್ಟೆಯಿಂದ ಅಮೇರಿಕಾದ ಮಾರುಕಟ್ಟೆವರೆಗೂ ಈ ಕೇಂದ್ರ ಕಾರ್ಯ ನಿರ್ವಹಿಸಲಿದೆ.

✦ ಗುಜರಾತ್‌ನಲ್ಲಿ ಆರಂಭವಾಗಿರುವ "India International Exchange" **ಜಗತ್ತಿನಲ್ಲೇ ಅತೀ ವೇಗವಾಗಿ ಕಾರ್ಯ ನಿರ್ವಹಿಸುತ್ತಿರುವ ಸ್ಟಾಕ್ ಎಕ್ಸ್‌ಚೇಂಜ್** ಆಗಿದೆ. ಇಲ್ಲಿ ವಹಿವಾಟು ನಡೆಸಲು 4 ಮೈಕ್ರೋ ಸೆಕೆಂಡ್‌ಗಳು ಸಾಕಾಗುತ್ತವೆ. ಒಂದು ಮೈಕ್ರೋ ಸೆಕೆಂಡ್ ಎಂದರೆ 1 ಸೆಕೆಂಡ್‌ನ 10ಲಕ್ಷದ ಒಂದು ಭಾಗವಾಗಿದೆ. ಈ ವೇಗವನ್ನು ಸಾಮಾನ್ಯ ಜನರು ಊಹಿಸಿಕೊಳ್ಳಲು ಸಾಧ್ಯವಿಲ್ಲ. ಸಿಂಗಪುರದ ಅಂತರಾಷ್ಟ್ರೀಯ ಷೇರು ಮಾರುಕಟ್ಟೆ **10 ಮೈಕ್ರೊ ಸೆಕೆಂಡ್** ವೇಗದಲ್ಲಿ ಕಾರ್ಯ ನಿರ್ವಹಿಸುತ್ತಿದೆ. ಭಾರತದ ಮುಂಬೈ ಸ್ಟಾಕ್ ಎಕ್ಸ್‌ಚೇಂಜ್ 6 ಮೈಕ್ರೋ ಸೆಕೆಂಡ್‌ನಲ್ಲಿ ಕಾರ್ಯ ನಿರ್ವಹಿಸುತ್ತಿದೆ.




✦ **ಗುಜರಾತ್‌ನ ಗಾಂಧಿನಗರದಲ್ಲಿ** ಆರಂಭವಾಗಿರುವ "India International Stock Exchange-INX ಇದು ಜಗತ್ತಿನಲ್ಲೇ **ಅತೀ ವೇಗದ ಸ್ಟಾಕ್ ಎಕ್ಸ್‌ಚೇಂಜ್** ಆಗಿದೆ.

### ಸಂಸ್ಥೆಯಿಂದಾಗುವ ಲಾಭಗಳೇನು?

✦ ಭಾರತವು ವಿದೇಶಿ ವಿನಿಯಮ ಕ್ಷೇತ್ರದಲ್ಲಿ ವಾರ್ಷಿಕವಾಗಿ 3.2ಲಕ್ಷ ಕೋಟಿ ವಹಿವಾಟು ನಡೆಸುತ್ತಿದೆ. ಆದರೆ ಹೆಚ್ಚಿನ ವಹಿವಾಟು ದುಬೈ ಮತ್ತು ಸಿಂಗಪುರದಲ್ಲಿರುವ ಅಂತರಾಷ್ಟ್ರೀಯ ವಿನಿಮಯ ಕೇಂದ್ರದ ಮೂಲಕ ನಡೆಯುತ್ತಿವೆ. ಆದರೆ ಗುಜರಾತ್‌ನ ಗಾಂಧಿ ನಗರದಲ್ಲಿ ಆರಂಭವಾಗಿರುವ ಈ ನೂತನ ಕೇಂದ್ರವು ಭಾರತವು ವಿದೇಶಿ ವಿನಿಮಯ ಕೇಂದ್ರಗಳ ಮೇಲೆ ಅವಲಂಬನೆ ಆಗುವುದನ್ನು ತಡೆಯುತ್ತದೆ. ವಿದೇಶದಿಂದ ಭಾರತಕ್ಕೆ ಬಂಡವಾಳ ಏರಿಕೆಗೆ ಸಹಕಾರಿಯಾಗಲಿದೆ. ವಿಶ್ವದ ದೊಡ್ಡ ಕಂಪನಿಗಳಿಗೆ ಈ ಕೇಂದ್ರದ ಮೂಲಕ ಹೂಡಿಕೆಗೆ ಅವಕಾಶ ದೊರೆಯಲಿದೆ. ಅಂತರಾಷ್ಟ್ರೀಯ ವಹಿವಾಟಿನಿಂದಾಗಿ ಭಾರತದ ಆರ್ಥಿಕತೆ ಮತ್ತಷ್ಟು ಬಲಗೊಳ್ಳುತ್ತದೆ.

## ಷೇರು ಮಾರುಕಟ್ಟೆಗೆ ಸಂಬಂಧಿಸಿದ ಪ್ರಮುಖ ಪದಗಳು

✦ **ಸೆನ್ಸೆಕ್ಸ್‌ನಲ್ಲಿ ಏರಿಕೆ – ಗೂಳಿ ಪ್ರವೃತ್ತಿ (Bull Tendency):-** ಷೇರುಗಳ ಬೆಲೆಗಳಲ್ಲಿ ಏರಿಕೆ ಹಾಗೂ ಷೇರುದಾರರ ಸಂಪತ್ತಿನ ಮೌಲ್ಯದ ಏರಿಕೆಯನ್ನು ಸೂಚಿಸುತ್ತದೆ. ಇದನ್ನು **"ಗೂಳಿ ಪ್ರವೃತ್ತಿ"** ಎನ್ನುವರು.

✦ **ಸೆನ್ಸೆಕ್ಸ್‌ನಲ್ಲಿ ಇಳಿಕೆ – ಕರಡಿ ಪ್ರವೃತ್ತಿ (Bear Tendency):-** ಷೇರುಗಳ ಬೆಲೆಗಳಲ್ಲಿ ಇಳಿಕೆ ಹಾಗೂ ಷೇರುದಾರರ ಸಂಪತ್ತಿನ ಮೌಲ್ಯದ ಇಳಿಕೆಯನ್ನು ಸೂಚಿಸುತ್ತದೆ. ಇದನ್ನು **"ಕರಡಿ ಪ್ರವೃತ್ತಿ"** ಎನ್ನುವರು.

✦ **ಕುಂಟು ಬಾತು (Lame duck Tendency):-** ಕರಡಿ ಸಟ್ಟಾ ವ್ಯಾಪಾರಿಯು ಇತ್ಯರ್ಥದ ದಿನಾಂಕದಂದು ತನ್ನ ವ್ಯವಹಾರದ ಕರಾರನ್ನು ಪೂರೈಸಲು ವಿಫಲನಾಗುವ ಸನ್ನಿವೇಶ.

✦ **ಸಾರಂಗ (Stag) :-** ಜಾಗರೂಕನಾಗಿರುವ ಸಟ್ಟಾ ವ್ಯಾಪಾರಿ. ಮುಖ್ಯ ಉದ್ದೇಶ ತ್ವರಿತ ಲಾಭ ಗಳಿಸುವ ಉದ್ದೇಶದಿಂದ ಹಂಚಿಕೆಯಾದ ಷೇರುಗಳ ಮಾರಾಟ.

✦ **ಬ್ಲೂಚಿಪ್ (Blue Chip):-** ಈ ಪದವನ್ನು ಪೋಕರ್ ಕ್ರೀಡೆಯಿಂದ ಪಡೆಯಲಾಗಿದ್ದು, ಷೇರು ಮಾರುಕಟ್ಟೆಯಲ್ಲಿ ಅತ್ಯಧಿಕ ಮಾರುಕಟ್ಟೆ ಮೌಲ್ಯವಿರುವ ಅಥವಾ ಷೇರು ಸೂಚ್ಯಂಕದಲ್ಲಿ ಗುಣಮಟ್ಟ & ವಿಶ್ವಾಸಾರ್ಹತೆ ಹೊಂದಿರುವ ಷೇರುಗಳನ್ನು ತಿಳಿಸುತ್ತದೆ.

# ರಾಷ್ಟ್ರೀಯ ಷೇರು ವಿನಿಮಯ ಕೇಂದ್ರ (National Stock Exchange - NSE)

- ದೇಶಾದ್ಯಂತ ಷೇರುಗಳ ವಹಿವಾಟನ್ನು ನಡೆಸಲು ಸ್ಥಾಪಿಸಲಾದ **ಭಾರತದ ಅತಿ ದೊಡ್ಡ ಷೇರು ಮಾರುಕಟ್ಟೆ**ಯಾಗಿದೆ. ಹಾಗೂ ವ್ಯವಹಾರ ಪ್ರಮಾಣದಲ್ಲಿ ಜಗತ್ತಿನ 3ನೇ ದೊಡ್ಡ ಷೇರು ಮಾರುಕಟ್ಟೆಯಾಗಿದೆ.
- 1992 ರಲ್ಲಿ ಮುಂಬೈನಲ್ಲಿ ಮೊದಲ ಪಾರಸ್ಪರಿಕವಲ್ಲದ **ವಿದ್ಯುನ್ಮಾನ ವಿನಿಮಯ ಷೇರು ಮಾರುಕಟ್ಟೆ**ಯಾಗಿ ಸ್ಥಾಪಿತವಾಯಿತು.
- ಈ ಸಂಸ್ಥೆಯು ಹೂಡಿಕೆದಾರರಿಗೆ ಅಂತರಾಷ್ಟ್ರೀಯ ಬಂಡವಾಳ ಮಾರುಕಟ್ಟೆಗಳ ದಿಕ್ಕಿನಂತೆ ಆಧುನಿಕ ಪೂರ್ಣ ಸ್ವಯಂ ಚಾಲಿತ ವಿದ್ಯುನ್ಮಾನ ವ್ಯಾಪಾರಿ ವ್ಯವಸ್ಥೆಯನ್ನು ಒದಗಿಸಲು ಸ್ಥಾಪಿಸಲಾಗಿದೆ.
- ಎನ್‌ಎಸ್‌ಇ ಯು 1696 ಕಂಪನಿಗಳ ಪಟ್ಟಿ ಹೊಂದಿದೆ.
- 1992 ರಲ್ಲಿ 20 ಕೋಟಿ ಬಂಡವಾಳದೊಂದಿಗೆ ಆರಂಭವಾದ ಕೇಂದ್ರವಾಗಿದೆ. 1993ರಲ್ಲಿ ಷೇರು ವಿನಿಮಯ ಕೇಂದ್ರವಾಗಿ ಮನ್ನಣೆ ಪಡೆಯಿತು.
- 1994 ರಲ್ಲಿ ಬಂಡವಾಳ ಮಾರುಕಟ್ಟೆಯ ಈಕ್ವಿಟಿ ವಿಭಾಗವಾಗಿ ಕಾರ್ಯಾರಂಭ ಮಾಡಿತು.
- ಭಾರತದ ಬಂಡವಾಳ ಮಾರುಕಟ್ಟೆಯ ಬಾರೋಮೀಟರ್ ಆಗಿ ಜಗತ್ತಿನ ಹೂಡಿಕೆದಾರರಿಗೆ ಮಾಹಿತಿಯನ್ನು ನೀಡುತ್ತದೆ.
- ಷೇರುದಾರರು ತಮ್ಮ ಷೇರುಗಳನ್ನು ಮಾರಲು ಅಥವಾ ಕೊಳ್ಳಲು ಬ್ಯಾಂಕಿನಲ್ಲಿ ಒಂದು ವಿಶೇಷ ಖಾತೆ ತೆಗೆಯಬೇಕಾಗುತ್ತದೆ. ಇದಕ್ಕೆ **ಡಿಮ್ಯಾಟ್ (Demat) ಲೆಕ್ಕ** ಎನ್ನುತ್ತೇವೆ. ಈ ಡಿಮ್ಯಾಟ್ ಖಾತೆಯು ಷೇರುಗಳ ಭದ್ರತೆಯನ್ನು ಕಾಪಾಡುತ್ತದೆ. ಈ ಡಿಮ್ಯಾಟ್ ಖಾತೆ ಇಲ್ಲದೆ ಷೇರುಗಳನ್ನು ಮಾರಲು & ಕೊಳ್ಳಲು ಸಾಧ್ಯವಿಲ್ಲ.
- ಎನ್‌ಎಸ್‌ಇ ಯು ಕಂಪ್ಯೂಟರ್ ಪದ್ಧತಿ, ದೂರವಾಣಿ, ಟೆಲೆಕ್ಸ್ ಮತ್ತು ಫ್ಯಾಕ್ಸ್ ಗಳ ನೆರವಿನಿಂದ ದೇಶದ ಮೂಲೆ ಮೂಲೆಗೂ ವ್ಯಾಪಾರ ನಡೆಸುತ್ತದೆ.
- ದೇಶದ ಎಲ್ಲಾ ಹೂಡಿಕೆದಾರರಿಗೆ ಅಂದರೆ ಎಲ್.ಐ.ಸಿ, ಎಸ್.ಬಿ.ಐ, ಐ.ಎಫ್.ಸಿ.ಐ, ಐ.ಡಿ.ಎಫ್.ಸಿ ಮುಂತಾದ ಆಂತರಿಕ ಹೂಡಿಕೆದಾರರನ್ನು ಹೊಂದಿದೆ.
- ಷೇರು ವಿನಿಮಯ ವ್ಯವಹಾರ ದಕ್ಷತೆ, ನ್ಯಾಯ ಮತ್ತು ಪಾರದರ್ಶಕತೆಯನ್ನು ಸ್ಥಾಪಿಸುವುದು.
- **ನ್ಯಾಷನಲ್ ಸೆಕ್ಯುರಿಟೀಸ್ ಡೆಪಾಸಿಟರಿ ಲಿಮಿಟೆಡ್(NSDL).** ಸ್ಥಾಪಿಸಿದ್ದು, ಹೂಡಿಕೆದಾರರಿಗೆ ವಿದ್ಯುನ್ಮಾನವಾಗಿ ಭದ್ರತೆ & ಷೇರು ವರ್ಗಾವಣೆಗೆ ಅವಕಾಶ ಕಲ್ಪಿಸಿದೆ.
- ಅಂತರಾಷ್ಟ್ರೀಯ ಗುಣಮಟ್ಟದ ಆನ್‌ಲೈನ್ ಟ್ರೇಡಿಂಗ್ ವ್ಯವಸ್ಥೆ ಹೊಂದಿರುವ ಷೇರು ವಿನಿಮಯ ಕೇಂದ್ರವಾಗಿದೆ.




**ಎನ್‌ಎಸ್‌ಇ ಯು ಸೂಚ್ಯಂಕಗಳು:-** ಪ್ರಮುಖ ಸೂಚ್ಯಂಕವೆಂದರೆ ಎನ್‌ಎಸ್‌ಇ ನಿಫ್ಟಿ ಎಂದು ಪರಿಚಿತವಾಗಿರುವ ಸಿಎನ್‌ಎಕ್ಸ್ (CNX), CNX nifty junior, CNX 500,

**ಎನ್.ಎಸ್.ಇ ಯ ಪಟ್ಟಿಯಲ್ಲಿರುವ ಪ್ರಮುಖ ಕಂಪನಿಗಳು**

- ಭಾರತೀಯ ರಾಷ್ಟ್ರೀಯ ಷೇರು ವಿನಿಮಯ ಕೇಂದ್ರವು ಪ್ರಮುಖ ಹಣಕಾಸು ಸಂಸ್ಥೆಗಳು, ಬ್ಯಾಂಕುಗಳು, ವಿಮೆ ಸಂಸ್ಥೆಗಳು ಹಾಗೂ ಭಾರತದ ಇತರ ಮಧ್ಯವರ್ತಿ ಸಂಸ್ಥೆಗಳ ಪರಸ್ಪರ ಒಡೆತನವನ್ನು ಹೊಂದಿದೆ.

**ಎನ್‌ಎಸ್‌ಇ ನಿಫ್ಟಿ (NSE NIFTY):-**

- ಸಿಎನ್‌ಎಕ್ಸ್ ನಿಫ್ಟಿ ಎಂಬುದು **ಎನ್‌ಎಸ್‌ಇ ನಿಫ್ಟಿ** (NSE NIFTY) ಎಂದು ಪರಿಚಿತವಾಗಿದೆ. (ರಾಷ್ಟ್ರೀಯ ಷೇರು ವಿನಿಮಯ ನಿಫ್ಟಿ)
- ಇದು ಮಾರುಕಟ್ಟೆ ಬಂಡವಾಳೀಕರಣದ ಮೂಲಕ ಒತ್ತು ನೀಡಲಾಗಿರುವ 50 ಪ್ರಮುಖ ಷೇರುಗಳ ಬೆಲೆ ಸೂಚ್ಯಂಕವಾಗಿದೆ.
- **ಆಧಾರವರ್ಷ:-** 1995 (ಆಧಾರ ಮೌಲ್ಯ 1000)
- (Base year is 1995, Base value of NIFTY is 1000) ನಿಫ್ಟಿಯನ್ನು ಪ್ರತಿ 15 ಸೆಕೆಂಡಿಗೆ ಒಮ್ಮೆ ಕಂಡುಹಿಡಿಯುತ್ತಾರೆ.
- NIFTY=(Sum of free flow market capital of 50 major stocks of NSE) x Index value in 1995 / market cap value in 1995
- **ನಿಫ್ಟಿ ಲೆಕ್ಕಾಚಾರ:-** ನಿಫ್ಟಿ ಸೂಚ್ಯಂಕವನ್ನು 24 ವಿವಿಧ ವಲಯಗಳ 50 ದೊಡ್ಡ ಕಂಪನಿಗಳನ್ನು ಬಳಸಿ ಕಂಡು ಹಿಡಿಯಲಾಗುತ್ತದೆ.
- ಎನ್.ಎಸ್.ಇ 1.41 ಟ್ರಿಲಿಯನ್ ಅಮೆರಿಕನ್ ಡಾಲರ್ ಮಾರುಕಟ್ಟೆ ಬಂಡವಾಳವನ್ನು ಹೊಂದಿರುವ ದೊಡ್ಡ ಸ್ಟಾಕು ಮಾರುಕಟ್ಟೆಯಾಗಿದೆ.

## ಪ್ರಮುಖ ಷೇರುಪೇಟೆ ಮಾರುಕಟ್ಟೆಗಳು

| ದೇಶ | ಮಾರುಕಟ್ಟೆ |
|---|---|
| ಅಮೆರಿಕ | ನ್ಯೂಯಾರ್ಕ್, NASDAQ |
| ಇಂಗ್ಲೆಂಡ್ | ಲಂಡನ್ |
| ಜಪಾನ್ | ಟೋಕಿಯೋ |
| ಚೀನಾ | ಶಾಂಘೈ |
| ಹಾಂಕಾಂಗ್ | ಹಾಂಕಾಂಗ್ |
| ಐರೋಪ್ಯ ಒಕ್ಕೂಟ | ಲಿಸ್ಬನ್, ಲಂಡನ್, ಪ್ಯಾರಿಸ್, ಬ್ರಸೇಲ್, ಆಮ್‌ಸ್ಟರ್‌ಡ್ಯಾಂ |
| ಜರ್ಮನಿ | ಫ್ರಾಂಕ್‌ಫರ್ಟ್ |
| ಕೆನಡಾ | ಟೊರಾಂಟೋ |
| ಭಾರತ | ಮುಂಬೈ (BSE, NSE) |
| ಸ್ವಿಟ್ಜರ್ಲೆಂಡ್ | ಜ್ಯೂರಿಚ್ |
| ಆಸ್ಟ್ರೇಲಿಯಾ | ಸಿಡ್ನಿ |
| ದ. ಕೊರಿಯಾ | ಸಿಯೋಲ್ |
| ದ. ಆಫ್ರಿಕಾ | ಜೋಹಾನ್ಸ್‌ಬರ್ಗ್ |
| ಸ್ಪೈನ್ | ಮ್ಯಾಡ್ರಿಡ್ |
| ಥೈವಾನ್ | ಥೈವಾನ್ |
| ಬ್ರೆಜಿಲ್ | ಸಾವೋಪೋಲೊ |
| ಯು.ಕೆ & ಇಟಲಿ | ಲಂಡನ್ |
| ಉ. ಯುರೋಪ್ | ಸ್ಟಾಕ್‌ಹೋಂ |
| ಚೀನಾ | Shenzhen |

**ಜಾಗತಿಕ ಡೆಪಾಸಿಟರಿ ರಸೀದಿ (ಜಿ.ಡಿ.ಆರ್):-**

- ಜಾಗತಿಕ ಬಂಡವಾಳ ಮಾರುಕಟ್ಟೆಗಳಲ್ಲಿ ಹಣಕಾಸು ಸಂಗ್ರಹಿಸುವ ಕಂಪನಿಗಳು ಅಮೆರಿಕದ ಡಾಲರ್ ಮೌಲ್ಯದಲ್ಲಿರುವ ವರ್ಗಾಯಿಸಬಹುದಾದ ರಸೀದಿ ಇದಾಗಿದ್ದು, ಸಾಮಾನ್ಯ ಷೇರುಗಳಿಗೆ ಪ್ರತಿಯಾಗಿ ಬಿಡುಗಡೆ ಮಾಡುತ್ತದೆ.

**ಅಮೆರಿಕದ ಡೆಪಾಸಿಟರಿ ರಸೀದಿ (ಎ.ಡಿ.ಆರ್):-**

- ಅಮೆರಿಕ ಬಂಡವಾಳ ಮಾರುಕಟ್ಟೆಯಲ್ಲಿ ಅಮೆರಿಕ ದೇಶವಲ್ಲದ ಕಂಪನಿಯು ಬಂಡವಾಳ ಸಂಗ್ರಹಿಸಲು ಬಿಡುಗಡೆ ಮಾಡುವ ರಸೀದಿ.

**ಭಾರತೀಯ ಡೆಪಾಸಿಟರಿ ರಸೀದಿ (ಐ.ಡಿ.ಆರ್):-**

- ಭಾರತದ ಬಂಡವಾಳದ ಮಾರುಕಟ್ಟೆಯಲ್ಲಿ ಜಾಗತಿಕ ಕಂಪನಿಗಳು ಬಂಡವಾಳ ಸಂಗ್ರಹಿಸಲು ರೂಪಾಯಿ ಮೌಲ್ಯದಲ್ಲಿರುವ ವರ್ಗಾಯಿಸಬಹುದಾದ ರಸೀದಿ.

## ಪ್ರಮುಖ ಷೇರುಪೇಟೆ ಸೂಚ್ಯಂಕಗಳು

| ದೇಶ | ಸೂಚ್ಯಂಕ |
|---|---|
| ಆಸ್ಟ್ರೇಲಿಯಾ | CSE ಸಂಯುಕ್ತ ಸೂಚ್ಯಂಕ |
| ಬಾಂಗ್ಲಾದೇಶ | CSE-30, DSES |
| ಬ್ರೆಜಿಲ್ | IVRS |
| ಚೀನಾ | SSC, SZSE, CSI-300 |
| ಡೆನ್ಮಾರ್ಕ್ | OMX ಕೋಪನ್ ಹೇಗನ್ |
| ಫ್ರಾನ್ಸ್ | CSE-40 |
| ಜರ್ಮನಿ | NSLA |
| ಹಾಂಕಾಂಗ್ | HANG SENG |
| ಭಾರತ | Sensex, Nifty |
| ಇಂಡೋನೇಷ್ಯಾ | IHSG |
| ಜಪಾನ್ | NIKKEI - 225, TPX |
| ಮಲೇಷಿಯಾ | ಕೌಲಾಲಂಪುರ ಸಂಯುಕ್ತ ಸೂಚ್ಯಂಕ |
| ಮಾಲ್ಡೀವ್ಸ್ | MASIX |
| ಮಾರೀಷಸ್ | SEM, BEX |
| ನೇಪಾಳ | NEPSE |
| ನ್ಯೂಜಿಲೆಂಡ್ | NZX - 50 |
| ನಾರ್ವೆ | OBX |
| ಪಾಕಿಸ್ತಾನ | KSE 100 |
| ಫಿಲಿಪೈನ್ಸ್ | PSEI |
| ರಷ್ಯಾ | MICEX |
| ಸಿಂಗಪುರ | FTSE Group |
| ದಕ್ಷಿಣ ಕೊರಿಯಾ | KOSPI, KOSDAQ |
| ಸ್ಪೈನ್ | IBEX 35 |
| ಶ್ರೀಲಂಕ | ASPI |
| ಸ್ವಿಟ್ಜರ್ಲೆಂಡ್ | SMI, SPI |
| ಥೈವಾನ್ | TAIEX |
| ಥೈಲ್ಯಾಂಡ್ | SET |
| ಯು.ಎ.ಇ | ದುಬೈ ಹಣಕಾಸು ಮಾರುಕಟ್ಟೆ |
| ಯು.ಕೆ | FT - 30, FTSE |
| ಅಮೆರಿಕ | AMEX, Dowjones, MC-MSCI, NASDAQ |
| ವೆನಿಜುವೆಲಾ | IBC |
| ಜಿಂಬಾಬ್ವೆ | ಕೈಗಾರಿಕೆ & ಗಣಿಗಾರಿಕೆ |

# ಭಾರತದ ಪ್ರಮುಖ ಅಭಿವೃದ್ಧಿ ಹಣಕಾಸು ಸಂಸ್ಥೆಗಳು

## ಭಾರತೀಯ ಕೈಗಾರಿಕಾ ಹಣಕಾಸು ಸಂಸ್ಥೆ (IFCI- Industrial Finance Corporation of India):-




1948 ರ ಭಾರತೀಯ ಕೈಗಾರಿಕಾ ಹಣಕಾಸು ಸಂಸ್ಥೆ ಕಾಯಿದೆ ಅನ್ವಯ **1948 ಜುಲೈ 1 ರಂದು ನವದೆಹಲಿ**ಯಲ್ಲಿ ಸ್ಥಾಪನೆಯಾದ ಈ ಹಣಕಾಸು ಸಂಸ್ಥೆಯು, ಕೈಗಾರಿಕಾ ಸಂಸ್ಥೆಗಳಿಗೆ **ಮಧ್ಯಮ & ದೀರ್ಘಾವಧಿ ಹಣಕಾಸ**ನ್ನು ಒದಗಿಸುವ ಉದ್ದೇಶದಿಂದ ಸ್ಥಾಪಿಸಲಾಯಿತು. **ಸ್ವಾತಂತ್ರ್ಯಾನಂತರ** ಸ್ಥಾಪಿತವಾದ ಭಾರತ ಸರ್ಕಾರದ ಅಧೀನದ **ಮೊಟ್ಟ ಮೊದಲ ಅಭಿವೃದ್ಧಿ ಹಣಕಾಸು ಸಂಸ್ಥೆ**ಯಾಗಿದೆ. 1975 ರಲ್ಲಿ ಈ ಸಂಸ್ಥೆಯು **ಗಂಡಾಂತರ ಬಂಡವಾಳ ಫೌಂಡೇಷನ್** ಸ್ಥಾಪಿಸಿದ್ದು, ಬಡ್ಡಿ ರಹಿತ ವೈಯಕ್ತಿಕ ಸಾಲದ ಮೂಲಕ ಮೊದಲ ತಲೆಮಾರಿನ ಹೊಸ ಉದ್ದಿಮೆದಾರರಿಗೆ ಸೇವೆ ಒದಗಿಸುತ್ತದೆ.

## ರಾಜ್ಯ ಹಣಕಾಸು ನಿಗಮ (SFC's - State Finance Corporation's):-

✦ ಭಾರತದ ಕೇಂದ್ರ ಸರ್ಕಾರದ ರಾಜ್ಯ ಹಣಕಾಸು ಸಂಸ್ಥೆ ಕಾಯಿದೆ **1951** ರ ಅನ್ವಯ ವಿವಿಧ ರಾಜ್ಯ ಸರ್ಕಾರಗಳು ಹಣಕಾಸು ಸಂಸ್ಥೆಗಳನ್ನು ಪ್ರಾರಂಭಿಸಿವೆ. ಸಾರ್ವಜನಿಕ ಕಂಪನಿಯ ಜೊತೆಗೆ ಖಾಸಗಿ ಕಂಪನಿ ಏಕ ವ್ಯಾಪಾರ ಸಂಸ್ಥೆ, ಪಾಲುದಾರಿಕೆ ಸಂಸ್ಥೆಗಳಿಗೂ ಸಾಲ ಸೌಲಭ್ಯ ನೀಡುತ್ತದೆ. ಭಾರತದಲ್ಲಿ ಪ್ರಸ್ತುತ 18 ನಿಗಮಗಳು ಕಾರ್ಯನಿರ್ವಹಿಸುತ್ತಿದ್ದು, ರಾಜ್ಯ ಮಟ್ಟದಲ್ಲಿ ಸಂಬಂಧಿತ ರಾಜ್ಯಗಳ ಸಣ್ಣ & ಮಧ್ಯಮ ಪ್ರಮಾಣದ ಉದ್ದಿಮೆಗಳ ಬೆಳವಣಿಗೆಗೆ ಪೂರಕವಾದ ಹಣಕಾಸು ಸೇವೆ ಒದಗಿಸುತ್ತಿವೆ. ಕರ್ನಾಟಕ ರಾಜ್ಯ ಸರ್ಕಾರವು **1956** ರಲ್ಲಿ ರಾಜ್ಯ ಹಣಕಾಸು ನಿಗಮವನ್ನು ಸ್ಥಾಪಿಸಿದ್ದು, 1973 ನವೆಂಬರ್ 1 ಕ್ಕಿಂತ ಮುನ್ನ **ಮೈಸೂರು ರಾಜ್ಯ ಹಣಕಾಸು ನಿಗಮ** ಎಂಬ ಹೆಸರನ್ನು ಹೊಂದಿತ್ತು. ಇದು 1959 ಮಾರ್ಚ್ 30 ರಂದು ಮೈಸೂರು ರಾಜ್ಯ ಸರ್ಕಾರದಿಂದ ಅಧಿಕೃತವಾಗಿ ಸ್ಥಾಪಿತವಾಯಿತು.

## ಭಾರತೀಯ ಕೈಗಾರಿಕಾ ಸಾಲ & ಹೂಡಿಕೆ ನಿಗಮ ಬ್ಯಾಂಕು. (ICICI - Industrial Credit & Investment Corporation of India):-




✦ ಭಾರತದ ಬಹು ರಾಷ್ಟ್ರೀಯ ಬ್ಯಾಂಕಿಂಗ್ & ಹಣಕಾಸು ಸೇವೆ ನೀಡುವ ಉದ್ದೇಶದಿಂದ **1994 ರಲ್ಲಿ ಮುಂಬೈ**ನಲ್ಲಿ ಸ್ಥಾಪಿತವಾಗಿದ್ದು, **ವಡೋದರ**ದಲ್ಲಿ ನೊಂದಾಯಿಸಲ್ಪಟ್ಟ ಕಛೇರಿಯನ್ನು ಹೊಂದಿದೆ. 2014 ರಲ್ಲಿ ಸ್ವತ್ತು ಆಧಾರಿತ ದೇಶದ 2ನೇ ದೊಡ್ಡ ಹಾಗೂ ಮಾರುಕಟ್ಟೆ ಬಂಡವಾಳೀಕರಣದಲ್ಲಿ 3 ನೇ ದೊಡ್ಡ ಬ್ಯಾಂಕ್ ಆಗಿ ಹೊರ ಹೊಮ್ಮಿದೆ. 2000 ದಲ್ಲಿ ನ್ಯೂಯಾರ್ಕ್ ಸ್ಟಾಕು ವಿನಿಮಯ ಕೇಂದ್ರದಲ್ಲಿ ನೊಂದಾಯಿಸಲ್ಪಟ್ಟ **ಮೊಟ್ಟ ಮೊದಲ ಭಾರತೀಯ ಬ್ಯಾಂಕು** ಎಂಬ ಕೀರ್ತಿಗೆ ಪಾತ್ರವಾಗಿದೆ.

✦ 1987 ರಲ್ಲಿ ಭಾರತದ ಪ್ರಥಮ ವೃತ್ತಿಪರ ಕ್ರೆಡಿಟ್ ರೇಟಿಂಗ್ ಏಜೆನ್ಸಿಯಾದ **ಸಿ.ಆರ್.ಐ.ಎಸ್.ಐ.ಎಲ್** (Credit Rating Information Services of India Limited) ಅನ್ನು ಯು.ಟಿ.ಐ ನೊಂದಿಗೆ ಸ್ಥಾಪಿಸಿತು.




## ಯೂನಿಟ್ ಟ್ರಸ್ಟ್ ಆಫ್ ಇಂಡಿಯಾ (ಯು.ಟಿ.ಐ)

✦ **ಭಾರತೀಯ ಯೂನಿಟ್ ಟ್ರಸ್ಟ್ ಕಾಯ್ದೆ - 1963** ರ ಅಡಿಯಲ್ಲಿ ಕೇಂದ್ರ ಸರ್ಕಾರ ಈ ಸಂಸ್ಥೆಯನ್ನು ಸ್ಥಾಪನೆ ಮಾಡಿದ್ದು, ಸಮುದಾಯದ ಉಳಿತಾಯಗಳನ್ನು ಸಂಗ್ರಹಿಸಿ ಉತ್ಪಾದನಾ ಚಟುವಟಿಕೆಗಳಿಗೆ ಹೂಡಿಕೆ ಮಾಡುವ ಉದೇಶ ಹೊಂದಿದೆ.

## ಭಾರತೀಯ ಕೈಗಾರಿಕಾ ಸಾಲ & ಹೂಡಿಕೆ ನಿಗಮ
## (ICICI - Industrial Credit & Investment Corporation of India):-

+ 1955 ರಲ್ಲಿ ಖಾಸಗಿ ಕ್ಷೇತ್ರದ ಬೃಹತ್ ಕೈಗಾರಿಕೆಗಳಿಗೆ ಮಧ್ಯಮ & ದೀರ್ಘಾವಧಿ ಸಾಲ ನೀಡುವ ಉದ್ದೇಶದಿಂದ ಸ್ಥಾಪನೆಯಾಗಿದೆ. ಪ್ರಾರಂಭದಲ್ಲಿ ಕಂಪನಿ, ಸಂಸ್ಥೆಗಳು & ವೈಯಕ್ತಿಕ ಉದ್ದಿಮೆಗಳು ಈಕ್ವಿಟಿ ಬಂಡವಾಳದ ಮಾಲೀಕತ್ವ ಹೊಂದಿದ್ದವು. ಆದರೆ, ಪ್ರಸ್ತುತ ಸಾರ್ವಜನಿಕ ವಲಯದ ಸಂಸ್ಥೆಗಳ ನಿಯಂತ್ರಣದಲ್ಲಿದೆ. 1973 ರಿಂದ ಅಂತರಾಷ್ಟ್ರೀಯ ಬಂಡವಾಳ ಮಾರುಕಟ್ಟೆಯಲ್ಲಿ ವಿದೇಶಿ ಕರೆನ್ಸಿ ಸಾಲವನ್ನು ಪಡೆಯುವ ಕ್ಷೇತ್ರಕ್ಕೂ ಪ್ರವೇಶಿಸಿತು. **2002 ರಿಂದ ಐ.ಸಿ.ಐ.ಸಿ.ಐ ಬ್ಯಾಂಕ್‌ನೊಂದಿಗೆ ವಿಲೀನಗೊಂಡಿದೆ.** ಆಗ **ಭಾರತದಲ್ಲಿ ಸ್ಥಾಪಿತವಾದ ಮೊದಲ ಸಾರ್ವತ್ರಿಕ ಬ್ಯಾಂಕ್** ಆಗಿ ಹೊರಹೊಮ್ಮಿದೆ.

## ಭಾರತೀಯ ಕೈಗಾರಿಕಾ ಅಭಿವೃದ್ಧಿ ಬ್ಯಾಂಕ್ (IDBI - Industrial Development Bank of India)




1964 ರ ಭಾರತೀಯ ಕೈಗಾರಿಕಾ ಅಭಿವೃದ್ಧಿ ಬ್ಯಾಂಕ್ ಕಾಯ್ದೆಯ ಅನ್ವಯ **1964 ಜುಲೈ 1 ರಂದು ಮುಂಬೈ** ನಲ್ಲಿ ಸ್ಥಾಪನೆಯಾಗಿದ್ದು, **ಕೈಗಾರಿಕಾ ಹಣಕಾಸು** ವಿಷಯದಲ್ಲಿ **ಅಪೆಕ್ಸ್ ಬ್ಯಾಂಕ್** ಆಗಿ ಕಾರ್ಯನಿರ್ವಹಿಸುತ್ತಿದೆ. ಕೈಗಾರಿಕೆ ಸಂಸ್ಥೆಗಳಿಗೆ ನೇರವಾಗಿ ಸಾಲ ಸೌಲಭ್ಯ, ಮರು ಹಣಕಾಸು ಸೌಲಭ್ಯ & ಎಲ್ಲಾ ಕೈಗಾರಿಕಾ ಹಣಕಾಸು ಸಂಸ್ಥೆಗಳ ನಡುವೆ ಸಮನ್ವಯ ತರುವ ಸಂಸ್ಥೆಯಾಗಿದೆ. 1976 ರ ವರೆಗೆ ಆರ್.ಬಿ.ಐ ನ ಅಧೀನ ಸಂಸ್ಥೆಯಾಗಿದ್ದು, ನಂತರ ಆರ್.ಬಿ.ಐ ನಿಂದ ಬೇರ್ಪಡೆಯಾಗಿ ಸಂಪೂರ್ಣವಾಗಿ ಭಾರತ ಸರ್ಕಾರ ಮಾಲೀಕತ್ವವನ್ನು ಪಡೆಯಿತು. 2004 ಸೆಪ್ಟೆಂಬರ್ 28 ರಂದು ವ್ಯವಹಾರ ಪ್ರಕ್ರಿಯೆ ಮಾಡಲು ಪ್ರಮಾಣ ಪತ್ರ ಪಡೆದ ನಂತರ 2004 ಅಕ್ಟೋಬರ್ 1 ರಿಂದ ಐ.ಡಿ.ಬಿ.ಐ ನಿಗಮ (ಕಂಪನಿ ಕಾಯ್ದೆ – 1956 ರ ಅನ್ವಯ) ವಾಗಿ ಮಾರ್ಪಟ್ಟಿತು. **2004 ಅಕ್ಟೋಬರ್ 11** ರಿಂದ 1934ರ ಆರ್.ಬಿ.ಐ ಕಾಯ್ದೆ ಅನ್ವಯ **ಷೆಡ್ಯೂಲ್ಡ್ ಬ್ಯಾಂಕ್‌ಗಳ ಪಟ್ಟಿ**ಯಲ್ಲಿ ಸೇರ್ಪಡೆಗೊಂಡಿತು. 2016 ಫೆಬ್ರವರಿ 29 ರಂದು ಕೇಂದ್ರ ಹಣಕಾಸು ಸಚಿವ ಅರುಣ್ ಜೇಟ್ಲಿ ಅವರು ಈ ಬ್ಯಾಂಕಿನ ವ್ಯವಹಾರಗಳಲ್ಲಿ ಕೇಂದ್ರ ಸರ್ಕಾರದ ಹಸ್ತಕ್ಷೇಪವನ್ನು ಶೇ 50 ಕ್ಕಿಂತ ಕಡಿಮೆಗೊಳಿಸುವ ವಿಚಾರ ಪ್ರಸ್ತಾಪಿಸಿದರು.

## ಭಾರತೀಯ ಕೈಗಾರಿಕೆ ಹೂಡಿಕೆ ಬ್ಯಾಂಕ್
## (IIBIL - Industrial Investment Bank of India)




+ ಭಾರತ ಸರ್ಕಾರದ ಶೇ 100 ರಷ್ಟು ಮಾಲೀಕತ್ವದಲ್ಲಿ **1971** ರಲ್ಲಿ ಸಂಸತ್ತಿನ ಕಾಯ್ದೆಗನುಗುಣವಾಗಿ ಸ್ಥಾಪಿತವಾದ ಭಾರತದ ಕೈಗಾರಿಕಾ ಹೂಡಿಕೆ ಬ್ಯಾಂಕ್ **ಕೋಲ್ಕತ್ತದಲ್ಲಿ ಕೇಂದ್ರ ಕಛೇರಿಯನ್ನು** ಹೊಂದಿದೆ. 1984 ರ ಭಾರತೀಯ ಕೈಗಾರಿಕಾ ಪುನರ್ ನಿರ್ಮಾಣ ಬ್ಯಾಂಕು ಕಾಯ್ದೆ ಅನ್ವಯ **1985 ಮಾರ್ಚ್ 20** ರಂದು ಭಾರತೀಯ ಕೈಗಾರಿಕೆ ಪುನರ್ ನಿರ್ಮಾಣ ಬ್ಯಾಂಕ್ ಸ್ಥಾಪನೆಯಾಗಿದೆ.
+ **1997 ಮಾರ್ಚ್ 6** ರಂದು ಭಾರತೀಯ ಕೈಗಾರಿಕೆ ಹೂಡಿಕೆ ಬ್ಯಾಂಕ್ ನಿಗಮವಾಗಿ ಪರಿವರ್ತನೆಗೊಂಡಿತು. **ಇದರ ಮುಖ್ಯ ಉದ್ದೇಶ:–** ರೋಗಗ್ರಸ್ಥ ಕೈಗಾರಿಕೆಗಳು ಮುಚ್ಚುವ ಹಂತದಲ್ಲಿರುವ ಉದ್ದಿಮೆ ಘಟಕಗಳಿಗೆ ಸಾಲ & ಮುಂಗಡಗಳನ್ನು ಒದಗಿಸಿ, ಪುನಃಶ್ಚೇತನಗೊಳಿಸುವುದಾಗಿದೆ.

## ರಾಷ್ಟ್ರೀಯ ಈಕ್ವಿಟಿ ನಿಧಿ ಯೋಜನೆ (NEFS - National Equity Fund Scheme)

National Equity Fund INC

1987 ರಲ್ಲಿ 10 ಲಕ್ಷಕ್ಕಿಂತ ಕಡಿಮೆ ಬಂಡವಾಳ ಹೂಡಿಕೆ ಹೊಂದಿರುವ ಅತಿ ಸಣ್ಣ ಉದ್ದಿಮೆ ಘಟಕಗಳಿಗೆ ಈಕ್ವಿಟಿ ನೆರವನ್ನು ಒದಗಿಸುವ ಉದ್ದೇಶದಿಂದ ಸ್ಥಾಪನೆಯಾದ ಸಂಸ್ಥೆಯಾಗಿದೆ. ಈ ಯೋಜನೆಗೆ ಕೇಂದ್ರ ಸರ್ಕಾರ & ಎಸ್.ಐ.ಡಿ.ಬಿ.ಐ ಸಂಸ್ಥೆಗಳು **50:50 ರ ಅನುಪಾತದಲ್ಲಿ** ಪಾಲನ್ನು ಹೊಂದಿವೆ. ಈ ಯೋಜನೆಯಡಿಯಲ್ಲಿ 2000–01 ರಿಂದ ಸಾಲದ ಮಿತಿಯನ್ನು 6.25 ಲಕ್ಷದಿಂದ 10 ಲಕ್ಷ ಹಾಗೂ ಯೋಜನಾ ವೆಚ್ಚದ ಮಿತಿ 25 ಲಕ್ಷದಿಂದ 50 ಲಕ್ಷಕ್ಕೆ ಏರಿದೆ.

## ಭಾರತೀಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ಬ್ಯಾಂಕ್ (SIDBI - Small Scale Industrial Development Bank of India)




✦ 1989 ರ ಭಾರತೀಯ ಸಣ್ಣ ಕೈಗಾರಿಕಾ ಅಭಿವೃದ್ಧಿ ಬ್ಯಾಂಕ್ ಕಾಯ್ದೆಗೆ ಅನುಗುಣವಾಗಿ **1990 ರ ಏಪ್ರಿಲ್ 2** ರಂದು ಭಾರತದ ಸಣ್ಣ ಕೈಗಾರಿಕೆಗಳನ್ನು ಉತ್ತೇಜಿಸಲು & ಅವುಗಳಿಗೆ ಅಗತ್ಯವಿರುವ ಸಾಲ ಸೌಲಭ್ಯ ಒದಗಿಸಲು ಐ.ಡಿ.ಬಿ.ಐ ನ ಅಂಗ ಸಂಸ್ಥೆಯಾಗಿ ಸ್ಥಾಪನೆಯಾಗಿದೆ. ಇದು **ಲಖ್ನೋದಲ್ಲಿ ಕೇಂದ್ರ ಕಛೇರಿ** ಹೊಂದಿದ್ದು, ದೇಶದಾದ್ಯಂತ 5 ಪ್ರಾದೇಶಿಕ & 21 ಶಾಖಾ ಕಛೇರಿಗಳನ್ನು ಹೊಂದಿದೆ. ಭಾರತೀಯ & ವಿದೇಶಿ ಕರೆನ್ಸಿಗಳ ರೂಪದಲ್ಲಿ ಸಾಲವನ್ನು ಏಕಗವಾಕ್ಷಿ ಪದ್ಧತಿ ಮೂಲಕ ಒದಗಿಸುತ್ತಿದೆ. ಈ ಸಂಸ್ಥೆಯು ಭಾರತದ ಕೇಂದ್ರ ಸರ್ಕಾರ, ಆರ್.ಬಿ.ಐ & ಬಂಡವಾಳ ಮಾರುಕಟ್ಟೆ ಮೂಲಕ ಸಾಲವನ್ನು ಪಡೆಯುತ್ತದೆ. **ಸಣ್ಣ ಕೈಗಾರಿಕೆಗಳಿಗೆ ಅಗತ್ಯವಿರುವ ಅಲ್ಪಾವಧಿ ಸಾಲ & ಮರು ಹಣಕಾಸು ಸೌಲಭ್ಯ** ನೀಡುವ ದೇಶದ ಸ್ವತಂತ್ರ & ಪ್ರಮುಖ ಹಣಕಾಸು ಸಂಸ್ಥೆಯಾಗಿದೆ.

## ರಾಷ್ಟ್ರೀಯ ಗೃಹ ಬ್ಯಾಂಕ್ (NHB-National Housing Bank)




✦ 1987–88 ರ ಕೇಂದ್ರ ಮುಂಗಡ ಪತ್ರದ ಪ್ರಸ್ತಾವನೆಯ ನಂತರ 1987 ರ ನ್ಯಾಷನಲ್ ಹೌಸಿಂಗ್ ಬ್ಯಾಂಕ್ ಮಸೂದೆ ಅನ್ವಯ **1988 ಜುಲೈ 9** ರಂದು **ನವದೆಹಲಿ**ಯಲ್ಲಿ ಕೇಂದ್ರ ಕಛೇರಿಯನ್ನು ಹೊಂದಿರುವಂತೆ ಸ್ಥಾಪಿಸಲಾಗಿದೆ. ಆರ್.ಬಿ.ಐ ನ ಪೂರ್ಣ ಅಂಗಸಂಸ್ಥೆಯಾಗಿದ್ದು, ಪ್ರಾದೇಶಿಕ ಮಟ್ಟದಲ್ಲಿ ಗೃಹ ಹಣಕಾಸು ನೀಡುವ ಸಂಸ್ಥೆಗಳಿಗೆ ಉತ್ತೇಜನ ನೀಡುವ ಹಾಗೂ ದೇಶದ ಗೃಹ ಹಣಕಾಸು ಸೌಲಭ್ಯ ನೀಡುವ ಅಪೆಕ್ಸ್ ಬ್ಯಾಂಕ್ ಆಗಿದೆ. ಇದರ ಮುಖ್ಯ ಉದ್ದೇಶವು ಗೃಹ ಹಣಕಾಸು ಮಾರುಕಟ್ಟೆಯಲ್ಲಿ ಸ್ಥಿರತೆಯೊಂದಿಗೆ ಅಂತರ್ಗತ ವಿಸ್ತರಣೆಯನ್ನು ಉತ್ತೇಜಿಸುವುದು. ಈ ಬ್ಯಾಂಕ್ 2007 ರಿಂದ ಗೃಹಬೆಲೆ ಸೂಚ್ಯಂಕ ಪ್ರಕಟಿಸುತ್ತಿದ್ದು, ಸಮಗ್ರವಾಗಿ ಗೃಹ ಆಸ್ತಿಗಳ ಬೆಲೆಯಲ್ಲಾಗುವ ಪ್ರೌವೃತ್ತಿಯನ್ನು ಪ್ರಕಟಪಡಿಸುತ್ತದೆ.

✦ ಪ್ರಾರಂಭದಲ್ಲಿ ಈ ಸೂಚ್ಯಂಕವು 2001 ನ್ನು ಆಧಾರ ವರ್ಷವನ್ನಾಗಿಟ್ಟುಕೊಂಡಿದ್ದು, ಪ್ರಸ್ತುತ 2007 ಹೊಸ ಆಧಾರ ವರ್ಷವಾಗಿದೆ.

## ಅಭಿವೃದ್ಧಿ ಹಣಕಾಸು ಸಂಸ್ಥೆಗಳು (Development Finance Institutions)

✦ **ಅಭಿವೃದ್ಧಿ ಹಣಕಾಸು ಸಂಸ್ಥೆ** ಎಂಬುದು ಪರ್ಯಾಯ ಹಣಕಾಸು ಸಂಸ್ಥೆಯಾಗಿದ್ದು, ಸೂಕ್ಷ್ಮ ಹಣಕಾಸು ಸಂಸ್ಥೆಗಳು, ಸಮುದಾಯ ಅಭಿವೃದ್ಧಿ ಹಣಕಾಸು ಸಂಸ್ಥೆ, ಸಾಲ ನೀಡಿಕೆ ಸಂಸ್ಥೆ ಆಗಿರುತ್ತದೆ.

✦ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಖಾಸಗಿ ವಲಯದ ಬಂಡವಾಳ ಹೂಡಿಕೆಯಲ್ಲಿನ ಅಧಿಕ ಗಂಡಾಂತರ ಈಕ್ವಿಟಿ ಸ್ಥಿತಿಗತಿ & ಗಂಡಾಂತರ ಭರವಸೆ ಪತ್ರಗಳನ್ನು ವಿತರಿಸುವ ಸಂಸ್ಥೆಯಾಗಿರುತ್ತದೆ.

✦ ಮಾರುಕಟ್ಟೆ ನಿಯಂತ್ರಿತ ಕಂಪನಿ ಹೂಡಿಕೆಗೆ ಉತ್ತೇಜನ ನೀಡುವ ಹಣಕಾಸು ಸಂಸ್ಥೆಯಾಗಿರುತ್ತದೆ.

✦ **ಉದಾ:–** ಆಫ್ರಿಕನ್ ಅಭಿವೃದ್ಧಿಬ್ಯಾಂಕ್, ಏಷ್ಯಾ ಅಭಿವೃದ್ಧಿ ಬ್ಯಾಂಕ್, ಐರೋಪ್ಯ ಹೂಡಿಕೆ ಬ್ಯಾಂಕ್, ಅಂತರಾಷ್ಟ್ರೀಯ ಹಣಕಾಸು ನಿಗಮ, ಇಸ್ಲಾಮಿಕ್ ಡೆವೆಲಪ್‌ಮೆಂಟ್ ಬ್ಯಾಂಕ್ ಜಾಗತಿಕವಾಗಿ ಉದಾಹರಣೆಗಳಾಗಿದ್ದರೆ, ಭಾರತದಲ್ಲಿ ಐ.ಸಿ.ಐ.ಸಿ.ಐ, ಐ.ಎಫ್.ಸಿ.ಐ, ಐ.ಡಿ.ಬಿ.ಐ, ಮೊದಲಾದವುಗಳಾಗಿವೆ.

✦ ಅಭಿವೃದ್ಧಿ ಹಣಕಾಸು ಸಂಸ್ಥೆಗಳು ಏಕ ಸರ್ಕಾರದಿಂದ ಸ್ಥಾಪಿಸಲ್ಪಟ್ಟಿದ್ದರೆ ದ್ವಿಪಕ್ಷೀಯ ಎಂತಲೂ, ಪಾಲುದಾರಿಕೆಯಿಂದ ಸ್ಥಾಪಿಸಲ್ಪಟ್ಟಿದ್ದರೆ ಬಹುಪಕ್ಷೀಯ ಹಣಕಾಸು ಸಂಸ್ಥೆ ಎಂದು ಕರೆಯಬಹುದು.

## ಭಾರತೀಯ ವಿಮಾ ನಿಯಂತ್ರಣ ಮತ್ತು ಅಭಿವೃದ್ಧಿ ಪ್ರಾಧಿಕಾರ (Insurance Regulatory and Development Authority of India) - IRDAI




- ಭಾರತದ ಹಣಕಾಸು ವ್ಯವಸ್ಥೆಯಲ್ಲಿ ಹಣ ಮಾರುಕಟ್ಟೆ, ಬಂಡವಾಳ ಮಾರುಕಟ್ಟೆ & ವಿಮಾ ಕ್ಷೇತ್ರ ಮುಖ್ಯವಾದ 3 ಸೇವಾ ವಲಯದ ಕ್ಷೇತ್ರಗಳಾಗಿವೆ. ದೇಶದ ಸಾಮಾನ್ಯ ವಿಮೆ & ಜೀವ ವಿಮೆಗೆ ಸಂಬಂಧಿಸಿದ ಕಂಪನಿಗಳ ಮೇಲ್ವಿಚಾರಣೆ & ನಿರ್ದೇಶಕ ಸಂಸ್ಥೆಯಾಗಿ ಐ.ಆರ್.ಡಿ.ಎ.ಐ ಗುರುತಿಸಬಹುದು.
- ಭಾರತದ **ವಿಮಾ ಉದ್ಯಮವನ್ನು ನಿಯಂತ್ರಿಸುವ ಮತ್ತು ಅಭಿವೃದ್ಧಿ ಪಡಿಸುವ** ಅತ್ಯುನ್ನತ ಸ್ವಾಯತ್ತತ ಸಂಸ್ಥೆಯಾಗಿದೆ.
- ಈ ಸಂಸ್ಥೆಯನ್ನು ಸಂಸತ್ತಿನ ಕಾಯ್ದೆಯಾದ **"ಇನ್ಶೂರೆನ್ಸ್ ರೆಗ್ಯುಲೇಟರಿ ಅಂಡ್ ಡೆವೆಲಪ್‌ಮೆಂಟ್ ಅಥಾರಿಟಿ ಆಕ್ಟ್ 1999"** ರ ಮೂಲಕ 2000 ರಲ್ಲಿ **ನವದೆಹಲಿಯಲ್ಲಿ** ಸ್ಥಾಪಿಸಲಾಯಿತು.
- **ಮಲ್ಹೋತ್ರಾ ಕಮಿಟಿ** ವರದಿಯ ಶಿಫಾರಸ್ಸಿನ ಅನ್ವಯ ಕಾಯ್ದೆ ಜಾರಿಗೆ ತಂದು ಪ್ರಾಧಿಕಾರವನ್ನು ಸ್ಥಾಪಿಸಲಾಯಿತು.
- ಈ ಸಂಸ್ಥೆಯು ತೆಲಂಗಾಣದ **ಹೈದ್ರಾಬಾದ್**‌ನಲ್ಲಿ ಕೇಂದ್ರ ಕಛೇರಿ ಹೊಂದಿದೆ. 2001 ರಲ್ಲಿ ಕೇಂದ್ರ ಕಛೇರಿಯನ್ನು **ದೆಹಲಿಯಿಂದ ಹೈದ್ರಾಬಾದ್‌ಗೆ ವರ್ಗಾಯಿಸಲಾಯಿತು.**
- ಐಆರ್‌ಡಿಎಐ ಯು ವಿಮಾ ವಲಯದಲ್ಲಿ **ವಿದೇಶಿ ನೇರ ಬಂಡವಾಳದ** ಮಿತಿಯನ್ನು **ಶೇ 49 ಕ್ಕೆ** ಏರಿಕೆ ಮಾಡಿದೆ (ಜುಲೈ 2014ರಿಂದ), ಇದಕ್ಕೂ ಮೊದಲ ವಿದೇಶಿ ನೇರ ಬಂಡವಾಳ ಮಿತಿಯು ಶೇ 26 ರಷ್ಟಿತ್ತು.
- ಈ ಪ್ರಾಧಿಕಾರವು 10 ಜನ ಸದಸ್ಯರನ್ನೊಳಗೊಂಡಿದೆ. ಎಲ್ಲಾ ಸದಸ್ಯರನ್ನು ಭಾರತ ಸರ್ಕಾರವು ನೇಮಿಸುತ್ತದೆ. ಇವರಲ್ಲಿ ಒಬ್ಬರು ಅಧ್ಯಕ್ಷರು, ಐದು ಮಂದಿ ಖಾಯಂ ಸದಸ್ಯರು ಮತ್ತು ನಾಲ್ಕು ಮಂದಿ ತಾತ್ಕಾಲಿಕ ಸದಸ್ಯರಿದ್ದಾರೆ.
- ಪ್ರಸ್ತುತ ಅಧ್ಯಕ್ಷರಾಗಿ ಟಿ.ಎಸ್. ವಿಜಯನ್ ಅವರು ಕಾರ್ಯ ನಿರ್ವಹಿಸುತ್ತಿದ್ದಾರೆ.

### ಭಾರತೀಯ ವಿಮಾ ನಿಯಂತ್ರಣ ಮತ್ತು ಅಭಿವೃದ್ಧಿ ಪ್ರಾಧಿಕಾರದ ಕಾರ್ಯಗಳು

- ವಿಮಾ ಕಂಪನಿಗಳ ನೊಂದಣಿ, ಆಧುನೀಕರಣ, ರದ್ದತಿ
- ವಿಮಾ ಪಾಲಿಸಿದಾರರ ಹಿತಾಸಕ್ತಿ ರಕ್ಷಿಸುವುದು
- ವಿಮಾ ಪಾಲಿಸಿ ಏಜೆಂಟ್ & ಮಧ್ಯವರ್ತಿಗಳಿಗೆ ನಿಯಮ ಸಂಹಿತೆ ರೂಪಿಸುವುದು & ತರಬೇತಿ ನೀಡುವುದು.
- ವಿಮಾ ವಲಯದಲ್ಲಿ ದಕ್ಷತೆ ಕಾಪಾಡುವುದು.
- ವಿಮಾ & ಮರು ವಿಮಾ ಕ್ಷೇತ್ರದ ವೃತ್ತಿಪರ ಸಂಘಟನೆಗಳ ನಿಯಂತ್ರಣ & ಉತ್ತೇಜನ.
- ವಿಮಾ ಸೌಲಭ್ಯ, ಶುಲ್ಕ, ಲಾಭ, ಬೋನಸ್ ಇತ್ಯಾದಿಗಳನ್ನು ನಿರ್ಧಾರಗೊಳಿಸುವುದು.
- ಕಂಪನಿ ಹೂಡಿಕೆ ನಿಧಿಗಳ ನಿಯಂತ್ರಣ
- ವಿಮಾ ಪಾಲಿಸಿದಾರರು & ಕಂಪನಿಗಳ ವ್ಯಾಜ್ಯ ತೀರ್ಮಾನ

### ಪ್ರಮುಖ ಅಭಿವೃದ್ಧಿ ಸಿದ್ಧಾಂತಗಳು

| | |
|---|---|
| ಕೆಳಮಟ್ಟದ ಸಮತೋಲನ ಕುಣಿಕೆ ಸಿದ್ಧಾಂತ | ನೆಲ್ಸನ್ |
| ಸಂದಿಗ್ಧ ಕನಿಷ್ಠ ಪ್ರಯತ್ನ ಸಿದ್ಧಾಂತ | ಹಾರ್ವೆ ಲೈಬಿನ್‌ಸ್ಟೀನ್ |
| ಬೃಹತ್ ಪ್ರಯತ್ನ ಸಿದ್ಧಾಂತ | ರೊಸಾನ್‌ಸ್ಟೈನ್ ರೋಡಾನ್ |
| ಸಮತೂಕ ಬೆಳವಣಿಗೆ ಸಿದ್ಧಾಂತ (ಏಕ ಕಾಲದಲ್ಲಿ ಆರ್ಥಿಕತೆಯ ಎಲ್ಲಾ ವಲಯಗಳ ಮೇಲೆ ಹೂಡಿಕೆ ಮಾಡುವುದು) | ರೊಡಾನ್, ನರ್ಕ್ಸ್, ಲೆವಿಸ್ |
| ಅಸಮತೂಕ ಬೆಳವಣಿಗೆ ಸಿದ್ಧಾಂತ | ಹರ್ಷಮನ್, ಸಿಂಗರ್, ಸ್ಟ್ರೀಟನ್, ಕಿಂಡಲ್‌ಬರ್ಗರ್. |
| ವೃತ್ತಾಕಾರದ ಪರಿಚಲನಾ ಸಿದ್ಧಾಂತ | ಗುನ್ನಾರ್ ಮಿರ್ಡಾಲ್ |
| ಅಪರಿಮಿತ ಶ್ರಮದ ಪೂರೈಕೆ ಸಿದ್ಧಾಂತ | ಆರ್ಥರ್ ಲೆವಿಸ್ |



# ಭಾರತೀಯ ಜೀವ ವಿಮಾ ನಿಗಮ Life Insurance Corporation of India

- ಭಾರತದಲ್ಲಿನ ಅತ್ಯಂತ ದೊಡ್ಡ ಜೀವ ವಿಮಾ ಕಂಪನಿ ಮತ್ತು ದೇಶದ ಅತಿ ದೊಡ್ಡ ಹೂಡಿಕೆದಾರವೂ ಆಗಿದೆ.
- ಭಾರತ ಸರ್ಕಾರದ ಒಡೆತನದ ಇನ್ಸೂರೆನ್ಸ್ ಗ್ರೂಪ್ ಮತ್ತು ಹೂಡಿಕೆ ಕಂಪನಿ.
- ಸೆಪ್ಟೆಂಬರ್ 1, 1956 ರಂದು ಸಂಸತ್ತಿನ ಕಾಯ್ದೆ ಮೂಲಕ ಸ್ಥಾಪಿಸಲಾಯಿತು.
- 245 ವಿಮಾ ಕಂಪನಿಗಳನ್ನು ವಿಲೀನಗೊಳಿಸಿ ಸರ್ಕಾರಿ ಸ್ವಾಮ್ಯದ ಜೀವ ವಿಮಾ ನಿಗಮ ಸ್ಥಾಪಿಸಲಾಯಿತು.
- ಕೇಂದ್ರ ಕಛೇರಿ ಮುಂಬೈನಲ್ಲಿದೆ.

**ಜೀವ ವಿಮಾ ನಿಗಮದ ಉತ್ಪನ್ನಗಳು:-**

1) ಜೀವ ವಿಮಾ 2) ಆರೋಗ್ಯ ವಿಮಾ
3) ಹೂಡಿಕೆ ನಿರ್ವಹಣೆ 4) ಮ್ಯೂಚುವಲ್ ಫಂಡ್

- ಸಂಪೂರ್ಣವಾಗಿ ಭಾರತ ಸರ್ಕಾರದ ಅಧೀನವಾಗಿದೆ. ಇದು ಭಾರತ ಸಕಾರದ ವೆಚ್ಚಗಳ ಪೈಕಿ ಸುಮಾರು ಶೇ 24.6 ರಷ್ಟು ವೆಚ್ಚವನ್ನು ಒದಗಿಸುತ್ತದೆ.
- ಎಲ್.ಐ.ಸಿ ಯ ಒಟ್ಟು ಆಸ್ತಿ 1560482 ಕೋಟಿ ಎಂದು ಅಂದಾಜಿಸಲಾಗಿದೆ.
- ಎಲ್.ಐ.ಸಿ ಯು 8 ವಲಯ ಕಛೇರಿ, 113 ವಿಭಾಗೀಯ ಕಛೇರಿಗಳನ್ನು ಹೊಂದಿದೆ.

**ಎಲ್.ಐ.ಸಿ ಯ ಘೋಷವಾಕ್ಯ:-** "your welfare is our Responsibility" (ಭಗವದ್ಗೀತೆಯ 9ನೇ ಅಧ್ಯಾಯದ 22ನೇ ಶ್ಲೋಕವಾಗಿದೆ) ಈ ಘೋಷವಾಕ್ಯವನ್ನು ದೇವನಾಗರಿ ಲಿಪಿಯಲ್ಲಿ ಬರೆಯಲಾಗಿದೆ.

**ಜೀವವಿಮಾನ ಕಂಪನಿ ಇತಿಹಾಸ:-**

- "ದಿ ಓರಿಯಂಟಲ್ ಲೈಫ್ ಇನ್ಸೂರೆನ್ಸ್" ಕಂಪನಿಯು ಭಾರತದಲ್ಲಿ ಜೀವ ವಿಮೆ ನೀಡಿದ ದೇಶದ ಮೊದಲ ವಿಮಾ ಕಂಪನಿಯಾಗಿದೆ.
- ಈ ಕಂಪನಿಯನ್ನು 1818 ರಲ್ಲಿ ಅನಿತ್ ಬಾವಸಾರ ಮತ್ತು ಇತರರು ಕೊಲ್ಕತ್ತಾದಲ್ಲಿ ಸ್ಥಾಪಿಸಿದರು.
- ಸುರೇಂದ್ರ ನಾಥ ಠಾಗೋರ್‌ರವರು ಹಿಂದೂಸ್ತಾನ್ ಇನ್ಸೂರೆನ್ಸ್ ಸೊಸೈಟಿ ಸ್ಥಾಪಿಸಿದರು. ನಂತರ ಇದು ಜೀವ ವಿಮಾ ನಿಗಮವಾಗಿ ಬದಲಾಯಿಸಲಾಯಿತು.
- ಬಾಂಬೆ ಮ್ಯೂಚುವಲ್ ಲೈಫ್ ಇನ್ಸೂರೆನ್ಸ್ ಸೊಸೈಟಿಯನ್ನು 1870 ರಲ್ಲಿ ಸ್ಥಾಪಿಸಲಾಯಿತು.
- 1956 ರಲ್ಲಿ ಸಂಸತ್ತು ಕಾಯ್ದೆ ಮೂಲಕ ಜೀವ ವಿಮಾ ನಿಗಮ ಕಂಪನಿಗಳನ್ನು ರಾಷ್ಟ್ರೀಕರಣಗೊಳಿಸಿತು.

### ಭಾರತದಲ್ಲಿ ವಿಮೆ

ಭಾರತ ಸಂವಿಧಾನದ 7 ನೇ ಅನುಸೂಚಿಯ ಕೇಂದ್ರ ಪಟ್ಟಿಯು ವಿಮಾ ಕ್ಷೇತ್ರಕ್ಕೆ ಸಂಬಂಧಿಸಿದೆ. ಅಂದರೆ, ಕೇಂದ್ರ ಸರ್ಕಾರ ಮಾತ್ರ ವಿಮಾ ಕ್ಷೇತ್ರದ ನೀತಿ - ನಿರ್ಧಾರಗಳನ್ನು ರೂಪಿಸುವ ಜವಾಬ್ದಾರಿ ಹೊಂದಿದೆ. ಭಾರತದಲ್ಲಿ ಸಾರ್ವಜನಿಕ & ಖಾಸಗಿ ವಲಯದ ಸಂಘಟನೆಗಳು ವಿಮಾ ಮಾರುಕಟ್ಟೆಯಲ್ಲಿ ಕಾರ್ಯನಿರ್ವಹಿಸುತ್ತಿವೆ.

ಕ್ರಿ.ಶ. 2000 ದಿಂದ ವಿಮಾ ವಲಯದಲ್ಲಿ ಖಾಸಗಿ ಕಂಪನಿಗಳ ಬಂಡವಾಳ ಹೂಡಿಕೆಗೆ & ನೊಂದಣಿಗೆ ಅವಕಾಶ ಕಲ್ಪಿಸಲಾಗಿದೆ.

2014 ರಲ್ಲಿ ವಿದೇಶಿ ಬಂಡವಾಳ ಹೂಡಿಕೆ ಮಿತಿಯನ್ನು ವಿಮಾ ಕ್ಷೇತ್ರದಲ್ಲಿ ಶೇ 26 ರಿಂದ ಶೇ 49 ಕ್ಕೆ ಹೆಚ್ಚಿಸಲಾಗಿದೆ.

ಸರ್ಕಾರದ ನಿಯಂತ್ರಣದಲ್ಲಿರುವ ಭಾರತೀಯ ಜೀವವಿಮಾ ನಿಗಮ ದೇಶದ ದೊಡ್ಡ ವಿಮಾ ಕಂಪನಿಯಾಗಿದೆ. ಇದು ದೇಶದಲ್ಲಿನ ವಿಮಾ ಕ್ಷೇತ್ರದ ನೀತಿಗಳನ್ನು ರೂಪಿಸುವ ಸಾರ್ವಭೌಮ ಅಧಿಕಾರ ಹೊಂದಿದೆ.

1906 ರಲ್ಲಿ ಸ್ಥಾಪಿತವಾದ ರಾಷ್ಟ್ರೀಯ ವಿಮಾ ನಿಗಮ ಅತ್ಯಂತ ಹಳೆಯ & ಅಸ್ತಿತ್ವದಲ್ಲಿರುವ ವಿಮಾ ಕಂಪನಿಯಾಗಿದೆ.

ವಿಮಾ ಕೈಗಾರಿಕೆಯು ಸಾಮಾನ್ಯ & ಜೀವ ವಿಮೆ ಒಳಗೊಂಡಿದೆ.

### ಪ್ರಮುಖ ವಿಮಾ ಕಂಪನಿಗಳು

| ಕಂಪನಿ | ಸ್ಥಾಪನೆ ವರ್ಷ |
|---|---|
| ಅಂಚೆ ಜೀವ ವಿಮೆ | 1884 |
| ಭಾರತ್ ವಿಮಾ ಕಂಪನಿ | 1896 |
| ಯುನೈಟೆಡ್ ಇಂಡಿಯಾ | 1906 |
| ನ್ಯಾಷನಲ್ ಇಂಡಿಯನ್ | 1906 |
| ಕೋ ಆಪರೇಟಿವ್ ಅಶೂರೆನ್ಸ್ | 1906 |
| ಹಿಂದೂಸ್ಥಾನ್ ಕೋ ಆಪರೇಟಿವ್ | 1907 |

# ಏಷ್ಯಾ ಮೂಲಸೌಕರ್ಯ ಹೂಡಿಕೆ ಬ್ಯಾಂಕ್ (AIIB - Asian Infrastructure Investment Bank)

೧೯೫೦ ರ ದಶಕದಲ್ಲಿ ಬ್ರೆಟನ್‌ವುಡ್ ಸಮ್ಮೇಳನದ ಫಲವಾಗಿ ಪಾಶ್ಚಿಮಾತ್ಯ ರಾಷ್ಟ್ರಗಳ ಪ್ರಾಬಲ್ಯದ ಸಹಭಾಗಿತ್ವದಲ್ಲಿ ಸ್ಥಾಪಿತವಾದ ಐ.ಎಂ.ಎಫ್ & ಐ.ಬಿ.ಆರ್.ಡಿಗಳಿಗೆ ಪರ್ಯಾಯವಾಗಿ ಪೌರಾತ್ಯ & ಏಷ್ಯಾ ದೇಶಗಳ ಆಧಾರಿತ ಮೊಟ್ಟ ಮೊದಲ ಸ್ವತಂತ್ರ ಅಂತರಾಷ್ಟ್ರೀಯ ಬ್ಯಾಂಕ್ ಆಗಿ ಏಷ್ಯಾ ಮೂಲಸೌಕರ್ಯ ಹೂಡಿಕೆ ಬ್ಯಾಂಕನ್ನು ಗುರುತಿಸಬಹುದು. ಇದೊಂದು ಅಮೆರಿಕ & ಜಪಾನ್‌ನಂತಹ ಪ್ರಬಲ ರಾಷ್ಟ್ರಗಳ ಸದಸ್ಯತ್ವವಿಲ್ಲದೇ ಸ್ಥಾಪಿತವಾದ **ಮೊದಲ ಬಹು ಪಕ್ಷೀಯ ಬ್ಯಾಂಕ್** ಎಂಬ ಕೀರ್ತಿಗೆ ಪಾತ್ರವಾಗಿದೆ.




## ಎಐಐಬಿ ಸ್ಥಾಪನೆ ಹಿನ್ನಲೆ

- 2013 ಅಕ್ಟೋಬರ್‌ನಲ್ಲಿ ಚೀನಾದ ಅಧ್ಯಕ್ಷರಾದ **ಕ್ಸಿ ಜಿನ್ ಪಿಂಗ್** ಅವರು ಇಂಡೋನೇಷ್ಯಾಗೆ ಭೇಟಿ ನೀಡಿದ ಸಂದರ್ಭದಲ್ಲಿ ಮೊದಲ ಬಾರಿಗೆ ಏಷ್ಯಾ & ಫೆಸಿಫಿಕ್ ಪ್ರದೇಶಗಳಲ್ಲಿ **ಮೂಲ ಸೌಕರ್ಯ ಅಭಿವೃದ್ಧಿ** ಯೋಜನೆಗಳಿಗೆ ಅಗತ್ಯವಿರುವ ಹಣಕಾಸು ನೆರವು ನೀಡುವ ಮೊದಲ ಬಹು ರಾಷ್ಟ್ರೀಯ, ಪ್ರಾದೇಶಿಕ ಹೂಡಿಕೆಯ ಏಷ್ಯಾದ ಬ್ಯಾಂಕನ್ನು ಸ್ಥಾಪಿಸುವ ಪ್ರಸ್ತಾವನೆಯನ್ನು ಸಲ್ಲಿಸಿದರು. ಇವರ ಈ ಪ್ರಸ್ತಾವನೆಗೆ ಜಗತ್ತಿನ ಪ್ರಮುಖ ರಾಷ್ಟ್ರಗಳ ನಾಯಕರುಗಳು ಅಧಿಕ ಸಂಖ್ಯೆಯಲ್ಲಿ ಬೆಂಬಲ ನೀಡಿದರು.
- **2014 ಅಕ್ಟೋಬರ್ 24ರಂದು ಬೀಜಿಂಗ್**‌ನಲ್ಲಿ ನಡೆದ ಸಭೆಯಲ್ಲಿ 21 ರಾಷ್ಟ್ರಗಳ ಮೂಲ ನಡಾವಳಿಗಳ ಅನ್ವಯ ಎಐಐಬಿ ಬ್ಯಾಂಕ್‌ನ್ನು ಉದ್ಘಾಟಿಸಲಾಯಿತು. **2015 ಡಿಸೆಂಬರ್ 25 ರಂದು** ಈ ಬ್ಯಾಂಕ್ ಒಪ್ಪಂದಗಳ ಅನ್ವಯ ಕಾರ್ಯಾಚರಣೆಯನ್ನು ಪ್ರಾರಂಭಿಸಿದ್ದು, **2016 ಜನವರಿ 16 ರಿಂದ** ತನ್ನ ವ್ಯವಹಾರದ ಕಾರ್ಯನಿರ್ವಹಣೆ ಆರಂಭಿಸಿದೆ. ಇದರ ವ್ಯವಹಾರಿಕ ಭಾಷೆ **ಇಂಗ್ಲೀಷ್**.
- **ಚೀನಾದ ಬೀಜಿಂಗ್**‌ನಲ್ಲಿ ತನ್ನ **ಕೇಂದ್ರ ಕಛೇರಿಯನ್ನು** ಹೊಂದಿರುವ ಈ ಬ್ಯಾಂಕ್ 57 ಸದಸ್ಯ ರಾಷ್ಟ್ರಗಳ 100 ಬಿಲಿಯನ್ ಅಮೆರಿಕನ್ ಡಾಲರ್ ಮೂಲ ಬಂಡವಾಳದೊಂದಿಗೆ ತನ್ನ ಕಾರ್ಯಾಚರಣೆಯನ್ನು ಪ್ರಾರಂಭಿಸಿದೆ. ಇದು ವಿಶ್ವ ಬ್ಯಾಂಕ್‌ನ ಬಂಡವಾಳದ ಅರ್ಧದಷ್ಟಿದೆ. ಇದರಲ್ಲಿ **ಚೀನಾ ದೇಶವು** ಶೇ 30.34 ರಷ್ಟು (30 ಬಿಲಿಯನ್ ಡಾಲರ್) ಬಂಡವಾಳದ ಪಾಲನ್ನು ಹೊಂದಿದ್ದು, ಈ ಬ್ಯಾಂಕ್‌ನ ಅತಿದೊಡ್ಡ ಷೇರುದಾರ ರಾಷ್ಟ್ರವಾಗಿದೆ.

## ಸಂಘಟನೆ

- ಚೀನಾದ ಹಣಕಾಸು ಖಾತೆ ಉಪಸಚಿವ ಹಾಗೂ ಏಷ್ಯಾ ಅಭಿವೃದ್ಧಿ ಬ್ಯಾಂಕ್ (ಎಡಿಬಿ) ಮಾಜಿ ಉಪಾಧ್ಯಕ್ಷರಾಗಿರುವ **ಜಿನ್‌ಲಿಕುನ್** ಅವರನ್ನು ಎಐಐಬಿ ಯ ಅಧ್ಯಕ್ಷರನ್ನಾಗಿ 5 ವರ್ಷಗಳ ಅವಧಿಗೆ ನೇಮಿಸಲಾಗಿದೆ.
- ಭಾರತದ **ಡಿ.ಜೆ. ಪಾಂಡಿಯನ್** ಈ ಬ್ಯಾಂಕ್‌ನ ಉಪಾಧ್ಯಕ್ಷರು & ಮುಖ್ಯ ಹೂಡಿಕೆ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.
- **ಗವರ್ನರ್ ಮಂಡಳಿ:-** ಈ ಬ್ಯಾಂಕ್‌ನ ಮುಖ್ಯ ಅಂಗವಾಗಿದ್ದು, ಪ್ರತಿ ಸದಸ್ಯ ರಾಷ್ಟ್ರಗಳಿಂದ ಓರ್ವ ಸದಸ್ಯನನ್ನು ಗೌರ್ನರ್ ಆಗಿ ಹೊಂದಿದ್ದು, **ಪ್ರತಿ ವರ್ಷ ಒಂದು ಬಾರಿ ಸಭೆ** ಸೇರುತ್ತದೆ.
- **ನಿರ್ದೇಶಕರ ಮಂಡಳಿ:-** ಒಂದು ಅಂಗ ಸಂಸ್ಥೆಯಾಗಿದ್ದು, 12 ಸದಸ್ಯರನ್ನು ಹೊಂದಿದೆ. ಇದರಲ್ಲಿ 9 ಜನ ಸದಸ್ಯರು ಏಷ್ಯಾ & ಫೆಸಿಫಿಕ್ ಪ್ರಾಂತ್ಯಕ್ಕೆ ಸೇರಿದ್ದು, ಉಳಿದ 3 ಜನ ಪ್ರಾಂತ್ಯದ ಹೊರಗಿನಿಂದ ಬಂದವರು. ಭಾರತದ **ದಿನೇಶ್ ಶರ್ಮಾ** ಈ ನಿರ್ದೇಶಕರ ಮಂಡಳಿಯಲ್ಲಿ ಭಾರತದ ಪ್ರತಿನಿಧಿ ಸದಸ್ಯರಾಗಿದ್ದಾರೆ.

### ಗವರ್ನರ್ ಮಂಡಳಿಯ ಸಭೆಗಳು

| ಸಭೆ | ಸ್ಥಳ | ವರ್ಷ |
|---|---|---|
| 1 | ಚೀನಾದ ಬೀಜಿಂಗ್ | 2016 |
| 2 | ಕೊರಿಯಾ ರಿಪಬ್ಲಿಕ್‌ನ ಜೆಜು | 2017 |
| 3 | ಭಾರತದ ಮುಂಬೈ | 2018 ಜೂನ್ |

## ಭಾರತ & ಎಐಐಬಿ

+ ಭಾರತ ದೇಶವು ಈ ಬ್ಯಾಂಕ್‌ನ ಸಂಸ್ಥಾಪಕ ಸದಸ್ಯ ರಾಷ್ಟ್ರಗಳಲ್ಲಿ ಒಂದಾಗಿದ್ದು, **2014 ಅಕ್ಟೋಬರ್ 24** ರಂದು ಸದಸ್ಯತ್ವವನ್ನು ಪಡೆಯಿತು. 8367.3 ಮಿಲಿಯನ್ ಅಮೆರಿಕನ್ ಡಾಲರ್ ಬಂಡವಾಳ ತೊಡಗಿಸಿದ್ದು, ಈ ಮೂಲಕ 2 ನೇ ಅತಿ ದೊಡ್ಡ ಷೇರುದಾರ ರಾಷ್ಟ್ರವಾಗಿದೆ.
+ 2015 ರಲ್ಲಿ ಬ್ರಿಟನ್, ಜರ್ಮನಿ, ಇಟಲಿ, ಫ್ರಾನ್ಸ್ ರಾಷ್ಟ್ರಗಳು ಈ ಬ್ಯಾಂಕ್‌ನ ಸದಸ್ಯತ್ವ ಪಡೆದ ಪ್ರಮುಖ ರಾಷ್ಟ್ರಗಳಾಗಿವೆ. ಪ್ರಸ್ತುತ 57 ಸದಸ್ಯ ರಾಷ್ಟ್ರಗಳು ಹಾಗೂ 23 ರಾಷ್ಟ್ರಗಳು ಸದಸ್ಯತ್ವ ಪಡೆಯುವ ಇಂಗಿತ ವ್ಯಕ್ತಪಡಿಸಿರುವುದರಿಂದ ಒಟ್ಟು 80 ಅನುಮೋದಿತ ಸದಸ್ಯ ರಾಷ್ಟ್ರಗಳೆನ್ನಬಹುದು.
+ **ಜಪಾನ್** & **ಅಮೆರಿಕ** ರಾಷ್ಟ್ರಗಳು ಈ ಬ್ಯಾಂಕ್‌ನ ಸದಸ್ಯತ್ವ ಪಡೆದಿಲ್ಲ.

**ಉದ್ದೇಶಗಳು:-**

+ ಜಾಗತಿಕ ಆರ್ಥಿಕ ಆಡಳಿತ ವ್ಯವಸ್ಥೆಯಲ್ಲಿ ಸಮಾನತೆ ಪರಿಣಾಮಕಾರಿ & ತ್ವರಿತ ಅಭಿವೃದ್ಧಿಗೆ ಪೂರಕವಾದ ಉದ್ದೇಶಗಳನ್ನು ಹೊಂದಿದ್ದು, **ಮೂಲ ಸೌಕರ್ಯ ಯೋಜನೆಗಳಲ್ಲಿ ಖಾಸಗಿ ಬಂಡವಾಳ ಹೂಡಿಕೆಯನ್ನು ಪ್ರೋತ್ಸಾಹಿಸಲು & ಪ್ರಾದೇಶಿಕ ಸಂಪರ್ಕಿಸುವಿಕೆ ಹಾಗೂ ಆರ್ಥಿಕ ಸಹಕಾರದ** ಪ್ರಮುಖ ಉದ್ದೇಶಗಳನ್ನು ಈ ಬ್ಯಾಂಕ್ ಹೊಂದಿದೆ.
+ ಮೂಲ ಸೌಕರ್ಯ ಯೋಜನೆಗಳಾದ ಶಕ್ತಿ, ನಗರಾಭಿವೃದ್ಧಿ, ಸಾರಿಗೆ, ಶಿಕ್ಷಣ, ಆರೋಗ್ಯ ಮುಂತಾದ ಕ್ಷೇತ್ರಗಳ ಅಭಿವೃದ್ಧಿಗೆ ಹಣಕಾಸು ನೆರವು ನೀಡುವ ಉದ್ದೇಶ ಹೊಂದಿದೆ.
+ ಸದಸ್ಯ ರಾಷ್ಟ್ರಗಳಲ್ಲಿ ಪರಿಸರ ಸ್ನೇಹಿ ಹಣಕಾಸು ಸ್ವಾಯತ್ತತಾ ಅಧಿಕ ಗುಣಮಟ್ಟದ ಮೂಲ ಸೌಕರ್ಯಗಳಲ್ಲಿ ಬಂಡವಾಳ ಹೂಡಿಕೆ ವೃದ್ಧಿಸುವ ಮೂಲಕ ಆರ್ಥಿಕ & ಸಾಮಾಜಿಕ ಅಭಿವೃದ್ಧಿ ಸಾಧಿಸುವುದು.

## ಎಐಐಬಿಯ ಮತದಾನದ ಹಕ್ಕು

+ ಬ್ಯಾಂಕ್‌ನ ನಿರ್ಣಯಗಳಿಗೆ ಸದಸ್ಯ ರಾಷ್ಟ್ರಗಳ **ಒಟ್ಟು ಆಂತರಿಕ ಉತ್ಪನ್ನ (ಶೇ 60) (ಜಿಡಿಪಿ) ಹಾಗೂ ಖರೀದಿ ಸಾಮರ್ಥ್ಯದ ಹೋಲಿಕೆ** (ಶೇ 40) (ಪಿಪಿಪಿ) ಸೂತ್ರದ ಆಧಾರದ ಮೇಲೆ ಮತ ಚಲಾಯಿಸುವ ಹಕ್ಕು ನಿಗದಿ ಪಡಿಸಲು ತೀರ್ಮಾನಿಸಲಾಗಿದೆ.
+ ಚೀನಾ ದೇಶವು ಹೆಚ್ಚುವರಿ 50 ಬಿಲಿಯನ್ ಡಾಲರ್ ಹಣವನ್ನು ಅಲ್ಪ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ಮೂಲ ಸೌಕರ್ಯ ಅಭಿವೃದ್ಧಿಗೆ ತೊಡಗಿಸಲು ಇಂಗಿತ ಹೊಂದಿದೆ. ಜಗತ್ತಿನ ವಿವಿಧ ಹಣಕಾಸು ವಿಶ್ಲೇಷಕರು ಚೀನಾದ ಈ ಧೋರಣೆಯನ್ನು ಹೊಗಳಿದ್ದಾರೆ.
+ 2016 ರಲ್ಲಿ **ಚೀನಾ** ಮೊದಲ ಬಾರಿಗೆ **ಬಾಂಗ್ಲಾದೇಶ, ಪಾಕಿಸ್ತಾನ,** ಇಂಡೋನೇಷ್ಯಾ, **ತಜಕೀಸ್ತಾನ** ಈ ದೇಶಗಳಿಗೆ 509 ಮಿಲಿಯನ್ ಅಮೆರಿಕನ್ ಡಾಲರ್ ಹಣಕಾಸು ನೆರವನ್ನು ನೀಡಿದೆ.

**ಎಐಐಬಿ ಬ್ಯಾಂಕ್‌ನ ಪ್ರಮುಖ 3 ರಾಷ್ಟ್ರಗಳು**

| ರಾಷ್ಟ್ರಗಳು | ಬಂಡವಾಳ ಷೇರು | ಮತದಾನದ ಹಕ್ಕು |
|---|---|---|
| ಚೀನಾ | 30.34% | 26.06% |
| ಭಾರತ | 8.52% | 7.5% |
| ರಷ್ಯಾ | 6.66% | 5.92% |

## ಏಷ್ಯಾ ಅಭಿವೃದ್ಧಿ ಬ್ಯಾಂಕ್ (ADB-Asian Development Bank)




+ **ಸ್ಥಾಪನೆ:-** 1966 ಡಿಸೆಂಬರ್ 19
+ **ಕೇಂದ್ರ ಕಛೇರಿ:-** ಫಿಲಿಪೈನ್ಸ್‌ನ ಮನಿಲಾ ನಗರದಲ್ಲಿದೆ.
+ **ಸದಸ್ಯ ರಾಷ್ಟ್ರಗಳ ಸಂಖ್ಯೆ:-** 67 (48 ಏಷ್ಯಾ ಮತ್ತು ಪೆಸಿಫಿಕ್ ರಾಷ್ಟ್ರಗಳಾಗಿದ್ದು, 19 ಏಷ್ಯಾದ ಹೊರ ರಾಷ್ಟ್ರಗಳು)
+ **ಧ್ಯೇಯ ವಾಕ್ಯ:-** Fighting poverty in Asia and the pacific
+ **ಉದ್ದೇಶ:-** ಏಷ್ಯನ್ ದೇಶಗಳ ಆರ್ಥಿಕಾಭಿವೃದ್ಧಿಗೆ ಸಂಬಂಧಿಸಿದಂತೆ ಸಹಕಾರ ನೀಡಲು ಸ್ಥಾಪನೆಯಾದ ಬ್ಯಾಂಕ್ ಇದಾಗಿದೆ. ಆರ್ಥಿಕ ಬೆಳವಣಿಗೆ, ಸುಸ್ಥಿರ ಪ್ರಗತಿ, ಬಡತನ ನಿಯಂತ್ರಣ, ಹಣಕಾಸು ವಲಯದ ಅಭಿವೃದ್ಧಿ, ಪ್ರಾದೇಶಿಕ ಸಮಗ್ರತೆಗೆ ಸಹಕಾರಿ ಇತ್ಯಾದಿ.
+ ಇದು ಯುನೈಟೆಡ್ ನೇಷನ್ಸ್ ಎಕನಾಮಿಕ್ ಅಂಡ್ ಸೋಷಿಯಲ್ ಕಮಿಷನ್ ಫಾರ್ ಏಷ್ಯಾ ಅಂಡ್ ಫೆಸಿಫಿಕ್‌ನ ಸದಸ್ಯತ್ವವನ್ನು ಪಡೆದಿದೆ.
+ 2017 ಜೂನ್ 27 ರಂದು ಎ.ಡಿ.ಬಿ ಯ ಅಧ್ಯಕ್ಷರಾದ Takehiko Nakao ಅವರು ಭಾರತದ ಉತ್ತರ ಪ್ರದೇಶಕ್ಕೆ 3 ದಿನದ ಭೇಟಿ ನೀಡಿದ್ದು, ಭಾರತ & ಎಡಿಬಿ ಬ್ಯಾಂಕ್‌ನ ಭವಿಷ್ಯದ ಸಹಕಾರ ಒಪ್ಪಂದಗಳ ಬಗ್ಗೆ ಚರ್ಚಿಸಿದರು.

## ಐರೋಪ್ಯ ಹೂಡಿಕೆ ಬ್ಯಾಂಕು (European Investment Bank)




✦ 1958ರ ರೋಮ್ ಒಪ್ಪಂದದ ಅನ್ವಯ ಐರೋಪ್ಯ ಒಕ್ಕೂಟದ ರಾಷ್ಟ್ರಗಳಿಗೆ ದೀರ್ಘಾವಧಿ ಸಾಲ ನೀಡಿಕೆ ಉದ್ದೇಶದಿಂದ ಸ್ಥಾಪಿತವಾದ ಲಾಭ ರಹಿತ ಹಣಕಾಸು ಸಂಸ್ಥೆಯಾಗಿದೆ.

✦ ಐರೋಪ್ಯ ಒಕ್ಕೂಟದ 28 ಸದಸ್ಯ ರಾಷ್ಟ್ರಗಳ ಷೇರುದಾರರ **'ನೀತಿ ಚಾಲಿತ ಬ್ಯಾಂಕ್'** ಆಗಿ ಐರೋಪ್ಯ ಸಮಗ್ರತೆ & ಸಾಮಾಜಿಕ ಸಮನ್ವಯತೆಯ ಉದ್ದೇಶದಿಂದ ಸ್ಥಾಪಿತವಾಯಿತು. ಇದರ ಕೇಂದ್ರ ಕಛೇರಿ 1958 ರಲ್ಲಿ **ಬೆಲ್ಜಿಯಂ ನ ಬ್ರುಸೇಲ್ಸ್**, ಆದರೆ 1968 ರಲ್ಲಿ ಲುಕ್ಸನ್‌ಬರ್ಗ್‌ಗೆ ವರ್ಗಾವಣೆಗೊಂಡಿದೆ. **ಜರ್ಮನಿಯ ವರ್ನಾರ್ ಹೋಯರ್** 2012 ರಿಂದ 6 ವರ್ಷದ ಅವಧಿಗೆ ಈ ಬ್ಯಾಂಕ್‌ನ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇದು ಪ್ರಪಂಚದ **ಅತ್ಯಂತ ದೊಡ್ಡ ಅಂತರಾಷ್ಟ್ರೀಯ ಸಾರ್ವಜನಿಕ ಸಾಲ ನೀಡಿಕೆ ಹಣಕಾಸು ಸಂಸ್ಥೆ** ಎಂಬ ಕೀರ್ತಿಗೆ ಪಾತ್ರವಾಗಿದೆ. ಇದು ಐರೋಪ್ಯ ಕೇಂದ್ರ ಬ್ಯಾಂಕು ಆಗಿರದೇ, ಸಾರ್ವಜನಿಕ ಸಹಭಾಗಿತ್ವದ ಅಂತರಾಷ್ಟ್ರೀಯ ಹಣಕಾಸು ಸಂಸ್ಥೆಯಾಗಿದೆ.

**ಬ್ಯಾಂಕ್ ಸಂಘಟನೆ:-**

✦ ಐರೋಪ್ಯ ಒಕ್ಕೂಟದ ಎಲ್ಲಾ ರಾಷ್ಟ್ರಗಳ ಷೇರುದಾರರಾಗಿರುತ್ತಾರೆ.

✦ **ಗೌರ್ನರ್ ಮಂಡಳಿ** – ಎಲ್ಲಾ ಇ.ಯು. ರಾಷ್ಟ್ರಗಳ ಹಣಕಾಸು ಸಚಿವರು. ಇದು ಸಾಮಾನ್ಯ ಸಾಲ ನೀತಿಯನ್ನು ರೂಪಿಸುವ ಅಂಗವಾಗಿದೆ. ಬ್ಯಾಂಕ್‌ನ ವಿಭಾಗಗಳಿಂದ ನಿರ್ವಹಣಾ ನಿರ್ಧಾರಗಳ ಅನುಷ್ಠಾನ

✦ **ನಿರ್ದೇಶಕರ ಮಂಡಳಿ** – ಬ್ಯಾಂಕ್‌ನ ಅಧ್ಯಕ್ಷರನ್ನು ಒಳಗೊಂಡಂತೆ ಇ.ಯು. ಒಕ್ಕೂಟದಿಂದ 28 ಸದಸ್ಯರು & ಐರೋಪ್ಯ ಆಯೋಗದಿಂದ ಓರ್ವ ಸದಸ್ಯನನ್ನು ಒಳಗೊಂಡಿದೆ. ಇದು ಸಾಲ ಕೊಡುವಿಕೆ & ತೆಗೆದುಕೊಳ್ಳುವಿಕೆ ಕಾರ್ಯಾಚರಣೆಗೆ ಅನುಮೋದನೆ ನೀಡುವ ಅಂಗವಾಗಿದೆ.

✦ **ನಿರ್ವಹಣಾ ಸಮಿತಿ** – ಬ್ಯಾಂಕ್‌ನ ದೈನಂದಿನ ವ್ಯವಹಾರಗಳನ್ನು ನೋಡಿಕೊಳ್ಳುವ ಸಂಸ್ಥೆ.

✦ **ಲೆಕ್ಕ ಪರಿಶೋಧನಾ ಸಮಿತಿ** – ಬ್ಯಾಂಕ್‌ನ ಕಾರ್ಯಾಚರಣೆಯ ಪರಿಶೀಲನಾ ಅಂಗವಾಗಿದೆ.

✦ ಯುರೋಪ್ ಒಕ್ಕೂಟದ ಸದಸ್ಯ ರಾಷ್ಟ್ರಗಳ ಪ್ರಾದೇಶಿಕ ನೀತಿ, ಸಣ್ಣ & ಮಧ್ಯಮ ಗಾತ್ರದ ಉದ್ದಿಮೆಗಳಿಗೆ ಬೆಂಬಲ, ಪರಿಸರ ಸುಸ್ಥಿರತೆ, ಜ್ಞಾನಾಧಾರಿತ ಅರ್ಥವ್ಯವಸ್ಥೆ, ಸಾರಿಗೆ & ಶಕ್ತಿ, ಸಂಪರ್ಕ ಜಾಲ ಅಭಿವೃದ್ಧಿ, ಸುಸ್ಥಿರ ಪೈಪೋಟಿ ಭದ್ರತಾ ಇಂಧನ ಪೂರೈಕೆ ಮುಂತಾದ ಕ್ಷೇತ್ರಗಳಿಗೆ ಸಾಲ ಸೌಲಭ್ಯ ಒದಗಿಸುತ್ತದೆ. ಆದರೆ, ಸದಸ್ಯೇತರ ರಾಷ್ಟ್ರಗಳ ಖಾಸಗಿ ವಲಯ, ಹಣಕಾಸು ವಲಯ, ಮೂಲ ಸೌಕರ್ಯ, ಪರಿಸರ ಸುಸ್ಥಿರತೆ ಮುಂತಾದ ಕ್ಷೇತ್ರಗಳ ಅಭಿವೃದ್ಧಿಗೆ ಹಣಕಾಸು ನೆರವು ನೀಡುತ್ತದೆ. ಉದಾ:– **ಭಾರತದ ಕಾನ್ಪುರ ಮೆಟ್ರೋ ಯೋಜನೆ**, ಟರ್ಕಿಯ ಯುರೇಷಿಯಾ ಕಣಿವೆ ಯೋಜನೆ, ಯು.ಕೆ.ಯ ಮ್ಯಾಂಚೆಸ್ಟರ್ ಮೆಟ್ರೋ ಲಿಂಕ್ ಹಂತ–3.

✦ ಜರ್ಮನಿ, ಫ್ರಾನ್ಸ್, ಇಟಲಿ & ಯು.ಕೆ ರಾಷ್ಟ್ರಗಳು ಈ ಬ್ಯಾಂಕ್‌ನ ತಲಾ ಶೇ 16.1 ರಷ್ಟು ಷೇರು ಬಂಡವಾಳ ಹೊಂದಿವೆ.

**ಜಗತ್ತಿನ ಮೊದಲ 5 ಬ್ಯಾಂಕುಗಳು**

| ಒಟ್ಟು ಸ್ವತ್ತು ಆಧಾರಿತ | ಬ್ಯಾಂಕುಗಳ ಸಂಖ್ಯೆ ಆಧಾರದ ಮೇಲೆ (ಒಟ್ಟು ಸ್ವತ್ತುಗಳ ಆಧಾರದ ಮೊದಲ 100 ಬ್ಯಾಂಕುಗಳಲ್ಲಿ) | ಮಾರುಕಟ್ಟೆ ಬಂಡವಾಳೀಕರಣ ಆಧಾರ |
|---|---|---|
| ಇಂಡಸ್ಟ್ರೀಯಲ್ & ಕಮರ್ಷಿಯಲ್ ಬ್ಯಾಂಕ್ ಆಫ್ ಚೀನಾ | ಚೀನಾ (19) | ಜೆ.ಪಿ. ಮೋರ್ಗಾನ್ ಚೇಸ್ & ಕೊ |
| ಚೀನಾ ಕನ್‌ಸ್ಟ್ರಕ್ಷನ್ ಬ್ಯಾಂಕ್ ಕಾರ್ಪೋರೇಷನ್ | ಯು.ಎಸ್.ಎ (10) | ವೆಲ್ಸ್ ಫಾರ್ಗೋ & ಕಂ. |
| ಅಗ್ರಿಕಲ್ಚರಲ್ ಬ್ಯಾಂಕ್ ಆಫ್ ಚೀನಾ | ಜಪಾನ್ (9) | ಇಂಡಸ್ಟ್ರೀಯಲ್ & ಕಮರ್ಷಿಯಲ್ ಬ್ಯಾಂಕ್ ಆಫ್ ಚೀನಾ |
| ಬ್ಯಾಂಕ್ ಆಫ್ ಚೀನಾ | ಫ್ರಾನ್ಸ್ (7) | ಬ್ಯಾಂಕ್ ಆಫ್ ಅಮೆರಿಕಾ |
| ಮಿಟ್ಸುಬಿಶಿ ಯು.ಎಫ್.ಜೆ. ಫೈನಾನ್ಷಿಯಲ್ ಗ್ರೂಪ್ | ಯು.ಕೆ. (6) | ಕತ್ತಾರ್ ಇಸ್ಲಾಮಿಕ್ ಬ್ಯಾಂಕ್ |

# ಆರ್ಥಿಕ ಸಹಕಾರಗಳು (Economic Co-operation)

20 ನೇ ಶತಮಾನದ ಆರಂಭದಲ್ಲಿ ಮೊದಲ & ಎರಡನೇ ಮಹಾಯುದ್ಧಗಳ ನಂತರ, ಬ್ರಿಟನ್‌ನ ವಸಾಹತು ಶಾಹಿ ನೀತಿಯ ಅಂತ್ಯದ ನಂತರ ಜಗತ್ತಿನ ವಿವಿಧ ರಾಷ್ಟ್ರಗಳ ನಡುವೆ ಏಕ ಪಕ್ಷೀಯ, ದ್ವಿಪಕ್ಷೀಯ & ಬಹು ಪಕ್ಷೀಯ ವ್ಯಾಪಾರ ಸಂಬಂಧಗಳು ಏರ್ಪಟ್ಟವು. 1948 ರ ಗ್ಯಾಟ್ ಒಪ್ಪಂದದ ಅನ್ವಯ ಮುಕ್ತ ವ್ಯಾಪಾರ ನೀತಿಯು ಜಾಗತಿಕ ಪ್ರಬಲವಾಗುತ್ತಾ ವಿವಿಧ ರಾಷ್ಟ್ರಗಳ ನಡುವೆ ವ್ಯಾಪಾರ & ವಾಣಿಜ್ಯ ಅಭಿವೃದ್ಧಿ ಪಡಿಸುವ ಉದ್ದೇಶದಿಂದ ಜಾಗತಿಕ, ಪ್ರಾದೇಶಿಕ ಮಟ್ಟಗಳಲ್ಲಿ ವಿವಿಧ ವ್ಯಾಪಾರಿ ಸಂಘಟನೆಗಳು ರೂಪುಗೊಂಡವು. ಇವುಗಳನ್ನು ಆರ್ಥಿಕ ಸಹಕಾರದ ಬಗೆ ರೂಪಗಳೆನ್ನಬಹುದು.

**ಅರ್ಥ:-** ಜಗತ್ತಿನ ವಿವಿಧ ರಾಷ್ಟ್ರಗಳು ವ್ಯಾಪಾರ ಮತ್ತು ವಾಣಿಜ್ಯದ ಉದ್ದೇಶದಿಂದ ರೂಪಿಸಿಕೊಳ್ಳುವ ಒಕ್ಕೂಟವನ್ನು ಆರ್ಥಿಕ ಸಹಕಾರ ಎನ್ನುವರು.

## ಆರ್ಥಿಕ ಸಹಕಾರದ ವಿವಿಧ ರೂಪಗಳು

- ಜಗತ್ತಿನಲ್ಲಿ ಅಸ್ತಿತ್ವದಲ್ಲಿರುವ ವಿವಿಧ ರೀತಿಯ ಆರ್ಥಿಕ ಸಹಕಾರಗಳು ಈ ಕೆಳಗಿನಂತಿವೆ.

**1. ಒಲವಿನ ವ್ಯಾಪಾರ ಪ್ರದೇಶ (Preferential Trade Area - PTA)**

- ಸದಸ್ಯ ರಾಷ್ಟ್ರಗಳ ನಡುವಿನ ವ್ಯಾಪಾರಿ ಸುಂಕಗಳನ್ನು ಕಡಿಮೆ ಮಾಡುವುದು ಮತ್ತು ಸದಸ್ಯೇತರ ರಾಷ್ಟ್ರಗಳ ನಡುವೆ ಪ್ರತ್ಯೇಕವಾಗಿ ಹೆಚ್ಚಿನ ಸುಂಕ ವಿಧಿಸುವ ಆರ್ಥಿಕ ಸಹಕಾರವೇ **ಒಲವಿನ ವ್ಯಾಪಾರ ಪ್ರದೇಶ.** ಇದನ್ನು ಆರ್ಥಿಕ ಸಹಕಾರಗಳಲ್ಲಿ **ಅತ್ಯಂತ ಕನಿಷ್ಠ ಮಟ್ಟದ ಅಥವಾ ಅಪರಿಪೂರ್ಣ ಆರ್ಥಿಕ ಸಹಕಾರ** ಎಂದೇ ಕರೆಯಲಾಗಿದೆ.
- ಉದಾ: 1932ರಲ್ಲಿ ರಚನೆಗೊಂಡ ಕಾಮನ್‌ವೆಲ್ತ್ ಒಕ್ಕೂಟ, ಆದರೆ 1948ರ ಗ್ಯಾಟ್ ಒಪ್ಪಂದದ ನಂತರ ಇದು ರದ್ದುಗೊಂಡಿದೆ.

**2. ಮುಕ್ತ ವ್ಯಾಪಾರಿ ವಲಯ:- (Free Trade Area)**

- ವ್ಯಾಪಾರಿ ಗುಂಪಿನ ಸದಸ್ಯ ರಾಷ್ಟ್ರಗಳ ನಡುವೆ ಎಲ್ಲಾ ರೀತಿಯ ನಿಯಂತ್ರಣಗಳಿಂದ ಮುಕ್ತವಾಗಿದ್ದು, ಮತ್ತು ಸದಸ್ಯೇತರ ರಾಷ್ಟ್ರಗಳ ನಡುವೆ ಸ್ವತಂತ್ರ ~~ವ್ಯಾಪಾರ~~ ನೀತಿ ಅನುಸರಿಸುವುದು.
- ಉದಾ: EFTA (European Free Trade Area) (LAPFTA - Latin American Free Trade Area), LAIA (Latin American Integration Association)

**3. ಸುಂಕ ಕೂಟ:- (Custom Union):–** ಸದಸ್ಯ ರಾಷ್ಟ್ರಗಳ ನಡುವೆ ಎಲ್ಲಾ ರೀತಿಯ ವ್ಯಾಪಾರಿ ನಿಯಂತ್ರಣಗಳನ್ನು ತೆಗೆದು ಹಾಕಿ ಸದಸ್ಯೇತರ ರಾಷ್ಟ್ರಗಳ ನಡುವೆ ಸಾಮಾನ್ಯ ಸುಂಕಗಳನ್ನು ವಿಧಿಸುವುದು.

- ಉದಾ: EEC - European Economic Community

**4. ಸಾಮಾನ್ಯ ಮಾರುಕಟ್ಟೆ (Common Market):-** ಸದಸ್ಯ ರಾಷ್ಟ್ರಗಳ ಮೇಲೆ ಸರಕು ಮತ್ತು ಉತ್ಪಾದನಾಂಗಗಳ ಮಾರುಕಟ್ಟೆ ಏಕೀಕೃತಗೊಳ್ಳುವುದು ಮತ್ತು ಸದಸ್ಯೇತರ ರಾಷ್ಟ್ರಗಳ ನಡುವೆ ಸಾಮಾನ್ಯ ಸುಂಕಗಳನ್ನು ವಿಧಿಸುವುದು.

- ಉದಾ:– European Common Market

**5. ಆರ್ಥಿಕ ಒಕ್ಕೂಟ (Economic Union):–**

- ಸದಸ್ಯ ರಾಷ್ಟ್ರಗಳ ನಡುವೆ ಆರ್ಥಿಕ ನೀತಿಗಳಾದ ಹಣಕಾಸು ಮತ್ತು ರಾಜ್ಯಕೋಶ ನೀತಿಗಳು ಏಕರೂಪವಾಗಿರುವುದು ಮತ್ತು ಸದಸ್ಯೇತರ ರಾಷ್ಟ್ರಗಳ ನಡುವೆ ಸಾಮಾನ್ಯ ಸುಂಕಗಳನ್ನು ವಿಧಿಸುವುದು. ಆರ್ಥಿಕ ಒಕ್ಕೂಟವನ್ನು ಆರ್ಥಿಕ ಸಹಕಾರದ ಇತಿಹಾಸದಲ್ಲಿ ಅತ್ಯಂತ **ಪರಿಪೂರ್ಣ ಅಥವಾ ಗರಿಷ್ಠ ಮಟ್ಟದ** ಆರ್ಥಿಕ ಸಹಕಾರ ಒಕ್ಕೂಟ ಎಂದು ಕರೆಯಲಾಗಿದೆ.
- ಉದಾ: ಐರೋಪ್ಯ ಒಕ್ಕೂಟ ಯೂರೋ ಕರೆನ್ಸಿಯನ್ನು 1999ರಲ್ಲಿ ಜಾರಿಗೆ ತಂದ ನಂತರ ಆರ್ಥಿಕ ಒಕ್ಕೂಟವಾಗಿ ಮಾರ್ಪಟ್ಟಿತು.

| ಆರ್ಥಿಕ ಸಹಕಾರಗಳು | ಸದಸ್ಯ ರಾಷ್ಟ್ರಗಳ ನಡುವೆ | ಸದಸ್ಯೇತರ ರಾಷ್ಟ್ರಗಳ ನಡುವೆ |
|---|---|---|
| ಒಲವಿನ ವ್ಯಾಪಾರ ಪ್ರದೇಶ | ವ್ಯಾಪಾರಿ ನಿಯಂತ್ರಣ ಕಡಿಮೆ | ಪ್ರತ್ಯೇಕ ವ್ಯಾಪಾರ ನೀತಿ |
| ಮುಕ್ತ ವ್ಯಾಪಾರಿ ವಲಯ | ವ್ಯಾಪಾರಿ ನಿಯಂತ್ರಣ ರಹಿತ | ಪ್ರತ್ಯೇಕ ವ್ಯಾಪಾರ ನೀತಿ |
| ಸುಂಕ ಕೂಟ | ವ್ಯಾಪಾರಿ ನಿಯಂತ್ರಣ ರಹಿತ | ಸಾಮಾನ್ಯ ವ್ಯಾಪಾರ ನೀತಿ |
| ಸಾಮಾನ್ಯ ಮಾರುಕಟ್ಟೆ | ಸರಕು & ಉತ್ಪಾದನಾಂಗ ಮಾರುಕಟ್ಟೆ ಏಕೀಕೃತ | ಸಾಮಾನ್ಯ ವ್ಯಾಪಾರ ನೀತಿ |
| ಆರ್ಥಿಕ ಒಕ್ಕೂಟ | ವಿವಿಧ ಆರ್ಥಿಕ ನೀತಿಗಳು ಏಕೀಕೃತ | ಸಾಮಾನ್ಯ ವ್ಯಾಪಾರ ನೀತಿ |

# ಅತಿ ಪ್ರಸರಣ / ಹಣದುಬ್ಬರ (Inflation)

ಆರ್ಥಿಕತೆಯ ಸಮಗ್ರ ಅಭಿವೃದ್ಧಿ, ಆರ್ಥಿಕ & ಹಣಕಾಸು ವಲಯದ ಸ್ಥಿರತೆಯ ಮೇಲೆ ಅವಲಂಬನೆಯಾಗಿರುತ್ತದೆ. ಆದರೆ ರಚನಾತ್ಮಕ ಅಡಚಣೆಗಳು ಬೆಳವಣಿಗೆಯ ದರವನ್ನು ಕುಂಠಿತಗೊಳಿಸುತ್ತವೆ. ಇದಕ್ಕೆ ಮುಖ್ಯ ಕಾರಣ ಸರಕು & ಸೇವಾ ಮಾರುಕಟ್ಟೆಯಲ್ಲಿ ಕಂಡು ಬರುವ ಬೆಲೆಯಲ್ಲಿನ ಬದಲಾವಣೆಗಳು. ಬೆಲೆಯಲ್ಲಿನ ಇಳಿಕೆಯು ಬೆಳವಣಿಗೆ ದರವನ್ನು ಕುಂಠಿತಗೊಳಿಸುತ್ತದೆ. ಇದು ದೇಶದ ಉದ್ಯೋಗ ಪ್ರಮಾಣವನ್ನು ಕಡಿಮೆಗೊಳಿಸುತ್ತದೆ. ಅಂತಹ ಸಂದರ್ಭದಲ್ಲಿ ಬೆಳವಣಿಗೆ ವೇಗವನ್ನು ಹೆಚ್ಚಿಸಲು, ಸರಕುಗಳ ಬೆಲೆಗಳನ್ನು ಹೆಚ್ಚಿಸಬೇಕಾಗುತ್ತದೆ. ಆಗ ಆರ್ಥಿಕತೆಯಲ್ಲಿ ಅತಿಪ್ರಸರಣ ಸಮಸ್ಯೆ ಉಂಟಾಗುತ್ತದೆ. ಈ ಹಿನ್ನಲೆಯಲ್ಲಿ ಆರ್ಥಿಕತೆಯಲ್ಲಿನ ಅತಿ ಪ್ರಸರಣ & ಅನ ಪ್ರಸರಣಗಳ ಪರಿಕಲ್ಪನೆಯನ್ನು ಅಭ್ಯಸಿಸಬೇಕಾಗುತ್ತದೆ.

## ಹಣದುಬ್ಬರದ ಅರ್ಥ (Meaning of Inflation)

+ ನವ ಸಾಂಪ್ರದಾಯಿಕ ಅರ್ಥಶಾಸ್ತ್ರಜ್ಞರ ಪ್ರಕಾರ ಆರ್ಥಿಕತೆಯ ಪೂರ್ಣೋದ್ಯೋಗ ಸನ್ನಿವೇಶದಲ್ಲಿ ಹಣದ ಪೂರೈಕೆ ಪ್ರಮಾಣ ಹೆಚ್ಚಳವಾದಾಗ ಸರಕುಗಳ ಬೆಲೆಗಳು ಏರಿಕೆಯಾಗುವ ಸನ್ನಿವೇಶವೇ ಅತಿ ಪ್ರಸರಣ.
+ ಜೆ.ಎಂ. ಕೇನ್ಸ್ ಅವರ ಪ್ರಕಾರ – ಆರ್ಥಿಕ ಮುಗ್ಗಟ್ಟಿನ ಸನ್ನಿವೇಶದಲ್ಲಿ ಹಣದ ಪೂರೈಕೆ ಹೆಚ್ಚಾಗಿ, ಸಮಗ್ರ ಬೇಡಿಕೆ, ಒಟ್ಟು ಉತ್ಪನ್ನ, ಉದ್ಯೋಗದಿಂದ ಬೆಲೆ ಹೆಚ್ಚಳವಾಗುವ ಸನ್ನಿವೇಶವೇ ಅತಿಪ್ರಸರಣ.
+ ಸಾಮಾನ್ಯ ಅರ್ಥದಲ್ಲಿ - ಆರ್ಥಿಕತೆಯಲ್ಲಿ ವಸ್ತುಗಳ ಬೆಲೆಗಳು ಸತತವಾಗಿ ಏರಿಕೆಯಾಗುತ್ತಿದ್ದು, ಹಣದ ಮೌಲ್ಯವು ಕಡಿಮೆಗೊಳ್ಳುವ ಸನ್ನಿವೇಶವೇ ಅತಿ ಪ್ರಸರಣ.

## ಹಣದುಬ್ಬರದ ವಿಧಗಳು (Types of Inflation)

### ತೆವಳುವ ಹಣದುಬ್ಬರ (Creeping Inflation):-

+ ಬೆಲೆಗಳು ಅತ್ಯಂತ ಕಡಿಮೆ ಅಂದರೆ ವಾರ್ಷಿಕವಾಗಿ ಶೇ 3 ರ ದರದಲ್ಲಿ ಹೆಚ್ಚಳವಾಗುತ್ತಿರುವ ಹಣದುಬ್ಬರ ಪ್ರಕಾರ. ಇದು ದೇಶದ ಆರ್ಥಿಕ ಬೆಳವಣಿಗೆಗೆ ಸುರಕ್ಷಿತ & ಅಗತ್ಯವಾಗಿರುವ ಹಣದುಬ್ಬರವಾಗಿರುತ್ತದೆ.

### ನಡೆದಾಡುವ ಹಣದುಬ್ಬರ (Walking Inflation):-

+ ಬೆಲೆಗಳು ಆದರ್ಶ ದರದಲ್ಲಿ ಅಂದರೆ ವಾರ್ಷಿಕವಾಗಿ ಶೇ 3 ರಿಂದ ಶೇ 7ರ ದರದಲ್ಲಿ ಹೆಚ್ಚಳವಾಗುತ್ತಿರುವ ಹಣದುಬ್ಬರ ಪ್ರಕಾರ. ಇದು ದೇಶದ ಸರ್ಕಾರಕ್ಕೆ ಹಣದುಬ್ಬರವನ್ನು ನಿಯಂತ್ರಿಸುವ ಅಗತ್ಯತೆಯ ಬಗ್ಗೆ ಎಚ್ಚರಿಕೆ ನೀಡುತ್ತದೆ.

### ಓಡುವ ಹಣದುಬ್ಬರ (Running Inflation):-

+ ಬೆಲೆಗಳು ತ್ವರಿತವಾಗಿ ಅಂದರೆ ವಾರ್ಷಿಕವಾಗಿ ಶೇ 10 ರಿಂದ ಶೇ 20 ರ ದರದಲ್ಲಿ ಹೆಚ್ಚಳವಾಗುತ್ತಿರುವ ಹಣದುಬ್ಬರ ಪ್ರಕಾರ. ಇದು ದೇಶದ ಆರ್ಥಿಕ ವ್ಯವಸ್ಥೆಯಲ್ಲಿ ಬಡ & ಮಧ್ಯಮ ಪ್ರಮಾಣದ ಜನರಿಗೆ ಪ್ರತಿಕೂಲವಾಗಿದ್ದು, ಹಣಕಾಸು & ರಾಜ್ಯಕೋಶ ನೀತಿಯ ಅನುಷ್ಠಾನದ ಅಗತ್ಯತೆಯನ್ನು ತಿಳಿಸುತ್ತದೆ.

### ನಾಗಾಲೋಟದ ಹಣದುಬ್ಬರ (Hyper Inflation):-

+ ಬೆಲೆಗಳು ಅತ್ಯಂತ ತ್ವರಿತವಾಗಿ ಅಂದರೆ ವಾರ್ಷಿಕವಾಗಿ ಶೇ 20 ರಿಂದ ಶೇ 100 ರ ದರದಲ್ಲಿ ಹೆಚ್ಚಳವಾಗುತ್ತಿರುವ ಹಣದುಬ್ಬರ ಪ್ರಕಾರ. ಇದು ದೇಶದ ಆರ್ಥಿಕ ವ್ಯವಸ್ಥೆಯಲ್ಲಿ ಅನಿಯಂತ್ರಿತ & ಮಾಪನ ಮಾಡಲು ಅಸಾಧ್ಯವಾದ ಸ್ಥಿತಿಯಾಗಿರುತ್ತದೆ.

### ಹಣದುಬ್ಬರದ ಅಂತರ (Inflationary Gap):-

+ ಜೆ.ಎಂ. ಕೇನ್ಸ್ ಅವರು ತಮ್ಮ How To Pay For the War - 1940 ಎಂಬ ಗ್ರಂಥದಲ್ಲಿ ಈ ಪರಿಕಲ್ಪನೆಯನ್ನು ಪರಿಚಯಿಸಿದ್ದು, 'ಆರ್ಥಿಕತೆಯ ಮೂಲ ಬೆಲೆಗಳಲ್ಲಿ ಲಭ್ಯವಿರುವ ಉತ್ಪನ್ನಕ್ಕಿಂತ ಯೋಜಿತ ವೆಚ್ಚವು ಹೆಚ್ಚಳವಾಗುವುದನ್ನು ತಿಳಿಸುತ್ತದೆ'.

**ಬೇಡಿಕೆ ಸೆಳೆತದ ಹಣದುಬ್ಬರ/ ಹಣದುಬ್ಬರದ ಹಣಕಾಸು ಸಿದ್ಧಾಂತ (Demand pull Inflation):-**

✦ ಮಿತಿ ಮೀರಿದ ಹಣ ಕಡಿಮೆ ವಸ್ತುಗಳನ್ನು ಬೆನ್ನಟ್ಟಿ ಹೋಗುವ ಸ್ಥಿತಿಯೇ ಹಣದುಬ್ಬರ. ಅಂದರೆ, ಮಾರುಕಟ್ಟೆಯಲ್ಲಿ ಲಭ್ಯವಿರುವ ಉತ್ಪನ್ನಕ್ಕಿಂತ ಬೇಡಿಕೆಯ ಪ್ರಮಾಣ ಹೆಚ್ಚಳವಾಗುವುದರಿಂದ ಬೆಲೆಗಳು ಹೆಚ್ಚಳವಾಗುವ ಸನ್ನಿವೇಶ.

✦ **ಬೆನ್ಟ್ ಹ್ಯಾನ್ಸ್‌ನ್ ಅವರ ಪ್ರಕಾರ** – ಹಣದ ಪಾತ್ರವೇ ಬೇಡಿಕೆ ಸೆಳೆತದ ಹಣದುಬ್ಬರಕ್ಕೆ ಮುಖ್ಯ ಕಾರಣ.

✦ **ಮಿಲ್ಟನ್ ಫ್ರೀಡ್ಮನ್ ಅವರ ಪ್ರಕಾರ** – ಹಣದುಬ್ಬರ ಎಂಬುದು ಯಾವಾಗಲೂ & ಎಲ್ಲೆಲ್ಲಿಯೂ ಹಣಕಾಸು ವಿದ್ಯಮಾನವಾಗಿರುತ್ತದೆ.

✦ **ಜೆ.ಎಂ. ಕೇನ್ಸ್ ಅವರ ಪ್ರಕಾರ** – ಆರ್ಥಿಕತೆಯ ಪೂರ್ಣೋದ್ಯೋಗ ಸನ್ನಿವೇಶದಲ್ಲಿ ಸಮಗ್ರ ಬೇಡಿಕೆಯು ಸಮಗ್ರ ಪೂರೈಕೆಗಿಂತ ಅಧಿಕವಾದಾಗ ಸೃಷ್ಟಿಯಾದ ಹಣದುಬ್ಬರವಾಗಿದೆ.

**ವೆಚ್ಚತಳ್ಳಿಕೆ / ಹೊಸ ಹಣದುಬ್ಬರ (Cost Push Inflation)**

✦ ಕಾರ್ಮಿಕರ ಉತ್ಪಾದತೆಗಿಂತ ಹಣರೂಪಿ ಕೂಲಿ ಹೆಚ್ಚಾಗುವುದರಿಂದ, ಬೆಲೆಗಳು ಹೆಚ್ಚಳವಾಗುವ ಸನ್ನಿವೇಶವೇ ಕೂಲಿ ತಳ್ಳಿಕೆ ಹಣದುಬ್ಬರ. ಅಂದರೆ, ಕೂಲಿಹೆಚ್ಚಳವಾಗುವುದರಿಂದ ವಸ್ತುಗಳ ಬೆಲೆಗಳು ಹೆಚ್ಚಳವಾಗಿ ಹಣದುಬ್ಬರ ಸೃಷ್ಟಿಯಾಗುತ್ತದೆ.

✦ ವಸ್ತುಗಳ ಮಾರಾಟಗಾರರು ತಮ್ಮ ಲಾಭದ ಪ್ರಮಾಣವನ್ನು ಹೆಚ್ಚಳ ಮಾಡುವುದರಿಂದ ವಸ್ತುಗಳ ಉತ್ಪಾದನೆ ವೆಚ್ಚ ಹೆಚ್ಚಾಗಿ ಸೃಷ್ಟಿಯಾದ ಹಣದುಬ್ಬರವೇ ಲಾಭ ತಳ್ಳಿಕೆ ಹಣದುಬ್ಬರ.

**ಬೇಡಿಕೆ ಪಲ್ಲಟ ಹಣದುಬ್ಬರ/ವಲಯ ಹಣದುಬ್ಬರ (Demand Shift Inflation):-**

✦ **ಚಾರ್ಲ್ಸ್ ಶೂಲ್ಜ್ ಅವರ ಪ್ರಕಾರ** – ಆರ್ಥಿಕತೆಯ ನಿರ್ದಿಷ್ಟ ವಲಯದ ಬೇಡಿಕೆ ಹೆಚ್ಚಾಗಿ ಸಾಮಾನ್ಯ ಬೆಲೆ ಮಟ್ಟವು ಹೆಚ್ಚಳವಾಗುವ ಸನ್ನಿವೇಶ.

**ರಚನಾತ್ಮಕ ಹಣದುಬ್ಬರ (Structural Inflation):-**

✦ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಉಂಟಾಗುವ **ರಚನಾತ್ಮಕ ಅಡೆತಡೆಗಳಿಂದ** ಅಂದರೆ, ಅಪಮೌಲ್ಯೀಕರಣ, ಪೂರೈಕೆಯ ಅಸ್ಥಿತಿಸ್ಥಾಪಕತ್ವತೆ, ವ್ಯಾಪಾರದ ಕರಾರುಗಳ ಕ್ಷೀಣಿಸುವಿಕೆ, ಆಮದು ಬದಲೀಕರಣ ವೆಚ್ಚ ಹೆಚ್ಚಳ ಮುಂತಾದವುಗಳಿಂದ ಬೆಲೆ ಮಟ್ಟ ಹೆಚ್ಚಳವಾಗುವುದು.

**ಮಾರ್ಕ್‌ಅಪ್ ಹಣದುಬ್ಬರ (Markup Inflation):-**

✦ **ಹ್ಯಾಕ್ಸೆ** ಅವರ ಪ್ರಕಾರ – ಉತ್ಪಾದನೆ ವೆಚ್ಚ & ಶ್ರಮಿಕರ ವೆಚ್ಚ ಅಥವಾ ಮಾರಾಟಗಾರರ ಲಾಭದ ಪ್ರಮಾಣ ಹೆಚ್ಚಳವಾಗುವುದರಿಂದ ಉಂಟಾಗುವ ಹಣದುಬ್ಬರ ಸನ್ನಿವೇಶವಾಗಿದೆ.

**ಮುಕ್ತ ಹಣದುಬ್ಬರ (Open Inflation):-**

✦ ಸಾರ್ವಜನಿಕ ಪ್ರಾಧಿಕಾರಗಳ **ಹಸ್ತಕ್ಷೇಪ ರಹಿತ**ವಾಗಿ ಮಾರುಕಟ್ಟೆಯಲ್ಲಿ ಸರಕು & ಸೇವೆಗಳ ಮುಕ್ತ ಕಾರ್ಯಾಚರಣೆಯಿಂದ ಬೆಲೆಗಳು ಹೆಚ್ಚಳವಾಗುವ ಸನ್ನಿವೇಶ.

**Supressed Inflation :-**

✦ ಸಾರ್ವಜನಿಕ ಪ್ರಾಧಿಕಾರಗಳಾದ ಕೇಂದ್ರ ಬ್ಯಾಂಕ್ & ಕೇಂದ್ರ ಸರ್ಕಾರಗಳು ಮುಕ್ತ ಹಣದುಬ್ಬರವನ್ನು ನಿಯಂತ್ರಿಸಲು ಕೈಗೊಳ್ಳುವ ಕ್ರಮಗಳಿಂದ ಉಂಟಾದ ಹಣದುಬ್ಬರ.

**ಹಣದುಬ್ಬರದ ವಿರೋಧಾಭಾಸ (Inflationary Paradox):-**

✦ ಪೂರೈಕೆಯಾಗಿ ಚಲಾವಣೆಗೆ ಬಂದ ಹಣವೆಲ್ಲವನ್ನು ಏರುತ್ತಿರುವ ಬೆಲೆಗಳೇ ನುಂಗಿ ಹಾಕುವುದರಿಂದ **ಸೃಷ್ಟಿಯಾದ ವಸ್ತು (ಬೆಲೆ) ವೇ ಸೃಷ್ಟಿಕರ್ತನನ್ನು (ಹಣ)** ಸಂಹರಿಸಿದಂತಹ ಘಟನೆಯೇ ಹಣದುಬ್ಬರ ವಿರೋಧಾಭಾಸ.

**ಫಿಲಿಪ್ಸ್ ವಕ್ರ ರೇಖೆ (Philip`s Curve):-**

✦ **ಹಣದುಬ್ಬರ ದರ & ನಿರುದ್ಯೋಗ ದರದ** ನಡುವಿನ ಸಂಬಂಧವನ್ನು ತಿಳಿಸುತ್ತದೆ. ಅಂದರೆ, ನಿರುದ್ಯೋಗ & ಹಣರೂಪಿ ಕೂಲಿಯ ನಡುವೆ ವಿಪರ್ಯಯ ಸಂಬಂಧವಿದೆ.

✦ ಫಿಲಿಪ್ಸ್ ಅವರು ನೈಸರ್ಗಿಕ ನಿರುದ್ಯೋಗ ದರ ಶೇ 3 ಇದ್ದಾಗ ಹಣದುಬ್ಬರವು ಶೂನ್ಯವಾಗಿರುತ್ತದೆ ಎಂದು ಪ್ರತಿಪಾದಿಸಿದರು. ಇಲ್ಲಿ ಫಿಲಿಪ್ಸ್ ವಕ್ರರೇಖೆಯು ಎಡದಿಂದ ಬಲಕ್ಕೆ ಇಳಿಮುಖವಾಗಿರುತ್ತದೆ.

**StagFlation (Stagnation + Inflation):-**

✦ 1970 ರ ದಶಕದಲ್ಲಿ ಜಾಗತಿಕವಾಗಿ ವಿವಿಧ ಆರ್ಥಿಕತೆಗಳಲ್ಲಿ ಕಂಡು ಬಂದ ಸನ್ನಿವೇಶ. ಅಂದರೆ, **ಅಧಿಕ ಹಣದುಬ್ಬರ** ದರದೊಂದಿಗೆ **ನಿರುದ್ಯೋಗ** ಆರ್ಥಿಕತೆಯಲ್ಲಿ ಅಸ್ತಿತ್ವದಲ್ಲಿರುವ ವಿರೋಧಾಭಾಸದ ಸನ್ನಿವೇಶ.

**ಹಣದುಬ್ಬರ ಇಳಿತಾಯ (Inflationary Recision):-**

✦ ಆರ್ಥಿಕತೆಯಲ್ಲಿ ಸಮಗ್ರ ಪೂರೈಕೆ ಕಡಿಮೆಯಾಗಿ ಉತ್ಪನ್ನ, ಉದ್ಯೋಗ ಕಡಿಮೆಗೊಂಡು **ಬೆಲೆಗಳು ಹೆಚ್ಚಳವಾಗುವ** ಸನ್ನಿವೇಶ.

## ಹಣದುಬ್ಬರಕ್ಕೆ ಕಾರಣಗಳು

+ ಆರ್ಥಿಕತೆಯಲ್ಲಿ ವಸ್ತುಗಳ ಬೇಡಿಕೆಯು ಜನಸಂಖ್ಯಾ ಹೆಚ್ಚಳದಿಂದ, ಹಣದ ಪೂರೈಕೆ ಇನ್ನಿತರೆ ಕಾರಣಗಳಿಂದ ಹೆಚ್ಚಳವಾಗಿ ಹಾಗೂ ಪೂರೈಕೆ ಭಾಗದಿಂದ ವಸ್ತುಗಳ ಉತ್ಪಾದನೆ ಕಡಿಮೆಗೊಂಡು, ಬೆಲೆ ಹೆಚ್ಚಳವಾಗುತ್ತದೆ.

### ಹಣದುಬ್ಬರದ ನಿಯಂತ್ರಣ (Control of Inflation):-

+ ಆರ್ಥಿಕತೆಯಲ್ಲಿ ಹಣದುಬ್ಬರವನ್ನು ನಿಯಂತ್ರಣ ಮಾಡಲು ಕೇಂದ್ರ ಬ್ಯಾಂಕು ತನ್ನ ಹಣಕಾಸು ನೀತಿಯ ಸಾಧನಗಳ ಮೂಲಕ ಹಾಗೂ ಕೇಂದ್ರ ಸರ್ಕಾರ ತನ್ನ ರಾಜ್ಯ ಕೋಶ ನೀತಿಯ ಸಾಧನಗಳನ್ನು ಬಳಸುತ್ತದೆ ಇವುಗಳ ಮುಖ್ಯ ಉದ್ದೇಶ ಆರ್ಥಿಕತೆಯಲ್ಲಿ ವೆಚ್ಚ ಅಥವಾ ಹಣದ ಪೂರೈಕೆ ಕಡಿಮೆಗೊಂಡು ಜನರ ಕೊಳ್ಳುವ ಶಕ್ತಿಯನ್ನು ನಿಯಂತ್ರಿಸುವುದು.

### ಅನಪ್ರಸರಣ (Deflation):-

+ ಸಾಮಾನ್ಯ ಅರ್ಥದಲ್ಲಿ – ಆರ್ಥಿಕತೆಯಲ್ಲಿ ವಸ್ತುಗಳ ಬೆಲೆಗಳು ಸತತವಾಗಿ ಇಳಿಕೆಯಾಗುತ್ತಿದ್ದು, ಹಣದ ಮೌಲ್ಯವು ಹೆಚ್ಚಳವಾಗುವ ಸನ್ನಿವೇಶವೇ ಅನ ಪ್ರಸರಣ.

### ಪುನರ್ ಹಣದುಬ್ಬರ (Reflation):-

+ ಆರ್ಥಿಕತೆ ಮುಗ್ಗಟ್ಟಿನ ಸನ್ನಿವೇಶದಲ್ಲಿದ್ದಾಗ ಅಭಿವೃದ್ಧಿಗೆ ಚೇತರಿಕೆ ನೀಡಲು, ವಸ್ತುಗಳ ಬೆಲೆಗಳನ್ನು ಹೆಚ್ಚಳ ಮಾಡಬೇಕಾದ ಅನಿವಾರ್ಯತೆ ಇರುತ್ತದೆ. ಇದರಿಂದ ಸೃಷ್ಟಿಯಾದ ಹಣದುಬ್ಬರ ಸನ್ನಿವೇಶ.

**ನಿಮಗಿದು ತಿಳಿದಿರಲಿ:-**

ಲರ್ನಿಂಗ್ ಬೈ ಡೂಯಿಂಗ್ – ಕೆ. ಆ್ಯರೋ
ಲರ್ನಿಂಗ್ ಬೈ ವಾಚಿಂಗ್ – ಕಿಂಗ್ ರಾಬ್ಸನ್
ಲರ್ನಿಂಗ್ ಬೈ ಇನ್‌ವೆಸ್ಟ್‌ಮೆಂಟ್ – ರೋಮರ್
ಮಾನವ ಬಂಡವಾಳದಲ್ಲಿ ಹೂಡಿಕೆ – ಲೂಕಾಸ್
ಜ್ಞಾನದ ಹೊರ ಹೊಮ್ಮುವಿಕೆ ಪರಿಣಾಮ – ಲೆವಹರಿ ಶೆಷಾಂಕಿ
ಹಣಕಾಸು ದ್ವಂದ್ವತೆ – ಹೆಚ್. ಮಿಂಟ್
ತಾಂತ್ರಿಕ ದ್ವಂದ್ವತೆ – ಬೆಂಜಮಿನ್ ಹಿಗ್ಗಿನ್ಸ್
ಸಾಮಾಜಿಕ ದ್ವಂದ್ವತೆ – ಜೆ.ಹೆಚ್. ಬೋಯೆಕ್

**ವಿಲ್ಫ್ರೆಡ್ ಪ್ಯಾರೆಟೋ ಅವರ ಕಲ್ಯಾಣ ನಿಯಮಗಳು**

| | |
|---|---|
| ಮೊದಲನೇ ನಿಯಮ | ಯಾವುದೇ ಪೈಪೋಟಿಯುಕ್ತ ಸಮತೋಲನವು ಪ್ಯಾರೆಟೋನ ಅತ್ಯಾನುಕೂಲತೆಯ ಬಿಂದು ಆಗಿರುತ್ತದೆ. |
| ಎರಡನೇ ನಿಯಮ | ಪೈಪೋಟಿಯಿಂದ ಪರಿಣಾಮಕಾರಿ ಸಂಪನ್ಮೂಲಗಳ ಹಂಚಿಕೆ ಸಾಧ್ಯವಾಗುತ್ತದೆ. |

### ವಿಶ್ವ ಆರ್ಥಿಕ ವೇದಿಕೆ WEF - World Economic Forum




+ ಸ್ಥಾಪನೆ:– 1971, ಕೇಂದ್ರ ಕಛೇರಿ:– ಸ್ವಿಟ್ಜರ್ಲೆಂಡ್‌ನ ಕಲೋಗನಿ (Cologny).
+ ಪ್ರಾದೇಶಿಕ ಕಛೇರಿಗಳು:– ನ್ಯೂಯಾರ್ಕ್, ಬೀಜಿಂಗ್, ಟೋಕಿಯೋ, ಸ್ಯಾನ್ ಫ್ರಾನ್ಸಿಸ್ಕೋ
+ ಮೊದಲ ಹೆಸರು:– ಐರೋಪ್ಯ ನಿರ್ವಹಣಾ ವೇದಿಕೆ. 1987 ರಲ್ಲಿ ವಿಶ್ವ ಆರ್ಥಿಕ ವೇದಿಕೆಯಾಗಿ ಮರುನಾಮಕರಣ.
+ ಪ್ರಸ್ತುತ ಅಧ್ಯಕ್ಷರು:– Klaus Schwab
+ ವಾರ್ಷಿಕ ಸಭೆ ನಡೆಸುವ ಸ್ಥಳ:– ಸ್ವಿಟ್ಜರ್ಲೆಂಡ್‌ನ ದಾವೋಸ್.
+ ಪ್ರಕಟ ಪಡಿಸುವ ವರದಿಗಳು:– ಜಾಗತಿಕ ಸ್ಪರ್ಧಾತ್ಮಕ ವರದಿ, ಜಾಗತಿಕ ಮಾಹಿತಿ ತಂತ್ರಜ್ಞಾನ ವರದಿ, ಜಾಗತಿಕ ಲಿಂಗ ಅಂತರ ವರದಿ, ಪ್ರವಾಸೋದ್ಯಮ ಸ್ಪರ್ಧಾತ್ಮಕ ವರದಿ, ಅಂತರ್ಗತ ಅಭಿವೃದ್ಧಿ ಸೂಚ್ಯಂಕ, ಮಾನವ ಬಂಡವಾಳ ಸೂಚ್ಯಂಕ, ಇದೊಂದು ಸರ್ಕಾರೇತರ ಲಾಭರಹಿತ ಸಂಸ್ಥೆಯಾಗಿದೆ.
+ 2017 ರ ಜನವರಿ 17 ರಿಂದ 20 ರವರೆಗೆ ವಾರ್ಷಿಕ ಸಭೆ ನಡೆದಿದ್ದು, Responsive and Responsible Leadership ಪ್ರಮುಖ ಧ್ಯೇಯವಾಕ್ಯವಾಗಿತ್ತು.
+ ಜಾಗತಿಕ, ಪ್ರಾದೇಶಿಕ & ಕೈಗಾರಿಕಾ ಅಜೆಂಡಾಗಳನ್ನು ರೂಪಿಸಲು ಜಗತ್ತಿನ ವಿವಿಧ ರಾಷ್ಟ್ರಗಳ ವ್ಯವಹಾರಿಕ, ರಾಜಕೀಯ, ಶೈಕ್ಷಣಿಕ ನಾಯಕರುಗಳ ಬದ್ಧತೆಯನ್ನು ಉತ್ತಮಪಡಿಸುವುದು ಮುಖ್ಯ ಉದ್ದೇಶವಾಗಿದೆ.

## ವ್ಯಾಪಾರ ಚಕ್ರಗಳು /ವ್ಯವಹಾರ ಚಕ್ರಗಳು (Trade or Business Cycles)

ಜಗತ್ತಿನ ವಿವಿಧ ಆರ್ಥಿಕತೆಗಳಲ್ಲಿ ಚಕ್ರೀಯವಾಗಿ ಕಂಡು ಬರುವ ಶೃಂಗ ಅಥವಾ ಮುಗ್ಗಟ್ಟಿನ ಸನ್ನಿವೇಶವನ್ನು ತಿಳಿಸು... ಪರಿಕಲ್ಪನೆಯೇ **ವ್ಯಾಪಾರ ಚಕ್ರಗಳು.**

**ಹೆಬರ್ಲರ್ ಅವರ ಪ್ರಕಾರ** – 'ಉತ್ತಮ & ಕೆಟ್ಟ ವ್ಯಾಪಾರದ ಸಮೃದ್ಧತೆ & ಮುಗ್ಗಟ್ಟಿನ ಪರ್ಯಾಯ ಅವಧಿಗಳ ಸನ್ನಿವೇ...

**ಜೆ.ಎಂ. ಕೇನ್ಸ್ ಅವರ ಪ್ರಕಾರ** – ಬೆಲೆಗಳು ಹೆಚ್ಚಳವಾಗುವ & ನಿರುದ್ಯೋಗ ಕಡಿಮೆಯಿರುವ ಉತ್ತಮ ವ್ಯಾಪಾ... ಸನ್ನಿವೇಶ ಹಾಗೂ ಬೆಲೆಗಳು ಕಡಿಮೆಗೊಳ್ಳುವ & ನಿರುದ್ಯೋಗ ಹೆಚ್ಚಳವಾಗುವ ಕೆಟ್ಟ ವ್ಯಾಪಾರ ಸನ್ನಿವೇಶದ ಅವಧಿಗ... ಸಂಯೋಜಿತ ಆರ್ಥಿಕ ಸನ್ನಿವೇಶಗಳೇ ವ್ಯಾಪಾರ ಚಕ್ರಗಳು.

**ವಿಧಗಳು:-**

**ಅಲ್ಪಾವಧಿ ಕಿಚನ್ ವ್ಯಾಪಾರಿ ಚಕ್ರಗಳು** - ಇದನ್ನು ಅಲ್ಪಾವಧಿ ವ್ಯಾಪಾರಿ ಚಕ್ರಗಳೆಂತಲೂ 40 ತಿಂಗಳ ಅವಧಿಯಲ್ಲಿ ... ಅಥವಾ 3 ಬಾರಿ ಕಂಡು ಬರುವ ಸೂಕ್ಷ್ಮ ವ್ಯಾಪಾರ ಚಕ್ರಗಳು ಇದನ್ನು **ಬ್ರಿಟನ್ನಿನ ಜೋಸೆಫ್ ಕಿಚನ್** ಪ್ರತಿಪಾದಿಸಿದರು.

**ದೀರ್ಘಾವಧಿ ಜಗ್ಲರ್ ವ್ಯಾಪಾರಿ ಚಕ್ರಗಳು:-** ಇದನ್ನು ಪ್ರಮುಖ ವ್ಯಾಪಾರ ಚಕ್ರಗಳೆಂತಲೂ ಸರಾಸರಿ 9 1/2 ವರ್ಷಗಳ ಅವಧಿಗಳಲ್ಲಿ ಕಂಡು ಬರುವ ವ್ಯಾಪಾರಿ ಚಟುವಟಿಕೆಗಳ ಏರಿಳಿತಗಳನ್ನು ತಿಳಿಸುತ್ತದೆ. ಇದನ್ನು **ಫ್ರೆಂಚ್ ಅರ್ಥಶಾಸ್ತ್ರ... ಕ್ಲೆಮೆಂಟ್ ಜಗ್ಲರ್** ಪ್ರತಿಪಾದಿಸಿದರು.

**ಅತ್ಯಂತ ದೀರ್ಘಾವಧಿ / ಕಾಂಡ್ರಾ ಟೀಫ್ ವ್ಯಾಪಾರಿ ಚಕ್ರಗಳು:-** ರಷ್ಯಾದ **ಅರ್ಥಶಾಸ್ತ್ರಜ್ಞ ಎನ್.ಡಿ. ಕಾಂಡ್ರಾ ಟೀಫ್** ತಿಳಿಸಿದ್ದು, 50 ವರ್ಷಗಳಿಗಿಂತ ಹೆಚ್ಚಿನ ಅವಧಿಯಲ್ಲಿ ಕಂಡು ಬರುವ ವ್ಯಾಪಾರಿ ಚಕ್ರಗಳು.

**ಬಿಲ್ಡಿಂಗ್ ವ್ಯಾಪಾರ ಚಕ್ರಗಳು:** **ಅಮೆರಿಕದ ಅರ್ಥಶಾಸ್ತ್ರಜ್ಞರಾದ ವಾರೆನ್ & ಪಿಯರ್ಸನ್** ಅವರು ಈ ರೀತಿಯ ವ್ಯಾಪಾರ ಚಕ್ರಗಳನ್ನು ತಿಳಿಸಿದ್ದು, ಸರಾಸರಿ 18 ವರ್ಷಗಳಲ್ಲಿ ಕಟ್ಟಡ ನಿರ್ಮಾಣ ಅಥವಾ ಇನ್ನಿತರೆ ನಿರಂತರ ಆರ್ಥಿಕ ಚಟುವಟಿಕೆಗಳ ಕಾರಣಗಳಿಂದ ಸೃಷ್ಟಿಯಾಗುತ್ತವೆ ಎಂದಿದ್ದಾರೆ.

**ಕ್ಯುಜ್ನೆಟ್ಸ್ ವ್ಯಾಪಾರಿ ಚಕ್ರಗಳು:-** **ಅಮೆರಿಕದ ಅರ್ಥಶಾಸ್ತ್ರಜ್ಞ ಸೈಮನ್ ಕ್ಯುಜ್ನೆಟ್ಸ್** ಸರಾಸರಿ 16 ರಿಂದ 22 ವರ್ಷದೊಳಗೆ ಕಂಡು ಬರುವ ವ್ಯಾಪಾರಿ ಏರಿಳಿತಗಳನ್ನು ತಿಳಿಸಿದರು. ಇದನ್ನು ಹೊಸ ರೀತಿಯ ವ್ಯಾಪಾರ ಚಕ್ರಗಳ ವಿಧ ಎನ್ನಬಹುದು.

## ವ್ಯಾಪಾರಿ ಚಕ್ರಗಳ ಹಂತಗಳು:-

**ಆರ್ಥಿಕ ಮುಗ್ಗಟ್ಟು:–** ಆರ್ಥಿಕ ಚಟುವಟಿಕೆಗಳು ಸಂಪೂರ್ಣ ಕುಸಿತಗೊಂಡಿದ್ದು, ನಿರುದ್ಯೋಗ, ಉದ್ಯಮಗಳ ನಷ್ಟ, ಹೂಡಿಕೆ ಬಗ್ಗೆ ನಿರಾಶಾಭಾವನೆ ಇರುತ್ತದೆ. ಇಂತಹ ಸಂದರ್ಭದಲ್ಲಿ ಸೃಷ್ಟಿಯಾದ ನಿರುದ್ಯೋಗವೇ **ಚಕ್ರೀಯ ನಿರುದ್ಯೋಗ.**

**ಚೇತರಿಕೆ:–** ಬೇಡಿಕೆ, ಹೂಡಿಕೆ, ಉದ್ಯೋಗ, ಬೆಲೆ, ಲಾಭ, ವ್ಯವಹಾರದ ನಿರೀಕ್ಷಣೆ, ಆಶಾವಾದ ನಿಧಾನವಾಗಿ ಹೆಚ್ಚಳವಾಗುವುದು.

**ಸಮೃದ್ಧಿ:–** ಬೇಡಿಕೆ, ಹೂಡಿಕೆ, ಉದ್ಯೋಗ, ಬೆಲೆ, ಲಾಭ, ವ್ಯವಹಾರದ ನಿರೀಕ್ಷಣೆ, ಆಶಾವಾದ ತ್ವರಿತವಾಗಿ ಹೆಚ್ಚಳವಾಗುವುದು.

**ಶೃಂಗ:–** ಬೇಡಿಕೆ, ಹೂಡಿಕೆ, ಉದ್ಯೋಗ, ಬೆಲೆ, ಲಾಭ, ವ್ಯವಹಾರದ ನಿರೀಕ್ಷಣೆ, ಆಶಾವಾದ ಗರಿಷ್ಠ ಮಟ್ಟದಲ್ಲಿದ್ದು, ಪೂರ್ಣೋದ್ಯೋಗ ಸನ್ನಿವೇಶ ಅಸ್ತಿತ್ವದಲ್ಲಿದ್ದು, ಸಮೃದ್ಧತೆಯ ಅಂತ್ಯ ಹಿಂಜರಿತದ ಪ್ರಾರಂಭದ ಲಕ್ಷಣಗಳನ್ನು ತಿಳಿಸುತ್ತದೆ.

**ಹಿಂಜರಿತ:–** ಬೇಡಿಕೆ, ಹೂಡಿಕೆ, ಉದ್ಯೋಗ, ಬೆಲೆ, ಲಾಭ, ವ್ಯವಹಾರದ ನಿರೀಕ್ಷಣೆ, ಆಶಾವಾದ ಇಳಿಕೆಯಾಗಿ ಆರ್ಥಿಕತೆ ನಷ್ಟದ ಸನ್ನಿವೇಶವನ್ನು ಹೊಂದಿದ್ದು ಆರ್ಥಿಕ ಮುಗ್ಗಟ್ಟಿಗೆ ಕಾರಣವಾಗುತ್ತದೆ.

## ಸಿದ್ಧಾಂತಗಳು

**ಜೆ.ಎ. ಶುಂಪಿಟರ್ – ಆವಿಷ್ಕಾರ ವ್ಯಾಪಾರ ಚಕ್ರ ಸಿದ್ಧಾಂತ** (ಹೊಸ ವಸ್ತು, ಹೊಸ ಉತ್ಪಾದನಾ ತಂತ್ರಜ್ಞಾನ, ಮಾರುಕಟ್ಟೆ ವಿಸ್ತರಣೆ, ಹೊಸ ಕಚ್ಚಾ ವಸ್ತುಗಳ ಮೂಲ ಶೋಧನೆ, ಆಡಳಿತಾತ್ಮಕ ಬದಲಾವಣೆ ಮುಂತಾದ ಆವಿಷ್ಕಾರಗಳಿಂದ ಸೃಷ್ಟಿಯಾಗುವ ಆರ್ಥಿಕ ಏರಿಳಿತ ತಿಳಿಸುತ್ತದೆ.)

**ಕೇನ್ಸ್ – ವ್ಯಾಪಾರ ಚಕ್ರ ಸಿದ್ಧಾಂತ** – (ಸಮಗ್ರ ಬೇಡಿಕೆ, ಬಂಡವಾಳ ಸೀಮಾಂತ ದಕ್ಷತೆ ಕಡಿಮೆಗೊಳ್ಳುವುದು)

**ಸ್ಯಾಮುಯಲ್ಸನ್ – ವ್ಯಾಪಾರ ಚಕ್ರ ಸಿದ್ಧಾಂತ** – (ಗುಣಕ–ವೇಗೋತ್ಕರ್ಷಗಳ ಸಂಯುಕ್ತ ಕಾರ್ಯಾಚರಣೆ)

**ಜೆ.ಆರ್. ಹಿಕ್ಸ್ – ವ್ಯಾಪಾರ ಚಕ್ರ ಸಿದ್ಧಾಂತ** – (ಗುಣಕ–ವೇಗೋತ್ಕರ್ಷಗಳ ಸಂಯುಕ್ತ ಕಾರ್ಯಾಚರಣೆ ತತ್ವ.)

**ಕಾಲ್ಡಾರ್ – ವ್ಯಾಪಾರ ಚಕ್ರ ಸಿದ್ಧಾಂತ** – (ಕೇನ್ಸ್ ಅವರ ಉಳಿತಾಯ & ಹೂಡಿಕೆ ತಂತ್ರಜ್ಞಾನ ಆಧಾರಿತ)

**ಜೇವೋನ್ಸ್ – ಸೂರ್ಯಕಲೆ ಸಿದ್ಧಾಂತ. ಮ್ಯಾಕ್ ಡೌಗ್ಲಾಸ್ & ಹಾಪ್ಸನ್** ಅವರ ಮಿತಿಮೀರಿದ ಉಳಿತಾಯ ಅಥವಾ ಅರೆ ಅನುಭೋಗದ ಸಿದ್ಧಾಂತ.

# ಪಾವತಿ ಶಿಲ್ಕು ಅಥವಾ ಸಂದಾಯ ಬಾಕಿ (Balance of Payments)

ಜಗತ್ತಿನ ವಿವಿಧ ರಾಷ್ಟ್ರಗಳು ಎಲ್ಲ ಸರಕು ಸೇವೆಗಳ ಉತ್ಪಾದನೆಯಲ್ಲಿ ಸ್ವಾವಲಂಬನೆಯನ್ನು ಸಾಧಿಸಿಲ್ಲ. ಆದರೆ ಅವುಗಳಿಗೆ ಬೇಡಿಕೆಯನ್ನು ಹೊಂದಿರುತ್ತವೆ. ಅವುಗಳನ್ನು ಪೂರೈಸಿಕೊಳ್ಳಲು ಬೇರೆ ಬೇರೆ ರಾಷ್ಟ್ರಗಳೊಂದಿಗೆ ವ್ಯಾಪಾರ ವಾಣಿಜ್ಯ ಸಂಪರ್ಕವನ್ನು ಹೊಂದುವುದು ಅವಶ್ಯಕ & ಅನಿವಾರ್ಯ. ದೇಶದ ವ್ಯಾಪಾರವು ಆಂತರಿಕ ವ್ಯಾಪಾರ & ವಿದೇಶಿ ವ್ಯಾಪಾರವನ್ನು, ದೇಶೀಯ ವ್ಯಾಪಾರವು ಚಿಲ್ಲರೆ & ಸಗಟು ವ್ಯಾಪಾರ ಎಂಬ 2 ವಿಧಗಳನ್ನು ಹೊಂದಿರುತ್ತದೆ. ಇದು ಏಕ ಪಕ್ಷೀಯ, ದ್ವಿಪಕ್ಷೀಯ & ಬಹು ಪಕ್ಷೀಯ ವ್ಯಾಪಾರದ ಮೂಲಗಳಲ್ಲಿ ಸರಕು, ಸೇವೆ, ಬಂಡವಾಳ ವ್ಯವಹಾರ & ಉತ್ಪಾದನಾಂಗಗಳ ವ್ಯವಹಾರ ನಡೆಯುತ್ತಿದ್ದು, ಇದರ ಅನುಕೂಲ ಅನಾನುಕೂಲತೆಗಳನ್ನು ವಿಶ್ಲೇಷಿಸಲು ವ್ಯಾಪಾರ ಶಿಲ್ಕು & ಸಂದಾಯ ಶಿಲ್ಕು ಎಂಬ 2 ಸಾಧನಗಳು ಅವಶ್ಯಕ.

✦ ಎರಡು ದೇಶ ಅಥವಾ ವ್ಯಕ್ತಿಗಳ ನಡುವಿನ ಸರಕು ಮತ್ತು ಸೇವೆಗಳ ವಿನಿಮಯವೇ ವ್ಯಾಪಾರ.

1) **ಆಂತರಿಕ/ದೇಶೀಯ ವ್ಯಾಪಾರ (Domestic Trade):-** ದೇಶದ ಭೌಗೋಳಿಕ ಗಡಿಯೊಳಗಿನ ವ್ಯಾಪಾರವೇ ಆಂತರಿಕ ವ್ಯಾಪಾರ. ಇದು ಚಿಲ್ಲರೆ & ಸಗಟು ವ್ಯಾಪಾರವನ್ನು ಹೊಂದಿರುತ್ತದೆ.

2) **ಬಾಹ್ಯ/ವಿದೇಶಿ ವ್ಯಾಪಾರ (External Trade):-** ದೇಶ–ದೇಶಗಳ ನಡುವಿನ ವ್ಯಾಪಾರವೇ ಬಾಹ್ಯ ವ್ಯಾಪಾರ. ಇದು ರಫ್ತು & ಆಮದು, ಪುನರ್ ರಫ್ತು ವ್ಯಾಪಾರವನ್ನು ಹೊಂದಿರುತ್ತದೆ.

## ವ್ಯಾಪಾರ ಶಿಲ್ಕು (Balance of Trade)

✦ ಒಂದು ರಾಷ್ಟ್ರ ಒಂದು ನಿರ್ದಿಷ್ಟ ಅವಧಿಯಲ್ಲಿ ಗೋಚರಿತ ಸರಕುಗಳ ರಫ್ತು ಮತ್ತು ಆಮದು ಮೌಲ್ಯಗಳ ನಡುವಿನ ವ್ಯತ್ಯಾಸವನ್ನು ತಿಳಿಸುವ ದಾಖಲೆಯಾಗಿದೆ.

### ವ್ಯಾಪಾರ ಶಿಲ್ಕಿನ ವಿಧಗಳು (Types of Balance of Trade)

1) **ಸಮತೋಲಿತ ವ್ಯಾಪಾರ ಬಾಕಿ (Balanced Balance of Trade):-** ಗೋಚರ ಸರಕುಗಳ ರಫ್ತಿನ ಮೌಲ್ಯವು ಗೋಚರ ಸರಕುಗಳ ಆಮದು ಮೌಲ್ಯವು ಪರಸ್ಪರ ಸಮನಾಗಿರುವುದು.

2) **ಅನುಕೂಲಕರ ವ್ಯಾಪಾರ ಬಾಕಿ (Favourable Balance of Trade):-** ಗೋಚರ ಸರಕು ರಫ್ತು ಮೌಲ್ಯವು ಗೋಚರ ಸರಕು ಆಮದು ಮೌಲ್ಯಕ್ಕಿಂತ ಅಧಿಕವಾಗಿರುವುದು.

3) **ಅನಾನುಕೂಲಕರ / ಪ್ರತಿಕೂಲಕರ ವ್ಯಾಪಾರ ಬಾಕಿ (Unfavourable Balance of Trade):-** ಗೋಚರಿತ ಸರಕು ಆಮದು ಮೌಲ್ಯವು ಗೋಚರಿತ ಸರಕು ರಫ್ತು ಮೌಲ್ಯಕ್ಕಿಂತ ಅಧಿಕವಿರುವುದು.

## ಪಾವತಿ ಶಿಲ್ಕು (Balance of Payment)

✦ ಒಂದು ರಾಷ್ಟ್ರ ವಿಶ್ವದ ಇತರೆ ರಾಷ್ಟ್ರಗಳೊಂದಿಗೆ ಒಂದು ನಿರ್ದಿಷ್ಟ ಅವಧಿಯಲ್ಲಿ ನಡೆಸಿದ **ಗೋಚರಿತ ಸರಕು ಹಾಗೂ ಅಗೋಚರಿತ ಸೇವೆಗಳ** ಮೌಲ್ಯವನ್ನು ತಿಳಿಸುವ ದಾಖಲೆಯೇ ಪಾವತಿ ಶಿಲ್ಕು / ಸಂದಾಯ ಶಿಲ್ಕು.

(ಭಾರತದಲ್ಲಿ ಸಂದಾಯ ಶಿಲ್ಕು ಲೆಕ್ಕಾಚಾರ ಮಾಡುವವರು–RBI)

### ಸಂದಾಯ ಶಿಲ್ಕಿನ ಪ್ರಕಾರಗಳು (Types of Balance of Payment):–

1) **ಸಮತೋಲಿತ ಸಂದಾಯ ಬಾಕಿ (Balanced Balance of Payment):-** ಗೋಚರ ಮತ್ತು ಅಗೋಚರ ಸರಕುಗಳ ರಫ್ತಿನ ಮೌಲ್ಯವು ಗೋಚರ ಮತ್ತು ಅಗೋಚರ ಸರಕುಗಳ ಆಮದು ಮೌಲ್ಯವು ಪರಸ್ಪರ ಸಮನಾಗಿರುವುದು.

2) **ಅನುಕೂಲಕರ ಸಂದಾಯ ಬಾಕಿ (Favourable Balance of Payment):-** ಗೋಚರ ಸರಕು ಮತ್ತು ಅಗೋಚರ ಸೇವೆಗಳ ರಫ್ತು ಮೌಲ್ಯವು ಗೋಚರ ಸರಕು ಮತ್ತು ಅಗೋಚರ ಸೇವೆಗಳ ಆಮದು ಮೌಲ್ಯಕ್ಕಿಂತ ಅಧಿಕವಗಿರುವುದು.

3) **ಅನಾನುಕೂಲಕರ / ಪ್ರತಿಕೂಲಕರ ಸಂದಾಯ ಬಾಕಿ (Unfavourable Balance of Payment):-** ಗೋಚರಿತ ಸರಕು ಮತ್ತು ಅಗೋಚರಿತ ಸೇವೆಗಳ ಆಮದು ಮೌಲ್ಯವು ಗೋಚರಿತ ಸರಕು ಮತ್ತು ಅಗೋಚರಿತ ಸೇವೆಗಳ ರಫ್ತು ಮೌಲ್ಯಕ್ಕಿಂತ ಅಧಿಕವಿರುವುದು.

## ಸಂದಾಯ ಬಾಕಿ ರಚನೆ (Strucutre of Balance of Payments)

✦ ಒಂದು ದೇಶದ ನಿರ್ಧಿಷ್ಟ ಅವಧಿಯ ಒಟ್ಟು ಆರ್ಥಿಕ ವ್ಯವಹಾರಗಳ ದಾಖಲೆಯೇ ಪಾವತಿ ಶಿಲ್ಕು

ಸಂದಾಯ ಬಾಕಿಯಲ್ಲಿ 4 ಮುಖ್ಯ ಖಾತೆಗಳಿದ್ದು,

1) ಚಾಲ್ತಿಖಾತೆ (Current Account)

2) ಬಂಡವಾಳ ಖಾತೆ (Capital Account)

3) ಅಧಿಕೃತ ಹೊಂದಾಣಿಕೆ/ಮೀಸಲು ಖಾತೆ (Official Reserve Account)

4) ತಪ್ಪು-ಒಪ್ಪುಗಳ ಖಾತೆ (Errors and Omissions Account)

**1) ಚಾಲ್ತಿಖಾತೆ (Current Account):-** ಸರಕು, ಸೇವೆಗಳ ಹಾಗೂ ವರ್ಗಾವಣೆ ಪಾವತಿಗಳ ಆಮದು ಮತ್ತು ರಫ್ತು ವ್ಯವಹಾರಗಳನ್ನು ಒಳಗೊಂಡಿದೆ.

**ಎ) ಸರಕು ವ್ಯಾಪಾರ ಖಾತೆ (Goods Trade Account):-** ಗೋಚರಿತ ಸರಕುಗಳ ರಫ್ತು-ಆಮದು ಮೌಲ್ಯವನ್ನು ತಿಳಿಸುತ್ತದೆ.

**ಬಿ) ಸೇವೆಗಳ ಖಾತೆ (Services Account):-** ಸೇವೆಗಳಾದ ಬ್ಯಾಂಕು, ವಿಮೆ, ಸಾರಿಗೆ, ಪ್ರವಾಸೋದ್ಯಮ ವಿದೇಶಿ ಹೂಡಿಕೆ ಆಯಾತಗಳಾಗಿರುವ ಬಡ್ಡಿ, ಲಾಭಾಂಶ ಮತ್ತು ವಿದೇಶಿ ಹೂಡಿಕೆ ಮೇಲಣ ಲಾಭಗಳು, ಸನ್ನದು ಶುಲ್ಕ, ಉಡುಗೊರೆ ದೇಣಿಗಳು ಇತ್ಯಾದಿಗಳ ಪಾವತಿ ಮತ್ತು ಗಳಿಕೆಗಳನ್ನೊಳಗೊಂಡಿದೆ.

**ಸಿ) ವರ್ಗಾವಣೆ ಪಾವತಿಗಳು:- (Transfer Payments):-** ವಿದೇಶಗಳಿಂದ ಸ್ವೀಕರಿಸಿದ ಮತ್ತು ವಿದೇಶಗಳಿಗೆ ಸಂದಾಯ ಮಾಡಿದ ಏಕಪಕ್ಷೀಯ ಪಾವತಿಗಳಾಗಿವೆ. **ಉದಾ:** ಸಹಾಯಧನ, ಸಾಮಾಜಿಕ ಭದ್ರತೆ, ಹಣಕಾಸು ಅನುದಾನಗಳು.

**2) ಬಂಡವಾಳ ಖಾತೆ (Capital Account):-** ವಿದೇಶಗಳ ಸಾಲ ಪಾವತಿ, ವಸೂಲಾತಿ ಹಾಗೂ ವಿದೇಶಗಳಿಂದ ಆಸ್ತಿಗಳನ್ನು ಕೊಂಡುಕೊಳ್ಳುವಿಕೆ ಮತ್ತು ಮಾರಾಟ ಮಾಡುವಿಕೆ ಅಂದರೆ ವಿದೇಶಿ ಬಂಡವಾಳ ವ್ಯವಹಾರಗಳನ್ನು ಈ ಖಾತೆ ಒಳಗೊಂಡಿದೆ.

**3) ಅಧಿಕೃತ ಮೀಸಲು ಖಾತೆ (Official Reserves Account):-** ವಿದೇಶಿ ಮೀಸಲುಗಳಾದ ವಿದೇಶಿ ಹಣ, ವಿದೇಶಿ ಆಸ್ತಿಗಳು ಚಿನ್ನ, ವಿಶೇಷ ಗಳಿಕೆಯ ಹಕ್ಕುಗಳು (SDR's) ಮುಂತಾದುವುಗಳ ಬದಲಾವಣೆ ವ್ಯವಹಾರಗಳನ್ನು ತಿಳಿಸುತ್ತದೆ.

**4) ತಪ್ಪು ಒಪ್ಪುಗಳ ಖಾತೆ (Errors and Omissions Account):-** ಇದು ವ್ಯವಹಾರವನ್ನು ಸರಿದೂಗಿಸುವ ಖಾತೆಯಾಗಿದೆ. ಇದನ್ನು ಈ ಕೆಳಗಿನ ಪಟ್ಟಿಯಲ್ಲಿ ತೋರಿಸಲಾಗಿದೆ.

**ಸಂದಾಯ ಶಿಲ್ಕಿನ ರಚನೆ**

| ಸ್ವೀಕೃತಿ | ಪಾವತಿ |
|---|---|
| **ಚಾಲ್ತಿ ಖಾತೆ** | |
| ಸರಕುಗಳ ರಫ್ತು | ಸರಕುಗಳ ಆಮದು |
| ಸೇವೆಗಳ ರಫ್ತು | ಸೇವೆಗಳ ಆಮದು |
| ಏಕ ಮುಖ ವರ್ಗಾವಣೆ - ವಿದೇಶಿ ಸರ್ಕಾರ, ಹಣಕಾಸು ಸಂಸ್ಥೆಗಳಿಂದ | ಏಕ ಮುಖ ವರ್ಗಾವಣೆ - ವಿದೇಶಿ ಸರ್ಕಾರ, ಹಣಕಾಸು ಸಂಸ್ಥೆಗಳಿಗೆ |
| **ಬಂಡವಾಳ ಖಾತೆ** | |
| ವಿದೇಶಗಳಿಂದ ಹೊಸ ಸಾಲ | ವಿದೇಶಿಗಳಿಗೆ ಹೊಸ ಸಾಲ |
| ವಿದೇಶಗಳಿಂದ ಹಳೆ ಸಾಲ ಮರುಪಾವತಿ | ವಿದೇಶಗಳಿಗೆ ಹಳೆ ಸಾಲ ಮರುಪಾವತಿ |
| ವಿದೇಶಗಳಿಂದ ನೇರ ಬಂಡವಾಳ ಹೂಡಿಕೆ | ವಿದೇಶದಲ್ಲಿ ನೇರ ಬಂಡವಾಳ ಹೂಡಿಕೆ |
| **ಅಧಿಕೃತ ಹೊಂದಾಣಿಕಾ ಖಾತೆ** | |
| ಚಿನ್ನ, ವಿಶೇಷ ಸ್ವೀಕಾರದ ಹಕ್ಕುಗಳ ಮಾರಾಟ | ಚಿನ್ನ, ವಿಶೇಷ ಸ್ವೀಕಾರದ ಹಕ್ಕುಗಳ ಕೊಳ್ಳುವಿಕೆ |
| **ತಪ್ಪು ಒಪ್ಪುಗಳ ಖಾತೆ** | |

### ಭಾರತದಲ್ಲಿ ಪಾವತಿ ಶಿಲ್ಕಿನ ಸ್ಥಿತಿ

✦ ಭಾರತದ ಆರ್ಥಿಕತೆಯ ಇತಿಹಾಸದಲ್ಲಿ ಬಹುತೇಕ ಸಂದರ್ಭಗಳಲ್ಲಿ ಸಂದಾಯ ಬಾಕಿ ಕೊರತೆ ಸಮಸ್ಯೆಗಳನ್ನು ಎದುರಿಸುತ್ತದೆ. ಇದಕ್ಕೆ **ಮುಖ್ಯ ಕಾರಣಗಳೆಂದರೆ.**

1) **ರಫ್ತುಗಳ ನಿಧಾನಗತಿ ಬೆಳವಣಿಗೆ**

2) **ಆಮದುಗಳ ತೀವ್ರ ಹೆಚ್ಚಳ.** ಉದಾ:- ಜನಸಂಖ್ಯೆಯ ಹೆಚ್ಚಳದಿಂದ ಸರಕುಗಳ ಬೇಡಿಕೆ ಹೆಚ್ಚಾಗಿರುವುದು, ಪೆಟ್ರೋಲಿಯಂ ಉತ್ಪನ್ನಗಳಿಗೆ ಬೇಡಿಕೆ ಅಧಿಕವಾಗಿರುವುದು, ರಫ್ತು ವಸ್ತುಗಳ ಗುಣಮಟ್ಟ ಕುಸಿತ & ಜಾಗತಿಕ ಪೈಪೋಟಿ ನಡೆಸುವಲ್ಲಿ ವಿಫಲತೆ, ಆಹಾರ ಧಾನ್ಯಗಳ ಉತ್ಪಾದನೆಯಲ್ಲಿ ಕುಸಿತ ಮೊದಲಾದ ಕಾರಣಗಳು.

**ಇದನ್ನು ಸರಿಪಡಿಸುವ ಮುಖ್ಯ ಕ್ರಮಗಳಲ್ಲಿ**

1) ರಫ್ತುಗಳನ್ನು ಉತ್ತೇಜಿಸುವಿಕೆ

2) ಆಮದುಗಳ ನಿಯಂತ್ರಣ ಮುಖ್ಯವಾಗಿವೆ

## ವಿದೇಶಿ ಬಂಡವಾಳ (Foreign Capital):

- **ಅರ್ಥ:**- ವಿದೇಶಿ ಕರೆನ್ಸಿ, ವಿದೇಶಿ ವಿನಿಮಯ ಆಸ್ತಿಗಳು, ಎಸ್.ಡಿ.ಆರ್, ಚಿನ್ನ ಮುಂತಾದವುಗಳನ್ನು ಒಳಗೊಂಡಿರುವುದು ವಿದೇಶಿ ವಿನಿಮಯ ದಾಸ್ತಾನು. ಇದು ಸಂದಾಯ ಶಿಲ್ಕಿನ ಒಂದು ಭಾಗವಾಗಿರುತ್ತದೆ.
- ವಿದೇಶಿ ಕರೆನ್ಸಿ, ಷೇರು, ಈಕ್ವಿಟಿ, ಸಾಲಪತ್ರಗಳ ಮೂಲಕ ಒಂದು ದೇಶದ ಸರ್ಕಾರ ಅಥವಾ ಕಂಪನಿ ವಿಶ್ವದ ಬೇರೆ ದೇಶಗಳಲ್ಲಿ ಬಂಡವಾಳ ತೊಡಗಿಸುವುದು ವಿದೇಶಿ ಬಂಡವಾಳವಾಗಿರುತ್ತದೆ.
- **ವಿಧಗಳು:**-ವಿದೇಶಿ ಬಂಡವಾಳ ಹೂಡಿಕೆಯು 2 ರೀತಿಯಲ್ಲಿದೆ. ಅವುಗಳೆಂದರೆ – ವಿದೇಶಿ ನೇರ ಬಂಡವಾಳ ಹೂಡಿಕೆ & ವಿದೇಶಿ ಸಾಂಸ್ಥಿಕ ಬಂಡವಾಳ ಹೂಡಿಕೆ
- ಒಂದು ರಾಷ್ಟ್ರದ ಉದ್ದಿಮೆ ಮತ್ತೊಂದು ರಾಷ್ಟ್ರದಲ್ಲಿ ಉದ್ಯಮದ ಮೇಲೆ ಮಾಲೀಕತ್ವದ ನಿಯಂತ್ರಣ ಹೊಂದಲು ಬಂಡವಾಳ ತೊಡಗಿಸುವುದೇ ವಿದೇಶಿ ನೇರ ಬಂಡವಾಳ ಹೂಡಿಕೆ. ಇದು ಉದ್ದಿಷ್ಟ ರಾಷ್ಟ್ರದ ಕಂಪನಿಯನ್ನು ಕೊಂಡುಕೊಳ್ಳುವುದು, ಆ ದೇಶದ ವ್ಯವಹಾರದ ಕಾರ್ಯಾಚರಣೆಯನ್ನು ವಿಸ್ತರಿಸುವುದು, ವಿಲೀನ & ಸ್ವಾಧೀನಪಡಿಸಕೊಳ್ಳುವಿಕೆ, ತಂತ್ರಜ್ಞಾನ ವರ್ಗಾವಣೆ ಆಗಿರುತ್ತದೆ.
- ವಿದೇಶಿ ಸಾಂಸ್ಥಿಕ ಬಂಡವಾಳ ಹೂಡಿಕೆ ಎಂದರೆ ಷೇರು, ಡಿಬೆಂಚರು, ಸಾಲ ಪತ್ರಗಳ ಮೇಲೆ ಬಂಡವಾಳ ತೊಡಗಿಸುವುದು.
- ವಿದೇಶಿ ನೇರ ಬಂಡವಾಳ ಹೂಡಿಕೆಯು ಪ್ರಾಥಮಿಕ ಬಂಡವಾಳ ಮಾರುಕಟ್ಟೆಯನ್ನು ಪ್ರವೇಶಿಸಿದರೆ, ಹಾಗೂ ದೀರ್ಘಾವಧಿಗೆ ಸಂಬಂಧಿಸಿದ್ದರೆ, ಸಾಂಸ್ಥಿಕ ಬಂಡವಾಳ ಹೂಡಿಕೆ ಮಾಧ್ಯಮಿಕ ಬಂಡವಾಳ ಮಾರುಕಟ್ಟೆಯನ್ನು ಪ್ರವೇಶಿಸುತ್ತದೆ. ಹಾಗೂ ಅಲ್ಪಾವಧಿ ಹೂಡಿಕೆಗೆ ಸಂಬಂಧಿಸಿದೆ.

**2000 ಏಪ್ರಿಲ್ - 2016 ಸೆಪ್ಟೆಂಬರ್ ವರೆಗೆ ಭಾರತದಲ್ಲಿ ವಿದೇಶಿ ಬಂಡವಾಳ ಪ್ರವೃತ್ತಿ.**

| ಹೂಡಿಕೆ ಮಾಡಿದ ಮೊದಲ 5 ರಾಷ್ಟ್ರಗಳು | ಸ್ವೀಕರಿಸಿದ ಮೊದಲ 5 ರಾಜ್ಯಗಳು | 5 ಕ್ಷೇತ್ರಗಳು |
|---|---|---|
| ಮಾರಿಷಸ್ | ಮಹಾರಾಷ್ಟ್ರ | ಸೇವಾ ವಲಯ |
| ಸಿಂಗಪುರ | ಉ.ಪ್ರದೇಶದ ದೆಹಲಿ ಭಾಗ & ಹರಿಯಾಣ | ನಿರ್ಮಾಣ |
| ಯು.ಕೆ | ತಮಿಳುನಾಡು | ಕಂಪ್ಯೂಟರ್ ಸಾಫ್ಟ್‌ವೇರ್ & ಹಾರ್ಡ್‌ವೇರ್ |
| ಜಪಾನ್ | ಕರ್ನಾಟಕ | ದೂರಸಂಪರ್ಕ |
| ಯು.ಎಸ್.ಎ | ಗುಜರಾತ್ | ಆಟೋ ಮೊಬೈಲ್ |

## ವಿದೇಶಿ ಹೂಡಿಕೆ ನೀತಿ (Foreign Investment Policy)

- 1991 ಜುಲೈ 24 ಹೊಸ ಕೈಗಾರಿಕಾ ನೀತಿ ಘೋಷಣೆಗೆ ಅನ್ವಯ ಹೂಡಿಕೆಗೆ ಮುಕ್ತ ಅವಕಾಶ
- **ಗ್ರೀನ್ ಫೀಲ್ಡ್ ಹೂಡಿಕೆ**-ಹೊಸ ಸಂಸ್ಥೆಗಳಲ್ಲಿ ಬಂಡವಾಳ ತೊಡಗಿಸುವುದು.
- **ಬ್ರೌನ್ ಫೀಲ್ಡ್ ಹೂಡಿಕೆ** - ಈಗಾಗಲೇ ದೇಶದಲ್ಲಿ ಅಸ್ತಿತ್ವದಲ್ಲಿರುವ ಸಂಸ್ಥೆಗಳಲ್ಲಿ ಬಂಡವಾಳ ಹೂಡಿಕೆ.
- **ಎಫ್‌ಡಿಐ** ಪ್ರಸ್ತಾವನೆ ಪರಿಶೀಲನೆಗೆ **"ವಿದೇಶಿ ಹೂಡಿಕೆಗೆ ಉತ್ತೇಜನಾ ಮಂಡಳಿ" (FIPB)** ಸ್ಥಾಪನೆ. ಇದೇ ಇಂದು ಕೈಗಾರಿಕೆ ನೀತಿ ಮತ್ತು ಉತ್ತೇಜನ ಇಲಾಖೆಗೆ ವರ್ಗಾವಣೆ (1996) ಆಗಿ ಬದಲಾವಣೆ.
- ಭಾರತದಲ್ಲಿ ವಿದೇಶಿ ಬಂಡವಾಳ ಹೂಡಿಕೆ ಪ್ರಕ್ರಿಯೆಗೆ ಸಂಬಂಧಿಸಿದಂತೆ ಪ್ರಸ್ತಾವನೆಗಳನ್ನು ಅನುಮೋದಿಸುವ ಜವಾಬ್ದಾರಿ ಕೈಗಾರಿಕಾ ನೀತಿ & ಉತ್ತೇಜನಾ ಇಲಾಖೆ (DIPP) ಹೊಂದಿದೆ. ಆರ್ಥಿಕ ವ್ಯವಹಾರಗಳ ಇಲಾಖೆ ಕಾರ್ಯದರ್ಶಿ ಕೈಗಾರಿಕಾ ನೀತಿ & ಉತ್ತೇಜನಾ ಇಲಾಖೆಯಿಂದ ತ್ರೈ ಮಾಸಿಕವಾಗಿ ಹೂಡಿಕೆ ಪ್ರಸ್ತಾವನೆಗಳನ್ನು ಸಮೀಕ್ಷಿಸಲಾಗುತ್ತದೆ. ಆಹಾರ ಸಂಸ್ಕರಣೆ, ಏಕ ಬ್ರಾಂಡ್ ಚಿಲ್ಲರೆ ವ್ಯಾಪಾರ, ರಫ್ತು ಕೇಂದ್ರಿತ ಘಟಕಗಳು, ಬಹು ಬ್ರ್ಯಾಂಡ್ ಚಿಲ್ಲರೆ ವ್ಯಾಪಾರದ ಪ್ರಸ್ತಾವನೆಗಳನ್ನು 60 ದಿನಗಳೊಳಗೆ ಅನುಮೋದಿಸಲಾಗುತ್ತದೆ.
- ಆರ್ಥಿಕ ವ್ಯವಹಾರಗಳ ಇಲಾಖೆ ಹೂಡಿಕೆ ಪ್ರಸ್ತಾವನೆಗಳ ಹಣಕಾಸು ಸೇವೆಗಳನ್ನು ಸ್ಪಷ್ಟಗೊಳಿಸುವ ಪ್ರಾಧಿಕಾರವಾಗಿರುತ್ತದೆಯೇ ಹೊರತು ನಿಯಂತ್ರಕನಾಗಿರುವುದಿಲ್ಲ. ಹೂಡಿಕೆ ಪ್ರಸ್ತಾವನೆಗಳ ಬ್ಯಾಂಕುಗಳಿಗೆ ಸಂಬಂಧಿಸಿದಂತೆ ಅನುಮೋದನೆ ನೀಡುತ್ತದೆ. 5,000 ಕೋಟಿ ಬಂಡವಾಳಕ್ಕಿಂತ ಹೆಚ್ಚಿನ ವಿದೇಶಿ ಹೂಡಿಕೆಯ ಪ್ರಸ್ತಾವನೆಗಳನ್ನು ಆರ್ಥಿಕ ವ್ಯವಹಾರಗಳ ಕ್ಯಾಬಿನೆಟ್ ಸಮಿತಿ ಸ್ಪಷ್ಟಗೊಳಿಸುತ್ತದೆ.

+ ವಿದೇಶಿ ಹೂಡಿಕೆ ಉತ್ತೇಜನಾ ಇಲಾಖೆಯ ರದ್ದತಿ ನಂತರ ಈ ಕೆಳಗಿನ ಪ್ರಾಧಿಕಾರಗಳು ಭಾರತದಲ್ಲಿ ವಿದೇಶಿ ಬಂಡವಾಳ ಹೂಡಿಕೆಗೆ ಅನುಮೋದನೆ ನೀಡುತ್ತವೆ.

| ಕ್ಷೇತ್ರ | ಇಲಾಖೆ |
|---|---|
| ಗಣಿಗಾರಿಕೆ | ಗಣಿಗಾರಿಕೆ ಸಚಿವಾಲಯ |
| ರಕ್ಷಣೆ | ರಕ್ಷಣಾ ಇಲಾಖೆ & ಉತ್ಪಾದನಾ ಇಲಾಖೆ |
| ಸಣ್ಣ ಶಸ್ತ್ರಾಸ್ತ್ರಗಳು | ಗೃಹ ವ್ಯವಹಾರಗಳ ಇಲಾಖೆ |
| ಮಾಹಿತಿ ಸಂವಹನ & ಮುದ್ರಣ ಮಾಧ್ಯಮ | ಮಾಹಿತಿ & ಸಂಪರ್ಕ ಇಲಾಖೆ |
| ನಾಗರೀಕ ವಾಯುಯಾನ | ನಾಗರೀಕ ವಾಯುಯಾನ ಇಲಾಖೆ |
| ಬಾಹ್ಯಾಕಾಶ | ಬಾಹ್ಯಾಕಾಶ ಇಲಾಖೆ |
| ದೂರಸಂಪರ್ಕ | ದೂರಸಂಪರ್ಕ & ಸಂವಹನ ಇಲಾಖೆ |
| ವ್ಯಾಪಾರ | ವ್ಯಾಪಾರ & ವಾಣಿಜ್ಯ ಸಚಿವಾಲಯ |
| ಹಣಕಾಸು ಸೇವೆಗಳು | ಹಣಕಾಸು ಇಲಾಖೆ & ಆರ್ಥಿಕ ವ್ಯವಹಾರಗಳ ಇಲಾಖೆ |
| ಬ್ಯಾಂಕಿಂಗ್ | ಹಣಕಾಸು ಸೇವಾ ವಿಭಾಗ & ಹಣಕಾಸು ಸಚಿವಾಲಯ |
| ಔಷಧಿ ಉದ್ಯಮ | ರಾಸಾಯನಿಕ & ರಸಗೊಬ್ಬರ ಇಲಾಖೆ, ಔಷಧಿ ಇಲಾಖೆ |

+ ಆಗಸ್ಟ್ 1996ರಲ್ಲಿ ಹೂಡಿಕೆ ಒಂತೆಗೆತ ಆಯೋಗ ...
+ 2014 ರಲ್ಲಿ ವಿಮಾ ಕ್ಷೇತ್ರದಲ್ಲಿ ಶೇ 26 ರಿಂದ ಶೇ 4... ಎಫ್‌ಡಿಐ ಹೆಚ್ಚಳ ಮಾಡಿತು.
+ 2014 ಸೆಪ್ಟೆಂಬರ್ ಮೇಕ್ ಇನ್ ಇಂಡಿಯಾ ಕಾರ್ಯಕ್ರಮದ ಅಡಿಯಲ್ಲಿ 25 ವಲಯಗಳ ... ವಿದೇಶಿ ಬಂಡವಾಳ ಹೂಡಿಕೆಯ ನೀತಿ... ಉದಾರೀಕರಿಸಲಾಯಿತು. ಇದರಿಂದ ದೇಶದ ... ಎಫ್.ಡಿ.ಐ ಶೇ 48 ರಷ್ಟು ಹೆಚ್ಚಳಗೊಂಡಿತು.
+ 2015 ವರದಿಯ ಪ್ರಕಾರ ಭಾರತ ಜಾಗತಿಕ... ಎಫ್.ಡಿ.ಐ ನ್ನು ಆಕರ್ಷಿಸುವ ರಾಷ್ಟ್ರಗಳಲ್ಲಿ ... ಸ್ಥಾನವನ್ನು ಪಡೆದರೆ, 2017 ರ ವಿಶ್ವ ಬಂಡವಾಳ ಹೂ... ವರದಿ ಪ್ರಕಾರ ಭಾರತ 3ನೇ ಸ್ಥಾನ ಪಡೆದಿದೆ.

### 2017 ರ ಹೂಡಿಕೆ ನೀತಿ ಪ್ರಕಾರ

+ ಇ-ಕಾಮರ್ಸ್ ಸೇರಿದಂತೆ ವ್ಯಾಪಾರ ಕ್ಷೇತ್ರದಲ್ಲಿ ಶೇ 10...
+ ರಕ್ಷಣಾ ಕ್ಷೇತ್ರದಲ್ಲಿ ಶೇ 49 ರಿಂದ ಶೇ 100 ಕ್ಕೆ ... ಹೆಚ್ಚಳ
+ ನಾಗರೀಕ ವಿಮಾನಯಾನ, DTH, ಮೊಬೈಲ್ ಟಿವಿಗಳಲ್ಲಿ 100%
+ ಔಷಧಿ ಕ್ಷೇತ್ರ ಮತ್ತು ಖಾಸಗಿ ಭದ್ರತಾ ಸಂಸ್ಥೆಗಳಲ್ಲಿ ಶೇ 74
+ ಮೂಲ ಸೌಕರ್ಯ ಕ್ಷೇತ್ರದಲ್ಲಿ ಶೇ 100 ರಷ್ಟು
+ ಬ್ಯಾಂಕ್, ವಿಮೆ, ಹೊರಗುತ್ತಿಗೆ, ಸಂಶೋಧನಾ ಅಭಿವೃ... ಕೊರಿಯರ್, ತಂತ್ರಜ್ಞಾನದಲ್ಲಿ ಶೇ 49.
+ ರೈಲ್ವೆ ವಲಯದಲ್ಲಿ ಕೆಲವೊಂದು ಕ್ಷೇತ್ರಗಳ... ಹೊರತುಪಡಿಸಿ ಶೇ 100.

| | |
|---|---|
| 2016–17 | 21.7 ಬಿಲಿಯನ್ ಅಮೆರಿಕನ್ ಡಾಲರ್ |
| 2015–16 | 16.6 ಬಿಲಿಯನ್ ಅಮೆರಿಕನ್ ಡಾಲರ್ |

**ಭಾರತ ಸರ್ಕಾರ ಹೂಡಿಕೆ ಆಕರ್ಷಿಸಲು ತೆಗೆದುಕೊಂಡ ಕ್ರಮಗಳು:-** ಮೇಕ್ ಇನ್ ಇಂಡಿಯಾ, ಇನ್‌ವೆಸ್ಟ್ ಇಂಡಿಯಾ, ಸ್ಟಾರ್ಟ್ ಅಪ್ ಇಂಡಿಯಾ, ರಾಷ್ಟ್ರೀಯ ಇ-ಗವರ್ನೆನ್ಸ್ ಪ್ಲಾನ್ ಇತ್ಯಾದಿ.

### ವಿದೇಶಿ ಹೂಡಿಕೆ ಉತ್ತೇಜನಾ ಮಂಡಳಿ (FIPB- Foreign Investment Promotion Board):-




ಭಾರತದಲ್ಲಿ ವಿದೇಶಿ ನೇರ ಬಂಡವಾಳ ಹೂಡಿಕೆ ಉತ್ತೇಜನಕ್ಕಾಗಿ ಭಾರತ ಸರ್ಕಾರದಿಂದ 1990 ರಲ್ಲಿ ಸ್ಥಾಪನೆಯಾದ ಈ ಸಂಸ್ಥೆಯು ಕೇಂದ್ರ ಹಣಕಾಸು ಸಚಿವಾಲಯದ ಆರ್ಥಿಕ ವ್ಯವಹಾರಗಳ ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿತ್ತು. ವಿತ್ತ ಸಚಿವ ಅರುಣ್ ಜೇಟ್ಲಿ ಅವರು ಮಂಡಿಸಿದ **2017–18 ರ ಕೇಂದ್ರ ಬಜೆಟ್**‌ನಲ್ಲಿ ಈ ಸಂಸ್ಥೆಯನ್ನು ರದ್ದುಪಡಿಸುವ ಪ್ರಸ್ತಾಪ ಮಾಡಿದ್ದು, ಇತ್ತೀಚೆಗೆ ಕೇಂದ್ರ ಸಚಿವ ಸಂಪುಟ ಇದಕ್ಕೆ ಅನುಮೋದನೆ ನೀಡಿದೆ. ಈ ಸಂಸ್ಥೆಯು ದೇಶದಲ್ಲಿ ಎಫ್.ಡಿ.ಐ ಪ್ರಸ್ತಾವನೆಗಳ ತೀರುವಳಿಗಳಿಗೆ ಏಕಗವಾಕ್ಷಿ ವ್ಯವಸ್ಥೆಯಾಗಿತ್ತು. ಈ ಸಂಸ್ಥೆ ನೀಡಿದ 30 ಬಿಲಿಯನ್ ರೂ. ಬಂಡವಾಳ ಹೂಡಿಕೆ ಪ್ರಸ್ತಾವನೆಗಳಿಗೆ ಹಣಕಾಸು ಸಚಿವಾಲಯ ಅನುಮೋದನೆ ನೀಡುತ್ತಿತ್ತು. ಆದರೆ 3,000 ಕೋಟಿ ರೂ. ಹೂಡಿಕೆ ಯೋಜನೆಗಳಿಗೆ ಆರ್ಥಿಕ ವ್ಯವಹಾರಗಳ ಕ್ಯಾಬಿನೆಟ್ ಸಮಿತಿಯ ಅನುಮತಿ ಅಗತ್ಯವಿತ್ತು.

## ಇ-ಬಿಜ್ (e-Biz)




- ಭಾರತ ಸರ್ಕಾರವು ರಾಷ್ಟ್ರೀಯ ಇ-ಆಡಳಿತ ಯೋಜನೆಯಡಿ (National e-Governance Project) ಯಲ್ಲಿ ಇ-ಬಿಜ್ ಯೋಜನೆಯನ್ನು ಕೈಗೆತ್ತಿಕೊಂಡಿದೆ. ಈ ಯೋಜನೆಯಡಿಯಲ್ಲಿ ಹೂಡಿಕೆದಾರರು & ಉದ್ಯಮಿಗಳಿಗೆ ಆನ್‌ಲೈನ್ ನೊಂದಣಿ & ಪಾವತಿ ಸೇವೆಯನ್ನು ನೊಂದಾಯಿಸಲು ಅವಕಾಶವನ್ನು ಕಲ್ಪಿಸಲಾಗಿದೆ.
- ಈ ಪರಿಕಲ್ಪನೆಯನ್ನು **ಡಿ.ಐ.ಪಿ.ಪಿ - ಕೈಗಾರಿಕಾ ನೀತಿ & ಉತ್ತೇಜನಾ ಇಲಾಖೆ** ಅವರು ನೀಡಿದ್ದಾರೆ. ಕೇಂದ್ರದ ವಾಣಿಜ್ಯ & ಕೈಗಾರಿಕಾ ಸಚಿವಾಲಯ ಮೊದಲ ಬಾರಿಗೆ 2013 ರಲ್ಲಿ ಘೋಷಣೆ ಮಾಡಿದ್ದು, ಸರ್ಕಾರದಿಂದ ವ್ಯವಹಾರ (G2B-Government to Business) ಸೇವೆಯನ್ನು ನೀಡಿದ್ದು, ದೇಶಾದ್ಯಂತ ವ್ಯವಹಾರಕ್ಕೆ ಪೂರಕವಾದ ವಾತಾವರಣವನ್ನು ಅಭಿವೃದ್ಧಿಪಡಿಸುವ ಉದ್ದೇಶ ಹೊಂದಿತ್ತು.
- **ಸೇವೆಗಳು:-** ಹೊಸದಾಗಿ ಉದ್ಯಮವನ್ನು ಭಾರತದಲ್ಲಿ ಆರಂಭ ಮಾಡುವವರು, ಪರವಾನಗಿ, ತೀರುವಳಿ & ಪ್ರಮಾಣಪತ್ರ ನೀಡಿಕೆಗೆ ಸಂಬಂಧಿಸಿದಂತೆ ಇಲಾಖಾ ವೆಬ್‌ಸೈಟ್‌ಗಳ ಮೂಲಕ ಮಾಹಿತಿಗಳನ್ನು & ಪರವಾನಗಿಗೆ ಸಂಬಂಧಿಸಿದ ದಾಖಲೆಗಳನ್ನು ಪಡೆಯಬಹುದಾಗಿದೆ & ಮಾಹಿತಿ ಸಂಕೀರ್ಣತೆ & ನೀಡಿಕೆಯಲ್ಲಿನ ವಿಳಂಬತೆಯನ್ನು ಕಡಿಮೆ ಮಾಡುವುದು, ಆಕ್ಷೇಪಣಾ ಪ್ರಮಾಣ ಪತ್ರ ನೀಡಿಕೆ.
- ಈ ಯೋಜನೆಯನ್ನು ಖಾಸಗಿ-ಸಾರ್ವಜನಿಕ ಸಹಭಾಗಿತ್ವ ಮಾದರಿಯಲ್ಲಿ (PPP Model) ಇನ್ಫೋಸಿಸ್ ಸಂಸ್ಥೆ ವಿನ್ಯಾಸಗೊಳಿಸಲಾಗಿದ್ದು, ಇದು 10 ವರ್ಷದ ಅವಧಿಯ ಕಾರ್ಯಕ್ರಮವಾಗಿದೆ.
- ಇನ್ಫೋಸಿಸ್ 2009 ರಲ್ಲಿ ಇ-ಬಿಜ್ ಯೋಜನೆಯ ಟೆಂಡರ್ ಪ್ರಕ್ರಿಯೆಯಲ್ಲಿ ಆಯ್ಕೆ ಮಾಡಿಕೊಂಡಿತು.
- ಆಂಧ್ರಪ್ರದೇಶ, ದೆಹಲಿ, ಹರಿಯಾಣ, ಮಹಾರಾಷ್ಟ್ರ & ತಮಿಳುನಾಡು ರಾಜ್ಯಗಳಲ್ಲಿ 29 ಸೇವೆಗಳನ್ನು ಮೊದಲ ವರ್ಷದಲ್ಲಿ ನೀಡಿದೆ.
- 2 ಮತ್ತು 3ನೇ ವರ್ಷಗಳಲ್ಲಿ ಹೆಚ್ಚುವರಿ 21 ಸೇವೆಗಳನ್ನು ಹಾಗೂ 4 ನೇ ವರ್ಷದ ವೇಳೆಗೆ 200 ಕ್ಕಿಂತ ಹೆಚ್ಚು ಸೇವೆಗಳನ್ನು ಒದಗಿಸುವ ಉದ್ದೇಶ ಹೊಂದಿದೆ.
- 2016 ಅಕ್ಟೋಬರ್ 31 ರಂದು ಡಿ.ಐ.ಪಿ.ಪಿ & ವಿಶ್ವಬ್ಯಾಂಕ್ ಸಹಭಾಗಿತ್ವದಲ್ಲಿ Ease of Doing Biz ರ್‍ಯಾಂಕ್ ವರದಿಯನ್ನು ಪ್ರಕಟಿಸಿದ್ದು, ಆಂಧ್ರಪ್ರದೇಶ, ತೆಲಂಗಾಣ & ಗುಜರಾತ್ ಮೊದಲ 3 ಸ್ಥಾನವನ್ನು ಪಡೆದ ರಾಜ್ಯಗಳಾಗಿವೆ.
- **ಆಂಧ್ರಪ್ರದೇಶ** ರಾಜ್ಯವು ದೇಶದಲ್ಲಿಯೇ ಮೊದಲ ಬಾರಿಗೆ 2014 ರಲ್ಲಿ ಭಾರತ ಸರ್ಕಾರದ ರಾಷ್ಟ್ರೀಯ ವಿದ್ಯುನ್ಮಾನ ಆಡಳಿತದ ಯೋಜನೆಯಡಿಯಲ್ಲಿ 32 ಸಮಗ್ರ ಮಿಷನ್ ಮೋಡ್ ರೂಪಿಸಿದ ರಾಜ್ಯವಾಗಿದೆ.

## ಭಾರತೀಯ ವಾಯು ಪ್ರಾಧಿಕಾರ ಸಂಸ್ಥೆ (AAI - Airport Authority of India)




ಭಾರತ ಕೇಂದ್ರ ಸರ್ಕಾರದ ನಾಗರೀಕ ವಾಯುಯಾನ ಇಲಾಖೆಯ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಈ ಸಂಸ್ಥೆಯು ದೇಶದ ವಾಯುಯಾನಕ್ಕೆ ಸಂಬಂಧಿಸಿದ ಮೂಲ ಸೌಕರ್ಯ ನಿರ್ಮಾಣ, ಉನ್ನತೀಕರಣ, ನಿರ್ವಹಣೆ & ನಿಯಂತ್ರಣ ಮಾಡುತ್ತದೆ. ಈ ಸಂಸ್ಥೆಯು **1995 ಏಪ್ರಿಲ್ 1 ರಂದು ಸ್ಥಾಪನೆ**ಯಾಗಿದ್ದು, **ನವದೆಹಲಿ**ಯಲ್ಲಿ ಕೇಂದ್ರ ಕಛೇರಿಯನ್ನು ಹೊಂದಿದೆ. ಇದೊಂದು ಸಾರ್ವಜನಿಕ ವಲಯದ ಉದ್ದಿಮೆಯಾಗಿದೆ.

ಇದಕ್ಕೂ ಮುನ್ನ 1972 ರಲ್ಲಿ ಭಾರತೀಯ ಅಂತರಾಷ್ಟ್ರೀಯ ವಾಯು ಸಾರಿಗೆ ಪ್ರಾಧಿಕಾರ, 1986 ರಲ್ಲಿ ರಾಷ್ಟ್ರೀಯ ವಾಯು ಪ್ರಾಧಿಕಾರ ಸಂಸ್ಥೆಗಳು ದೇಶದ ವಾಯುಸಾರಿಗೆಯನ್ನು ನಿರ್ವಹಣೆ ಮಾಡುತ್ತಿದ್ದು, 1995 ಏಪ್ರಿಲ್ ನಲ್ಲಿ **ಪಾರ್ಲಿಮೆಂಟ್ ಕಾಯ್ದೆ** ಅನ್ವಯ ಭಾರತೀಯ ವಾಯು ಪ್ರಾಧಿಕಾರ ಸಂಸ್ಥೆಯು ಸ್ಥಾಪನೆಗೊಂಡ ನಂತರ ವಿಲೀನವಾದವು. ಇದು ಒಂದು ಶಾಸನ ಬದ್ಧ ಸಂಸ್ಥೆಯಾಗಿದೆ.

# ವಿದೇಶಿ ವಿನಿಮಯ ಮಾರುಕಟ್ಟೆ (Foreign Exchange Market)

✦ ಒಂದು ದೇಶದ ಹಣವನ್ನು ಇನ್ನೊಂದು ದೇಶದ ಹಣದೊಂದಿಗೆ ಪರಿವರ್ತನೆ ಮಾಡುವ ಮಾರುಕಟ್ಟೆಯೇ **ವಿದೇಶಿ ವಿನಿಮಯ ಮಾರುಕಟ್ಟೆ.**

✦ ವಿದೇಶಿ ವ್ಯಾಪಾರ & ವಿದೇಶಿ ಹೂಡಿಕೆ ಮಾಡುವ ಮುನ್ನ ದೇಶ & ವಿದೇಶಗಳ ಕರೆನ್ಸಿಗಳು ವಿನಿಮಯಗೊಳ್ಳಬೇಕಾಗುತ್ತವೆ. ಕೇಂದ್ರ ಬ್ಯಾಂಕು, ವಾಣಿಜ್ಯ ಬ್ಯಾಂಕುಗಳು ಅದರ ಅಧಿಕೃತ ವರ್ತಕರು ಹಾಗೂ ಜಾಗತಿಕ ವ್ಯವಹಾರ ಕೇಂದ್ರಗಳ ದಲ್ಲಾಳಿಗಳು ಈ ಮಾರುಕಟ್ಟೆಯ ಪ್ರತಿನಿಧಿಗಳಾಗಿರುತ್ತಾರೆ.

**ವಿನಿಮಯ ದರ (Exchange Rate):-**

✦ ಒಂದು ದೇಶದ ಹಣವನ್ನು ಇನ್ನೊಂದು ದೇಶದ ಹಣದೊಂದಿಗೆ ಯಾವ ದರದಲ್ಲಿ ವಿನಿಮಯಲ್ಪಡಿಸುತ್ತದೆ ಎಂದು ತಿಳಿಸುವುದು.

✦ ವಿನಿಮಯ ದರದಲ್ಲಿ **ನಾಮ ಮಾತ್ರ** & **ನೈಜ** ವಿನಿಮಯದರ ಎಂಬ 2 ವಿಧಗಳಿವೆ.

✦ **ಹಣದ ರೂಪದಲ್ಲಿ** ವಿನಿಮಯ ದರವನ್ನು ಪ್ರಸ್ತುತಪಡಿಸುವುದು ಅಥವಾ ವಿದೇಶಿ ಕರೆನ್ಸಿಯ ಒಂದು ಘಟಕಕ್ಕೆ ಕೊಡಬೇಕಾದ ಸ್ವದೇಶಿ ಕರೆನ್ಸಿಯ ಹಣರೂಪಿ ಬೆಲೆಯೇ **ನಾಮ ಮಾತ್ರ** ವಿನಿಮಯ ದರ.

✦ ಒಂದು ಕರೆನ್ಸಿಯಲ್ಲಿ ಮಾಪನ ಮಾಡಲಾದ ವಿದೇಶಿ ಬೆಲೆ & ಸ್ವದೇಶಿ ಬೆಲೆಗಳ ನಡುವಿನ ಅನುಪಾತವೇ ನೈಜ ವಿನಿಮಯ ದರ / ವಿದೇಶಿ **ವಸ್ತುಗಳ ಸಾಪೇಕ್ಷ ಬೆಲೆಯನ್ನು** ದೇಶೀಯ ವಸ್ತುಗಳ ರೂಪದಲ್ಲಿ ವ್ಯಕ್ತಪಡಿಸುವುದು.

✦ ನೈಜ ವಿನಿಮಯ ದರ ಒಂದಕ್ಕೆ ಸಮನಾಗಿದ್ದರೆ, $R=1$ ಎರಡೂ ಕರೆನ್ಸಿಗಳ ಕೊಳ್ಳುವ ಶಕ್ತಿ ಸಮವಾಗಿರುತ್ತದೆ.

✦ ನೈಜ ವಿನಿಮಯ ದರ ಒಂದಕ್ಕೆ ಹೆಚ್ಚಾಗಿದ್ದರೆ, $R>1$ ವಿದೇಶಿ ವಸ್ತುಗಳ ಬೆಲೆ ದೇಶೀಯ ವಸ್ತುಗಳ ಬೆಲೆಗಿಂತ ಹೆಚ್ಚಾಗಿರುತ್ತದೆ.

✦ ನೈಜ ವಿನಿಮಯ ದರ ಒಂದಕ್ಕೆ ಕಡಿಮೆಯಿದ್ದರೆ, $R<1$ ವಿದೇಶಿ ವಸ್ತುಗಳ ಬೆಲೆ ದೇಶೀಯ ವಸ್ತುಗಳ ಬೆಲೆಗಿಂತ ಕಡಿಮೆಯಿರುತ್ತದೆ.

**ವಿನಿಮಯ ದರ ನಿರ್ಧಾರದ ಪ್ರಕ್ರಿಯೆಯನ್ನು ತಿಳಿಸುವುದೇ ವಿನಿಮಯ ದರ ಸಿದ್ಧಾಂತಗಳು.**

1. **ಠಂಕಸಾಲೆ ಸಿದ್ಧಾಂತ:-** ಇದು ಸುವರ್ಣ ಪ್ರಮಿತಿ ನಿಯಮದಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ವಿನಿಮಯ ದರ ನಿರ್ಧಾರವನ್ನು ತಿಳಿಸುತ್ತದೆ.
2. **ಕೊಳ್ಳುವ ಶಕ್ತಿ ಸಮತೆ ಸಿದ್ಧಾಂತ:-** ಸ್ವೀಡನ್ನಿನ ಗಸ್ಟೊ ಕ್ಯಾಸೆಲ್ ಈ ಸಿದ್ಧಾಂತವನ್ನು ರೂಪಿಸಿದ್ದು, ಒಂ[illegible] ದೇಶದ ಕೊಳ್ಳುವ ಶಕ್ತಿ ವಿದೇಶಿ ಕೊಳ್ಳುವ ಶಕ್ತಿಯೊ[illegible] ಹೇಗೆ ವಿನಿಮಯಗೊಳ್ಳುತ್ತದೆ ಎಂಬುದನ್ನು ತಿಳಿಸು[illegible] ಅಂದರೆ 2 ದೇಶಗಳ ಹಣದ ಕೊಳ್ಳುವ ಶಕ್ತಿ ಸಮವಾದ[illegible] ಮಾತ್ರ ವಿನಿಮಯ ದರ ನಿರ್ಧಾರವಾಗುತ್ತದೆ.
3. **ಸಂದಾಯ ಬಾಕಿ ಸಿದ್ಧಾಂತ:-** ಇದು ವಿನಿಮಯ ದ[illegible] ಬೇಡಿಕೆ ಪೂರೈಕೆ ಸಿದ್ಧಾಂತ, ಸಾಮಾನ್ಯ ಸಮತೋ[illegible] ಸಿದ್ಧಾಂತ ಎಂದು ಕರೆಯುತ್ತಾರೆ. ವಿದೇಶಿ ವಿನಿಮ[illegible] ದರವು ವಿನಿಮಯದ ಬೇಡಿಕೆ & ಪೂರೈಕೆಗಳ [illegible] ಕಾರ್ಯಾಚರಣೆಯಿಂದ ನಿರ್ಧಾರವಾಗುವುದ[illegible] ತಿಳಿಸುತ್ತದೆ. ಇದರ ಬೇಡಿಕೆ & ಪೂರೈಕೆಗ[illegible] ಆ ದೇಶದ ಪಾವತಿ ಶಿಲ್ಕಿನ ಪರಿಸ್ಥಿತಿಯ ಮೇ[illegible] ಅವಲಂಬಿತವಾಗಿರುತ್ತವೆ.

**ವಿನಿಮಯ ದರ ಪದ್ಧತಿಗಳು:-**

1. **ಸ್ಥಿರ ವಿನಿಮಯ ದರ:-** ವಿದೇಶಿ ವಿನಿಮಯದ ಬೇಡಿ[illegible] & ಪೂರೈಕೆಗಳಿಂದ ನಿರ್ಧರಿಸಲ್ಪಡದೇ, **ಕೇಂದ್ರ ಬ್ಯಾಂಕ್** ಪೂರ್ವ ನಿರ್ಧಾರಿತ ಮಟ್ಟದಲ್ಲಿ ನಿಗದಿಪಡಿಸು[illegible] ವಿನಿಮಯ ದರ.
2. **ಬದಲಾಗುವ ವಿನಿಮಯ ದರ:-** ವಿದೇಶಿ ವಿನಿಮಯದ **ಬೇಡಿಕೆ** & **ಪೂರೈಕೆ**ಗಳಿಂದ ನಿರ್ಧರಿಸಲ್ಪಡುವ ಆದ-ರೆ ಕೇಂದ್ರ ಬ್ಯಾಂಕ್ ಪೂರ್ವ ನಿರ್ಧಾರಿತ ಮಟ್ಟದಲ್ಲಿ ನಿಗದಿಪಡಿಸದ ವಿನಿಮಯ ದರ.
3. **ನಿರ್ವಹಣೆ ವಿನಿಮಯ ದರ:-** ಸ್ಥಿರ & ಬದಲಾಗುವ ವಿನಿಮಯ ದರಗಳ ಸಮ್ಮಿಶ್ರಣ. ಅಂದರೆ, ವಿದೇಶಿ ವಿನಿಮಯದ **ಬೇಡಿಕೆ & ಪೂರೈಕೆ**ಗಳಿಂದ ನಿರ್ಧರಿಸಲ್ಪಡುವ ಹಾಗೂ **ಕೇಂದ್ರ ಬ್ಯಾಂಕ್** ಪೂರ್ವ ನಿರ್ಧಾರಿತ ಮಟ್ಟದಲ್ಲಿ ನಿಗದಿಪಡಿಸಿದ ಮಿತಿಗಳ ನಡುವೆ ನಿರ್ಧಾರವಾಗುವ ವಿನಿಮಯ ದರ.

**ಭಾಗಶಃಪರಿವರ್ತನೆ (Partially Convertability)**

ಅಧಿಕೃತ ವಿನಿಮಯ ದರ ಎಂದರೆ, ಆರ್.ಬಿ.ಐ ನಿರ್ಧರಿಸುವ ವಿನಿಮಯ ದರದಲ್ಲಿ ಶೇ 40 ರಷ್ಟು ಹಾಗೂ ಮಾರುಕಟ್ಟೆ ನಿರ್ಧಾರಿತ ವಿನಿಮಯ ದರವು ಶೇ 60 ರಷ್ಟು ನಿರ್ಧಾರವಾಗುತ್ತಿದೆ. ಇದನ್ನೇ ಭಾಗಶಃ ಪರಿವರ್ತನೆ ಎನ್ನುವರು.

**LERMS- Liberalized Exchange Rate Management System:-** ಮಾರ್ಚ್ 1992 ರಲ್ಲಿ ಅನುಷ್ಠಾನ. ಏಕರೂಪ ಅಧಿಕೃತ ವಿನಿಮಯ ದರಕ್ಕೆ ಬದಲಾಗಿ ದ್ವಂದ್ವ ವಿನಿಮಯ ದರ ವ್ಯವಸ್ಥೆ.

**ಭಾರತದಲ್ಲಿ ವಿನಿಮಯ ದರ ಪದ್ಧತಿ:**-ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟನ್ನಿನ ಪೌಂಡ್ ಸ್ಟರ್ಲಿಂಗ್ ನೊಂದಿಗೆ ಸ್ಥಿರ ವಿನಿಮಯ ದರ ಅಸ್ತಿತ್ವದಲ್ಲಿತ್ತು. 1949, 1966, 1991 ರಲ್ಲಿ ರೂಪಾಯಿ ಅಪಮೌಲ್ಯೀಕರಣಗೊಂಡಾಗ ವಿನಿಮಯ ದರ ಬದಲಾಗುವ ಪದ್ಧತಿಗೆ ಒಳಪಟ್ಟಿದೆ.

## ಬಂಡವಾಳ ಖಾತೆ ಪರಿವರ್ತನೆ ಮೇಲಿನ ಸಮಿತಿ - ತಾರಾಪೋರೆ (Tarapore) ಸಮಿತಿ



+ ಭಾರತದಲ್ಲಿ ಪಾವತಿ ಶಿಲ್ಕಿನ **ಬಂಡವಾಳ ಖಾತೆಯ ಪರಿವರ್ತನೆಯ** ಸಾಧ್ಯತೆಗಳನ್ನು ಅಧ್ಯಯನ ಮಾಡಲು ಭಾರತೀಯ ರಿಸರ್ವ್ ಬ್ಯಾಂಕ್‌ನಿಂದ 1997 ಫೆಬ್ರವರಿ 28 ರಂದು **ಎಸ್.ಎಸ್. ತಾರಾಪೋರೆ** ನೇತೃತ್ವದಲ್ಲಿ ಅಧ್ಯಯನ ಸಮಿತಿಯನ್ನು ನೇಮಕ ಮಾಡಲಾಗಿದ್ದು, ಇದರಲ್ಲಿ ಸುರ್ಜಿತ್ ಎಸ್ ಬಲ್ಲಾ, ಎಂ.ಜಿ. ಬಿಹಿಡೆ, ಕಿರೀಟಿ ಪಾರೇಖ್, ಎ.ವಿ. ರಾಜವಾಡೆ ಸದಸ್ಯರಾಗಿದ್ದರು. ಈ ಸಮಿತಿಯು 1997 ಜೂನ್ 3 ರಂದು ವರದಿಯನ್ನು ಸಲ್ಲಿಸಿದ್ದು, **ಸಿ. ರಂಗರಾಜನ್ ವರದಿಯ** ಶಿಫಾರಸ್ಸುಗಳನ್ನು ಪ್ರಸ್ತುತಪಡಿಸಿದರು.
+ 1994 ಆಗಸ್ಟ್ ನಲ್ಲಿ **ಚಾಲ್ತಿ ಖಾತೆ ಪರಿವರ್ತನೆಯನ್ನು** ಸರ್ಕಾರ ಜಾರಿಗೆ ತಂದಿತ್ತು. ಆದರೆ, ಬಂಡವಾಳ ಖಾತೆಯ ಹೂಡಿಕೆ ವ್ಯವಹಾರಗಳಲ್ಲಿ ಸಾಕಷ್ಟು ನಿರ್ಬಂಧಗಳಿದ್ದು, ವಿದೇಶಿ ಬಂಡವಾಳ ಹೂಡಿಕೆ ಒಳಹರಿವು ಉತ್ತೇಜನಕ್ಕೆ ಬಂಡವಾಳ ಖಾತೆಯ ಪರಿವರ್ತನೆ ಅಗತ್ಯ ಎಂದು ವರದಿ ಶಿಫಾರಸ್ಸು ಮಾಡಿತ್ತು. ಇದು 1997–98, 1998–99, 1999–2000 3 ಹಂತಗಳನ್ನು ನಿಗದಿಪಡಿಸಿತ್ತು. ಆದರೆ ಇದರ ಪೂರ್ಣ ಅನುಷ್ಠಾನಕ್ಕೆ ವಿತ್ತೀಯ ಕೊರತೆಯನ್ನು ಕಡಿಮೆಗೊಳಿಸುವುದು. ಶೇ 3 ರಿಂದ ಶೇ 5 ರವರೆಗೆ ಹಣದುಬ್ಬರ ದರವನ್ನು ನಿರ್ಧರಿಸುವುದು, ಕಾರ್ಯಗತವಲ್ಲದ ಸ್ವತ್ತುಗಳ ನಿಯಂತ್ರಣದ ಮೂಲಕ ಹಣಕಾಸು ವಲಯದ ಸುಧಾರಣೆ ಅಗತ್ಯವಾಗಿತ್ತು. ವಿದೇಶಿ ವಿನಿಮಯ ನಿಯಂತ್ರಣ ಕಾಯ್ದೆ ಅನುಷ್ಠಾನದ ಸಲಹೆಯನ್ನು ಈ ವರದಿ ಸಲ್ಲಿಸಿತ್ತು. ತಾರಾಪೋರೆ ನೇತೃತ್ವದಲ್ಲಿ ಸರ್ಕಾರ 2ನೇ ಬಾರಿ ಸಮಿತಿಯನ್ನು 2006 ರಲ್ಲಿ ನೇಮಕ ಮಾಡಿದ್ದು, 2006 ಸೆಪ್ಟೆಂಬರ್ 1 ರಂದು ವರದಿ ಸಲ್ಲಿಸಿತ್ತು. ಇದರಲ್ಲಿ 2006–07, 2007–09 & 2011 ರ ಒಳಗೆ ಎಂಬ 3 ಹಂತಗಳನ್ನು ಪೂರ್ಣ ಪರಿವರ್ತನೆಗೆ ನಿಗದಿ ಪಡಿಸಿತ್ತು. ಆದರೆ, **ಪ್ರಸ್ತುತ ಪಾವತಿ ಶಿಲ್ಕಿನ ಚಾಲ್ತಿ ಖಾತೆ ಪೂರ್ಣ ಪರಿವರ್ತನೆ** ಹೊಂದಿದೆ. ಆದರೆ, **ಬಂಡವಾಳ ಖಾತೆಯು ಭಾಗಶಃ ಪರಿವರ್ತನೆ** ಆಗಿದೆ.

## ಜಗತ್ತಿನ ಪ್ರಮುಖ ದೇಶಗಳ ರಾಜಧಾನಿ & ನಾಣ್ಯಗಳು

| | ದೇಶ (Country) | ರಾಜಧಾನಿ (Capital) | ನಾಣ್ಯ (Currency) |
|---|---|---|---|
| 1) | ಈಜಿಪ್ಟ್ | ಕೈರೋ | ಈಜಿಪ್ಷಿಯನ್ ಪೌಂಡ್ |
| 2) | ಕೀನ್ಯಾ | ನೈರೋಬಿ | ಶಿಲಿಂಗ್ (Shiling) |
| 3) | ಲಿಬಿಯಾ | ಟ್ರಿಪೊಲಿ | ದಿನಾರ್ |
| 4) | ಸೋಮಾಲಿಯಾ | ಹರ್ಗೆಸಿಯಾ | ಸೊಮಾಲಿ ಲ್ಯಾಂಡ್ ಶಿಲಿಂಗ್ |
| 5) | ದಕ್ಷಿಣ ಆಫ್ರಿಕಾ | ಪ್ರಿಟೋರಿಯಾ (ಆಡಳಿತ) ಕೇಪ್‌ಟೌನ್ ಬ್ಲೋಯಿಮ್ ಫಾಂಟೇನ್ | ಸೌತ್ ಆಫ್ರಿಕನ್ ರಾಂಡ್ |
| 6) | ದಕ್ಷಿಣ ಸೂಡಾನ್ | ಜೂಬಾ | ದಕ್ಷಿಣ ಸೂಡಾನ್ ಪೌಂಡ್ |
| 7) | ಸೂಡಾನ್ | ಕಾರ್ಟೋಮ್ | ಸೂಡಾನೀಸ್ ಪೌಂಡ್ |
| 8) | ಉಗಾಂಡ | ಕಂಪಾಲ | ಉಗಾಂಡಿಯನ್ ಶಿಲ್ಲಿಂಗ್ |
| 9) | ಜಿಂಬಾಬ್ವೆ | ಹರಾರೆ | ಯುನೈಟೆಡ್ ಸ್ಟೇಟ್ಸ್ ಡಾಲರ್ |
| 10) | ಆಫ್ಘಾನಿ ಸ್ತಾನ | ಕಾಬೂಲ್ | ಆಫ್ಘಾನಿ |
| 11) | ಬಾಂಗ್ಲಾ ದೇಶ | ಢಾಕಾ | ಟಾಕಾ |
| 12) | ಭೂತಾನ್ | ಥಿಂಪು | ಭೂತಾನ್ ಗುಲ್ಟಮ್ (Bhutanese Ngultrum) |

# ಬಡತನ (Poverty)

**A Country is Poor, because it is Poor**

ರ್‍ಯಾಗ್ನರ್ ನರ್ಕ್ಸ್ ಅವರ ಮಾತಿನಂತೆ ಭಾರತವು ಸ್ವಾತಂತ್ರ್ಯಾನಂತರದ ವಿವಿಧ ದಶಕಗಳಲ್ಲಿ ಅನುಭವಿಸುತ್ತಿರುವ ಹಲವಾರು ಸಮಸ್ಯೆಗಳಲ್ಲಿ ಜ್ವಲಂತ ಸಮಸ್ಯೆಯೇ ಬಡತನ. ಬಡತನಕ್ಕೆ ಬಡತನವೇ ಕಾರಣ & ಪರಿಣಾಮವಾಗಿದೆ. ಬಡತನ & ನಿರುದ್ಯೋಗಗಳು ಒಂದೇ ನಾಣ್ಯದ ಎರಡು ಮುಖಗಳಂತಿದ್ದು, ಬಡತನವು ರಾಷ್ಟ್ರದ ಅನೇಕ ಸಮಸ್ಯೆಗಳ ಮೂಲವಾಗಿದೆ. ಸರ್ಕಾರಗಳು ವಿವಿಧ ಬಡತನ ನಿವಾರಣಾ ಕಾರ್ಯಕ್ರಮಗಳನ್ನು ಜಾರಿಗೆ ತಂದಿದ್ದರೂ, ಬಡತನ ಸಮಸ್ಯೆ ಮತ್ತಷ್ಟು ಜಟಿಲಗೊಳ್ಳುತ್ತಿರುವುದು ವಿಪರ್ಯಾಸದ ಸಂಗತಿಯಾಗಿದೆ. ಈ ಹಿನ್ನಲೆಯಲ್ಲಿ ಬಡತನ, ಮಾಪನ, ಅದರ ನಿವಾರಣಾ ಕಾರ್ಯಕ್ರಮಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

**ಅರ್ಥ:-**

+ ಒಂದು ದೇಶದಲ್ಲಿ ಜನತೆಯ ಒಂದು ವರ್ಗವು ಕನಿಷ್ಟ ಮೂಲ ಅಗತ್ಯಗಳನ್ನು ಪಡೆಯುವ ಸಾಮರ್ಥ್ಯವಿಲ್ಲದ ಸ್ಥಿತಿಯೇ ಬಡತನ.

**ವಿಧಗಳು:-**

1) **ನಿರಪೇಕ್ಷ ಬಡತನ (Absolute Poverty):-** ರಾಷ್ಟ್ರೀಯ ಮಟ್ಟಕ್ಕನುಗುಣವಾಗಿ ವ್ಯಕ್ತಿಯ ಅನುಭೋಗದ ವೆಚ್ಚವು **ಕನಿಷ್ಟ ಯೋಗ್ಯತಾ ಜೀವನ** ಮಟ್ಟವನ್ನು ನಿರ್ವಹಿಸಲು ಸಾಕಾಗದಿರುವ ಸ್ಥಿತಿಯೇ ನಿರಪೇಕ್ಷ ಬಡತನ.

2) **ಸಾಪೇಕ್ಷ ಬಡತನ:- (Relative Poverty):-**

+ ಆದಾಯದ ಮಟ್ಟಗಳಿಗೆ ಸಂಬಂಧಿಸಿದ ಬಡತನ.

**ಬಡತನ ರೇಖೆ:- (Poverty Line):-** ಜನಸಂಖ್ಯಾ ಪಂಚಿಕೆಯಲ್ಲಿ ಬಡವರನ್ನು, ಬಡವರಲ್ಲದವರಿಂದ ಪ್ರತ್ಯೇಕಿಸುವ ವಿಭಜಕ ಬಿಂದುವನ್ನು ಬಡತನ ರೇಖೆ ಎನ್ನುವರು.

+ **ಯೋಜನಾ ಆಯೋಗದ ಪ್ರಕಾರ** "ಕನಿಷ್ಟ ಪೌಷ್ಠಿಕ ಕ್ಯಾಲೋರಿ ಭರಿತ ಆಹಾರ"ದ ಮೇಲೆ ಗ್ರಾಮೀಣ ಪ್ರದೇಶದ ವ್ಯಕ್ತಿಯೊಬ್ಬನಿಗೆ **ದಿನಂ ಪ್ರತಿ 2400 ಕ್ಯಾಲೋರಿ** ಮತ್ತು **ನಗರಪ್ರದೇಶದ ವ್ಯಕ್ತಿಯೊಬ್ಬನಿಗೆ 2100 ಕ್ಯಾಲೋರಿ**ಗಿಂತ ಕಡಿಮೆ ಆಹಾರ ಸೇವಿಸುವವರನ್ನು ಬಡತನ ರೇಖೆಗಿಂತ ಕೆಳಗಿರುವವರು ಎನ್ನುವರು.

+ ಸರ್ಕಾರ ಕುಟುಂಬಗಳ ಆದಾಯಕ್ಕೆ ಬದಲಾಗಿ **"ಮಾಸಿಕ ತಲಾ ವೆಚ್ಚ"** (MPCE- Monthly Per-capita Expenditure) ಬಡವರನ್ನು ಗುರುತಿಸಲು ಬಳಕೆ.

**ಬಡತನಕ್ಕೆ ಸಂಬಂಧಿಸಿದಂತೆ ಸಿ.ರಂಗರಾಜನ್ ವರದಿ (2014) ಮತ್ತು ಸುರೇಶ್ ತೆಂಡೂಲ್ಕರ್ ವರದಿ(2009)ಯ ಹೋಲಿಕೆ (2011 12 ಅಂಕಿಅಂಶ)**

| ಸಿ. ರಂಗರಾಜನ್ ವರದಿ | ಸುರೇಶ್ ತೆಂಡೂಲ್ಕರ್ ವರದಿ |
|---|---|
| ನಗರದ ಬಡವರು:- ತಿಂಗಳಿಗೆ 1407ರೂ. (ಅಂದರೆ ದಿನಕ್ಕೆ 47ರೂ) ಕ್ಕಿಂತ ಕಡಿಮೆ ಖರ್ಚು ಮಾಡುವವರು. | ನಗರದ ಬಡವರು:- ತಿಂಗಳಿಗೆ 1000ರೂ(ಅಂದರೆ ದಿನಕ್ಕೆ 33ರೂ.) ಕ್ಕಿಂತ ಕಡಿಮೆ ಖರ್ಚು ಮಾಡುವವರು. |
| ಗ್ರಾಮೀಣ ಬಡವರು:- ತಿಂಗಳಿಗೆ 972ರೂ. (ಅಂದರೆ ದಿನಕ್ಕೆ 32ರೂ) ಕ್ಕಿಂತ ಕಡಿಮೆ ಖರ್ಚು ಮಾಡುವವರು. | ಗ್ರಾಮೀಣ ಬಡವರು:- ತಿಂಗಳಿಗೆ 816ರೂ(ಅಂದರೆ ದಿನಕ್ಕೆ 27ರೂ)ಕ್ಕಿಂತ ಕಡಿಮೆ ಖರ್ಚು ಮಾಡುವವರು. |
| ಭಾರತದಲ್ಲಿ ಬಡವರ ಸಂಖ್ಯೆ ಶೇಕಡಾವಾರು 29.5 ರಷ್ಟು, (ಸರಾಸರಿ) ಗ್ರಾಮೀಣ 30.9, ನಗರ 26.4 | ಭಾರತದಲ್ಲಿ ಬಡವರ ಸಂಖ್ಯೆ ಶೇಕಡಾವಾರು 21.9 ರಷ್ಟು, (ಸರಾಸರಿ) ಗ್ರಾಮೀಣ 25.7, ನಗರ 13.7 |

+ ಕರ್ನಾಟಕ ರಾಜ್ಯ ಸರ್ಕಾರವು ಬಿ.ಪಿ.ಎಲ್ ಕಾರ್ಡುದಾರರಿಗೆ ಪಡಿತರ ಚೀಟಿಯನ್ನು ವಿತರಿಸುವಾಗ ಈ ಕೆಳಗಿನ ಮಾನದಂಡಗಳನ್ನು ಪ್ರಸ್ತುತ ದಿನಗಳಲ್ಲಿ ಅಳವಡಿಸಿಕೊಳ್ಳಲಾಗಿದೆ.

1. ಫಲಾನುಭವಿ ಕುಟುಂಬಗಳಲ್ಲಿ ಯಾವುದೇ ವ್ಯಕ್ತಿ ಸರ್ಕಾರಿ ಉದ್ಯೋಗದಲ್ಲಿರಬಾರದು

2. ಗ್ರಾಮೀಣ ಪ್ರದೇಶದಲ್ಲಿ ಕನಿಷ್ಠ 7 ಎಕರೆ ಜಮೀನು & ನಗರ ಪ್ರದೇಶದಲ್ಲಿ 1000 ಚ. ಅಡಿ ವಿಸ್ತೀರ್ಣದ ನಿವೇಶನವನ್ನು ಹೊಂದಿರಬಾರದು.
3. ಮನೆಯಲ್ಲಿ 4 ಚಕ್ರದ ಯಾವುದೇ ರೀತಿಯ ವಾಹನ ಹೊಂದಿರಬಾರದು.
4. ತಿಂಗಳಿಗೆ 150 ಯುನಿಟ್‌ಗಿಂತ ಹೆಚ್ಚಿನ ವಿದ್ಯುತ್‌ನ್ನು ಬಳಕೆ ಮಾಡಬಾರದು.

## ಬಡತನದ ಮಾಪನಗಳು

1) **ತಲೆ ಎಣಿಕೆ ಅನುಪಾತ (Head Count Ratio):-** ಬಡತನ ರೇಖೆಗಿಂತ ಕೆಳಗಿರುವ ಜನರ ಪ್ರಮಾಣದ ಆಧಾರದ ಮೇಲೆ ಬಡವರ ಸಂಖ್ಯೆಯನ್ನು ಅಂದಾಜಿಸುವುದನ್ನೇ ತಲೆ ಎಣಿಕೆ ಅನುಪಾತ ಎನ್ನುವರು.
2) **ಆದಾಯ ಅಂತರ ಅನುಪಾತ (IGR-Income Gap Ratio):-** ಬಡವರ ಒಟ್ಟು ವೆಚ್ಚವನ್ನು ಬಡತನ ರೇಖೆಗಿಂತ ಕೆಳಗಿರುವ ಜನರ ಸಂಖ್ಯೆಯಿಂದ ಭಾಗಿಸುವುದರ ಮೂಲಕ ಲೆಕ್ಕಾಚಾರ ಮಾಡುವುದು.
3) **ಬಡತನ ಅಂತರ ಅನುಸೂಚಿ (Poverty Gap Index-PGI):-** ಬಡತನ ರೇಖೆ ಮತ್ತು ಬಡತನ ರೇಖೆ ಕೆಳಗೆ ವಾಸಿಸುತ್ತಿರುವ ಕುಟುಂಬಗಳ ಸರಾಸರಿ ಆದಾಯದ ನಡುವಿನ ವ್ಯತ್ಯಾಸವಾಗಿದೆ. ಇದು ಬಡತನ ರೇಖೆಯ ಶೇಕಡಾವಾರು ರೂಪ, ಮತ್ತು ಬಡತನದ ಆಳ ಮತ್ತು ತೀವ್ರತೆಯನ್ನು ಸೂಚಿಸುತ್ತದೆ.

PGI

$$= \frac{\text{ಬಡತನ ರೇಖೆ} - \text{BPL ಕುಟುಂಬಗಳ ಸರಾಸರಿ ಆದಾಯ}}{\text{ಬಡತನ ರೇಖೆ}} \times 100$$

4) **ದ್ವಿಗುಣಿಸಿದ ಬಡತನ ಅಂತರ ಸೂಚಿ (Squared Poverty Index):-** ಬಡತನದ ಅಂತರಗಳ ದ್ವಿಗುಣಿಸಿದ ಪ್ರಮಾಣಬದ್ಧ ಮದ್ಯಾಂಕವಾಗಿದೆ. ಬಡವರ ಮಧ್ಯೆ ಅಸಮಾನತೆಯ ತೀವ್ರತೆ ಮತ್ತು ಸೂಕ್ಷ್ಮತೆಯನ್ನು ಸೂಚಿಸುತ್ತದೆ.
5) **ಬಹು ಆಯಾಮಗಳ ಬಡತನ ಸೂಚ್ಯಂಕ (Multidimesion Poverty Index):-** ಇದನ್ನು ಬಡತನದ ಹೊಸ ಅಂತರಾಷ್ಟ್ರೀಯ ಮಾಪನವಾಗಿ UNDP 2014ರ ಮಾನವ ಅಭಿವೃದ್ಧಿ ವರದಿಯ 20ನೇ ವಾರ್ಷಿಕೋತ್ಸವದ ಪ್ರಯುಕ್ತ ರೂಪಿಸಿತು.

✦ OPHI (Oxford Poverty and Human Development and Initiative) ರೂಪಿಸಿತು.

ಇದರ ಪ್ರಕಾರ 3 ಆಯಾಮಗಳಿದ್ದು,

1) ಶಿಕ್ಷಣ (ಶಾಲಾ ವರ್ಷಗಳು, ದಾಖಲಾತಿ 1/6 ಸೂಚ್ಯಂಕ)
2) ಆರೋಗ್ಯ (ಶಿಶು ಮರಣ, ಪೌಷ್ಠಿಕತೆ–1/6 ಸೂಚ್ಯಂಕ)
3) ಜೀವನ ಮಟ್ಟ (ವಿದ್ಯುತ್‌ಚ್ಛಕ್ತಿ, ಕುಡಿಯುವ ನೀರು, ನೈರ್ಮಲ್ಯ, ಅಡುಗೆ ಅನಿಲ, ಆಸ್ತಿ ಮತ್ತು ಒಟ್ಟು 1/18 ಸೂಚ್ಯಂಕ) ಒಳಗೊಂಡಿದೆ.

✦ ವಿಶ್ವ ಬ್ಯಾಂಕ್‌ನ ಪ್ರಕಾರ 1.25 ಅಮೆರಿಕಾ ಡಾ... ಹಣವನ್ನು ಪ್ರತಿ ನಿತ್ಯ ಖರ್ಚು ಮಾಡಲು ಅಸಾಧ್ಯ... ಸ್ಥಿತಿಯನ್ನು ಬಡತನ ರೇಖೆ ಎಂದು ವ್ಯಾಖ್ಯಾನಿ...

✦ ಆದರೆ 2017 ರಲ್ಲಿ ವಿಶ್ವ ಬ್ಯಾಂಕ್ 1.25 ಅಮೆ... ಡಾಲರ್‌ನಿಂದ 1.9 ಅ. ಡಾಲರ್‌ಗೆ ಹೆಚ್ಚಿಸಿದೆ.

✦ ಇದರಿಂದ 2011–12 ರಲ್ಲಿ ದೇಶದ ಬಡತನ ಪ್ರಮಾಣ ಕೇವಲ ಶೇ 12.4 ಆದರೆ ಎನ್.ಎಸ್.ಎಸ್.ಒ ಅಂದಾಜಿನ ಪ್ರಕಾರ ಶೇ 21.2 ರಷ್ಟಾಗಿತ್ತು.

### ಬಡವರನ್ನು ಗುರುತಿಸಲು ಹೊಸ ಕಾರ್ಯಪಡೆ ಸಮಿತಿ

✦ ನೀತಿ ಆಯೋಗದ ಉಪಾಧ್ಯಕ್ಷರಾದ ಅರವಿಂದ್ ಪನಗಾರಿಯಾ ನೇತೃತ್ವದಲ್ಲಿ ದೇಶದ ಬಡವರನ್ನು ಗುರುತಿಸಲು ಸುರೇಶ್ ತೆಂಡೂಲ್ಕರ್, ಸಿ. ರಂಗರಾಜನ್ ಸಮಿತಿಯ ನಂತರ ಭಾರತದ ಕೇಂದ್ರ ಸರ್ಕಾರ ಕಾರ್ಯಪಡೆ ಸಮಿತಿಯನ್ನು ನೇಮಿಸಿದೆ.

✦ ಇದರಲ್ಲಿ ನೀತಿ ಆಯೋಗದ ಸದಸ್ಯರಾದ ಬಿಬೇಕ್ ದೇಬ್ರಾಯ್, ಶ್ರೇಷ್ಠ ಅರ್ಥಶಾಸ್ತ್ರಜ್ಞ ಸುರ್ಜಿತ್ ಬಲ್ಲಾ, ... ಸಂಖ್ಯಾಶಾಸ್ತ್ರಜ್ಞ ಟಿ.ಸಿ.ಎ ಅನಂತ್, 5 ಕೇಂದ್ರ ಸಚಿವ... ಯು.ಐ.ಡಿ.ಎ.ಐ ನ ನಿರ್ದೇಶಕ, ನೀತಿ ಆಯೋಗದ 2 ಸಲಹೆಗಾರರನ್ನು ಹೊಂದಿರುವ ಸಮಿತಿ...

✦ ಒಟ್ಟು 14 ಸದಸ್ಯರೊಂದಿಗೆ **ಭಾರತದಲ್ಲಿ ಬಡತನ ವ್ಯಾಖ್ಯಾನಿಸಲು** ಹಾಗೂ ಅದನ್ನು ಸಂಪೂರ್ಣ ನಿಯಂತ್ರಿಸಲು ಸೂಕ್ತವಾದ ಕ್ರಮಗಳನ್ನು ಕೈಗೊಳ್ಳುವ ಉದ್ದೇಶದಿಂದ ನರೇಂದ್ರ ಮೋದಿ ಸರ್ಕಾರ ಈ ಸಮಿತಿ ನೇಮಿಸಿದೆ.

### ಬಡತನಕ್ಕೆ ಕಾರಣಗಳು:-

✦ ಬ್ರಿಟಿಷ್ ಆಡಳಿತದ ಶೋಷಣೆ
✦ ನಿರುದ್ಯೋಗ ಸ್ಥಿತಿ
✦ ಬಡತನ
✦ ಹಣದುಬ್ಬರದ ಸಮಸ್ಯೆ
✦ ಆದಾಯದ ಅಸಮಾನತೆ
✦ ಪ್ರಾದೇಶಿಕ ಅಸಮಾನತೆ
✦ ಜಾತಿ ಪದ್ಧತಿ
✦ ರಾಜಕೀಯ ಹಿತಾಸಕ್ತಿ ಕೊರತೆ
✦ ಮುಂತಾದ ಕಾರಣಗಳು ಭಾರತದಲ್ಲಿ ಬಡತನ ಸಮಸ್ಯೆ ಬೇರೂರುವಂತೆ ಮಾಡಿವೆ.

**ಹಿಮ್ಮುಖ ಸಂಚಲನ ಪರಿಣಾಮ – ಗುನ್ನಾರ್ ಮಿರ್ಡಾಲ್**
**ಬಡತನದ ವಿಷವೃತ್ತ – ರಾಗ್ನರ್ ನರ್ಕ್ಸ್ ...** ಅಂದರೆ ...

# ಬಡತನ ನಿವಾರಣಾ & ಉದ್ಯೋಗ ಸೃಷ್ಟಿ ಕಾರ್ಯಕ್ರಮಗಳು

ಸ್ವಾತಂತ್ರ್ಯಾನಂತರ ಕೇಂದ್ರ & ರಾಜ್ಯ ಸರ್ಕಾರಗಳು ದೇಶದ ಬಡತನ ಸಮಸ್ಯೆಯನ್ನು ನೀಗಿಸಲು ವಿವಿಧ ಪಂಚವಾರ್ಷಿಕ ಯೋಜನೆಗಳ ಅವಧಿಯಲ್ಲಿ ಕೋಟ್ಯಂತರ ರೂ. ಹಣವನ್ನು ವಿನಿಯೋಗಿಸಿ ವಿವಿಧ ಬಡತನ ನಿವಾರಣಾ ಕಾರ್ಯಕ್ರಮಗಳು & ಉದ್ಯೋಗ ಸೃಷ್ಟಿ ಕಾರ್ಯಕ್ರಮಗಳಿಗೆ ಪರಿಶ್ರಮಿಸುತ್ತಾ ಬಂದಿವೆ. ಇವುಗಳನ್ನು ಸಂಕ್ಷಿಪ್ತವಾಗಿ ಈ ಕೆಳಗಿನ ಪಟ್ಟಿಯಲ್ಲಿ ವಿವರಿಸಲಾಗಿದೆ.

| ಯೋಜನೆ | ಪ್ರಾರಂಭ | ಉದ್ದೇಶ |
|---|---|---|
| 1) ರಾಷ್ಟ್ರೀಯ ಸಾಕ್ಷರತಾ ಮಿಷನ್ (NLM) | 1988 ಮೇ 5 | 15 ರಿಂದ 35 ವಯೋಮಾನದ 80 ದಶಲಕ್ಷ ಜನರನ್ನು ಸಾಕ್ಷರರನ್ನಾಗಿಸುವ ದೇಶವ್ಯಾಪಿ ಭಾರತ ಸರ್ಕಾರದ ಕಾರ್ಯಕ್ರಮ. |
| 2) ಗ್ರಾಮೀಣ ಭಂಡಾರ ಯೋಜನೆ | 2007ರ ಮಾರ್ಚ್ 31 | ಗ್ರಾಮೀಣ ಪ್ರದೇಶಗಳಲ್ಲಿ ವೈಜ್ಞಾನಿಕವಾಗಿ ಕೃಷಿ ಉತ್ಪನ್ನಗಳಿಗೆ ದಾಸ್ತಾನು ಸೌಲಭ್ಯ |
| 3) ಇಂದಿರಾ ಆವಾಸ್ ಯೋಜನೆ (IAY) (ಪ್ರಸ್ತುತ ಪ್ರಧಾನಮಂತ್ರಿ ಗ್ರಾಮೀಣ ಆವಾಸ್ ಯೋಜನೆಯಾಗಿ 2015 ಜೂನ್ 25 ರಂದು ಮರು ನಾಮಕರಣ) | 1985 | ಗ್ರಾಮೀಣ ಕಡು ಬಡವರಿಗೆ ವಸತಿ ನಿರ್ಮಿಸಿಕೊಳ್ಳಲು ಹಣಕಾಸು ನೆರವು. ಈ ಯೋಜನೆಯಡಿಯಲ್ಲಿ 2022 ರ ವೇಳೆಗೆ ಸರ್ವರಿಗೂ ಸೂರು (Housing for All) ಒದಗಿಸುವ ಗುರಿ ಹೊಂದಿದೆ. 2017 ರಲ್ಲಿ ಈ ಯೋಜನೆಯಡಿ ಮೊದಲ ಬಾರಿಗೆ ವಸತಿ ಒದಗಿಸಲಾಗಿದೆ. |
| 4) ಸಮಗ್ರ ಶಿಶು ಅಭಿವೃದ್ಧಿ ಯೋಜನೆ (ICDS) | 1975 ಅಕ್ಟೋಬರ್ 2 | 6 ವರ್ಷದ ಒಳಗಿನ ಮಕ್ಕಳ ಅಪೌಷ್ಟಿಕ ಹಾಗೂ ಆರೋಗ್ಯ ಸಮಸ್ಯೆ ನಿವಾರಣೆ, ಶಾಲಾ ಪೂರ್ವ ಶಿಕ್ಷಣಕ್ಕೆ ಉತ್ತೇಜನ. |
| 5) ಜವಾಹರ್ ಗ್ರಾಮ ಸಮೃದ್ಧಿ ಯೋಜನಾ (JGSY) | 1999 ಏಪ್ರಿಲ್ 1 | ಗ್ರಾಮೀಣ ಭಾಗದ ರಸ್ತೆಯನ್ನು ಗ್ರಾಮದಿಂದ ಇತರೆ ವಿವಿಧ ಪ್ರದೇಶಗಳಿಗೆ ಜೋಡಿಸುವುದು. ಸೇರಿದಂತೆ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು. |
| 6) ಜನನಿ ಸುರಕ್ಷಾ ಯೋಜನೆ (JSY) | 2005 ಏಪ್ರಿಲ್ 12 | ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನದಡಿಯಲ್ಲಿ ಮಾತೃತ್ವ ಭದ್ರತಾ ಕಾರ್ಯಕ್ರಮವಾಗಿದೆ. ಗರ್ಭಿಣಿ ಮಹಿಳೆಯರಿಗೆ ನಗದು ನೆರವು, ಶೇ 100 ರಷ್ಟು ಕೇಂದ್ರ ಸರ್ಕಾರದ ಪ್ರಾಯೋಜಿತ ಕಾರ್ಯಕ್ರಮವಾಗಿದೆ. |
| 7) ಕಸ್ತೂರಿ ಗಾಂಧಿ ಬಾಲಿಕ ವಿದ್ಯಾಲಯ (KGBV) | 2004 ಆಗಸ್ಟ್ | SC, ST, OBC & ಅಲ್ಪಸಂಖ್ಯಾತ ವರ್ಗದ ಹೆಣ್ಣು ಮಕ್ಕಳಿಗೆ 6ರಿಂದ 8ನೇ ತರಗತಿವರೆಗೆ ಉಚಿತ ಶಿಕ್ಷಣ |
| 8) ಅಟಲ್ ಪಿಂಚಣಿ ಯೋಜನೆ (APY) | 2015ರ ಮೇ 9 | ಸಾಮಾಜಿಕ ಭದ್ರತೆ ಕಾರ್ಯಕ್ರಮ, ಅಸಂಘಟಿತ ವಲಯದ ಪಿಂಚಣಿದಾರರಿಗೆ ಸಂಬಂಧಿಸಿದ್ದು, ನರೇಂದ್ರ ಮೋದಿ ಅವರಿಂದ ಕೋಲ್ಕತ್ತದಲ್ಲಿ ಉದ್ಘಾಟನೆಯಾಗಿತ್ತು. |
| 9) ಪ್ರಧಾನ ಮಂತ್ರಿ ಸುರಕ್ಷ ಭಿಮಾ ಯೋಜನೆ (PMSPY) | 2015 ಮೇ 9 | ವಾರ್ಷಿಕ ರೂ 12 ಪ್ರೀಮಿಯಂ ಹಣದಿಂದ 18 ರಿಂದ 70 ವರ್ಷದ ಜನರಿಗೆ ಆಕಸ್ಮಿಕ ಅಪಘಾತ ವಿಮಾ ಸೌಲಭ್ಯ. ಇದು ಜೂನ್ 1 ರಿಂದ ಮೇ 31 ರವರೆಗಿನ ವಿಮಾ ಅವಧಿಗೆ ಅನ್ವಯ. ಒಟ್ಟು ವಿಮಾ ಮೊತ್ತ 2 ಲಕ್ಷ. |
| 10) ಪ್ರಧಾನ ಮಂತ್ರಿ ಜೀವನಜ್ಯೋತಿ ಭಿಮಾ ಯೋಜನೆ (PMJJBY) | 2015 ಮೇ 9 | ವಾರ್ಷಿಕ 330 ರೂನಿಂದ 2 ಲಕ್ಷದವರೆಗೆ ಜೀವ ವಿಮಾ ಸೌಲಭ್ಯ. 18 ರಿಂದ 50 ವರ್ಷದ ವಯೋಮಾನದವರಿಗೆ ಅನ್ವಯ. & ಪಾಲಿಸಿದಾರರು ತಮ್ಮ ಬ್ಯಾಂಕ್ ಉಳಿತಾಯ ಖಾತೆಗೆ ಈ ಯೋಜನೆಯನ್ನು ಸಂಪರ್ಕಿಸಿಕೊಳ್ಳಬಹುದು. ಒಟ್ಟು ವಿಮಾ ಮೊತ್ತ 2 ಲಕ್ಷ. |
| 11) ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆ (PMGSY) | 2000 ಡಿಸೆಂಬರ್ 25 | ರಸ್ತೆ ಸಂಪರ್ಕ ಹೊಂದಿಲ್ಲದ ಗ್ರಾಮೀಣ ಪ್ರದೇಶಗಳಿಗೆ ಸರ್ವಋತು ರಸ್ತೆಗಳು & ಕಚ್ಚಾ ರಸ್ತೆಗಳನ್ನು ಪಕ್ಕಾ ರಸ್ತೆಗಳನ್ನಾಗಿ ಮಾರ್ಪಡಿಸುವ ರಾಷ್ಟ್ರವ್ಯಾಪಿ ಕೇಂದ್ರ ಸರ್ಕಾರದ ಕಾರ್ಯಕ್ರಮ. ಇದನ್ನು ಎ.ಬಿ. ವಾಜಪೇಯಿ ಅವರು ಜಾರಿಗೆ ತಂದರು. |
| 12) ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ (RKVY) | 2007 ಆಗಸ್ಟ್ 1 | 11ನೇ ಪಂಚ ವಾರ್ಷಿಕ ಯೋಜನೆ ವೇಳೆಗೆ ವಾರ್ಷಿಕ ಶೇ4 ರ ದರದಲ್ಲಿ ಕೃಷಿ ಬೆಳವಣಿಗೆ, ಕೃಷಿ ಕ್ಷೇತ್ರದಲ್ಲಿ ಸಾರ್ವಜನಿಕ ಹೂಡಿಕೆಯನ್ನು ವೃದ್ಧಿಸುವುದಕ್ಕಾಗಿ ರೂಪಿತವಾದ ರಾಜ್ಯ ಯೋಜನೆಗಳಿಗೆ ಹೆಚ್ಚುವರಿ ನೆರವು ನೀಡುವ ಕೇಂದ್ರ ಸರ್ಕಾರದ ಕಾರ್ಯಕ್ರಮವಾಗಿದೆ. |

| | | |
|---|---|---|
| 13) ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆ (RSBY). | 2008 ಏಪ್ರಿಲ್ 1 | ಅಸಂಘಟಿತ ಕಾರ್ಮಿಕರಿಗೆ & ಬಿ.ಪಿ.ಎಲ್ ಕುಟುಂಬದ ಜನರಿಗೆ ನಗದು … ಚಿಕಿತ್ಸೆ & ಆರೋಗ್ಯ ವಿಮೆ ನೀಡುವ ಕಾರ್ಯಕ್ರಮ. ಇದನ್ನು 25 ರಾಜ್ಯ… ಕೇಂದ್ರ ಆರೋಗ್ಯ & ಕುಟುಂಬ ಕಲ್ಯಾಣ ಸಚಿವಾಲಯದಡಿಯಲ್ಲಿ ಜಾರಿಗೆ ತಂ… |
| 14) ಸಬಲ/ರಾಜೀವ್ ಗಾಂಧಿ ಯೋಜನೆ (SABALA) | 2011 | ಐ.ಸಿ.ಡಿ.ಎಸ್. ಯೋಜನೆಯಡಿಯಲ್ಲಿ ಮಹಿಳೆ & ಮಕ್ಕಳ ಕ… ಸಚಿವಾಲಯದಡಿಯಲ್ಲಿ 11ರಿಂದ 18 ವರ್ಷದ ಒಳಗಿನ ಹೆಣ್ಣು ಮ… ಕೌಶಲಾಭಿವೃದ್ಧಿ, ಜೀವನ ನಿರ್ವಹಣೆ & ಶಿಕ್ಷಣಕ್ಕೆ ಸಂಬಂಧಿಸಿದ ತರ… ನೀಡುವ ಯೋಜನೆ. |
| 15) ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (SGRY) | 2001 ಸೆಪ್ಟೆಂಬರ್ 25 | ಗ್ರಾಮೀಣ ಸ್ವತ್ತು ನಿರ್ಮಾಣದ ಮೂಲಕ ಆಹಾರ ಭದ್ರತೆ, ಕೂಲಿ ಉದ್ಯೋ… ಪಂಚಾಯತ್ ರಾಜ್ ಸಂಸ್ಥೆಗಳ ಮೂಲಕ ಒದಗಿಸುವುದು. ಇದನ್ನು … ಉದ್ಯೋಗ ಭರವಸೆ ಯೋಜನೆ & ಜವಾಹರ್ ಗ್ರಾಮ ಸಮೃದ್ಧಿ ಯೋ… ವಿಲೀನದೊಂದಿಗೆ ಜಾರಿಗೆ ತರಲಾಯಿತು. |
| 16) ಸ್ವಾಭಿಮಾನ್ | 2011 ಫೆಬ್ರವರಿ 15 | ಗ್ರಾಮೀಣ ಪ್ರದೇಶಗಳಲ್ಲಿ ಬ್ಯಾಂಕಿಂಗ್ ಸೌಲಭ್ಯ ವಿಸ್ತರಣೆ ಮಾಡುವ ಉದ್ದೇಶ… ಶ್ರೀಮತಿ ಸೋನಿಯಾ ಗಾಂಧಿ & ಪ್ರಣಬ್ ಮುಖರ್ಜಿ ಉದ್ಘಾಟಿಸಿದ ಕಾರ್ಯಕ್ರ… (ಪ್ರಸ್ತುತ ಪ್ರಧಾನ ಮಂತ್ರಿ ಜನಧನ್ ಯೋಜನೆಯೊಂದಿಗೆ ವಿಲೀನ ಗೊಂಡಿ… |
| 17) ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (SGSY) | 1999 ಏಪ್ರಿಲ್ 1 | ಸ್ವಯಂ ಸಹಕಾರ ಸಂಘಗಳ ಸ್ಥಾಪನೆಗೆ ಬ್ಯಾಂಕ್ ಸಾಲ & ಸರ್ಕಾರ ಅನು… ನೀಡಿಕೆ ಮೂಲಕ ಗ್ರಾಮೀಣ & ನಗರ ಪ್ರದೇಶಗಳಲ್ಲಿ ಸ್ವ–ಉದ್ಯೋಗ ಸೃಷ್ಟಿ ಮಾಡು… ಉದ್ದೇಶದಿಂದ ವಾಜಪೇಯಿ ನೇತೃತ್ವದ ಸರ್ಕಾರ ರೂಪಿಸಿದ ಕಾರ್ಯಕ್ರ… |
| 18) ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನ (NRLM) | 2011 ಜೂನ್ | SHGS ಗಳ ಮೂಲಕ ಗ್ರಾಮೀಣ ಬಡವರಿಗೆ ಸ್ವ–ಉದ್ಯೋಗ ಕಲ್ಪಿ… ಗ್ರಾಮೀಣಾಭಿವೃದ್ಧಿ ಸಚಿವಾಲಯದ ಯೋಜನೆಯಾಗಿದೆ. 2015 ಸೆಪ್ಟೆಂಬರ್ … ರಂದು ದೀನ್ ದಯಾಳ್ ಅಂತ್ಯೋದಯ ಯೋಜನೆಯಾಗಿ ಮರು ನಾಮಕ… |
| 19) ರಾಷ್ಟ್ರೀಯ ನಗರ ಜೀವನೋಪಾಯ ಅಭಿಯಾನ (NULM) | 2013 ಸೆಪ್ಟೆಂಬರ್ 24 | ಹಿಂದಿನ ಸ್ವರ್ಣ ಶಹರೀ ರೋಜ್‌ಗಾರ್ ಯೋಜನೆಯನ್ನು ಮರುರ… 1 ಲಕ್ಷ ಅಥವಾ ಅದಕ್ಕಿಂತ ಹೆಚ್ಚಿನ ಜನಸಂಖ್ಯೆಯುಳ್ಳ ನಗರ ಪ್ರದೇಶ… ಸ್ವ ಉದ್ಯೋಗ & ಕೂಲಿ ಉದ್ಯೋಗ ಮೂಲಕ ನಗರ ಪ್ರದೇಶದ ಬಡ… ನಿಯಂತ್ರಿಸುವುದು. ಕೇಂದ್ರ ಸರ್ಕಾರ 2016–17 ರಲ್ಲಿ ದೀನ್ ದಯಾ… ಅಂತ್ಯೋದಯ ಯೋಜನೆಯಾಗಿ ಮರುನಾಮಕರಣ ಮಾಡಲಾಗಿದೆ. |
| 20) ಅಮೃತ್ ಯೋಜನೆ (Atal Mission for Rejuvenation and Urban Transformation ) | 2015 ಜೂನ್ 24 | ನಗರ ಯೋಜನೆ & ಅಭಿವೃದ್ಧಿ ಮೂಲಕ ಉತ್ತಮ ನಗರ ಜೀವನ ವ… ಹೆಚ್ಚಳ ಹಾಗೂ ಆರ್ಥಿಕ ಬೆಳವಣಿಗೆಗೆ ಪೂರಕವಾದ ಸಾರ್ವಜನಿಕ ಖಾ… ಸಹಭಾಗಿತ್ವದ ಯೋಜನೆಯಾಗಿದೆ. ರಾಜಸ್ಥಾನ ರಾಜ್ಯ ಈ ಯೋಜನೆಯ ಕ್ರಿ… ಯೋಜನೆ ರೂಪಿಸಿದ ಮೊಟ್ಟ ಮೊದಲ ರಾಜ್ಯ ಎಂಬ ಕೀರ್ತಿಗೆ ಪಾತ್ರವಾಗಿದೆ. |
| 21) ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) | 2015 ಜೂನ್ 25 | 2015 ರಿಂದ 2022 ರ ಅವಧಿಯ ಯೋಜನೆಯಾಗಿದ್ದು, ನಗರ ಪ್ರದೇಶಗಳ… ಬಡಜನರಿಗೆ ವಸತಿ ನಿರ್ಮಿಸುವ ಯೋಜನೆ. ಹಿಂದಿನ ಸರ್ವರಿಗೂ ಸೂ… ಯೋಜನೆ ಇದರಲ್ಲಿ ವಿಲೀನಗೊಂಡಿದೆ. |
| 22) ಅಂತ್ಯೋದಯ ಅನ್ನ ಯೋಜನೆ (AAY) | 2000 ಡಿಸೆಂಬರ್ 25 | TPDS ಮೂಲಕ ಬಡತನ ರೇಖೆಗಿಂತ ಅತ್ಯಂತ ಕೆಳಗಿರುವ ಜನರಿಗೆ ಪಡಿ… ಚೀಟಿ ವಿತರಿಸುವುದರ ಮೂಲಕ ಆಹಾರ ಪೂರೈಕೆ. ತಲಾ 35 ಕೆ.ಜಿ. ಅಕ್ಕಿ … ಗೋಧಿಯನ್ನು ಕ್ರಮವಾಗಿ 3 & 2 ರೂ. ಪ್ರತಿ ಕೆ.ಜಿ.ಗೆ ಒದಗಿಸುವ ಕಾರ್ಯಕ್ರ… |
| 23) ಪ್ರಧಾನಮಂತ್ರಿ ಕೌಶಲ ವಿಕಾಸ ಯೋಜನೆ (PMKVY) | 2015 ಜುಲೈ 15 | ಕೌಶಲ್ಯಾಭಿವೃದ್ಧಿ & ಉದ್ಯಮಗಾರಿಕೆ ಸಚಿವಾಲಯದ ವತಿಯಿಂದ 202… ವರ್ಷದೊಳಗೆ 40 ಕೋಟಿ ಕೌಶಲ್ಯವಂತ ಯುವ ಪೀಳಿಗೆ ಸೃಷ್ಟಿ ಮಾಡಿ … ಉದ್ಯೋಗ ಕೈಗೊಳ್ಳಲು ಪ್ರೇರಣೆ ನೀಡುವ ಕಾರ್ಯಕ್ರಮವಾಗಿದೆ. |
| 24) ಪ್ರಧಾನ ಮಂತ್ರಿ ಉಜ್ವಲ ಯೋಜನೆ (PMUY) | 2016 ಮೇ 1 | BPL–ಕುಟುಂಬದ ಮಹಿಳೆಯರಿಗೆ ಉಚಿತ LPG ಸಂಪರ್ಕ ಕಲ್ಪಿಸ… ಸಾಮಾಜಿಕ ಕಲ್ಯಾಣ ಯೋಜನೆಯಾಗಿದ್ದು, ಉ. ಪ್ರದೇಶದ ಬಾಲಿಯಾ ಎಂ… ಸ್ಥಳದಲ್ಲಿ ಮೋದಿ ಅವರಿಂದ ಉದ್ಘಾಟನೆಗೊಂಡಿತ್ತು. |
| 25) ರಾಷ್ಟ್ರೀಯ ಆಹಾರ ಭದ್ರತಾ ಮಸೂದೆ (NFSM) | 2007 | ಕೇಂದ್ರ ಸರ್ಕಾರದ ಪ್ರಾಯೋಜಕತ್ವದಲ್ಲಿ ಮುಂದಿನ 5 ವರ್ಷಗಳಲ್ಲಿ ಗೋಧಿ, ಭತ್ತ, ದ್ವಿದಳ ಧಾನ್ಯ ಬೆಳೆಗಳ ಉತ್ಪಾದನೆ & ಉತ್ಪಾದಕತೆ ಹೆಚ್ಚಳ ಮಾಡಿ ರಾಷ್ಟ್ರ… ಆಹಾರ ಭದ್ರತೆಯನ್ನು ಸ್ಥಾಪಿಸುವ ಉದ್ದೇಶ ಹೊಂದಿತ್ತು. |

| | | |
|---|---|---|
| 26) ಸಮುದಾಯ ಅಭಿವೃದ್ಧಿ ಕಾರ್ಯಕ್ರಮ (CDP) | 1952 ಅಕ್ಟೋಬರ್ 2 | ಜನರ ಸಹಭಾಗಿತ್ವದಿಂದ ಗ್ರಾಮೀಣ ಪ್ರದೇಶಾಭಿವೃದ್ಧಿಗಾಗಿ ರೂಪಿತವಾದ ಸ್ವಾತಂತ್ರ್ಯಾನಂತರದ ಪ್ರಮುಖ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮವಾಗಿದೆ. ಇದು 55 ಯೋಜನೆಗಳನ್ನು ಕೃಷಿ, ಗ್ರಾಮೀಣ ಕೈಗಾರಿಕೆ, ಶಿಕ್ಷಣ, ವಸತಿ, ಪಶುಸಂಗೋಪನೆ ಮೊದಲಾದ ಕ್ಷೇತ್ರಗಳಿಗೆ ಸಂಬಂಧಿಸಿದೆ. |
| 27) ರಾಷ್ಟ್ರೀಯ ವಿಸ್ತರಣಾ ಸೇವೆ (NES) | 1953 ಅಕ್ಟೋಬರ್ 2 | ಉತ್ಪಾದಕತೆ ಹೆಚ್ಚಳಕ್ಕೆ ವೈಜ್ಞಾನಿಕ & ತಾಂತ್ರಿಕ ಸಹಾಯ ನೀಡುವ ಉದ್ದೇಶದಿಂದ ಜಾರಿಗೆ ತರಲಾಗಿದೆ. |
| 28) ಸಾಂದ್ರ ಕೃಷಿ ಅಭಿವೃದ್ಧಿ ಕಾರ್ಯಕ್ರಮ (IADP) | 1960–61 | ಉತ್ತಮ ಬೇಸಾಯ ಪದ್ಧತಿ ಅಳವಡಿಕೆಗಾಗಿ 7 ರಾಜ್ಯಗಳ 7 ಜಿಲ್ಲೆಗಳಲ್ಲಿ ರೂಪಿತವಾದ ಪ್ಯಾಕೇಜು ಕಾರ್ಯಕ್ರಮ. ಬಿತ್ತನೆ ಬೀಜ & ರಸಗೊಬ್ಬರವನ್ನು ರೈತರಿಗೆ ಕೊಳ್ಳಲು ಅಗತ್ಯವಿರುವ ಸಾಲ ನೀಡಿಕೆ ಕಾರ್ಯಕ್ರಮವಾಗಿತ್ತು. |
| 29) ಅಧಿಕ ಇಳುವರಿ ವೈವಿಧ್ಯತಾ ಕಾರ್ಯಕ್ರಮ (HYVP) | 1966–67 | ಆರ್ಥಿಕ ಕೃಷಿ ಉತ್ಪಾದನೆ ವೈವಿಧ್ಯಮಯ ಸುಧಾರಿತ ತಂತ್ರ ಬಳಕೆ ಮೂಲಕ 1970–71 ರ ವೇಳೆಗೆ ಆಹಾರ ಧಾನ್ಯಗಳ ಉತ್ಪಾದನೆಯಲ್ಲಿ ಸ್ವಾವಲಂಬನೆ ಸಾಧಿಸುವ ಯೋಜನೆ. |
| 30) ಅಗ್ರ ಬ್ಯಾಂಕ್ ಯೋಜನೆ (ನಾರಿಮನ್ ಸಮಿತಿ & ಗಾಡ್ಗಿಲ್ ಸಮಿತಿ) | 1969 | ಸಾರ್ವಜನಿಕ ವಲಯ ಬ್ಯಾಂಕ್‌ಗಳಿಂದ ಗ್ರಾಮೀಣ ಪ್ರದೇಶಗಳಲ್ಲಿ ಶಾಖಾ ವಿಸ್ತರಣೆ & ಬ್ಯಾಂಕೋದ್ಯಮ ಸೌಲಭ್ಯ ವೃದ್ಧಿಸುವ ವಲಯವಾರು ಯೋಜನೆ. |
| 31) ಕನಿಷ್ಠ ಅವಶ್ಯಕತೆ ಕಾರ್ಯಕ್ರಮ | 1974–75 | ಗ್ರಾಮೀಣ ಆರೋಗ್ಯ ನೀರು, ಪೂರೈಕೆ, ರಸ್ತೆ, ವಸತಿ, ಪೂರೈಕೆ ಮಾಡುವ ಉದ್ದೇಶದಿಂದ 5ನೇ ಪಂಚವಾರ್ಷಿಕ ಯೋಜನೆಯಲ್ಲಿ ಜಾರಿಗೆ ತಂದ ಕಾರ್ಯಕ್ರಮವಾಗಿದೆ. |
| 32) ಕೂಲಿಗಾಗಿ ಕಾಳು ಯೋಜನೆ | 1977–78 | ಗ್ರಾಮೀಣ ಪ್ರದೇಶದ ನೀರು, ಪೂರೈಕೆ, ರಸ್ತೆ, ವಸತಿ, ವಿದ್ಯುತ್ ಪೂರೈಕೆ ಮುಖ್ಯ ಉದ್ದೇಶವಾಗಿತ್ತು. ಮುಂದೆ ರಾಷ್ಟ್ರೀಯ ಕೂಲಿಗಾಗಿ ಕಾಳು ಯೋಜನೆಯಾಗಿ ದೇಶಾದ್ಯಂತ ಅತ್ಯಂತ ಹಿಂದುಳಿದ 150 ಜಿಲ್ಲೆಗಳಲ್ಲಿ ಅನುಷ್ಠಾನಕ್ಕೆ ಬಂದಿತು. & ಮನರೇಗ ಕಾರ್ಯಕ್ರಮದ ಒಂದು ಭಾಗವಾಗಿ ಪ್ರಸ್ತುತ ಚಾಲ್ತಿಯಲ್ಲಿದೆ. |
| 33) ಸ್ವಯಂ ಉದ್ಯೋಗಕ್ಕೆ ಗ್ರಾಮೀಣ ಯುವಜನರ ತರಬೇತಿ ಕಾರ್ಯಕ್ರಮ TRYSEM (Training of rural youth for self employment) | 1979 ಆಗಸ್ಟ್ 15 | ಸ್ವಯಂ ಉದ್ಯೋಗ ಕೈಗೊಳ್ಳುವ 18 ರಿಂದ 35 ವರ್ಷ ಯುವ ಜನತೆಗೆ ತಾಂತ್ರಿಕ ಪರಿಣತಿ & ಕೌಶಲ್ಯ ಬೆಳವಣಿಗೆ ಮೂಲಕ ಸ್ವಯಂ ಉದ್ಯೋಗ ಕೈಗೊಳ್ಳುವಂತೆ ಪ್ರೋತ್ಸಾಹಿಸುವುದು. |
| 34) ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ (IRDP) | 1980 ಅಕ್ಟೋಬರ್ 2 | ಗ್ರಾಮೀಣ ಬಡಜನರ ಸರ್ವಾಂಗೀಣ ಅಭಿವೃದ್ಧಿ. ಇದು ದೇಶದ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳಲ್ಲಿ ಪ್ರಮುಖವಾದ ಯೋಜನೆಯಾಗಿದ್ದು, ಹಣಕಾಸು ಸಂಸ್ಥೆಗಳ ಮೂಲಕ ಆರ್ಥಿಕತೆಯ ವಿವಿಧ ವಲಯಗಳಲ್ಲಿ ಕೇಂದ್ರ & ರಾಜ್ಯ ಸರ್ಕಾರಗಳು 50:50 ರ ಅನುಪಾತದಲ್ಲಿ ಪ್ರಾಯೋಜಿಸಿದ ಕಾರ್ಯಕ್ರಮ. ಇದು 1999 ಏಪ್ರಿಲ್ 1 ರಂದು SGSY ಯೋಜನೆಯೊಂದಿಗೆ ವಿಲೀನಗೊಂಡಿದೆ. |
| 35) ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ (NREP) | 1980 ಅಕ್ಟೋಬರ್ | ಗ್ರಾಮೀಣ & ಅರೆ ನಗರ ಪ್ರದೇಶಗಳ ಅವಿದ್ಯಾವಂತ ಜನರಿಗೆ ಹೆಚ್ಚುವರಿ ಉದ್ಯೋಗಾವಕಾಶ. ಸಮುದಾಯ ಆಸ್ತಿ ನಿರ್ಮಾಣ, ಪೌಷ್ಟಿಕತೆ ಸುಧಾರಣೆ, ಜೀವನದ ಗುಣಮಟ್ಟ ಅಭಿವೃದ್ಧಿ ಮುಖ್ಯ ಉದ್ದೇಶಗಳಾಗಿದ್ದು, ಕೂಲಿ & ಸಾಮಗ್ರಿಗಳ ವೆಚ್ಚ ಶೇ 50 ರಷ್ಟು. |

| | | |
|---|---|---|
| 36) ಗ್ರಾಮೀಣ ಮಹಿಳೆ & ಮಕ್ಕಳ ಅಭಿವೃದ್ಧಿ ಕಾರ್ಯಕ್ರಮ (DWACRA) | ಸೆಪ್ಟೆಂಬರ್ 1982 | ಬಡತನ ರೇಖೆಯ ಕೆಳಗಿರುವ ಅಂದರೆ ವಾರ್ಷಿಕ 4,800 ಆದಾಯ ಕ್ಕಿಂತ ಕಡಿಮೆ ಇರುವ ಗ್ರಾಮೀಣ ಮಹಿಳೆಯರಿಗೆ ಸೂಕ್ತ ಕೌಶಲ್ಯ ಬೆಳವಣಿಗೆಯೊಂದಿಗೆ ಉದ್ಯೋಗವಕಾಶ ಕಲ್ಪಿಸುವ ಮೂಲಕ ಆದಾಯ ವೃದ್ಧಿಸುವ ಮುಖ್ಯ ಉದ್ದೇಶ |
| 37) ಗ್ರಾಮೀಣ ಭೂ ರಹಿತ ಉದ್ಯೋಗ ಕಾರ್ಯಕ್ರಮ (RLEGP) | 1983 ಆಗಸ್ಟ್ 15 | ಪ್ರತಿ ಭೂ ರಹಿತ ಕುಟುಂಬದ ಒಬ್ಬ ವ್ಯಕ್ತಿಗೆ ವರ್ಷದಲ್ಲಿ ಕನಿಷ್ಠ 100 ದಿನ ಉದ್ಯೋಗ ಭರವಸೆ ನೀಡುವ ಉದ್ದೇಶದಿಂದ 6ನೇ ಪಂಚವಾರ್ಷಿಕ ಯೋಜನೆಯಲ್ಲಿ ಇಂದಿರಾ ಗಾಂಧಿ ಅವರ ನೇತೃತ್ವದ ಕೇಂದ್ರ ಸರ್ಕಾರ ರೂಪಿಸಿದ ಯೋಜನೆ ಇದು 1989 ರ ಜೆ.ಆರ್.ವೈ ಯೋಜನೆಯೊಂದಿಗೆ ವಿಲೀನ |
| 38) ಜನರಕ್ಷೆಯ & ಗ್ರಾಮೀಣ ತಂತ್ರಜ್ಞಾನ ಉನ್ನತ ಸಮಿತಿCAPART | 1986 ಸೆಪ್ಟೆಂಬರ್ 1 | ಸುಸ್ಥಿರ ಗ್ರಾಮೀಣ ಅಭಿವೃದ್ಧಿಗಾಗಿ ನೆರವು ನೀಡುವ ಉದ್ದೇಶದಿಂದ ಸರ್ಕಾರ & ಸ್ವ ಸಹಾಯ ಸಂಘಟನೆಗಳ ಸಹಭಾಗಿತ್ವದಲ್ಲಿ ರೂಪಿತವಾಯಿತು. |
| 39) ಜವಹಾರ್ ರೋಜ್‌ಗಾರ್ ಯೋಜನೆ (JRY) | 1989 ಏಪ್ರಿಲ್ 1 | ಗ್ರಾಮೀಣ ಪ್ರದೇಶದ ಜನರಿಗೆ 90 ರಿಂದ 100 ದಿನಗಳ ಉದ್ಯೋಗವಕಾಶ ಕಲ್ಪಿಸುವ ಉದ್ದೇಶದಿಂದ NREP & RLEGP ಗಳ ವಿಲೀನದೊಂದಿಗೆ 7ನೇ ಪಂ. ಯೋಜನೆಯ ಅಂತ್ಯದಲ್ಲಿ ಹಿಂದುಳಿದ ಜಿಲ್ಲೆಗಳಲ್ಲಿ ಕೇಂದ್ರ & ರಾಜ್ಯ ಸರ್ಕಾರಗಳ 80:20 ರ ಅನುಪಾತದ ನೆರವಿನಿಂದ ಜಾರಿಗೆ ತಂದ ಕಾರ್ಯಕ್ರಮ. 1999 ಏಪ್ರಿಲ್ 1 ರಂದು ಈ ಯೋಜನೆ JGSY ಯೋಜನೆಯೊಂದಿಗೆ ವಿಲೀನಗೊಂಡಿದ್ದು, 2001 ಸೆಪ್ಟೆಂಬರ್ 25 ರಂದು SGRY ನೊಂದಿಗೆ ವಿಲೀನಗೊಂಡವು. |
| 40) ನೆಹರೂ ರೋಜ್‌ಗಾರ್ ಯೋಜನೆ (NRY) | 1989 ಅಕ್ಟೋಬರ್ | ನಗರ ಪ್ರದೇಶಗಳಲ್ಲಿ ಉದ್ಯೋಗ ಭರವಸೆ ನೀಡುವ ಉದ್ದೇಶದಿಂದ 7ನೇ ಪಂ. ಯೋಜನೆಯಲ್ಲಿ ಜಾರಿಗೆ ತಂದಿದ್ದು, SUME, SUWE, SHASU ಕಾರ್ಯಕ್ರಮಗಳ ವಿಲೀನ ಯೋಜನೆಯಾಗಿತ್ತು. 1997 ಡಿಸೆಂಬರ್ 1 ರಂದು SJSRY ನೊಂದಿಗೆ ವಿಲೀನಗೊಂಡಿತು. (ಹಾಶಿಂ ಸಮಿತಿ ನಗರ ಪ್ರದೇಶದ ಬಡತನ ನಿವಾರಣೆ & ಉದ್ಯೋಗ ಸೃಷ್ಟಿ ಕಾರ್ಯಕ್ರಮಗಳ ಪರಿಶೀಲನಾ ಸಮಿತಿ ಶಿಫಾರಸ್ಸಿನ ಮೇರೆಗೆ) |
| 41) ಪ್ರಧಾನ ಮಂತ್ರಿ ರೋಜ್‌ಗಾರ್ ಯೋಜನೆ (PMRY) | 1993 ಅಕ್ಟೋಬರ್ 2 | ವಿದ್ಯಾವಂತ ನಿರುದ್ಯೋಗಿಗಳಿಗೆ ಸ್ವ–ಉದ್ಯೋಗ ಆರಂಭಿಸಲು ನೆರವು ನೀಡಿಕೆ ಉದ್ದೇಶದಿಂದ ರೂಪಿಸಿದ ಯೋಜನೆ. |
| 42) ಉದ್ಯೋಗ ಭರವಸೆ ಯೋಜನೆ (EAS) | 1993 ಅಕ್ಟೋಬರ್ 2 | ಭಾರತದ ಗ್ರಾಮೀಣ ಪ್ರದೇಶ, ಬುಡಕಟ್ಟು, ಗುಡ್ಡಗಾಡು, ಬರಪೀಡಿತ ಪ್ರದೇಶಗಳ ಜನರಿಗೆ ಉದ್ಯೋಗ ಭರವಸೆ ನೀಡುವ ಯೋಜನೆ. ಕೇಂದ್ರ & ರಾಜ್ಯ ಸರ್ಕಾರಗಳ 75:25 ರ ಅನುಪಾತದಲ್ಲಿ ರೂಪಿಸಿದ ಯೋಜನೆಯಾಗಿದೆ |
| 43) ಸಂಸತ್ ಸದಸ್ಯರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆ (MAPLAD`s) | 1993 ಡಿಸೆಂಬರ್ 23 | ಸಂಸತ್ ಸದಸ್ಯರಿಗೆ ಪ್ರತಿ ಕ್ಷೇತ್ರ ಅಭಿವೃದ್ಧಿಗೆ ಪ್ರಸ್ತುತ ವಾರ್ಷಿಕ 5 ಕೋಟಿ ಹಣ ಮಂಜೂರು ಮಾಡುತ್ತದೆ. ಒಬ್ಬ ಸಂಸತ್ ಸದಸ್ಯ – ಒಂದು ಯೋಜನೆ ತತ್ವದ ಮೇಲೆ ಅನುಷ್ಠಾನಕ್ಕೆ ಬಂದಿದೆ |
| 44) ರಾಷ್ಟ್ರೀಯ ಸಾಮಾಜಿಕ ನೆರವು ಕಾರ್ಯಕ್ರಮ (NSAP) | 1995 ಆಗಸ್ಟ್ 15 | ಬಡತನ ರೇಖೆಗಿಂತ ಕೆಳಗಿರುವ ಜನರಿಗೆ ಅಂದರೆ ವಿಧವೆ, ಅಂಗವಿಕಲರು, ವಯಸ್ಕರಿಗೆ ಸಾಮಾಜಿಕ ಭದ್ರತೆ ಮೂಲಕ ನೆರವು ಒದಗಿಸುವ ಕೇಂದ್ರ ಪ್ರಾಯೋಜಿತ ಯೋಜನೆ. ಇದು NOAPS, NFBS, NMBS ಯೋಜನೆಗಳ ವಿಲೀನವಾಗಿದೆ |

| | | |
|---|---|---|
| 45) ಗಂಗಾ ಕಲ್ಯಾಣ ಯೋಜನೆ | 1997–98 | ವಾರ್ಷಿಕ 22,000 ಕ್ಕಿಂತ ಆದಾಯ ಕಡಿಮೆ ಇರುವ & 5 ಎಕರೆಗಿಂತ ಕಡಿಮೆ ಭೂಮಿ ಹೊಂದಿರುವ ಸೀಮಾಂತ ರೈತರಿಗೆ ಅಂತರ್ಜಲ ಶೋಧನೆ & ನೀರಾವರಿ ಅಭಿವೃದ್ಧಿಗೆ ಹಣಕಾಸು ನೆರವು ನೀಡುವ ಯೋಜನೆ. |
| 46) ಸ್ವರ್ಣ ಜಯಂತಿ ಶಹರಿರೋಜ್‌ಗಾರ್ ಯೋಜನೆ (SJSRY) | 1997 ಡಿಸೆಂಬರ್ 1 | ನಗರ ಪ್ರದೇಶದ ನಿರುದ್ಯೋಗಿ & ಅರೆ ಉದ್ಯೋಗಿ ಜನರಿಗೆ ಸ್ವ–ಉದ್ಯೋಗ ಕೈಗೊಳ್ಳಲು ನೆರವು ನೀಡುವ ಕೇಂದ್ರ ಪ್ರಾಯೋಜಿತ ಯೋಜನೆ. ಇದು ಕೇಂದ್ರ & ರಾಜ್ಯ ಸರ್ಕಾರಗಳ 75:25 ರ ಅನುಪಾತದ ನೆರವಿನಿಂದ ಜಾರಿಗೆ ಬಂದಿತು. |
| 47) ವಾಲ್ಮೀಕಿ–ಅಂಬೇಡ್ಕರ್ ಆವಾಸ್ ಯೋಜನೆ (VAMBAY) | 2001 ಡಿಸೆಂಬರ್ 2 | ನಗರ ಪ್ರದೇಶದ ಕೊಳಗೇರಿ ಪ್ರದೇಶದ ಬಡತನ ರೇಖೆಗಿಂತ ಕೆಳಗೆ ವಾಸಿಸುವ ಬಡಜನರಿಗೆ ವಸತಿ ಸೌಲಭ್ಯ, ಶೌಚಾಲಯ ಇನ್ನಿತರ ಮೂಲ ಸೌಕರ್ಯ ಕಲ್ಪಿಸುವ ಕಾರ್ಯಕ್ರಮ. ಕೇಂದ್ರ & ರಾಜ್ಯ ಸರ್ಕಾರಗಳು 50:50 ರ ಅನುಪಾತದ ನೆರವಿನೊಂದಿಗೆ ಜಾರಿಗೆ ಬಂದ ಕಾರ್ಯಕ್ರಮವಾಗಿದೆ. |
| 48) ಭಾರತ್ ನಿರ್ಮಾಣ ಕಾರ್ಯಕ್ರಮ (BNY) | 2005 ಡಿ.16 | ಗ್ರಾಮೀಣ ಪ್ರದೇಶಗಳಿಗೆ ಅಗತ್ಯ 6 ಮೂಲ ಸೌಕರ್ಯ ಕಲ್ಪಿಸುವ ಉದ್ದೇಶದಿಂದ 2005–09 ರ ಮೊದಲ ಹಂತದ ಅಭಿಯಾನದಲ್ಲಿ ಜಾರಿಗೆ ತಂದ ಕಾರ್ಯಕ್ರಮವಾಗಿದೆ. |
| 49) ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾರ್ಯಕ್ರಮ (MGNREGP) | 2005 ಸೆಪ್ಟೆಂಬರ್ 7 ಕಾಯ್ದೆ ಘೋಷಣೆ.<br><br>2006 ಫೆ. 2 ಉದ್ಘಾಟನೆ<br><br>2008 ಏಪ್ರಿಲ್1 ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಜಾರಿ | ಗ್ರಾಮೀಣ ಪ್ರದೇಶಗಳಲ್ಲಿ ಬಡ ಕುಟುಂಬದ ಒಬ್ಬರಿಗೆ ಕನಿಷ್ಠ 100 ದಿನ ಉದ್ಯೋಗಾವಕಾಶ ಒದಗಿಸುವ ಉದ್ದೇಶದಿಂದ ದೇಶದ 614 ಜಿಲ್ಲೆಗಳಲ್ಲಿ ಪ್ರಾರಂಭಿಕವಾಗಿ ರೂಪಿತವಾದ ಸಾಮಾಜಿಕ ಸಮನ್ವಯತೆಯ ಕಾರ್ಯಕ್ರಮ. ಮಹಾತ್ಮ ಗಾಂಧೀಜಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾರ್ಯಕ್ರಮ ಎಂದು 2009 ಅಕ್ಟೋಬರ್ 2 ರಂದು ಮರು ನಾಮಕರಣಗೊಂಡಿದೆ. 2017 ಜನವರಿಯಲ್ಲಿ ಹಿಮಾಚಲ ಪ್ರದೇಶದ ಕಾಂಗ್ರಾ ಜಿಲ್ಲೆ ದೇಶದಲ್ಲಿ ಮೊದಲ ಬಾರಿಗೆ ಈ ಯೋಜನೆಯಡಿಯಲ್ಲಿ ಎಲ್ಲಾ ರೀತಿಯ ಸ್ವತ್ತುಗಳನ್ನು ವಿದ್ಯುನ್ಮಾನವಾಗಿ, ಭೌಗೋಳಿಕ ದತ್ತಾಂಶಕ್ಕನುಗುಣವಾಗಿ ರೂಪಿಸಿದ ಕೀರ್ತಿಗೆ ಪಾತ್ರವಾಗಿದೆ. ಈ ಯೋಜನೆಯ ಮುಖ್ಯ ಉದ್ದೇಶ ಜಲಾನಯನ ನಿರ್ವಹಣೆ, ಗ್ರಾಮೀಣ ಮೂಲ ಸೌಕರ್ಯ ಅಭಿವೃದ್ಧಿ, ಪ್ರವಾಹ ನಿಯಂತ್ರಣ ಕ್ರಮಗಳು, ಸಮುದಾಯ ಮೂಲ ಸೌಕರ್ಯ ಸೃಷ್ಟಿ. 1991ರಲ್ಲಿ ಪಿ.ವಿ ನರಸಿಂಹ ರಾವ್ ಮೊದಲ ಬಾರಿ ಉದ್ಯೋಗ ಖಾತ್ರಿ ಕಾಯ್ದೆಯ ಬಗ್ಗೆ ಪ್ರಸ್ತಾವನೆ ಸಲ್ಲಿಸಿದ್ದರು. ಈ ಯೋಜನೆಯು ಗ್ರಾಮ ಪಂಚಾಯಿತಿ ಹಂತದಲ್ಲಿ ಜಾರಿಗೊಳ್ಳುತ್ತದೆ. |
| 50) ಪ್ರಧಾನ ಮಂತ್ರಿ ಉದ್ಯೋಗ ಸೃಷ್ಟಿ ಕಾರ್ಯಕ್ರಮ (PMEGP) | 2008 ಆಗಸ್ಟ್ 15 | PMRY, KVIC, REGP ವಿಲೀನದೊಂದಿಗೆ ಗ್ರಾಮೀಣ & ನಗರ ಪ್ರದೇಶಗಳಲ್ಲಿ ಉದ್ಯೋಗ ಸೃಷ್ಟಿ ಸಾಲ ಆಧಾರಿತ ಸಬ್ಸಿಡಿ ಯೋಜನೆಯಾಗಿದೆ. |
| 51) ನಿರ್ಮಲ ಗ್ರಾಮ ಪುರಸ್ಕಾರ | 2003 ಅಕ್ಟೋಬರ್ | ಗ್ರಾಮ ನೈರ್ಮಲ್ಯ & ಬಯಲು ಬಹಿರ್ದೆಸೆ ಮುಕ್ತ ಉದ್ದೇಶದಿಂದ ಭಾರತ ಸರ್ಕಾರ ಜಾರಿಗೆ ತಂದ ಉತ್ತೇಜಿತ ಕಾರ್ಯಕ್ರಮ. 2005 ರಲ್ಲಿ ಕರ್ನಾಟಕ ಸರ್ಕಾರ ಸ್ವಚ್ಛತಾ ಆಂದೋಲನವನ್ನು ರೂಪಿಸಿದ್ದು, 2007–08 ರಿಂದ ಸ್ವಚ್ಛತೆಯಲ್ಲಿ ಸಾಧನೆ ತೋರಿದ ಗ್ರಾಮಗಳಿಗೆ ಪ್ರಶಸ್ತಿ ನೀಡಲಾಗುತ್ತಿದೆ. |

# ನಿರುದ್ಯೋಗ (Unemployment)

ಭಾರತದ ಆರ್ಥಿಕತೆಯಲ್ಲಿ ಸ್ವಾತಂತ್ರ್ಯಾನಂತರ ವಿಫುಲವಾದ ಉದ್ಯೋಗಾವಕಾಶಗಳು ಸೃಷ್ಠಿಯಾಗುತ್ತಿದ್ದರೂ, ವಿವಿಧ ಆರ್ಥಿಕ ಬೆಳವಣಿಗೆ ಸಾಧ್ಯವಾದರೂ, ಮಿತಿಮೀರಿ ಬೆಳೆಯುತ್ತಿರುವ ಜನಸಂಖ್ಯೆಗನುಗುಣವಾಗಿ ಸಾಧ್ಯವಾಗದೇ ಇರುವುದರಿಂದ ಬಡತನದಂತೆಯೇ ನಿರುದ್ಯೋಗದ ಪರಿಸ್ಥಿತಿಯು ದೇಶದಲ್ಲಿ ಜ್ವಲಂತ ಸಮಸ್ಯೆಯಾಗಿ ಉಳಿದಿದೆ. ಪ್ರಾಥಮಿಕ ವಲಯವಾದ ಕೃಷಿ ಕ್ಷೇತ್ರದ ಉದ್ಯೋಗಾವಕಾಶಗಳು ನೈಸರ್ಗಿಕ ಪ್ರಕೋಪಗಳಿಂದ ಕಡಿಮೆಯಾಗಿ, ಮಾಧ್ಯಮಿಕ ವಲಯದಲ್ಲಿ ನಿರೀಕ್ಷಿತ ಬೆಳವಣಿಗೆಯಾಗದೇ, ಸೇವಾ ವಲಯದಲ್ಲಿ ಉದ್ಯೋಗಾವಕಾಶಗಳ ಸೃಷ್ಠಿ ವೃದ್ಧಿಯಾಗುತ್ತಿವೆ. ಆದರೆ ಅಂತಹ ಅವಕಾಶಗಳನ್ನು ಪಡೆಯುವ ಜ್ಞಾನ ಕೌಶಲ್ಯ ಅನುಭವಗಳ ಸಂಗ್ರಹದ ಮಾನವ ಸಂಪನ್ಮೂಲ ಕೊರತೆಯಿಂದ ನಿರುದ್ಯೋಗ ಸಮಸ್ಯೆ ನಿವಾರಣೆಯಾಗದೇ ಇರುವುದು ವಿಚಿತ್ರ ಸಂಗತಿ.

## ನಿರುದ್ಯೋಗದ ಅರ್ಥ:-

✦ ದುಡಿಯುವ ಮನಸ್ಸು, ದೈಹಿಕ ಸಾಮರ್ಥ್ಯ ಹಾಗೂ ಪ್ರಚಲಿತ ಕೂಲಿ ದರವನ್ನು ಒಪ್ಪಿಕೊಂಡು ಉದ್ಯೋಗ ಲಭ್ಯವಾಗದ ಸ್ಥಿತಿಯನ್ನು ನಿರುದ್ಯೋಗ ಎನ್ನಬಹುದು.

**ಶ್ರಮ ಪಡೆಯ ಅರ್ಥ (Meaning of Labour Force):-**

✦ 15ರಿಂದ 59 ವಯೋಮಾನದಲ್ಲಿನ ದುಡಿಯುವ ಸಾಮರ್ಥ್ಯ ಮತ್ತು ಮನಸ್ಸನ್ನು ಹೊಂದಿರುವ ಜನರ ಗುಂಪನ್ನು **ಶ್ರಮಪಡೆ** ಎನ್ನುವರು.

✦ ಶ್ರಮಪಡೆ = ಕಾರ್ಮಿಕ ಶಕ್ತಿ + ನಿರುದ್ಯೋಗ ಪ್ರಮಾಣ

### ಶ್ರಮಶಕ್ತಿ ಭಾಗವಹಿಸುವಿಕೆ ದರ

### LFPR - Labour Force Participation Rate

✦ ಕಾರ್ಮಿಕ ಮಾರುಕಟ್ಟೆಯಲ್ಲಿ ಪ್ರತಿ ಒಂದು ಸಾವಿರ ಜನಸಂಖ್ಯೆಯಲ್ಲಿ ಕೆಲಸ ನಿರ್ವಹಿಸುತ್ತಿರುವ, ಉದ್ಯೋಗ ಹುಡುಕುತ್ತಿರುವ ಜನಸಂಖ್ಯಾ ಪ್ರಮಾಣವನ್ನು ತಿಳಿಸುವುದು. ಇದನ್ನೇ ವಿಶ್ವಸಂಸ್ಥೆಯು **ಆರ್ಥಿಕವಾಗಿ ಚುರುಕಾದ ಜನಸಂಖ್ಯೆ** ಎಂದು ವ್ಯಾಖ್ಯಾನಿಸಿದೆ.

$$LFPR = \frac{\text{ಉದ್ಯೋಗಿಗಳ ಸಂಖ್ಯೆ} + \text{ನಿರುದ್ಯೋಗಿಗಳ ಸಂಖ್ಯೆ}}{\text{ಒಟ್ಟು ಜನಸಂಖ್ಯೆ}} \times 1000$$

### ಕಾರ್ಮಿಕ ಜನಸಂಖ್ಯೆಯ ಅನುಪಾತ

### (WPR - Workers Population Ratio)

✦ ಪ್ರತಿ ಒಂದು ಸಾವಿರ ಶ್ರಮಪಡೆಯಲ್ಲಿ ಉದ್ಯೋಗ ಹೊಂದಿರುವವರ ಸಂಖ್ಯೆ ಅಥವಾ LFPR ನಲ್ಲಿ ನಿರುದ್ಯೋಗಿಗಳನ್ನು ಕಳೆದಾಗ ಉಳಿಯುವುದು.

$$WPR = \frac{\text{ಉದ್ಯೋಗಿಗಳ ಸಂಖ್ಯೆ}}{\text{ಒಟ್ಟು ಜನಸಂಖ್ಯೆ}} \times 1000$$

**ನಿರುದ್ಯೋಗ ದರ:-** ಪ್ರತಿ ಒಂದು ಸಾವಿರ ಕಾರ್ಮಿಕ ಪಡೆಯಲ್ಲಿ ನಿರುದ್ಯೋಗಿಗಳ ಸಂಖ್ಯೆಯ ನಡುವಿನ ಅನುಪಾತವಾಗಿದೆ

$$\text{ನಿರುದ್ಯೋಗದರ} = \frac{\text{ನಿರುದ್ಯೋಗಿಗಳ ಸಂಖ್ಯೆ}}{\text{ಒಟ್ಟು ಶ್ರಮಪಡೆ}} \times 1000$$

**ನಿರುದ್ಯೋಗದ ಪ್ರಮಾಣ:-** ಒಟ್ಟು ಜನಸಂಖ್ಯೆಯಲ್ಲಿ ನಿರುದ್ಯೋಗಿಗಳ ಸಂಖ್ಯೆಯ ನಡುವಿನ ಅನುಪಾತ.

$$\text{ನಿರುದ್ಯೋಗ ಪ್ರಮಾಣ} = \frac{\text{ನಿರುದ್ಯೋಗಿಗಳ ಸಂಖ್ಯೆ}}{\text{ಒಟ್ಟು ಜನಸಂಖ್ಯೆ}} \times 1000$$

## ನಿರುದ್ಯೋಗದ ಪ್ರಕಾರಗಳು

✦ ಆರ್ಥಿಕತೆಯಲ್ಲಿ ಸನ್ನಿವೇಶ, ಪರಿಸ್ಥಿತಿ ಗಳಿಗನುಗುಣವಾಗಿ ನಿರುದ್ಯೋಗವು ವಿವಿಧ ಸ್ವರೂಪಗಳಲ್ಲಿರುತ್ತದೆ.

1. **ಮುಕ್ತ ಅಥವಾ ತೆರೆದ ಅಥವಾ ಸಂರಚನಾತ್ಮಕ ನಿರುದ್ಯೋಗ (Open or Structural Unemployment):-** ಬಹುದೊಡ್ಡ ಸಂಖ್ಯೆಯ ಶ್ರಮಬಲವು ನಿರಂತರ ಆದಾಯವನ್ನು ತಂದುಕೊಡುವ ಯಾವುದೇ ಕೆಲಸದ ಅವಕಾಶಗಳನ್ನು ಪಡೆ-ಯದ ಒಂದು ಸನ್ನಿವೇಶ.

2. **ಮರೆಮಾಚಿದ ನಿರುದ್ಯೋಗ ಅಥವಾ ಪ್ರಚನ್ನ ನಿರುದ್ಯೋಗ (Disguised Unemployment):-** ಅಗತ್ಯವಿರುವುದಕ್ಕಿಂತ ಹೆಚ್ಚು ಜನ ಒಂದು ನಿರ್ದಿಷ್ಟ ಕೆಲಸದಲ್ಲಿ ಏಕ ಕಾಲದಲ್ಲಿ ನಿರತರಾಗಿರುವುದು.

**ಮರೆ ಮಾಚಿದ ನಿರುದ್ಯೋಗದ ಲಕ್ಷಣಗಳು**

✦ ಭಾರತ ದೇಶದ ಕೃಷಿ ವಲಯದಲ್ಲಿ ಹೆಚ್ಚು ಕಂಡು ಬರುತ್ತದೆ.

✦ ಸೀಮಾಂತ ಕಾರ್ಮಿಕರ **ಸೀಮಾಂತ ಉತ್ಪಾದನೆಯ** ಸಾಮರ್ಥ್ಯವು **ಶೂನ್ಯವಾಗಿದೆ.**

3. **ಚಕ್ರೀಯ ನಿರುದ್ಯೋಗ (Cyclical Unemployment):-** ಆರ್ಥಿಕತೆಯಲ್ಲಿ ವ್ಯಾಪಾರ ಚಕ್ರಗಳ ಅಸ್ತಿತ್ವದಿಂದ ಅಂದರೆ ಆರ್ಥಿಕ ಮುಗ್ಗಟ್ಟಿನ ಸನ್ನಿವೇಶದಲ್ಲಿ ಸೃಷ್ಟಿಯಾದ ನಿರುದ್ಯೋಗ ಪ್ರಕಾರವಾಗಿದೆ.

4. **ಋತುಮಾನ ನಿರುದ್ಯೋಗ (Seasonal Unemployment):-** ವರ್ಷದ ಕೆಲವೇ ಋತು ಅಥವಾ ಕಾಲದಲ್ಲಿ ಉದ್ಯೋಗ ಲಭ್ಯವಿದ್ದು, ಉಳಿದ ಕಾಲದಲ್ಲಿ ನಿರುದ್ಯೋಗವಿರುವ ಸ್ಥಿತಿ. ಇದು ಗ್ರಾಮೀಣ ಭಾಗದಲ್ಲಿ & ಕೃಷಿ ವಲಯ ಪ್ರಧಾನ ವೃತ್ತಿಯಾಗಿರುವ ಪ್ರದೇಶಗಳಲ್ಲಿ ಕಂಡು ಬರುತ್ತದೆ.
5. **ತಾಂತ್ರಿಕ ನಿರುದ್ಯೋಗ (Technical Unemployment):-** ತಂತ್ರಜ್ಞಾನದ ಬದಲಾವಣೆಯ ಕಾರಣದಿಂದ ಸೃಷ್ಟಿಯಾದ ನಿರುದ್ಯೋಗವಾಗಿದೆ.
6. **ವಿದ್ಯಾವಂತ ನಿರುದ್ಯೋಗ (Educational Unemployment):-** ಪಡೆದ ಶೈಕ್ಷಣಿಕ ಅರ್ಹತೆಗೆ ಅನುಗುಣವಾಗಿ ಉದ್ಯೋಗ ಹೊಂದದೇ ಇರುವ ಸ್ಥಿತಿ.

**ಸಾಮಾನ್ಯ ಪ್ರಮುಖ ಚಟುವಟಿಕೆ ಸ್ಥಿತಿ (UPSS)**

- ✦ USUAL Principal Activity Status ಅಂದರೆ ವರ್ಷದ ಕನಿಷ್ಟ 183 ದಿನಗಳಲ್ಲಿ ಉದ್ಯೋಗ ಲಭ್ಯವಾಗದ ಸ್ಥಿತಿ. ಇದರ ಆಧಾರದ ಮೇಲೆ ಮುಕ್ತ ಮತ್ತು ದೀರ್ಘಾವಧಿ ನಿರುದ್ಯೋಗವನ್ನು ಮಾಪನ ಮಾಡುವುದಾಗಿದೆ.

**ವಾರದ ಸ್ಥಿತಿ ನಿರುದ್ಯೋಗ (CWS):-**

- ✦ ಸಮೀಕ್ಷಾ ವಾರದ ಕನಿಷ್ಟ 1 ದಿನ ಅಥವಾ ಒಂದು ಗಂಟೆ ಯಾವುದೇ ಉದ್ಯೋಗ ಪಡೆಯಲಾಗದ [illegible] ಸ್ಥಿತಿ.

**ದೈನಂದಿನ ಸ್ಥಿತಿ ನಿರುದ್ಯೋಗ:- (CDS)**

- ✦ ಸಮೀಕ್ಷಾ ವಾರದಲ್ಲಿ ಕನಿಷ್ಟ ಒಂದು ದಿನ ಉದ್ಯೋಗ ಪಡೆಯಲಾಗದ ಸ್ಥಿತಿಯಾಗಿದೆ.

**ಭಾರತದಲ್ಲಿ ನಿರುದ್ಯೋಗದ ಮಾಪನಗಳು**

- ✦ 1972–73 ರಿಂದ ಭಗವತಿ ಸಮಿತಿ ಶಿಫಾರಸ್ಸಿನ ಮೇರೆಗೆ **NSSO (National Sample Survey Office)** ರಾಷ್ಟ್ರೀಯ ಮಾದರಿ ಸಮೀಕ್ಷಾ ಕಚೇರಿ ನಿರುದ್ಯೋಗವನ್ನು ಮಾಪನ ಮಾಡುತ್ತಿರುವ ಸರ್ಕಾರಿ ಸಂಸ್ಥೆಯಾಗಿದೆ. ಇದನ್ನೇ ಸರ್ವೇಕ್ಷಣಾ ವರದಿ ಎನ್ನಬಹುದು. (ಜಮ್ಮು ಕಾಶ್ಮೀರದಲ್ಲಿ ಸಮೀಕ್ಷೆಯನ್ನು ನಡೆಸುವಂತಿಲ್ಲ)

**BSE & CMIE:-** ನಿರುದ್ಯೋಗವನ್ನು ಮಾಪನ ಮಾಡಿದ ಮೊಟ್ಟ ಮೊದಲ ಸರ್ಕಾರೇತರ ಸಂಸ್ಥೆಗಳಾಗಿವೆ.

### ಭಾರತದ ಆರ್ಥಿಕತೆ ಮಾರ್ಗದರ್ಶಿ ಕೇಂದ್ರ
### CMIE - Centre for Monitoring Indian Economy




1976 ರಲ್ಲಿ ಸ್ವತಂತ್ರ ಚಿಂತಕರ ಚಾವಡಿ ಕೇಂದ್ರವಾಗಿ ಸ್ಥಾಪಿತವಾಯಿತು. ವ್ಯವಹಾರ ಮಾಹಿತಿ ಕಂಪನಿಯ ಮುಂದಾಳು ಸಂಸ್ಥೆಯಾಗಿದೆ. ಆಹಾರ ಸರಪಳಿಯಿಂದ ಬೃಹತ್ ಪ್ರಮಾಣದ ಕೈಗಾರಿಕೆಯವರಿಗೆ ಪ್ರಾಥಮಿಕ ದತ್ತಾಂಶವನ್ನು ಸಂಗ್ರಹಿಸುವ, ವಿಶ್ಲೇಷಿಸುವ ಮುನ್ನಂದಾಜು ಮಾಡುವ ಅಭಿವೃದ್ಧಿ ಸಂಸ್ಥೆಯಾಗಿದೆ. ಗ್ರಾಹಕರು, ಸರ್ಕಾರ, ಹಣಕಾಸು ಮಾರುಕಟ್ಟೆ, ವ್ಯವಹಾರ ಉದ್ದಿಮೆ, ವೃತ್ತಿಪರರು & ಮಾಧ್ಯಮದವರಿಗೆ ಆರ್ಥಿಕತೆಯ ಏರಿಳಿತಗಳ ಮಾಹಿತಿಯನ್ನು ನೀಡುವ ಮಾರ್ಗದರ್ಶಿ ಸಂಸ್ಥೆಯಾಗಿದೆ. ಮುಂಬೈನಲ್ಲಿ ಕೇಂದ್ರ ಕಛೇರಿ ಹೊಂದಿರುವ ಖಾಸಗಿ ಮಾಲೀಕತ್ವದ ವೃತ್ತಿಪರ ನಿರ್ವಹಣಾ ಕಂಪನಿಯಾಗಿದೆ. ಭಾರತದ ಆರ್ಥಿಕತೆಗೆ ಸಂಬಂಧಿಸಿದ ಆರ್ಥಿಕ ದತ್ತಾಂಶಗಳ ಬೃಹತ್ ನಿರ್ವಹಣಾ ವ್ಯವಸ್ಥೆಯಾಗಿದೆ. ಇದರ ಪ್ರಸ್ತುತ ಅಧ್ಯಕ್ಷರಾಗಿ ಎಸ್.ಎ. ದಾವೆ ಕಾರ್ಯನಿರ್ವಹಿಸುತ್ತಿದ್ದಾರೆ.

### ಕಾರ್ಮಿಕ ಮತ್ತು ಉದ್ಯೋಗ ಸಚಿವಾಲಯ
### (Labour Bureau Ministry of Labour & Employment)




- ✦ ವಾರ್ಷಿಕ ಉದ್ಯೋಗ & ನಿರುದ್ಯೋಗ ಸಮೀಕ್ಷೆ ಮಾಡಿ, ಮಾಹಿತಿ ಪ್ರಕಟ ಪಡಿಸುವ ಸಂಸ್ಥೆ.
- ✦ ಕೇಂದ್ರ ಕಛೇರಿ – ನವದೆಹಲಿ
- ✦ ವೃತ್ತಿ ಕೌಶಲ್ಯ ತರಬೇತಿ, ಉದ್ಯೋಗ ಬೆಳವಣಿಗೆ ಮೂಲಕ ಅಧಿಕ ಉತ್ಪಾದನೆ & ಉತ್ಪಾದಕತೆ ಹೆಚ್ಚಿಸುವ ಆರೋಗ್ಯಕರ ವಾತಾವರಣ ಕಲ್ಪಿಸುವ ಮೂಲಕ ಕಾರ್ಮಿಕ ಹಿತರಕ್ಷಣೆ ಕಾಪಾಡುವ ಉದ್ದೇಶ ಹೊಂದಿದೆ.

# ಭಾರತದ ಅರ್ಥವ್ಯವಸ್ಥೆ (Indian Economy)

ಅರ್ಥವ್ಯವಸ್ಥೆ ಎಂಬುದು ಒಂದು ಯಾಂತ್ರಿಕ ವ್ಯವಸ್ಥೆಯಾಗಿದ್ದು, ತನ್ಮೂಲಕ ವಿರಳವಾದ ಸಂಪನ್ಮೂಲಗಳನ್ನು ಸರಕು & ಸೇವೆಗಳ ಉತ್ಪಾದನೆಗಾಗಿ ಹೇಗೆ ಆದ್ಯತಾನುಸಾರವಾಗಿ ಸಂಘಟಿಸಲಾಗುತ್ತದೆ ಎಂಬುದನ್ನು ತಿಳಿಸುತ್ತದೆ. ಜಗತ್ತಿನಲ್ಲಿ ಗ್ರಾಮೀಣ & ನಗರ ಆರ್ಥಿಕತೆ, ಅಭಿವೃದ್ಧಿ ಹೊಂದಿದ, ಹೊಂದುತ್ತಿರುವ & ಅಲ್ಪ ಅಭಿವೃದ್ಧಿ ಹೊಂದಿದ ಆರ್ಥಿಕತೆ, ಬಂಡವಾಳ ಶಾಹಿ ಅಥವಾ ಮಾರುಕಟ್ಟೆ ಅರ್ಥವ್ಯವಸ್ಥೆ, ಕೇಂದ್ರೀಯ ಸಮಾಜವಾದಿ & ಮಿಶ್ರ ಅರ್ಥವ್ಯವಸ್ಥೆಗಳಿದ್ದು, ಭಾರತ ಅಭಿವೃದ್ಧಿ ಹೊಂದುತ್ತಿರುವ, ಜಗತ್ತಿನ ಉದಯೋನ್ಮುಖ ಆರ್ಥಿಕತೆಗಳಲ್ಲಿ ಮುಂಚೂಣಿಯಲ್ಲಿರುವ & ಮಿಶ್ರ ಅರ್ಥವ್ಯವಸ್ಥೆಯನ್ನು ಹೊಂದಿರುವ ದೇಶವಾಗಿದೆ.

## ಅರ್ಥವ್ಯವಸ್ಥೆಯ ಪ್ರಕಾರಗಳು (Types of Economic System)

### ಬಂಡವಾಳ ಶಾಹಿ / ಮಾರುಕಟ್ಟೆ ಅರ್ಥವ್ಯವಸ್ಥೆ (Capitalistic/Market Economy)

» ದೇಶದ ಉತ್ಪಾದನಾ ಚಟುವಟಿಕೆಗಳ ಮಾಲೀಕತ್ವ, ನಿಯಂತ್ರಣ, ಸರ್ಕಾರಕ್ಕೆ ಬದಲಾಗಿ ಖಾಸಗಿ ಒಡೆತನದಲ್ಲಿರುವದೇ ಬಂಡವಾಳ ಶಾಹಿ ಅರ್ಥವ್ಯವಸ್ಥೆ. ಈ ವ್ಯವಸ್ಥೆಯ ಮುಖ್ಯ ಉದ್ದೇಶ ಲಾಭಗಳಿಕೆಯಾಗಿರುತ್ತದೆ.

ಉದಾ:- ಅಮೆರಿಕ, ಇಂಗ್ಲೆಂಡ್, ಫ್ರಾನ್ಸ್ ಇತ್ಯಾದಿ

### ಸಮಾಜವಾದಿ / ಕೇಂದ್ರೀಯ ಯೋಜನಾ ಅರ್ಥವ್ಯವಸ್ಥೆ (Socialistic/Centrally Planned Economy):-

» ದೇಶದ ಉತ್ಪಾದನಾ ಚಟುವಟಿಕೆಗಳ ಮಾಲೀಕತ್ವ, ನಿಯಂತ್ರಣ, ಖಾಸಗಿ ವ್ಯವಸ್ಥೆಗೆ ಬದಲಾಗಿ ಸರ್ಕಾರ ಅಥವಾ ಕೇಂದ್ರೀಯ ಯೋಜನಾ ಮಂಡಳಿ ಒಡೆತನದಲ್ಲಿರುವುದೇ ಬಂಡವಾಳ ಶಾಹಿ ಅರ್ಥವ್ಯವಸ್ಥೆ. ಈ ವ್ಯವಸ್ಥೆಯ ಮುಖ್ಯ ಉದ್ದೇಶ ಸಾಮಾಜಿಕ ನ್ಯಾಯ ಸ್ಥಾಪನೆಯಾಗಿರುತ್ತದೆ.

ಉದಾ:- ಚೀನಾ, ಕ್ಯೂಬಾ, ವಿಯೆಟ್ನಾಂ ಇತ್ಯಾದಿ.

### ಮಿಶ್ರ ಅರ್ಥವ್ಯವಸ್ಥೆ (Mixed Economy):-

» ಬಂಡವಾಳ ಶಾಹಿ & ಸಮಾಜವಾದಿ ಆರ್ಥಿಕತೆಗಳ ಉತ್ಕೃಷ್ಟ ಮಿಶ್ರಣವೇ ಮಿಶ್ರ ಅರ್ಥವ್ಯವಸ್ಥೆ. ಇಲ್ಲಿ ಸರ್ಕಾರ & ಖಾಸಗಿ ಮಾಲೀಕತ್ವ ಎರಡೂ ಅಸ್ತಿತ್ವದಲ್ಲಿರುತ್ತದೆ.

ಉದಾ:- ಭಾರತದ ಆರ್ಥಿಕತೆ

### ಮುಕ್ತ/ತೆರೆದ ಅರ್ಥ ವ್ಯವಸ್ಥೆ (Open Economy):-

» ಒಂದು ದೇಶ ವಿಶ್ವದ ಇತರ ರಾಷ್ಟ್ರಗಳೊಂದಿಗೆ ವ್ಯಾಪಾರ ವಾಣಿಜ್ಯ ವ್ಯವಹಾರಗಳ ಸಂಪರ್ಕ ಹೊಂದಿರುವುದು. ಈ ಅರ್ಥವ್ಯವಸ್ಥೆಯಲ್ಲಿ ಮುಕ್ತ ವ್ಯಾಪಾರ ನೀತಿ ಅಸ್ತಿತ್ವದಲ್ಲಿರುತ್ತದೆ.

### ಮುಚ್ಚಿದ ಅರ್ಥ ವ್ಯವಸ್ಥೆ (Closed Economy):-

» ಒಂದು ದೇಶ ವಿಶ್ವದ ಇತರ ರಾಷ್ಟ್ರಗಳೊಂದಿಗೆ ವ್ಯಾಪಾರ ವಾಣಿಜ್ಯ ವ್ಯವಹಾರಗಳ ಸಂಪರ್ಕ ಹೊಂದದಿರುವುದು. ಈ ಅರ್ಥವ್ಯವಸ್ಥೆಯಲ್ಲಿ ರಕ್ಷಣಾತ್ಮಕ ವ್ಯಾಪಾರ ನೀತಿ ಅಂದರೆ ಸುಂಕ ನಿರ್ಬಂಧಗಳು, ಸುಂಕೇತರ ನಿಯಂತ್ರಣ ಕ್ರಮಗಳು ಅಸ್ತಿತ್ವದಲ್ಲಿರುತ್ತವೆ.

### ದ್ವಂದ್ವ ಅರ್ಥವ್ಯವಸ್ಥೆ (Dualistic Economy):-

» ಒಂದು ನಿರ್ದಿಷ್ಟ ದೇಶದಲ್ಲಿ ಏಕಕಾಲದಲ್ಲಿ ವಿವಿಧ ಮಟ್ಟದ ಅಭಿವೃದ್ಧಿ, ತಂತ್ರಜ್ಞಾನ, ಬೇಡಿಕೆ ಸ್ವರೂಪವನ್ನು ಹೊಂದಿರುವ ಎರಡು ವಲಯಗಳು ಅಸ್ತಿತ್ವದಲ್ಲಿರುವುದು.

» ಪ್ರಮುಖ ಅರ್ಥಶಾಸ್ತ್ರಜ್ಞರಾದ ಜೆ.ಹೆಚ್. ಬೋಯೆಕ್ ದ್ವಂದ್ವ ಅರ್ಥವ್ಯವಸ್ಥೆಯ ಪರಿಕಲ್ಪನೆಯನ್ನು ಪರಿಚಯಿಸಿದ್ದು, ಸಾಂಪ್ರದಾಯಿಕ & ಆಧುನಿಕ ಆರ್ಥಿಕತೆಗಳ ಅಸ್ತಿತ್ವ, ಕೃಷಿ & ಕೈಗಾರಿಕಾ ವಲಯಗಳು ಅಸ್ತಿತ್ವದಲ್ಲಿರುವುದು, ಸಾಂಪ್ರದಾಯಿಕ & ಆಧುನಿಕ ಕೃಷಿ ತಂತ್ರಜ್ಞಾನದ ಅಳವಡಿಕೆ ಮುಂತಾದ ರೀತಿಯಲ್ಲಿರಬಹುದು.

» **ಆರ್ಥರ್ ಲೆವಿಸ್** ಎಂಬ ಅರ್ಥಶಾಸ್ತ್ರಜ್ಞರ ಪ್ರಕಾರ ಕಡಿಮೆ ವರಮಾನ ಹೊಂದಿದ ಗ್ರಾಮೀಣ ಜೀವನಾಧಾರ ವಲಯ & ಹೆಚ್ಚು ವರಮಾನ ಹೊಂದಿದ ನಗರ ಬಂಡವಾಳ ಶಾಹಿ ಆರ್ಥಿಕತೆಗಳು ಅಸ್ತಿತ್ವದಲ್ಲಿರುವುದೇ ದ್ವಂದ್ವ ಅರ್ಥವ್ಯವಸ್ಥೆ ಎಂದಿದ್ದಾರೆ.

**ಸಮಾಂತರ ಅರ್ಥವ್ಯವಸ್ಥೆ (Parallel Economy):-**

» ದೇಶದ ಆರ್ಥಿಕತೆಯಲ್ಲಿ ಏಕ ಕಾಲದಲ್ಲಿ ಕಪ್ಪು ಹಣ & ಬಿಳಿ ಹಣಗಳು ಚಲಾವಣೆಯಲ್ಲಿರುವುದು. ಅಂದರೆ, ಸರ್ಕಾರದ ಲೆಕ್ಕಕ್ಕೆ ಸಿಗುವ ಹಣ & ಲೆಕ್ಕಕ್ಕೆ ಸಿಗದಿರುವ ಹಣ ಅಸ್ತಿತ್ವದಲ್ಲಿರುವ ವ್ಯವಸ್ಥೆ ಇದನ್ನೇ ಕಪ್ಪು ಹಣದ ಅರ್ಥವ್ಯವಸ್ಥೆ ಎಂದು ಕರೆಯಬಹುದು.

**ಹಸಿರು ಅರ್ಥವ್ಯವಸ್ಥೆ (Green Economy):–**

» ಪರಿಸರವನ್ನು ನಾಶ ಪಡಿಸದೇ, ಸುಸ್ಥಿರ ಅಭಿವೃದ್ಧಿಯ ಗುರಿಯನ್ನು ಹೊಂದಿದ್ದು, ವಾತಾವರಣದ ಮೇಲಿನ ಗಂಡಾಂತರಗಳು & ಮಾಲಿನ್ಯವನ್ನು ನಿಯಂತ್ರಣ ಮಾಡುವ ಉದ್ದೇಶ ಹೊಂದಿರುವ ಆರ್ಥಿಕತೆ.

» **ಕಾರ್ಲ್ ಬರ್ಕಾರ್ಟ್** ವ್ಯಾಖ್ಯಾನಿಸಿರುವ ಪ್ರಕಾರ ಹಸಿರು ಅರ್ಥವ್ಯವಸ್ಥೆಯು ಅಸಂಪ್ರದಾಯಿಕ ಇಂಧನಗಳ ಬಳಕೆ, ಹಸಿರು ಕಟ್ಟಡಗಳ ನಿರ್ಮಾಣ, ಸುಸ್ಥಿರ ಸಾರಿಗೆ, ಜಲ ನಿರ್ವಹಣೆ, ತ್ಯಾಜ್ಯ ವಸ್ತುಗಳ ನಿರ್ವಹಣೆ & ಭೂ ಸಂಪನ್ಮೂಲಗಳ ನಿರ್ವಹಣೆ ಇಂತಹ 6 ಕ್ಷೇತ್ರಗಳಿಗೆ ಸಂಬಂಧಿಸಿದೆ.

» **ಜಾಗತಿಕ ಹಸಿರು ಆರ್ಥಿಕತೆ ಸೂಚ್ಯಂಕವನ್ನು** Consultancy Dual Citizen LLc ಜಗತ್ತಿನ 80 ರಾಷ್ಟ್ರಗಳು & 50 ನಗರಗಳನ್ನು ಒಳಗೊಂಡಂತೆ ನಾಯಕತ್ವ & ಹವಾಮಾನ ಬದಲಾವಣೆ, ದಕ್ಷತೆ ವಲಯಗಳು, ಮಾರುಕಟ್ಟೆ & ಹೂಡಿಕೆ ಹಾಗೂ ಪರಿಸರದಂತಹ 4 ಆಯಾಮಗಳನ್ನು ಒಳಗೊಂಡಂತೆ ಪ್ರಕಟಪಡಿಸಿದೆ.

## ಆರ್ಥಿಕ ನೀತಿ (Economic Policy)

» ಆರ್ಥಿಕ ವ್ಯವಸ್ಥೆ ಅಭಿವೃದ್ಧಿಗೆ ಸಂಬಂಧಿಸಿದಂತೆ ಸರ್ಕಾರದ ತಂತ್ರ, ರೀತಿ–ನೀತಿಗಳನ್ನು ಆರ್ಥಿಕ ನೀತಿ ಎನ್ನಬಹುದು. ಇದು ದೇಶದ ತೆರಿಗೆ, ಮುಂಗಡಪತ್ರ, ಹಣದ ಪೂರೈಕೆ, ಬಡ್ಡಿದರ, ಶ್ರಮದ ಮಾರುಕಟ್ಟೆ ಇನ್ನಿತರ ಆರ್ಥಿಕ ಚಟುವಟಿಕೆಗಳ ನಿಯಂತ್ರಣದೊಂದಿಗೆ ದೇಶದ ಆರ್ಥಿಕಾಭಿವೃದ್ಧಿಗೆ ಸಂಬಂಧಿಸಿದಂತೆ ಅನುಸರಿಸುವ ಕ್ರಮವಾಗಿರುತ್ತದೆ.

» ಭಾರತ ದೇಶದ ಅರ್ಥವ್ಯವಸ್ಥೆಯ ಪ್ರವೃತ್ತಿಗಳನ್ನು ಈ ಕೆಳಗಿನ ಹಂತಗಳಲ್ಲಿ ಅಧ್ಯಯನ ಮಾಡಬಹುದು.

1. ಸ್ವಾತಂತ್ರ್ಯ ಪೂರ್ವ ಅಥವಾ ಬ್ರಿಟಿಷ್ ಭಾರತದ ಅರ್ಥವ್ಯವಸ್ಥೆ
2. ಸ್ವಾತಂತ್ರ್ಯಾನಂತರದ 1947 ರಿಂದ 1990
3. 1991 ರ ನಂತರದ ಹೊಸ ಆರ್ಥಿಕ ಸುಧಾರಣೆಗಳ ಯುಗ

**ವಸಾಹತು ಶಾಹಿ ಆಳ್ವಿಕೆಯಲ್ಲಿ ಭಾರತದ ಆರ್ಥಿಕತೆ (Indian Economy During Colonial Era):-**

» ಬ್ರಿಟಿಷರ ಆಗಮನಕ್ಕಿಂತ ಮುನ್ನ ಭಾರತ ದೇಶದಲ್ಲಿ ಕೃಷಿ ಕ್ಷೇತ್ರ, ಜೀವನಾಧಾರ ಮೂಲವಾಗಿದ್ದು, ಹತ್ತಿಬಟ್ಟೆ, ರೇಷ್ಮೆ, ಲೋಹ ಮುಂತಾದ ಕರಕುಶಲ ಕೈಗಾರಿಕಾ ವಸ್ತುಗಳು ಜನಪ್ರಿಯವಾಗಿ ರಫ್ತಾಗುತ್ತಿದ್ದ ಸರಕು ಆಗಿದ್ದವು.

» ಬ್ರಿಟಿಷರ ಆಳ್ವಿಕೆಯಲ್ಲಿ ಜಾರಿಗೆ ಬಂದ ವಿವಿಧ ಭೂ ಕಂದಾಯ ಪದ್ಧತಿಗಳು ಕೃಷಿ ಅಭಿವೃದ್ಧಿಯಲ್ಲಿ ಪ್ರಗತಿಯನ್ನು ಕುಂಠಿತಗೊಳಿಸಿದವು. **ಉದಾ:–** ಲಾರ್ಡ್ ಕಾರ್ನ್‌ವಾಲೀಸ್‌ನ ಖಾಯಂ ಜಮೀನ್ದಾರಿ ಪದ್ಧತಿ, ಥಾಮಸ್ ಮನ್ರೋನ ರೈತವಾರಿ ಪದ್ಧತಿ & ಜೇಮ್ಸ್ ಥಾಮ್ಸನ್‌ನ ಮಹಲ್‌ವಾರಿ ಪದ್ಧತಿ.

» **ಇಂಗ್ಲೆಂಡ್**ನಲ್ಲಿ ಉಂಟಾದ **ಕೈಗಾರಿಕಾ ಕ್ರಾಂತಿಯ** ಫಲವಾಗಿ ಭಾರತ ಕಚ್ಚಾ ವಸ್ತುಗಳನ್ನು ರಫ್ತು ಮಾಡುತ್ತಿದ್ದು, ಇಂಗ್ಲೆಂಡ್‌ನಲ್ಲಿ ತಯಾರಾದ ಸಿದ್ಧ ವಸ್ತುಗಳಿಗೆ ಭಾರತ ದೇಶ ಮಾರುಕಟ್ಟೆಯಾಯಿತು.

» ಇದರ ಫಲವಾಗಿ ದೇಶದ ಸಂಪತ್ತು ಇಂಗ್ಲೆಂಡ್ ದೇಶಕ್ಕೆ ಹರಿದು ಹೋಯಿತು ಎನ್ನಲಾಗಿದೆ. ಆದರೂ ಭಾರತದಲ್ಲಿ 19 ನೇ ಶತಮಾನದಲ್ಲಿ ಮಹಾರಾಷ್ಟ್ರದ ಬಾಂಬೆ ಪ್ರಾಂತ್ಯ, ಕೋಲ್ಕತ್ತ & ಮದ್ರಾಸ್ ಪ್ರಾಂತ್ಯಗಳಲ್ಲಿ ಮಾತ್ರ ಕೆಲವು ಕೈಗಾರಿಕೆಗಳು ಸ್ಥಾಪನೆಗೊಂಡು ದೇಶದ ಬಹುತೇಕ ಪ್ರದೇಶಗಳು ಹಿಂದುಳಿದವು.

» ಬ್ರಿಟಿಷ್ ಆಳ್ವಿಕೆಯ ಸಂದರ್ಭದಲ್ಲಿ ಭಾರತದ ಸಂಪತ್ತು ಇಂಗ್ಲೆಂಡ್‌ಗೆ ಹರಿದು ಹೋದುದನ್ನು **ದಾದಾ ಬಾಯಿ ನವರೋಜಿ** ತಮ್ಮ **ಆರ್ಥಿಕ ಸೋರಿಕೆ ಸಿದ್ಧಾಂತದಲ್ಲಿ** ವಿಶ್ಲೇಷಿಸಿದ್ದಾರೆ.

» ಇದೇ ಸಂದರ್ಭದಲ್ಲಿ ದೇಶೀಯ ಸಣ್ಣ & ಗುಡಿ ಕೈಗಾರಿಕೆಗಳು ಬೃಹತ್ ಕೈಗಾರಿಕೆಗಳ ಪೈಪೋಟಿಯಿಂದ ನಾಶ ಹೊಂದಿದ್ದು, ದೇಶೀಯ ಕೈಗಾರಿಕೆಗಳ ಬೆಳವಣಿಗೆಗೆ ಹಲವಾರು ಸ್ವದೇಶಿ ಚಳುವಳಿಗಳು ಆರಂಭವಾದವು.

» **ಉದಾ:–** ಮಹಾತ್ಮ ಗಾಂಧೀಜಿಯವರು ಖಾದಿ & ಗ್ರಾಮೋದ್ಯೋಗಕ್ಕೆ ಹೆಚ್ಚು ಉತ್ತೇಜನ ನೀಡಿದ್ದನ್ನು ಸ್ಮರಿಸಬಹುದು.

## ಸ್ವಾತಂತ್ರ್ಯಾನಂತರ ಭಾರತದ ಆರ್ಥಿಕತೆ (Indian Economy after Independence)

» 1947 ರ ಭಾರತ ಸ್ವಾತಂತ್ರ್ಯಾನಂತರ ದೇಶದಲ್ಲಿ ಸಮಾಜವಾದಿ ಸಿದ್ಧಾಂತದ ಕನಸನ್ನು ಹೊಂದಿದ್ದ **ಮೊದಲ ಪ್ರಧಾನಿ ನೆಹರೂ** ಅವರು ಆರ್ಥಿಕ ಯೋಜನೆ ಎಂಬ ಹೊಸ ಪರಿಕಲ್ಪನೆಯೊಂದಿಗೆ ವಿವಿಧ ಪಂಚವಾರ್ಷಿಕ ಯೋಜನೆಗಳ ಮೂಲಕ ಹಂತ-ಹಂತವಾಗಿ ಕೃಷಿ, ಕೈಗಾರಿಕೆ, ಇನ್ನಿತರ ಸೇವಾ ವಲಯದ ಕ್ಷೇತ್ರಗಳನ್ನು ಅಭಿವೃದ್ಧಿ ಪಡಿಸಲು ಕ್ರಮಗಳನ್ನು ಕೈಗೊಂಡರು.

» 1950 ರಿಂದ 1990 ರವರೆಗಿನ ಭಾರತದ ಆರ್ಥಿಕತೆಯನ್ನು **ಲೈಸೆನ್ಸ್‌ರಾಜ್** ಎನ್ನುತ್ತಿದ್ದರು. ಹೊಸ ಆರ್ಥಿಕ ಸುಧಾರಣೆಗಳ ಪೂರ್ವದ ಆರ್ಥಿಕತೆ ಎಂದು ಕರೆಯಲಾಗಿದೆ.

» ಈ ಅವಧಿಯಲ್ಲಿ ಸರ್ಕಾರದ ಯೋಜನೆಗಳು ಅಪಾರ ಪ್ರಮಾಣದಲ್ಲಿದ್ದು, ಅವುಗಳ ಅನುಷ್ಠಾನದ ಪರಿಣಾಮಕಾರಿ ಕೊರತೆಯಿಂದ ನಿರೀಕ್ಷಿತ ಪ್ರಗತಿ ಸಾಧ್ಯವಾಗಲಿಲ್ಲ. **ರಾಜ್‌ಕೃಷ್ಣ** ಎಂಬ ಅರ್ಥಶಾಸ್ತ್ರಜ್ಞರು ಹೇಳುವ ರೀತಿ **ಹಿಂದೂ ಆರ್ಥಿಕ ಬೆಳವಣಿಗೆ ದರ** ಎಂದರೆ, 1950 ರಿಂದ 1990 ರವರೆಗೆ ದೇಶದ ಆರ್ಥಿಕ ಬೆಳವಣಿಗೆ ದರ ಶೇ 3.5 ನ್ನು ದಾಟಲಿಲ್ಲ.

## 1991 ರ ನಂತರ ಭಾರತದ ಆರ್ಥಿಕ ಸುಧಾರಣೆಗಳು (Indian Economy after Economic Reforms 1991)

» 1980ರ ದಶಕದಲ್ಲಿ ಭಾರತದ ಆರ್ಥಿಕತೆಯಲ್ಲಿ ಕಂಡು ಬಂದ ಹಣಕಾಸು ಬಿಕ್ಕಟ್ಟು, ಅದಕ್ಷ ಆಡಳಿತ ನಿರ್ವಹಣೆ, ರಾಜಕೀಯ ಅಸ್ಥಿರತೆ, ಪೆಟ್ರೋಲಿಯಂ ಉತ್ಪನ್ನಗಳ ಬೆಲೆ ಏರಿಕೆ, ಹಣದುಬ್ಬರ ಸಮಸ್ಯೆ, ಶೀತಲ ಸಮರ ಅಂತ್ಯ, ಈ ಸಮಸ್ಯೆಗಳು ದೇಶದ ಆರ್ಥಿಕತೆಯನ್ನು ಅಲ್ಲೋಲಕಲ್ಲೋಲವನ್ನಾಗಿಸಿದವು.

» ಈ ಸಂದರ್ಭದಲ್ಲಿ ಭಾರತದ ಆರ್ಥಿಕತೆ ಚೇತರಿಕೆಗಾಗಿ ಐ.ಎಂ.ಎಫ್ & ಐ.ಬಿ.ಆರ್.ಡಿ ಗಳಿಂದ 7 ಬಿಲಿಯನ್ ಅಮೆರಿಕನ್ ಡಾಲರ್ ಸಾಲವನ್ನು ಪಡೆಯಲು 1991 ರಲ್ಲಿ ಅಂದಿನ ಪ್ರಧಾನಿ ಪಿ.ವಿ. ನರಸಿಂಹರಾವ್ & ಹಣಕಾಸು ಸಚಿವ ಡಾ॥ ಮನಮೋಹನ್ ಸಿಂಗ್ ಪ್ರಯತ್ನಿಸಿದರು. ಆದರೆ ಅಂತರಾಷ್ಟ್ರೀಯ ಹಣಕಾಸು ಸಂಸ್ಥೆಗಳ ಷರತ್ತುಬದ್ಧ ಸಾಲವನ್ನು ಪಡೆಯಲು, ಭಾರತದ ಆರ್ಥಿಕತೆಯಲ್ಲಿ ಸ್ಥಿರಾತ್ಮಕ & ರಚನಾತ್ಮಕ ಬದಲಾವಣೆ ತರುವ ಹೊಸ ಆರ್ಥಿಕ ಸುಧಾರಣೆಗಳ ಅನುಷ್ಠಾನ ಅನಿವಾರ್ಯವಾಯಿತು.

» ಇದಕ್ಕೂ ಮುನ್ನ ದೇಶದಲ್ಲಿ 1966, 1985 ರಲ್ಲಿ ಆರ್ಥಿಕ ಸುಧಾರಣೆಗಳ ಉದಾರೀಕರಣಕ್ಕೆ ಪ್ರಯತ್ನಪಟ್ಟಿದ್ದು ವಿಫಲವಾಯಿತು.

» ಭಾರತದ ಆರ್ಥಿಕ ವ್ಯವಸ್ಥೆಯ ಚಾಣಕ್ಯ ಎಂದೇ ಖ್ಯಾತಿಯಾದ ಪಿ.ವಿ. ನರಸಿಂಹರಾವ್ ಮಾರ್ಗದರ್ಶನದಲ್ಲಿ **ಆರ್ಥಿಕ ಸುಧಾರಣೆಗಳ ಶಿಲ್ಪಿ** ಅಂದಿನ ವಿತ್ತ ಸಚಿವ ಡಾ॥ ಮನಮೋಹನ್ ಸಿಂಗ್ **1991 ಜುಲೈ 24** ರಂದು ಹೊಸ ಕೈಗಾರಿಕಾ ನೀತಿಯನ್ನು ಘೋಷಣೆ ಮಾಡುವ ಮೂಲಕ ದೇಶದ ಆರ್ಥಿಕತೆಯಲ್ಲಿ ಉದಾರೀಕರಣ, ಖಾಸಗೀಕರಣ & ಜಾಗತೀಕರಣ ಹಾಗೂ ಆಧುನೀಕರಣ ಮೂಲ ಮಂತ್ರಗಳ ಹೊಸ ಆರ್ಥಿಕ ನೀತಿಯ ಅನುಷ್ಠಾನಕ್ಕೆ ನಾಂದಿ ಹಾಡಿದರು. ಇದನ್ನೇ **ಎಲ್.ಪಿ.ಜಿ ನೀತಿ** ಎನ್ನಬಹುದು.

» 1991ರಲ್ಲಿ ಭಾರತದ ಆರ್ಥಿಕತೆಯ ರಚನಾತ್ಮಕ ಬದಲಾವಣೆಗೆ ರೂಪಿಸಿದ, ಹೊಸ ಆರ್ಥಿಕ ರೀತಿ ನೀತಿಗಳನ್ನು **ಹೊಸ ಆರ್ಥಿಕ ನೀತಿ** ಎನ್ನಬಹುದು. ಇದನ್ನು **ಪೂರ್ವದತ್ತ ನೋಡಿ ನೀತಿ** (East Looking Policy).

### ಹೊಸ ಆರ್ಥಿಕ ನೀತಿಯ ಲಕ್ಷಣಗಳು (L.P.G)

**ಉದಾರೀಕರಣ (Liberalization):-**

» ದೇಶದ ಆರ್ಥಿಕ ಚಟುವಟಿಕೆಗಳ ಮೇಲಿನ ಸರ್ಕಾರದ ನೀತಿ ನಿಯಂತ್ರಣ ನಿರ್ಬಂಧಗಳನ್ನು ಸಡಿಲಗೊಳಿಸುವುದು ಎಂದರ್ಥ.

» ಅಂದರೆ ಆರ್ಥಿಕ ಚಟುವಟಿಕೆಗಳಲ್ಲಿ ಸರ್ಕಾರದ ಹಸ್ತಕ್ಷೇಪವನ್ನು ಕನಿಷ್ಠಗೊಳಿಸುವುದು.

**ಖಾಸಗೀಕರಣ (Privatisation):-**

» ಸರ್ಕಾರಿ ಒಡೆತನದ ಉದ್ಯಮ ಸಂಸ್ಥೆಗಳ ಒಡೆತನ & ನಿಯಂತ್ರಣವನ್ನು ಖಾಸಗಿ ವ್ಯಕ್ತಿ ಅಥವಾ ಸಂಸ್ಥೆಗಳಿಗೆ ಬಿಟ್ಟು ಕೊಡುವುದು. ಇದರಿಂದ ಸಾರ್ವಜನಿಕ ವಲಯದಲ್ಲಿನ ಅದಕ್ಷತೆ, ಭ್ರಷ್ಟಾಚಾರ ಮುಂತಾದವುಗಳನ್ನು ನಿಯಂತ್ರಿಸಿ, ಆರ್ಥಿಕ ಚಟುವಟಿಕೆಗಳಿಗೆ ಚೈತನ್ಯ ಮೂಡಿಸುವ ಸಂಜೀವಿನಿ ಈ ಹೊಸ ಆರ್ಥಿಕ ನೀತಿಯಾಗಿದೆ.

**ಜಾಗತೀಕರಣ (Globalisation):-**

» ದೇಶದ ಅರ್ಥವ್ಯವಸ್ಥೆಯನ್ನು ಜಾಗತಿಕ ಆರ್ಥಿಕ ವ್ಯವಸ್ಥೆಯೊಂದಿಗೆ ಮುಕ್ತವಾಗಿಸುವುದೇ ಜಾಗತೀಕರಣ.

» ಇದು 1991 ಕ್ಕಿಂತ ಮುನ್ನ ಆರ್ಥಿಕತೆಯ ಬಾಹ್ಯ ವಲಯದಲ್ಲಿನ ವ್ಯಾಪಾರಿ ನಿಯಂತ್ರಣ ನಿರ್ಬಂಧಗಳನ್ನು ಸಡಿಲಗೊಳಿಸಿ, ಮುಕ್ತ ವ್ಯಾಪಾರ ನೀತಿ, ವಿದೇಶಿ ಬಂಡವಾಳ ಹೂಡಿಕೆಗೆ ಮುಕ್ತ ಅವಕಾಶ, ಬಹುರಾಷ್ಟ್ರೀಯ ನಿಗಮಗಳ ಪ್ರವೇಶಕ್ಕೆ ಉತ್ತೇಜನ, ಹೊರಗುತ್ತಿಗೆ ಮುಂತಾದವುಗಳು ಜಾಗತೀಕರಣ ಪ್ರಕ್ರಿಯೆಗೆ ಮಹತ್ತರ ಹೆಜ್ಜೆ ಗುರುತುಗಳಾಗಿವೆ. ಇದು ದೇಶವನ್ನು ವಿಶ್ವ ಅರ್ಥ ವ್ಯವಸ್ಥೆಯೊಂದಿಗೆ ಹೆಚ್ಚು ಸಂಬಂಧ ಕಲ್ಪಿಸುವಂತೆ ಮಾಡಿತು.

## ಹೊಸ ಆರ್ಥಿಕ ನೀತಿಯ ತಂತ್ರಗಳು

**ಸ್ಥಿರಾತ್ಮಕ ಆರ್ಥಿಕ ನೀತಿ (Stabilisation Economic Policy):–** ದೇಶದ ಪಾವತಿ ಶಿಲ್ಕಿನ ಸಮಸ್ಯೆಯನ್ನು ಸರಿಪಡಿಸಲು ಹಣದುಬ್ಬರವನ್ನು ನಿಯಂತ್ರಿಸುವ ಉದ್ದೇಶದಿಂದ ರೂಪಿಸಲಾದ ಅಲ್ಪಾವಧಿ ಆರ್ಥಿಕ ಕ್ರಮಗಳನ್ನು ಸ್ಥಿರಾತ್ಮಕ ಆರ್ಥಿಕ ನೀತಿ ಎನ್ನುವರು. ಇವುಗಳಲ್ಲಿ ಹಣಕಾಸು ವಲಯ, ವಿದೇಶಿ ವಿನಿಮಯ ವಲಯ & ರಾಜ್ಯಕೋಶ ವಲಯ ಸುಧಾರಣೆಗಳು ಸೇರಿವೆ.

**ರಚನಾತ್ಮಕ ಹೊಂದಾಣಿಕಾ ಆರ್ಥಿಕ ನೀತಿ (SAP - Structural Adjustment Programmes):-** ಆರ್ಥಿಕತೆಯ ಕಾಠಿಣ್ಯತೆಯನ್ನು ತೆಗೆದುಹಾಕಿ, ದಕ್ಷತೆಯನ್ನು ವೃದ್ಧಿಸುವ & ಅಂತರಾಷ್ಟ್ರೀಯ ಪೈಪೋಟಿ ಸಾಮರ್ಥ್ಯವನ್ನು ಹೆಚ್ಚಿಸುವ ಗುರಿ ಹೊಂದಿದ ದೀರ್ಘಾವಧಿ ಆರ್ಥಿಕ ಕ್ರಮಗಳು. ಇವುಗಳಲ್ಲಿ ಕೈಗಾರಿಕಾ ವಲಯದ ಸುಧಾರಣೆ, ವ್ಯಾಪಾರಿ ವಲಯ & ಸಾರ್ವಜನಿಕ ವಲಯದ ಸುಧಾರಣೆಗಳು ಮುಖ್ಯವಾಗಿವೆ.

## ಆರ್ಥಿಕ ವಲಯಗಳ ಪ್ರಮುಖ ಸುಧಾರಣೆಗಳು

**ಕೈಗಾರಿಕಾ ವಲಯದ ಸುಧಾರಣೆಗಳು:-** 1991 ರ ಕೈಗಾರಿಕಾ ನೀತಿಯು ಕೈಗಾರಿಕಾ ವಲಯದಲ್ಲಿ ಎಲ್.ಪಿ.ಜಿ ತಂತ್ರಗಳನ್ನು ಅನುಸರಿಸಿದ್ದು, ಹೊಸ ಕೈಗಾರಿಕೆಗಳ ಸ್ಥಾಪನೆ, ವಿಸ್ತರಣೆಯಲ್ಲಿ ಇದ್ದ ನಿರ್ಬಂಧಗಳನ್ನು ಸಡಿಲಗೊಳಿಸಿ, ಸಾರ್ವಜನಿಕ ವಲಯದ ಉದ್ದಿಮೆಗಳ ಸ್ವಾಯತ್ತತೆ ಹೆಚ್ಚು ಮಾಡಲು, **ಮಹಾರತ್ನ, ನವರತ್ನ, ಮಿನಿರತ್ನ** ಸ್ಥಾನಮಾನ ನೀಡುವುದು, ಖಾಸಗಿ ವಲಯದ ಕೈಗಾರಿಕೆಗಳ ಸ್ಥಾಪನೆಗೆ ಅವಕಾಶ, ವಿದೇಶಿ ಬಂಡವಾಳ ಹೂಡಿಕೆಗೆ ಉತ್ತೇಜನ, ಸಾರ್ವಜನಿಕ ವಲಯದ ಉದ್ದಿಮೆಗಳ ಈಕ್ವಿಟಿ ಷೇರಿನ ಒಂದು ಭಾಗವನ್ನು ಖಾಸಗಿಯವರಿಗೆ ಮಾರಾಟ ಮಾಡುವ & ಹೂಡಿಕೆ ಹಿಂತೆಗೆತ ನೀತಿ ಅನುಸರಿಸಲಾಗಿದೆ.

**ಹಣಕಾಸು ವಲಯದ ಸುಧಾರಣೆಗಳು:-** ದೇಶದ ಹಣಕಾಸ ವಲಯದ ಆರ್.ಬಿ.ಐ ನ ಕರ್ತವ್ಯವನ್ನು ನಿಯಂತ್ರಕನಿಂದ ಸೌಲಭ್ಯದಾತನನ್ನಾಗಿಸಿದ್ದು, ವಿದೇಶಿ ಬ್ಯಾಂಕುಗಳ ಪ್ರವೇಶಕ್ಕೆ ಅವಕಾಶ, ದೇಶದಲ್ಲಿ ಅಸ್ತಿತ್ವದಲ್ಲಿದ್ದ ಬ್ಯಾಂಕುಗಳ ಶಾಖಾ ಜಾಲವನ್ನು ವಿಸ್ತರಿಸಲು ಅವಕಾಶ, ಭಾರತೀಯ ಹಣಕಾಸು ಮಾರುಕಟ್ಟೆಯಲ್ಲಿ ವಿದೇಶಿ ಸಾಂಸ್ಥಿಕ ಹೂಡಿಕೆದಾರರಿಗೆ ಮುಕ್ತ ಸ್ವಾತಂತ್ರ್ಯ, ಖಾಸಗಿ ವಲಯದ ಅಭಿವೃದ್ಧಿ ಹಣಕಾಸು ಸಂಸ್ಥೆಗಳ ಸ್ಥಾಪನೆ & ವಿಸ್ತರಣೆ ಮೇಲಿದ್ದ ನಿರ್ಬಂಧಗಳನ್ನು ಸಡಿಲಗೊಳಿಸಿತು.

**ತೆರಿಗೆ ವಲಯದ ಸುಧಾರಣೆಗಳು:-** 1991 ಕ್ಕಿಂತ ಮುನ್ನ ದೇಶದ ತೆರಿಗೆ ವ್ಯವಸ್ಥೆಯಲ್ಲಿದ್ದ ಸಂಕೀರ್ಣತೆಗಳನ್ನು ತೆಗೆದು ಹಾಕಿ, ಕೋಶೀಯ ವಲಯದಲ್ಲಿ ಹಲವಾರು ತೆರಿಗೆಗಳನ್ನು ರದ್ದುಗೊಳಿಸಿ, ತೆರಿಗೆ ದರಗಳನ್ನು ಕಡಿಮೆಗೊಳಿಸಿ, ಸರಕುಸೇವೆಗಳ ಸಾಮಾನ್ಯ ರಾಷ್ಟ್ರೀಯ ಮಾರುಕಟ್ಟೆ ಸ್ಥಾಪನೆಗೆ ಸಹಾಯ, ತೆರಿಗೆ ವ್ಯವಸ್ಥೆಯಲ್ಲಿನ ಕಾರ್ಯವಿಧಾನಗಳಲ್ಲಿ ಸರಳತೆಯನ್ನು ತಂದಿದೆ.

**ವಿದೇಶಿ ವಿನಿಮಯ ವಲಯದ ಸುಧಾರಣೆಗಳು:-** ದೇಶದ ಬಾಹ್ಯ ವಲಯದ ಸುಧಾರಣೆಯನ್ನು ತರುವ ಉದ್ದೇಶದಿಂದ, ಪಾವತಿ ಶಿಲ್ಕಿನ ಸಮಸ್ಯೆಯನ್ನು ಸರಿಪಡಿಸಲು ರೂಪಾಯಿಯನ್ನು ಉದ್ದೇಶಪೂರ್ವಕವಾಗಿ 1991 ರಲ್ಲಿ ಅಪಮೌಲ್ಯೀಕರಣ ಮಾಡಿ, ವಿದೇಶಿ ವಿನಿಮಯದ ಒಳ ಹರಿವಿಗೆ ಹೆಚ್ಚು ಅವಕಾಶ ಕಲ್ಪಿಸಿತು. ಹಾಗೂ ವಿದೇಶಿ ವಿನಿಮಯ ದರ ನಿರ್ಧಾರದಲ್ಲಿ ಆರ್.ಬಿ.ಐ ನ ಪಾತ್ರವನ್ನು ಕಡಿತಗೊಳಿಸಿ, ಮಾರುಕಟ್ಟೆ ಶಕ್ತಿಗಳಾದ ವಿದೇಶಿ ವಿನಿಮಯ ಬೇಡಿಕೆ & ಪೂರೈಕೆಗಳ ಪಾತ್ರ ಹೆಚ್ಚಾಗುವಂತೆ ಮಾಡಿತು.

**ವ್ಯಾಪಾರ & ಹೂಡಿಕೆ ವಲಯದ ಸುಧಾರಣೆಗಳು:-** ದೇಶದ ಅಂತರಾಷ್ಟ್ರೀಯ ಸ್ಪರ್ಧಾತ್ಮಕತೆಯನ್ನು ಹೆಚ್ಚಿಸುವ ಉದ್ದೇಶದಿಂದ, ವಿದೇಶಿ ಹೂಡಿಕೆ ತಂತ್ರಜ್ಞಾನದ ಒಳ ಹರಿವಿಗೆ ಉತ್ತೇಜನ, ವ್ಯಾಪಾರ ವಲಯದ ಸುಧಾರಣೆಗಾಗಿ 1995 ರಲ್ಲಿ WTO ನಲ್ಲಿ ಸದಸ್ಯತ್ವ ಪಡೆದಿದ್ದು, ಆಮದುಗಳ ಮೇಲಿನ ಬಿಗಿಯಾದ ನಿಯಂತ್ರಣ ಕಡಿಮೆಗೊಳಿಸಿ, ಆಮದು ಪರವಾನಗಿಯನ್ನು ಅಪಾಯಕಾರಿ & ಪರಿಸರಕ್ಕೆ ಸಂಬಂಧಿಸಿದ ಕೆಲವೊಂದು ಕ್ಷೇತ್ರಗಳನ್ನು ಹೊರತುಪಡಿಸಿ ತೆಗೆದು ಹಾಕಿತು.

**ಹೊರಗುತ್ತಿಗೆ (Out sourcing):–** ಒಂದು ಕಂಪನಿಯ ವ್ಯವಹಾರ ಪ್ರಕ್ರಿಯೆಗಳನ್ನು ಜಾಗತೀಕರಣ ಪ್ರಕ್ರಿಯೆಯಲ್ಲಿ ಮತ್ತೊಂದು ಕಂಪನಿಗೆ ಹೊರಗುತ್ತಿಗೆ ನೀಡುವುದು. ಸಾಫ್ಟ್‌ವೇರ್ ಆಧಾರಿತ ಸೇವಾ ರಂಗದಲ್ಲಿರುವ ವಿದೇಶಿ ಕಂಪನಿಗಳಿಂದ ಭಾರತದ ಕಂಪನಿಗಳಿಗೆ ಕೆಲವು ಚಟುವಟಿಕೆಗಳನ್ನು ಒದಗಿಸುವುದು. **ಉದಾ:–** ಕಾನೂನು ಸಲಹೆ, ಗಣಕಯಂತ್ರ ಸೇವೆ, ಧ್ವನಿ ಆಧಾರಿತ ವ್ಯವಹಾರ ಪ್ರಕ್ರಿಯೆ, ಬ್ಯಾಂಕಿಂಗ್ ಸೇವೆ, ಬಹು ರಾಷ್ಟ್ರೀಯ ಕಂಪನಿಗಳ ಮೂಲಕ ಹೆಚ್ಚು ಕೌಶಲ್ಯ ಹೊಂದಿದ & ಕಡಿಮೆ ಕೂಲಿಯಲ್ಲಿ ಲಭ್ಯವಾಗುವ ಭಾರತೀಯ ಮಾನವ ಸಂಪನ್ಮೂಲಕ್ಕೆ ಸಹಾಯಕಾರಿಯಾಯಿತು.

» **ಹೊಸ ಆರ್ಥಿಕ ನೀತಿಯು 2016 ಜುಲೈ 24** ರ ವೇಳೆಗೆ ತನ್ನ **25 ಸಂವತ್ಸರಗಳನ್ನು** ಪೂರೈಸಿದ್ದು, ಈ ಅವಧಿಯಲ್ಲಿ ದೇಶದ ಬಡತನ ಗಣನೀಯವಾಗಿ ಇಳಿಕೆಯಾಗಿದ್ದು, ಜೀವನದ ಗುಣಮಟ್ಟ ಹೆಚ್ಚಳ, ಹಣಕಾಸು ಮಾರುಕಟ್ಟೆಯ ಅಭಿವೃದ್ಧಿ, ಬಂಡವಾಳದ ಹೂಡಿಕೆ & ಒಳಹರಿವು ಹೆಚ್ಚಳ, ಉದ್ಯೋಗಾವಕಾಶಗಳ ಸೃಷ್ಟಿ ಮಾಡಿದೆ.

# ವಿದೇಶಿ ವ್ಯಾಪಾರ (Foreign Trade)

- ಆರ್ಥಿಕತೆಯಲ್ಲಿ ಲಾಭವನ್ನು ಗಳಿಸುವ ಉದ್ದೇಶದಿಂದ ಸರಕು & ಸೇವೆಗಳನ್ನು ಕೊಳ್ಳುವ & ಮಾರುವ ವಿನಿಮಯ ಪ್ರಕ್ರಿಯೆಯೇ **ವ್ಯಾಪಾರ**.
- ವ್ಯಾಪಾರವನ್ನು ಆಂತರಿಕ & ವಿದೇಶಿ ವ್ಯಾಪಾರ ಎಂದು ವರ್ಗೀಕರಿಸಿದ್ದು, ದೇಶದ ಭೌಗೋಳಿಕ ಗಡಿ ರೇಖೆಯ ಒಳಗಡೆ ನಡೆಯುವ ವ್ಯಾಪಾರವೇ **ಆಂತರಿಕ ವ್ಯಾಪಾರ**. ಇದು **ಸಗಟು & ಚಿಲ್ಲರೆ ವ್ಯಾಪಾರ** ಎಂಬ 2 ಉಪ ಪ್ರಕಾರಗಳನ್ನು ಹೊಂದಿದೆ.
- ಒಂದು ರಾಷ್ಟ್ರವು ವಿಶ್ವದ ಇತರೆ ರಾಷ್ಟ್ರಗಳೊಂದಿಗೆ ನಡೆಸುವ ವ್ಯಾಪಾರವೇ **ಅಂತರಾಷ್ಟ್ರೀಯ ವ್ಯಾಪಾರ**. ಇದರಲ್ಲಿ ರಫ್ತು ವ್ಯಾಪಾರ, ಆಮದು ವ್ಯಾಪಾರ & ಪುನರ್ ರಫ್ತು ವ್ಯಾಪಾರ ಎಂಬ ಪ್ರಕಾರಗಳುಂಟು.

**ಪುನರ್ ರಫ್ತು ವ್ಯಾಪಾರ** (Entrepot Trade):-

- ಕೆಲವು ದೇಶಗಳು ಒಂದು ದೇಶದಿಂದ ವಸ್ತುಗಳನ್ನು ಆಮದು ಮಾಡಿಕೊಂಡು, ಅದನ್ನೇ ಮತ್ತೊಂದು ದೇಶಕ್ಕೆ ರಫ್ತು ಮಾಡುವ ವ್ಯಾಪಾರವನ್ನು **ಪುನರ್‌ರಫ್ತು ವ್ಯಾಪಾರ** ಎನ್ನುವರು. **ಉದಾ:-** ಸಿಂಗಪುರ.
- ವಿದೇಶಿ ವ್ಯಾಪಾರವು ದೇಶದ ಆರ್ಥಿಕಾಭಿವೃದ್ಧಿಯಲ್ಲಿ ಅತ್ಯಂತ ಪ್ರಮುಖ ಪಾತ್ರ ವಹಿಸುವುದರಿಂದ ಅರ್ಥಶಾಸ್ತ್ರಜ್ಞ **ಡಿ.ಹೆಚ್. ರಾಬರ್ಟ್‌ಸನ್** ವ್ಯಾಪಾರವನ್ನು **ಆರ್ಥಿಕ ಬೆಳವಣಿಗೆಯ ಎಂಜಿನ್** ಎಂದು ಕರೆದಿದ್ದಾರೆ.
- **ಅಭಿವೃದ್ಧಿ ಆಮದು** ಅಂದರೆ, ಅನುಭೋಗಿ ಸರಕುಗಳ ಜೊತೆಗೆ ಯಂತ್ರೋಪಕರಣ, ಕಚ್ಚಾ ಸಾಮಗ್ರಿಗಳನ್ನು ಆಮದು ಮಾಡಿಕೊಳ್ಳುವುದನ್ನು ತಿಳಿಸುತ್ತದೆ.

**ನಿರ್ವಹಣಾ ಆಮದು:-** ಆರ್ಥಿಕ ಚಟುವಟಿಕೆ ನಿರ್ವಹಣೆಗೆ ಅಗತ್ಯವಾದ ಸರಕು & ಸೇವೆಗಳ ಆಮದು ವ್ಯವಹಾರ.

### ವಿದೇಶಿ ವ್ಯಾಪಾರದ ಸಂಯೋಜನೆ (Composition of Foreign Trade):-

- ದೇಶ ನಿರ್ದಿಷ್ಟ ಅವಧಿಯಲ್ಲಿ ಯಾವ ಯಾವ ರೀತಿಯ ಸರಕು & ಸೇವೆಗಳನ್ನು ವಿದೇಶಗಳೊಂದಿಗೆ ಆಮದು ರಫ್ತು ಮಾಡುತ್ತದೆ ಎಂದು ತಿಳಿಸುವುದೇ ವಿದೇಶಿ ವ್ಯಾಪಾರ ಸಂಯೋಜನೆಯಾಗಿದೆ.

### ವಿದೇಶಿ ವ್ಯಾಪಾರದ ದಿಕ್ಕು (Direction of Foreign Trade)

- ದೇಶ ಯಾವ ಯಾವ ದೇಶಗಳೊಂದಿಗೆ ಸರಕು & ಸೇವೆಗಳನ್ನು ಆಮದು ರಫ್ತು ಮಾಡುತ್ತದೆಂದು ತಿಳಿಸುವುದೇ ವಿದೇಶಿ ವ್ಯಾಪಾರದ ದಿಕ್ಕು.

**ವಿದೇಶಿ ವ್ಯಾಪಾರದ ಗಾತ್ರ (Volume of Foreign Trade):-** ದೇಶ ಒಂದು ನಿರ್ದಿಷ್ಟ ಅವಧಿಯಲ್ಲಿ ಸರಕು & ಸೇವೆಗಳನ್ನು ವಿದೇಶಗಳೊಂದಿಗೆ ಆಮದು ರಫ್ತು ಮಾಡಿದ ಪ್ರಮಾಣವನ್ನು ತಿಳಿಸುತ್ತದೆ.

## ಭಾರತದ ವಿದೇಶಿ ವ್ಯಾಪಾರದ ಸ್ಥಿತಿಗತಿ

- ನಾಗರೀಕತೆಗಳ ಕಾಲದಲ್ಲಿ ಭಾರತ ಅಥವಾ ಹರಪ್ಪ ನಾಗರೀಕತೆಯು ವಿಶ್ವದ ಇತರೆ ನಾಗರೀಕತೆಗಳೊಂದಿಗೆ ಹೆಚ್ಚಿನ ರೀತಿಯ ವ್ಯಾಪಾರ ಸಂಪರ್ಕವನ್ನು ಹೊಂದಿತ್ತು.
- ಬ್ರಿಟಿಷರ ಕಾಲದಲ್ಲಿ ಭಾರತವು ಪ್ರಾಥಮಿಕ ವಸ್ತುಗಳು, ಬೆಲೆ ಬಾಳುವ ಹತ್ತಿ, ಕುಶಲ ಕೈಗಾರಿಕಾ ಸರಕುಗಳು, ಸಾಂಬಾರು ಪದಾರ್ಥಗಳು, ರೇಷ್ಮೆ ಮುಂತಾದವುಗಳನ್ನು ಇಂಗ್ಲೆಂಡ್‌ಗೆ ರಫ್ತು ಮಾಡಿ, ಅಲ್ಲಿ ತಯಾರಾಗುತ್ತಿದ್ದ ಸಿದ್ದ ವಸ್ತುಗಳನ್ನು ಆಮದು ಮಾಡಿಕೊಳ್ಳುವ ಮಾರುಕಟ್ಟೆ ಕೇಂದ್ರವಾಗಿ ಮಾರ್ಪಟ್ಟಿತ್ತು.
- ಇಂಗ್ಲೆಂಡ್‌ನಲ್ಲಿ ಉಂಟಾದ ಕೈಗಾರಿಕಾ ಕ್ರಾಂತಿ & ಭಾರತಕ್ಕೆ ಬ್ರಿಟಿಷರ ಆಗಮನ ವಿದೇಶಿ ವ್ಯಾಪಾರದ ದಿಕ್ಕಿನಲ್ಲಿ ಆಮೂಲಾಗ್ರ ಬದಲಾವಣೆ ತಂದಿತು.
- ಸ್ವಾತಂತ್ರ್ಯಾನಂತರ ಭಾರತ ದೇಶದ ವಿದೇಶಿ ವ್ಯಾಪಾರವು ಪರಿಮಾಣಾತ್ಮಕವಾಗಿ & ಗುಣಾತ್ಮಕವಾಗಿ ಬದಲಾವಣೆಯನ್ನು ಹೊಂದಿದ್ದರೂ, ಪಾವತಿ ಶಿಲ್ಕಿನ ಪರಿಸ್ಥಿತಿಯು **1972-73 ಹಾಗೂ 1976-77** ನ್ನು ಹೊರತುಪಡಿಸಿ, ಉಳಿದ ಅವಧಿಗಳಲ್ಲಿ ಪ್ರತಿಕೂಲಕರವಾಗಿತ್ತು.
- ವಿದೇಶಿ ವ್ಯಾಪಾರವು ಗೋಚರಿತ ಸರಕು & ಸೇವೆಗಳ ಆಮದು & ರಫ್ತು ವ್ಯವಹಾರವನ್ನು ಒಳಗೊಂಡಿರುತ್ತದೆ. ಆದರೆ **WTO ನ ಇತ್ತೀಚಿನ ಮಾಹಿತಿ ಪ್ರಕಾರ** ವಿಶ್ವದ ವ್ಯಾಪಾರದಲ್ಲಿ ಭಾರತದ ಶೇಕಡಾವಾರು ಪ್ರಮಾಣವನ್ನು ಈ ಕೆಳಗಿನ ಪಟ್ಟಿಯಿಂದ ತಿಳಿಯಬಹುದು.

| ವರ್ಷ | 2000 | | 2013 | |
|---|---|---|---|---|
| | ಸ್ಥಾನ | ಶೇಕಡಾ | ಸ್ಥಾನ | ಶೇ |
| ರಫ್ತು | 30 | 0.7 | 19 | 0.8 |
| ಆಮದು | 23 | 1.69 | 12 | 2.43 |
| ಒಟ್ಟು ಜಿ.ಡಿ.ಪಿ ಅನುಪಾತ | 21.8 | | 41 | |

- 2016-17 ರಲ್ಲಿ ಭಾರತ ದೇಶ 7,500 ಸರಕುಗಳನ್ನು 190 ರಾಷ್ಟ್ರಗಳಿಗೆ ರಫ್ತು ಮಾಡಿ, 6,000 ಸರಕುಗಳನ್ನು 140 ರಾಷ್ಟ್ರಗಳಿಂದ ಆಮದು ಮಾಡಿಕೊಂಡಿದೆ.

2016-17 ರಲ್ಲಿ ಭಾರತದ ರಫ್ತು & ಆಮದು ಸರಕುಗಳು

| ಸ್ಥಾನ | ರಫ್ತು ಸರಕುಗಳು | ಆಮದು ಸರಕುಗಳು |
|---|---|---|
| 1 | ಮುತ್ತು & ಬೆಲೆಬಾಳುವ ಹರಳು (16.74%) | ಇಂಧನ & ಖನಿಜ ಇಂಧನ (25.40%) |
| 2 | ಇಂಧನ & ಕಚ್ಚಾತೈಲ (11.24%) | ಮುತ್ತು & ಬೆಲೆಬಾಳುವ ಹರಳು (13.58%) |
| 3 | ರೈಲ್ವೆ ಹೊರತು ಪಡಿಸಿದ ವಾಹನಗಳು (5.64%) | ಎಲೆಕ್ಟ್ರಿಕಲ್ ಮಿಷನರಿ & ಸಾಮಗ್ರಿಗಳು (10.10%) |
| 4 | ನ್ಯೂಕ್ಲಿಯರ್ ರಿಯಾಕ್ಟರ್ ಬಾಯ್ಲರ್ (5.12%) | ಕಂಪ್ಯೂಟರ್ ಒಳಗೊಂಡ ಮೆಕ್ಯಾನಿಕಲ್ ಅಪ್ಲೈಯನ್ಸಸ್ (8.56%0) |
| 5 | ಫಾರ್ಮಾ ಸ್ಯುಟಿಕಲ್ಸ್ ಉತ್ಪನ್ನಗಳು (4.93%) | ಆರ್ಗ್ಯಾನಿಕ್ ಕೆಮಿಕಲ್ಸ್ (4.1%) |

2016-17 ... ದೇಶ

| ಸ್ಥಾನ | ರಫ್ತು ಸರಕುಗಳು | ಆಮದು ಸರಕುಗಳು |
|---|---|---|
| 1 | ಅಮೆರಿಕ (15.74%) | ಚೀನಾ (16.4…%) |
| 2 | ಯು.ಎ.ಇ (11.46%) | ಅಮೆರಿಕ (5.6…%) |
| 3 | ಹಾಂಕಾಂಗ್ (4.9%) | ಯು.ಎ.ಇ (5.51%) |
| 4 | ಚೀನಾ (3.6%) | ಸೌದಿ ಅರೇಬಿಯಾ (5.19%) |
| 5 | ಇಂಗ್ಲೆಂಡ್ (3.19%) | ಸ್ವಿಡ್ಜರ್‌ಲೆಂಡ್ (4.21%) |

| ಭಾರತದ ವಿದೇಶಿ ವ್ಯಾಪಾರ 2017 ಜೂನ್15 (ಕೇಂದ್ರ ವ್ಯಾಪಾರ & ವಾಣಿಜ್ಯ ಸಚಿವಾಲಯದ ಮಾಹಿತಿ ಆಧಾರ) | |
|---|---|
| **ಧನಾತ್ಮಕ ಬೆಳವಣಿಗೆ ಹೊಂದಿದ ರಫ್ತು ಸರಕುಗಳು** | **ಧನಾತ್ಮಕ ಬೆಳವಣಿಗೆ ಹೊಂದಿದ ಆಮದು ಸರಕುಗಳು** |
| ಇಂಜಿನಿಯರಿಂಗ್ ಸರಕುಗಳು (8.25%) | ಪೆಟ್ರೋಲಿಯಂ ಉತ್ಪನ್ನಗಳು (29.54%) |
| ಹರಳು & ಆಭರಣಗಳು (6%) | ಚಿನ್ನ (236.69%) |
| ಪೆಟ್ರೋಲಿಯಂ ಉತ್ಪನ್ನಗಳು (24.92%) | ಎಲೆಕ್ಟ್ರಾನಿಕ್ ಸರಕುಗಳು (34.16%) |
| ಜವಳಿ ಉತ್ಪನ್ನಗಳು (8.06%) | ಮುತ್ತು, ರತ್ನ & ಬೆಲೆಬಾಳುವ ಹರಳುಗಳು (37.61%) |
| ಸಾಗರೋತ್ಪನ್ನಗಳು (44.58%) | ಎಲೆಕ್ಟ್ರಿಕಲ್ & ನಾನ್ ಎಲೆಕ್ಟ್ರಿಕಲ್ (6.42%) |
| ಎಲೆಕ್ಟ್ರಾನಿಕ್ ಸರಕುಗಳು (8.57%) | 2017–18 ರ ಏಪ್ರಿಲ್–ಮೇ ನಲ್ಲಿ 21408.91 ಮಿಲಿಯನ್ ಅಮೆರಿಕನ್ ಡಾಲರ್ ವ್ಯಾಪಾರ ಕೊರತೆ |
| ಆರ್ಗ್ಯಾನಿಕ್ ಕೆಮಿಕಲ್ಸ್ (15.34%) | |

## ರೂಪಾಯಿಯ ಪರಿವರ್ತನೆ (Convertability of Indian Rupee)

- ಮಾರುಕಟ್ಟೆ ನಿರ್ಧಾರಿತ ವಿನಿಮಯ ದರದಲ್ಲಿ ಭಾರತದ ರೂಪಾಯಿಯನ್ನು ವಿಶ್ವದ ಇತರೆ ಕರೆನ್ಸಿಗಳಾದ **ಅಮೆರಿಕ ಡಾಲರ್, ಇಂಗ್ಲೆಂಡ್‌ನ ಪೌಂಡ್ ಸ್ಟರ್ಲಿಂಗ್** ಅಥವಾ ಇತರೆ ರಾಷ್ಟ್ರಗಳ ಕರೆನ್ಸಿಗಳಿಗೆ ಪರಿವರ್ತಿಸುವ ವಿಧಾನ ಅಥವಾ ವಿದೇಶಿ ಕರೆನ್ಸಿಗಳನ್ನು ಭಾರತದ ರೂಪಾಯಿಗೆ ಪರಿವರ್ತಿಸುವ ವಿಧಾನ.
- ಚಾಲ್ತಿ ಖಾತೆಯಲ್ಲಿ ರೂಪಾಯಿ ಪರಿವರ್ತನೆ ಅಂದರೆ ಆಮದು & ರಫ್ತುಗಳ ವ್ಯವಹಾರ ಸಂಪೂರ್ಣ ಮುಕ್ತವಾಗುವುದು.
- **ಬಂಡವಾಳ ಖಾತೆಯಲ್ಲಿ ರೂಪಾಯಿ ಪರಿವರ್ತನೆ:-** ಸ್ಥಳೀಯ ಹಣಕಾಸು ಸ್ವತ್ತಗಳನ್ನು ವಿದೇಶಿ ಹಣಕಾಸು ಸ್ವತ್ತುಗಳನ್ನಾಗಿ ಅಥವಾ ವಿದೇಶಿ ಹಣಕಾಸು ಸ್ವತ್ತಗಳನ್ನು ಸ್ವದೇಶಿ ಹಣಕಾಸು ಸ್ವತ್ತುಗಳನ್ನಾಗಿ ಮಾರುಕಟ್ಟೆ ನಿರ್ಧಾರಿತ ವಿನಿಮಯ ದರದಲ್ಲಿ ಪರಿವರ್ತನೆಗೊಳಿಸುವುದು.
- ಭಾರತದಲ್ಲಿ ಚಾಲ್ತಿ ಖಾತೆ ಪರಿವರ್ತನೆ ಸಂಪೂರ್ಣವಾಗಿದ್ದು, ಬಂಡವಾಳ ಖಾತೆಯಲ್ಲಿ ಪರಿವರ್ತನೆ ಭಾಗಶಃ ಪ್ರಮಾಣದಲ್ಲಿದೆ. ಇದಕ್ಕೆ ಸಂಬಂಧಿಸಿದಂತೆ **ಕೇಂದ್ರ ಸರ್ಕಾರ ತಾರಾಪೊರೆ ಸಮಿತಿಯನ್ನು** ಬಂಡವಾಳ ಖಾತೆಯ ಪೂರ್ಣ ಪರಿವರ್ತನೆಗೆ ಸಂಬಂಧಿಸಿದ ಮಾಹಿತಿ ನೀಡಲು ನೇಮಿಸಿತ್ತು.
- **ಋಣ ವಿಮೋಚನಾ ನಿಧಿ:-** ಸರ್ಕಾರ ತನ್ನ ಸಾರ್ವಜನಿಕ ಸಾಲವನ್ನು ಮರು ಪಾವತಿ ಮಾಡಲು ಕೇಂದ್ರ ಬ್ಯಾಂಕಿನ ಲಾಭ, ಸರ್ಕಾರದ ಲಾಭ & ಹೂಡಿಕೆ ಹಿಂತೆಗೆತ ಪ್ರಕ್ರಿಯೆ ಮೂಲಕ ಈಡೇರಿಸಲು ಕೈಗೊಂಡ ಮುಖ್ಯ ಕ್ರಮ.

## ಭಾರತದ ವಿದೇಶಿ ವ್ಯಾಪಾರ ನೀತಿ 2015-20

- ಭಾರತದ ಪ್ರಧಾನಿ ನರೇಂದ್ರ ಮೋದಿಯವರ ಮೇಕ್ ಇನ್ ಇಂಡಿಯಾ & ಡಿಜಿಟಲ್ ಇಂಡಿಯಾದ ಸಂಯೋಜಿತವಾಗಿ ಕೇಂದ್ರದ ವಾಣಿಜ್ಯ ಸಚಿವರಾದ **ನಿರ್ಮಲಾ ಸೀತಾರಾಮನ್** 2015ರ ಏಪ್ರಿಲ್ 1 ರಿಂದ ಜಾರಿಯಾಗುವಂತೆ ದೇಶದ ರಫ್ತುಗಳನ್ನು ಉತ್ತೇಜಿಸುವ ಉದ್ದೇಶದಿಂದ **ಹೊಸ ವಿದೇಶಿ ವ್ಯಾಪಾರ ನೀತಿ**ಯನ್ನು ಪ್ರಕಟ ಪಡಿಸಿದರು.
- 2020 ರವೇಳೆಗೆ ಜಾಗತಿಕ ವ್ಯಾಪಾರದಲ್ಲಿ ಭಾರತವನ್ನು ಪ್ರಮುಖ ಭಾಗಿದಾರ ರಾಷ್ಟ್ರವನ್ನಾಗಿಸಿ, ಗೋಚರಿತ ರಫ್ತುಗಳ ಸರಕು ವ್ಯವಹಾರವನ್ನು ನಿರ್ಧಿಷ್ಟ ಮಾರುಕಟ್ಟೆಯಲ್ಲಿ ಉತ್ತೇಜಿಸುವುದು. ಶೇ 25 ರಷ್ಟು ರಫ್ತು ನಿಬಂಧನೆಗಳನ್ನು ಕಡಿಮೆಗೊಳಿಸುವುದು. ಭಾರತದಿಂದ ಗೋಚರಿತ ರಫ್ತುಗಳ ಯೋಜನೆ & ಭಾರತದ ಸೇವಾ ರಫ್ತು ಯೋಜನೆ – ನೊಂದಾಯಿತ ಸೇವೆಗಳ ರಫ್ತು ವೃದ್ಧಿ. ಈ ಎರಡೂ ಯೋಜನೆಗಳನ್ನು ಹಿಂದೆ ಇದ್ದ ಬಹು ಯೋಜನೆಗಳಿಗೆ ಬದಲಾಗಿ SEZ, ಕರಕುಶಲ ವ್ಯವಹಾರ, ಕೈಮಗ್ಗ, ಪುಸ್ತಕ ಇತ್ಯಾದಿಗಳ ರಫ್ತು ಉತ್ತೇಜಿಸುವುದು.
- **ಕೇರಳ, ತಮಿಳುನಾಡಿನ** ಪ್ರಮುಖ ಬಂದರುಗಳನ್ನು ರಫ್ತು & ಆಮದು ನೊಂದಾಯಿತ ಬಂದರುಗಳನ್ನಾಗಿವುದು. **ವಿಶಾಖಪಟ್ಟಣಂ, ಭೀಮಾವರಂ** ಕೇಂದ್ರಗಳನ್ನು ರಫ್ತು ದಕ್ಷ ಕೇಂದ್ರಗಳನ್ನಾಗಿಸುವುದು.

## ವಿದೇಶಿ ವಿನಿಮಯ ನಿರ್ವಹಣ ಕಾಯ್ದೆ (Foreign Exchange Management Act):-

1997–98 ರ **ಪ್ರಧಾನಿ ವಾಜಪೇಯಿ** ನೇತೃತ್ವದ ಕೇಂದ್ರ ಮುಂಗಡ ಪತ್ರದಲ್ಲಿ ವಿದೇಶಿ ವಿನಿಮಯ ನಿಯಂತ್ರಣ ಕಾಯ್ದೆ (1973) ಗೆ ಬದಲಾಗಿ **ವಿದೇಶಿ ವಿನಿಮಯ ನಿರ್ವಹಣ ಕಾಯ್ದೆ**ಯನ್ನು ಅನುಷ್ಠಾನಕ್ಕೆ ತರಲು ಪ್ರಸ್ತಾಪಿಸಿತು.

1999 ಡಿಸೆಂಬರ್‌ನ ಚಳಿಗಾಲದ ಅಧಿವೇಶನದಲ್ಲಿ ಸಂಸತ್‌ನ ಎರಡೂ ಸದನಗಳು ಅನುಮೋದಿಸಿದ್ದು, 2000 ಡಿಸೆಂಬರ್ 29 ರಿಂದ ಕಾರ್ಯಾಚರಣೆಗೆ ಬಂದಿತು. ಇದರ **ಮುಖ್ಯ ಉದ್ದೇಶ** ವಿದೇಶಿ ವಿನಿಮಯ ವ್ಯವಹಾರವನ್ನು ಉದಾರೀಕರಿಸಿ, ಆಧುನೀಕರಿಸಿ ವಿದೇಶಿ ವ್ಯಾಪಾರದ ಮಾರುಕಟ್ಟೆಯಲ್ಲಿ ಪಾವತಿ ವ್ಯವಹಾರಗಳನ್ನು ಸುಲಭೀಕರಿಸುವುದು.

## ಈಸ್ ಆಫ್ ಡೂಯಿಂಗ್ ಬ್ಯುಸಿನೆಸ್ ಸೂಚ್ಯಂಕ (Ease of Doing Business Index)

ಅಂತರಾಷ್ಟ್ರೀಯ ಹಣಕಾಸು ಸಂಸ್ಥೆಯಾದ **ವಿಶ್ವ ಬ್ಯಾಂಕ್** & ಅದರ ಗ್ರೂಪ್ 2003 ರಿಂದ ಪ್ರತಿ ವರ್ಷ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಉದ್ಯಮ ವ್ಯವಹಾರ ನಿಯಂತ್ರಣಗಳ ವೆಚ್ಚದ ಮೇಲಿನ ಮಾಪನವನ್ನು ಮಾಡುವ ಉದ್ದೇಶದಿಂದ ಸೂಚ್ಯಂಕವನ್ನು ಪ್ರಕಟಪಡಿಸುತ್ತಿದೆ. 2002 ರಲ್ಲಿ "The Regulation of Entry" ಎಂಬ ಅರ್ಥಶಾಸ್ತ್ರದ ಜರ್ನಲ್‌ನಲ್ಲಿ ಸೈಮನ್ ಜಾನ್‌ಕೋವ್, ರಾಫೆಲ್ ಲಾ ಪೋರ್ಟಾ, ಆಂಡ್ರೆಲ್ ಶ್ಲೀಫರ್ ಪ್ರಕಟಪಡಿಸಿದ ಲೇಖನದಲ್ಲಿ ಮೊದಲ ಬಾರಿಗೆ ಸ್ಟಾರ್ಟ್ ಅಪ್ ಉದ್ಯಮಗಳ ನಿಯಂತ್ರಣದ ಮಾಹಿತಿ ಪ್ರಸ್ತುತ ಪಡಿಸಿದ್ದರು.

ಈ ಸೂಚ್ಯಂಕದಲ್ಲಿ ಉದ್ಯಮಗಳ ಪ್ರಾರಂಭ, ಅನುಮತಿ ಪ್ರಕ್ರಿಯೆ, ವಿದ್ಯುಚ್ಛಕ್ತಿ, ನೊಂದಣಿ, ಸಾಲ ಪಡೆಯುವಿಕೆ, ಹೂಡಿಕೆದಾರರ ರಕ್ಷಣೆ, ತೆರಿಗೆ ವ್ಯವಸ್ಥೆ, ವ್ಯಾಪಾರಿ ಪ್ರಕ್ರಿಯೆ, ಒಪ್ಪಂದಗಳು, ಹಣಕಾಸು ಸ್ವಾಯತ್ತತೆ ಮುಂತಾದ ಮಾನದಂಡಗಳನ್ನು ಆಧಾರವಾಗಿರಿಸಿಕೊಳ್ಳಲಾಗಿದೆ.

2006 ರಿಂದ ಸಮೀಕ್ಷೆ ಮಾಡಿದ ರಾಷ್ಟ್ರಗಳಿಗೆ ಸೂಚ್ಯಂಕದ ಪ್ರಕಾರ ರ್‍ಯಾಂಕ್‌ನ್ನು ನೀಡುವ ಪದ್ಧತಿ ಆರಂಭವಾಯಿತು.

**2017 ರ ಡೂಯಿಂಗ್ ಬ್ಯುಸಿನೆಸ್ ಸೂಚ್ಯಂಕದ ಪ್ರಕಾರ ಮೊದಲ 5 ಸ್ಥಾನದಲ್ಲಿರುವ ರಾಷ್ಟ್ರಗಳು:- ನ್ಯೂಜಿಲೆಂಡ್ (1)**, ಸಿಂಗಪುರ (2), ಡೆನ್ಮಾರ್ಕ್ (3), ಹಾಂಕಾಂಗ್(4) & ದಕ್ಷಿಣ ಕೊರಿಯಾ(5)

**ಕೊನೆಯ 5 ಸ್ಥಾನದಲ್ಲಿರುವ ರಾಷ್ಟ್ರಗಳು:- ಸೊಮಾಲಿಯಾ (190ನೇ ಸ್ಥಾನ)**, ಎರಿಟ್ರಿಯಾ (189), ಲಿಬಿಯಾ (188), ವೆನಿಜುವೆಲಾ (187), ದ. ಸೂಡಾನ್ (186).

**ಬ್ರಿಕ್ಸ್ ರಾಷ್ಟ್ರಗಳ ಸ್ಥಾನಗಳು:- ರಷ್ಯಾ (40)**, ದಕ್ಷಿಣ ಆಫ್ರಿಕಾ (74), ಚೀನಾ (78), ಬ್ರೆಜಿಲ್ (123), **ಭಾರತ (130)** (2016 ರಲ್ಲಿಯೂ ಭಾರತ 130ನೇ ಸ್ಥಾನ ಪಡೆದಿತ್ತು.)

**ಸಾರ್ಕ್ ರಾಷ್ಟ್ರಗಳ ಸ್ಥಾನಗಳು:- ಭೂತಾನ್ (73)**, ನೇಪಾಳ (107), ಶ್ರೀಲಂಕಾ(110), **ಭಾರತ (130)**, ಮಾಲ್ಡೀವ್ಸ್ (135), ಪಾಕಿಸ್ತಾನ (144), ಬಾಂಗ್ಲಾದೇಶ (176), **ಅಫ್ಘಾನಿಸ್ತಾನ (183)**.

# ವಿಶೇಷ ಆರ್ಥಿಕ ವಲಯ (SEZ-Special Economic Zone)

- ಒಂದು ದೇಶದ ಗಡಿ ರೇಖೆಯ ಒಳಗಡೆ ಕೇಂದ್ರೀಕೃತವಾಗಿದ್ದು, ವ್ಯಾಪಾರ & ಹೂಡಿಕೆ ಉತ್ತೇಜಿಸುವ, ಉದ್ಯೋಗ ಸೃಷ್ಟಿ, ಪರಿಣಾಮಕಾರಿ ಆಡಳಿತ, & ವಲಯವಾರು ವ್ಯಾಪಾರ ವ್ಯವಹಾರ ಉತ್ತೇಜಿಸುವ ದೃಷ್ಟಿಯಿಂದ ಸ್ಥಾಪನೆಗೊಂಡ ಆರ್ಥಿಕ ಪ್ರದೇಶವೇ ವಿಶೇಷ ಆರ್ಥಿಕ ವಲಯ.
- ಈ ವಲಯದಲ್ಲಿ ಹೂಡಿಕೆ, ತೆರಿಗೆ, ಸುಂಕ & ಕಾರ್ಮಿಕರ ನಿಯಂತ್ರಣಗಳು, ತೆರಿಗೆ ರಜೆ ಮುಂತಾದವುಗಳ ಬಗ್ಗೆ ವಿವಿಧ ನೀತಿಗಳಿರುತ್ತವೆ. 1950 ರ ದಶಕದಲ್ಲಿ ಪ್ರಧಾನ ರಾಷ್ಟ್ರವಾದ ಐರ್ಲೆಂಡ್‌ನಲ್ಲಿ Clare ... SEZ ಸ್ಥಾಪನೆಯಾಗಿತ್ತು.
- ಮುಕ್ತ ವ್ಯಾಪಾರಿ ವಲಯ, ರಫ್ತು ಸಂಸ್ಕರಣಾ ವಲಯ, ಮುಕ್ತ ಆರ್ಥಿಕ ವಲಯ, ಕೈಗಾರಿಕಾ ಎಸ್ಟೇಟ್, ಮುಕ್ತ ಬಂದರು, ನಗರ ಉದ್ದಿಮೆ ವಲಯ, ... ಲಾಜಿಸ್ಟಿಕ್ಸ್ ಪಾರ್ಕ್ ಮುಂತಾದ ಸ್ವರೂಪಗಳಲ್ಲಿ ... ಕಾರ್ಯನಿರ್ವಹಿಸುತ್ತಿದೆ.

| ವಿಧ | ಉದ್ದೇಶ | ಗಾತ್ರ | ಸ್ಥಳ | ಚಟುವಟಿಕೆಗಳು | ಮಾರುಕಟ್ಟೆ |
|---|---|---|---|---|---|
| ಮುಕ್ತ ವ್ಯಾಪಾರಿ ವಲಯ | ವ್ಯಾಪಾರ | 50 ಹೆ.ಗಿಂತ ಕಡಿಮೆ | ಬಂದರು ಪ್ರವೇಶ | ಪುನರ್ ರಫ್ತು ವ್ಯಾಪಾರ | ಆಂತರಿಕ & ಮರು ರಫ್ತು |
| ರಫ್ತು ಸಂಸ್ಕರಣಾ ವಲಯ | ರಫ್ತು | 100 ಹೆ.ಗಿಂತ ಕಡಿಮೆ | ದೇಶಾದ್ಯಂತ | ತಯಾರಿಕಾ ಪ್ರಕ್ರಿಯೆ | ರಫ್ತು & ಆಂತರಿಕ |
| ವಿಶೇಷ ಆರ್ಥಿಕ ವಲಯ | ಸಮಗ್ರ ಅಭಿವೃದ್ಧಿ | 1000 ಹೆ.ಗಿಂತ ಹೆಚ್ಚು | ದೇಶಾದ್ಯಂತ | ಬಹು ಉದ್ದೇಶ | ಆಂತರಿಕ & ರಫ್ತು |
| ನಗರ ಉದ್ದಿಮೆ ವಲಯ | ನಗರಗಳ ಪುನಃ ಶ್ಚೇತನ | 50 ಹೆ.ಗಿಂತ ಕಡಿಮೆ | ಗ್ರಾಮೀಣ /ನಗರ | ಬಹು ಉದ್ದೇಶ | ಆಂತರಿಕ |

- ಏಷ್ಯಾದಲ್ಲೇ ಮೊಟ್ಟ ಮೊದಲ ಬಾರಿಗೆ ರಫ್ತು ಸಂಸ್ಕರಣಾ ವಲಯವನ್ನು ರಫ್ತು ಉತ್ತೇಜಿಸುವ ಉದ್ದೇಶದಿಂದ ಗುಜರಾತ್‌ನ ಕಾಂಡ್ಲಾ ದಲ್ಲಿ 1965 ರಲ್ಲಿ ಸ್ಥಾಪಿಸಲಾಗಿತ್ತು.
- ಭಾರತದಲ್ಲಿ ವಿದೇಶಿ ಬಂಡವಾಳ ಹೂಡಿಕೆಯನ್ನು ಉತ್ತೇಜಿಸಲು 2000 ಏಪ್ರಿಲ್‌ನಲ್ಲಿ ವಿಶೇಷ ಆರ್ಥಿಕ ನೀತಿಯನ್ನು ಭಾರತ ಸರ್ಕಾರ ಪ್ರಕಟಪಡಿಸಿತು. ಈ ನೀತಿಯು 2000 ನವೆಂಬರ್ 1 ರಿಂದ 2006 ಫೆಬ್ರವರಿ 9 ರವರೆಗೆ ಕಾರ್ಯಾಚರಣೆಯಲ್ಲಿದ್ದು, ವಿದೇಶಿ ವ್ಯಾಪಾರ ನೀತಿ & ಸುಂಕ ಉತ್ತೇಜನಗಳನ್ನು ಪ್ರೋತ್ಸಾಹಿಸಿತು.

ಭಾರತ ಸರ್ಕಾರ **2005** ರಲ್ಲಿ ವಿಶೇಷ ಆರ್ಥಿಕ ವಲಯ ಕಾಯ್ದೆ ಯನ್ನು ಪಾರ್ಲಿಮೆಂಟ್‌ನಲ್ಲಿ ರೂಪಿಸಿದ್ದು, **2005 ಜೂನ್ 23** ರಂದು ರಾಷ್ಟ್ರಪತಿ ಅಂಕಿತವನ್ನು ಪಡೆಯಿತು & 2006 ಫೆಬ್ರವರಿ 10 ರಿಂದ SEZ ನಿಯಮಗಳು ದೇಶದಲ್ಲಿ ಅನುಷ್ಠಾನಕ್ಕೆ ಬಂದವು.

**ಇದರ ಮುಖ್ಯ ಉದ್ದೇಶಗಳು:-** ಹೆಚ್ಚುವರಿ ಆರ್ಥಿಕ ಚಟುವಟಿಕೆ ಸೃಷ್ಟಿ, ಸರಕು ಸೇವೆಗಳ ರಫ್ತು ಉತ್ತೇಜನ, ಬಂಡವಾಳ ಹೂಡಿಕೆಗೆ ಪ್ರೋತ್ಸಾಹ, ಉದ್ಯೋಗಾವಕಾಶ ಸೃಷ್ಟಿ, ಮೂಲ ಸೌಕರ್ಯ ಅಭಿವೃದ್ಧಿ

**ವಿಶೇಷ ಆರ್ಥಿಕ ವಲಯದ ವಿಶೇಷ ಲಕ್ಷಣಗಳು:-**

- ಅಬಕಾರಿ ಸುಂಕ & ಸೀಮಾ ಸುಂಕಗಳಿಗೆ ವಿನಾಯಿತಿ
- ಮುಂದಿನ 5 ವರ್ಷಗಳಲ್ಲಿ ಶೇ 100 ರಫ್ತು ಆದಾಯ ತೆರಿಗೆ ವಿನಾಯಿತಿ
- **ಕನಿಷ್ಠ ಪರ್ಯಾಯ ತೆರಿಗೆ (MAT)** ಯಿಂದ ವಿನಾಯಿತಿ
- ಆಡಳಿತ, ಹಣಕಾಸು, ಕಾರ್ಯಾಚರಣೆಯ ಸ್ವಾಯತ್ತತೆಗಾಗಿ ಆಡಳಿತ ಪ್ರಾಧಿಕಾರ ನೇಮಕ.
- 2013–14 ರಲ್ಲಿ ಭಾರತದ ಕೇಂದ್ರ ಸರ್ಕಾರ ಪ್ಯಾಕೇಜ್ ಆಫ್ ರಿಫಾರ್ಮ್ಸ್ ಘೋಷಣೆ ಮಾಡಿದ್ದು, ದೇಶದ ಆರ್ಥಿಕ ಚಟುವಟಿಕೆಗಳಲ್ಲಿ ಬಹು ಉತ್ಪನ್ನ ಎಸ್.ಇ.ಝಡ್‌ಗಳ ಪ್ರೋತ್ಸಾಹ & ಉತ್ತೇಜನ ಮಾಡುವ ಮುಖ್ಯ ಉದ್ದೇಶ ಹೊಂದಿದೆ.
- **ತಮಿಳುನಾಡು** ರಾಜ್ಯ 30 ಎಸ್.ಇ.ಝಡ್‌ಗಳನ್ನು ಹೊಂದಿರುವ ದೇಶದ ದೊಡ್ಡ ರಾಜ್ಯವಾಗಿದೆ.
- ತೆಲಂಗಾಣ & ಕರ್ನಾಟಕ ತಲಾ 26 ಹಾಗೂ ಮಹಾರಾಷ್ಟ್ರ 25 ವಲಯಗಳನ್ನು ಹೊಂದಿರುವ ಮೊದಲ ಮೂರು ಸ್ಥಾನದಲ್ಲಿವೆ.
- ಐ.ಟಿ. ವಲಯ(114), ಬಹು ಉತ್ಪನ್ನ (20), ಇಂಜಿನಿಯರಿಂಗ್ (13) ವಲಯಗಳನ್ನು ಹೊಂದಿರುವ ಮೊದಲ 3 ಕ್ಷೇತ್ರಗಳಾಗಿವೆ.

## ಕೃಷಿ ರಫ್ತು ವಲಯ (AEZ - Agri Export Zone)

+ ಭಾರತದಲ್ಲಿ 2001 ರ ರಫ್ತು, ಆಮದು ವ್ಯಾಪಾರ ನೀತಿಯಲ್ಲಿ ಕೃಷಿ ರಫ್ತು ವಲಯದ ಪರಿಕಲ್ಪನೆಯನ್ನು ಪರಿಚಯಿಸಿದ್ದು, ಕೃಷಿ ಕ್ಷೇತ್ರಕ್ಕೆ ಸಂಬಂಧಿಸಿದ ಭೌಗೋಳಿಕವಾಗಿ ಪ್ರಾಧಾನ್ಯತೆ ಪಡೆದ ನಿರ್ದಿಷ್ಟ ಉತ್ಪನ್ನಗಳ ರಫ್ತುಗಳನ್ನು ಉತ್ತೇಜಿಸುವ ಉದ್ದೇಶದಿಂದ ರಫ್ತು ವಲಯಗಳನ್ನು ಕ್ಲಸ್ಟರ್ ವಿಧಾನದಲ್ಲಿ ಸ್ಥಾಪಿಸಲಾಗಿದೆ. ಇದರ ಮುಖ್ಯ ಉದ್ದೇಶ ಕೃಷಿ ಉತ್ಪನ್ನಗಳ ಮಾರುಕಟ್ಟೆ ವಿಸ್ತರಣೆ, ಬೃಹತ್ ಉತ್ಪಾದನೆಯಿಂದ ಆಂತರಿಕ ಮಿತವ್ಯಯಗಳ ಅನುಕೂಲತೆ ಪಡೆಯುವುದು, ಉತ್ಪಾದನೆ ವೆಚ್ಚ ಹೆಚ್ಚಳ, ಉತ್ಪನ್ನಗಳ ಗುಣಮಟ್ಟ ಸುಧಾರಣೆ, ಉದ್ಯೋಗಾವಕಾಶ ಹೆಚ್ಚಳ, ಸಂಶೋಧನೆ & ಅಭಿವೃದ್ಧಿ ಮುಖ್ಯ ಉದ್ದೇಶಗಳಾಗಿವೆ.
+ ದೇಶದ 20 ರಾಜ್ಯಗಳ 230 ಜಿಲ್ಲೆಗಳಲ್ಲಿ 35 ಬೆಳೆಗಳಿಗೆ ಸಂಬಂಧಿಸಿದ 60 ಕೃಷಿ ರಫ್ತು ವಲಯಗಳನ್ನು 1,724 ಕೋಟಿ ವೆಚ್ಚದಲ್ಲಿ ಸ್ಥಾಪಿಸಲಾಗಿದೆ. 2001 ರಲ್ಲಿ **ಆಂಧ್ರಪ್ರದೇಶದ ಗುಂಟೂರಿನಲ್ಲಿ** ಮೆಣಸಿನಕಾಯಿ ಉತ್ಪನ್ನದ ರಫ್ತಿಗಾಗಿ ಮೊದಲ ಬಾರಿಗೆ, ಕೃಷಿ ರಫ್ತು ವಲಯ ಕೇಂದ್ರವನ್ನು ಸ್ಥಾಪಿಸಲಾಗಿದ್ದು, **ಮಹಾರಾಷ್ಟ್ರ** ಹೂವು, ಬೆಳೆಗೆ ಸಂಬಂಧಿಸಿದಂತೆ 168 ಕೋಟಿ ಬಂಡವಾಳ ಹೂಡಿಕೆ ಮಾಡಿರುವ ದಾಖಲೆಯನ್ನು ಮಾಡಿದೆ.
+ **ಕರ್ನಾಟಕ** ಬಂಡವಾಳ ಹೂಡಿಕೆ ಮಾಡಿದ 3ನೇ ಅತಿ ದೊಡ್ಡ ರಾಜ್ಯವಾಗಿ ಹೊರ ಹೊಮ್ಮಿದೆ.

**ಭಾರತದಲ್ಲಿ ಕಂಡು ಬರುವ ಕೃಷಿ ರಫ್ತು ವಲಯಗಳು**

| ಉತ್ಪನ್ನ | ರಾಜ್ಯ |
|---|---|
| ಡಾರ್ಜಿಲಿಂಗ್ ಚಹಾ, ಮಾವಿನಹಣ್ಣು | ಪ. ಬಂಗಾಳ |
| ಹೂವು, ವೆನಿಲ್ಲಾ, ಘೆರ್ಕಿನ್ಸ್ | ಕರ್ನಾಟಕ |
| ಬಾಸುಮತಿ ಅಕ್ಕಿ, ಹೂವು | ಉತ್ತರಖಂಡ |
| ಆಲೂಗಡ್ಡೆ | ಪಂಜಾಬ್ |
| ಮೆಣಸಿನಕಾಯಿ | ಆಂಧ್ರಪ್ರದೇಶ |
| ಸೇಬು | ಜಮ್ಮು & ಕಾಶ್ಮೀರ |
| ಈರಳ್ಳಿ | ಗುಜರಾತ್ |
| ದನಿಯಾ | ರಾಜಸ್ಥಾನ್ |
| ಹರಿಶಿಣ, ಜೀರಿಗೆ | ಒಡಿಶಾ |
| ಗೋಧಿ | ಮಧ್ಯಪ್ರದೇಶ |
| ಸೇಬು | ಹಿಮಾಚಲ ಪ್ರದೇಶ |

### ಭಾರತೀಯ ವ್ಯಾಪಾರ ಪ್ರವರ್ಧನೆ ಸಂಘಟನೆ (Indian Trade Promotion Organisation)




ಭಾರತ ಸರ್ಕಾರದ ವಾಣಿಜ್ಯ ಸಚಿವಾಲಯದ ಅಧೀನದಲ್ಲಿ 1977 ಏಪ್ರಿಲ್ 1 ರಂದು ಈ ಸಂಸ್ಥೆ ದೇಶದ ರಫ್ತು & ಆಮದು ಸರಕುಗಳ ಉತ್ತೇಜನಕ್ಕಾಗಿ ದೈನಂದಿನ ವ್ಯವಹಾರ & ವಾಣಿಜ್ಯ ಮಾಹಿತಿ ನೀಡುವ ಉದ್ದೇಶದಿಂದ ಸ್ಥಾಪಿಸಲಾಗಿದೆ. ಇದರ ಕೇಂದ್ರ ಕಛೇರಿ ನವದೆಹಲಿಯಲ್ಲಿದ್ದು, ಮುಂಬೈ, ಬೆಂಗಳೂರು, ಕೋಲ್ಕತ್ತ, ಕಾನ್ಪುರ, ಚೆನ್ನೈಗಳಲ್ಲಿ ಪ್ರಾದೇಶಿಕ ಕಛೇರಿಗಳನ್ನು ಹೊಂದಿದೆ. ಹಾಗೂ ಜರ್ಮನಿ, ಜಪಾನ್, ಅಮೆರಿಕ & ಯು.ಎ.ಇ ರಾಷ್ಟ್ರಗಳಲ್ಲಿ ಅಂತರಾಷ್ಟ್ರೀಯ ಕಛೇರಿಗಳನ್ನು ಹೊಂದಿದೆ. ಕೇಂದ್ರ ಸರ್ಕಾರದ ಒಡೆತನದಲ್ಲಿರುವ ಮಿನಿರತ್ನ ಸ್ಥಾನಮಾನ ಪಡೆದ ಸಂಸ್ಥೆಯಾಗಿದೆ.

### ಭಾರತೀಯ ವಿದೇಶಿ ವ್ಯಾಪಾರ ಸಂಸ್ಥೆ (Indian Institute of Foreign Trade)




ಭಾರತ ಸರ್ಕಾರ 1963 ರ **ಸಹಕಾರಿ ಸಂಘಗಳ ಕಾಯ್ದೆ** ಯಡಿಯಲ್ಲಿ ಸ್ಥಾಪನೆ ಮಾಡಿದ್ದು, **ಕೋಲ್ಕತ್ತ & ನವದೆಹಲಿ**ಯಲ್ಲಿ ತನ್ನ ಕೇಂದ್ರ ಕಛೇರಿಗಳನ್ನು ಹೊಂದಿದೆ. ದೇಶೀಯ & ವಿದೇಶೀಯ ವ್ಯಾಪಾರ ನಿರ್ವಹಣೆಯನ್ನು ವೃತ್ತಿ ತರಬೇತಿಯನ್ನಾಗಿ ಮಾಡುವ ಉದ್ದೇಶ ಹೊಂದಿದೆ.

ಇದು ಮಾನವ ಸಂಪನ್ಮೂಲ ಅಭಿವೃದ್ಧಿಯೊಂದಿಗೆ ರಫ್ತನ್ನು ಹೆಚ್ಚಳ ಮಾಡುವುದು, ವಿದೇಶಿ ವ್ಯಾಪಾರದ ಮಾಹಿತಿಯನ್ನು ವಿಶ್ಲೇಷಣೆ ಮಾಡುವ & ದತ್ತಾಂಶಕ್ಕೆ ಸಂಬಂಧಿಸಿದ ಸಂಶೋಧನೆ ಕೈಗೊಳ್ಳುವ ಸಾರ್ವಜನಿಕ ವ್ಯವಹಾರ ಸಂಸ್ಥೆಯಾಗಿದೆ. ಭಾರತದ ಆರ್ಥಿಕತೆಯ ಅಂತರಾಷ್ಟ್ರೀಕರಣಕ್ಕೆ ಅಗತ್ಯವಾದ ಹೊಸ ಕೌಶಲ್ಯ ಪರಿಕಲನೆ & ವಿಚಾರಗಳನ್ನು ನೀಡುವ ಸಂಸ್ಥೆಯಾಗಿದೆ.

# ಕೃಷಿ ಗಣತಿ (Agricultural Census)

ಕೃಷಿಯು ಭಾರತೀಯ ಅರ್ಥ ವ್ಯವಸ್ಥೆ ಮೇಲೆ ಮಹತ್ವದ ಪಾತ್ರ ವಹಿಸುತ್ತದೆ. ದೇಶದ ಆಹಾರ ಭದ್ರತೆಯ ಭರವಸೆ ನೀಡುವ ಅರ್ಥ ವ್ಯವಸ್ಥೆಯ ಉಜ್ವಲ ವಲಯವಾಗಿದೆ. ಕೃಷಿ ವಲಯವು ಭಾರತ ದೇಶದ ಜನಸಂಖ್ಯೆಗೆ ಅತಿ ಹೆಚ್ಚು ಉದ್ಯೋಗ ಮತ್ತು ಜೀವನ ಮಟ್ಟ ಒದಗಿಸಿದೆ. ದೇಶದ ಕೃಷಿ, ಭೂ ಹಿಡುವಳಿದಾರರು & ಕೃಷಿ ಬಳಕೆ ಬಗ್ಗೆ ಮಾಹಿತಿ ಸಂಗ್ರಹಿಸಿ, ವಿಶ್ಲೇಷಿಸಲು ಭಾರತ ಸರ್ಕಾರದ ಕೃಷಿ ಸಚಿವಾಲಯದ ಅಧೀನದಲ್ಲಿ ಕೃಷಿ ಮತ್ತು ಸಹಕಾರ ಸಚಿವಾಲಯವು ವಿಶ್ವ ಕೃಷಿ ಗಣತಿ ಕಾರ್ಯಕ್ರಮದ ಭಾಗವಾಗಿ 1970-71ರಲ್ಲಿ ದೇಶಾದ್ಯಂತ ಪ್ರತಿ ಐದು ವರ್ಷಗಳಿಗೊಮ್ಮೆ ಕೃಷಿ ಗಣತಿಯನ್ನು ಕೈಗೊಂಡಿದೆ. ಇದುವರೆಗೂ 9 ಕೃಷಿ ಗಣತಿಗಳನ್ನು ಪೂರೈಸಿದ್ದು 2015-16ನೇ ಸಾಲಿನ 10ನೇ ಕೃಷಿ ಗಣತಿ ಗೆ 2016 ಫೆಬ್ರವರಿ 3 ರಂದು ಚಾಲನೆ ನೀಡಲಾಯಿತು.

ಭಾರತದ ಕೃಷಿ ಗಣತಿ ಬಗ್ಗೆ ಸಮಗ್ರ ಮಾಹಿತಿ ನೀಡಲಾಗಿದೆ.

### ಕೃಷಿ ಗಣತಿ ಪರಿಕಲ್ಪನೆ

- ಕೃಷಿ ಗಣತಿ ಕಾರ್ಯವು ಕೃಷಿ ಗಣತಿ ವರ್ಷ ಎನಿಸಿದ **ಜುಲೈನಿಂದ ಜೂನ್** ವರೆಗೆ ಜರುಗುತ್ತದೆ. ಕೃಷಿ ಗಣತಿಯನ್ನು ಭಾರತ ದೇಶದಲ್ಲಿ **ಕೃಷಿ, ಸಹಕಾರ ಮತ್ತು ರೈತರ ಕಲ್ಯಾಣ ಇಲಾಖೆಯು** ನಡೆಸುತ್ತಿದೆ.
- 1970–71ರಿಂದ ವಿಶ್ವ ಕೃಷಿ ಗಣತಿ ಕಾರ್ಯಕ್ರಮದ ಭಾಗವಾಗಿ ಭಾರತದ ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳಲ್ಲಿ ಮೊದಲ ಬಾರಿಗೆ ಕೃಷಿ ಗಣತಿಯನ್ನು ಕೈಗೊಳ್ಳಲಾಯಿತು.
- ಭಾರತದಲ್ಲಿ ಕೃಷಿ ಗಣತಿಯನ್ನು ಕೈಗೊಳ್ಳುವ ಮೊದಲು **FAO** ಪ್ರತಿ 10 ವರ್ಷಕ್ಕೊಮ್ಮೆ ನಡೆಸುವ ವಿಶ್ವ ಕೃಷಿ ಗಣತಿ (World Agricultural Census)ಗಾಗಿ ನ್ಯಾಷನಲ್ ಸ್ಯಾಂಪಲ್ ಸರ್ವೆ ನಿರ್ದೇಶನಾಲಯ (ಪ್ರಸ್ತುತವಾಗಿ ನ್ಯಾಷನಲ್ ಸ್ಯಾಂಪಲ್ ಸರ್ವೆ ಕಚೇರಿ) ದವರು ಸಂಗ್ರಹಿಸಿದ ಮಾಹಿತಿಯನ್ನು ಬಳಸಿಕೊಳ್ಳಲಾಯಿತು.
- ಕೃಷಿ ಗಣತಿಯು ಕೃಷಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ಅಂಕಿ ಅಂಶಗಳನ್ನು ಸಂಗ್ರಹಿಸುವುದು ಮತ್ತು ನಿರ್ವಹಿಸುವುದು. ಹಾಗೂ ಕೃಷಿಗೆ ಸಂಬಂಧಿಸಿದ ಕಾರ್ಯನೀತಿ ಮತ್ತು ಕಾರ್ಯಕ್ರಮಗಳನ್ನು ಯೋಜಿಸಲು ಮತ್ತು ಮೌಲ್ಯಮಾಪನ ಮಾಡಲು ಸಹಕಾರಿಯಾಗುತ್ತದೆ.

**ಭಾರತದಲ್ಲಿ ಕೃಷಿ ಗಣತಿ**

| ಸಂಖ್ಯೆ | ವರ್ಷ | ಸಂಖ್ಯೆ | ವರ್ಷ |
|---|---|---|---|
| 1 | 1970–71 | 2 | 1976–77 |
| 3 | 1980–81 | 4 | 1985–86 |
| 5 | 1990–91 | 6 | 1995–96 |
| 7 | 2000–01 | 8 | 2005–06 |
| 9 | 2010–11 | **10** | **2015-16** |

### ಕೃಷಿ ಗಣತಿಯ ಹಂತಗಳು

- ಭಾರತದಲ್ಲಿ ಕೃಷಿ ಗಣತಿಯನ್ನು ಮೂರು ಹಂತಗಳಲ್ಲಿ ಕೈಗೊಳ್ಳಲಾಗುವುದು.
- ಗಣತಿ ಕಮ್ ಸ್ಯಾಂಪಲ್ ಸರ್ವೆ (Census-cum Sample Survey) ಆಧಾರದ ಮೇಲೆ ನಡೆಸಲಾಗುವುದು.

#### ಮೊದಲ ಹಂತ (Phase-I)

- ಈ ಹಂತದಲ್ಲಿ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳ ಭೂದಾಖಲೆಗಳಿಂದ ಭೂಹಿಡುವಳಿ ಮತ್ತು ಸಾಮಾಜಿಕ ಲಕ್ಷಣಗಳನ್ನು ಪಟ್ಟಿ ಮಾಡಲಾಗುವುದು.
- ಭೂದಾಖಲೆ ರಹಿತ ರಾಜ್ಯಗಳು ಅಥವಾ ಕೇಂದ್ರಾಡಳಿತ ಪ್ರದೇಶಗಳಲ್ಲಿ ಶೇ 20ರಷ್ಟು ಹಳ್ಳಿಗಳ ನಮೂನೆಗಳನ್ನು ಸಂಗ್ರಹಿಸಲಾಗುವುದು.

#### ಎರಡನೇ ಹಂತ (Phase-II)

- ಕೃಷಿ ಲಕ್ಷಣಗಳ ದತ್ತಾಂಶವನ್ನು ದತ್ತಾಂಶ ಆಧಾರಿತವಾಗಿ ಶೇ 20ರಷ್ಟು ಹಳ್ಳಿಗಳಲ್ಲಿ ಸಂಗ್ರಹಿಸಲಾಗುತ್ತದೆ.

#### ಮೂರನೇ ಹಂತ (Phase-III)

- ಭೂ ಹಿಡುವಳಿದಾರರ ಶೇ7ರಷ್ಟು ಹಳ್ಳಿಗಳಿಂದ ನಮೂನೆ ಆಧಾರಿತವಾಗಿ ಇನ್‌ಪುಟ್ ಬಳಕೆ ವಿನ್ಯಾಸ ಸಂಗ್ರಹಿಸುವುದು. ಈ ಹಂತದಲ್ಲಿ ಗೊಬ್ಬರ, ಕೃಷಿ ಬಳಕೆ ಯಂತ್ರ ಮತ್ತು ಅನ್ವಯ ಬೀಜ ನೀಡಲಾಗುವುದು.

## ಭಾರತದಲ್ಲಿ ಭೂಹಿಡುವಳಿದಾರರು

| | |
|---|---|
| ಅತಿ ಸಣ್ಣ ಹಿಡುವಳಿದಾರರು (Marginal Holdings) | 1 ಹೆಕ್ಟೇರ್ ಅಥವಾ ಕಡಿಮೆ |
| ಸಣ್ಣ ಹಿಡುವಳಿದಾರರು (Small Holdings) | 1ರಿಂದ 2 ಹೆಕ್ಟೇರ್ |
| ಅರೆ ಮಧ್ಯಮ ಹಿಡುವಳಿದಾರರು (Semi-Medium) | 2ರಿಂದ 4 ಹೆಕ್ಟೇರ್ |
| ಮಧ್ಯಮ ಹಿಡುವಳಿದಾರರು (Medium Holdings) | 4ರಿಂದ 10ಹೆಕ್ಟೇರ್ |
| ದೊಡ್ಡ ಹಿಡುವಳಿದಾರರು (Large Holdings) | 10 ಹೆಕ್ಟೇರ್‌ಗಿಂತ ಹೆಚ್ಚಿನ ಭೂಮಿ |

## ದೇಶದಲ್ಲಿ ಕೃಷಿ ಹಿಡುವಳಿದಾರರಲ್ಲಿ ರಾಜ್ಯಗಳ ಸ್ಥಾನಗಳು

| ರಾಜ್ಯಗಳು | ಕೃಷಿ ಹಿಡುವಳಿದಾರರ ಸಂಖ್ಯೆ |
|---|---|
| ಭಾರತ | 138.35ಮಿಲಿಯನ್ (13.8ಕೋಟಿ) |
| ಉತ್ತರ ಪ್ರದೇಶ | 23.33ಮಿಲಿಯನ್ (2.3ಕೋಟಿ) |
| ಬಿಹಾರ | 16.19 ಮಿಲಿಯನ್(1.6ಕೋಟಿ) |
| ಮಹಾರಾಷ್ಟ್ರ | 13.70 ಮಿಲಿಯನ್ (1.37ಕೋಟಿ) |
| ಆಂಧ್ರಪ್ರದೇಶ | 13.18 ಮಿಲಿಯನ್ (1.31ಕೋಟಿ) |
| ಕರ್ನಾಟಕ | 12.16 ಮಿಲಿಯನ್ (1.21ಕೋಟಿ) |
| ಗುಜರಾತ್ | 9.90ಮಿಲಿಯನ್ (0.9ಕೋ) |

## 2010-11ರ ಕೃಷಿ ಗಣತಿ ಮಾಹಿತಿಗಳು

| ಪ್ರಮುಖಾಂಶಗಳು | 2005-06 | 2010-11 |
|---|---|---|
| ಒಟ್ಟು ಕೃಷಿ ಹಿಡುವಳಿದಾರರು (ಕೋಟಿ) | 12.9 | 13.8 (7.6% ಏರಿಕೆ) |
| ಸರಾಸರಿ ಕೃಷಿ ಬಳಕೆ ಪ್ರಮಾಣ (ಹೆಕ್ಟೇರ್) | 1.23 | 1.15 |
| ಅತಿ ಸಣ್ಣ ಹಿಡುವಳಿ ಭೂಮಿ (ಮಿಲಿಯನ್ ಹೆಕ್ಟೇರ್) | 158.32 | 159.59 (0.08 ಏರಿಕೆ) |
| ಮಹಿಳಾ ಹಿಡುವಳಿದಾರರು (ಶೇಕಡಾವಾರು) | 11.70 | 12.78 |
| ಮಹಿಳಾ ಹಿಡುವಳಿದಾರರ ಕಾರ್ಯನಿರ್ವಹಣಾ ಪ್ರದೇಶ (ಶೇಕಡಾ) | 9.33 | 10.34 |
| ಸಣ್ಣ & ಅತಿಸಣ್ಣ ಹಿಡುವಳಿದಾರರು (ಶೇಕಡಾ) | 83.29 | 85.01 |
| ಸಣ್ಣ & ಅತಿ ಸಣ್ಣ ಹಿಡುವಳಿ ಭೂ ಪ್ರದೇಶ (ಶೇಕಡಾ) | 41.14 | 44.58 |
| ಅರೆ ಮಧ್ಯಮ & ಮಧ್ಯಮ ಹಿಡುವಳಿದಾರರು (ಶೇಕಡಾ) | 15.86 | 14.29 |
| ಅರೆ ಮಧ್ಯಮ & ಮಧ್ಯಮ ಭೂ ಪ್ರದೇಶ (ಶೇಕಡಾ) | 47.05 | 44.88 |
| ಅತಿ ದೊಡ್ಡ ಹಿಡುವಳಿದಾರರು(ಶೇಕಡಾ) | 0.85 | 0.70 |
| ಅತಿ ದೊಡ್ಡ ಭೂ ಪ್ರದೇಶ (ಶೇಕಡಾ) | 11.82 | 10.59 |

2010-11ರ ಕೃಷಿ ಗಣತಿಯಂತೆ ದೇಶದಲ್ಲಿ ವಿವಿಧ ಸಾಮಾಜಿಕ ಗುಂಪುಗಳು ಕೃಷಿ ಗಣತಿಯಂತೆ ಶೇಕಡಾವಾರು ಪಾಲು

| ಸಾಮಾಜಿಕ ಗುಂಪು | ಕೃಷಿ ಹಿಡುವಳಿ ದಾರರು (ಶೇಕಡಾ) | ಕೃಷಿ ಹಿಡುವಳಿ ಪ್ರದೇಶ |
|---|---|---|
| 1) ಇತರೆ ವರ್ಗ | ಶೇ78.79% | 79.02% |
| 2) ಪರಿಶಿಷ್ಟ ಜಾತಿ (SC) | ಶೇ12.36 | 8.60% |
| 3) ಪರಿಶಿಷ್ಟ ಪಂಗಡ (ST) | ಶೇ8.68 | 11.42% |
| 4) ಸಾಂಸ್ಥಿಕ | 0.17% | 0.97% |

**ಚಂಡೀಘಡ:-** 2010-11 ರ ಕೃಷಿ ಗಣತಿಯಂತೆ ಅತಿ ಕಡಿಮೆ ಕೃಷಿ ಹಿಡುವಳಿ ಭೂಮಿ & ಹಿಡುವಳಿದಾರರನ್ನು ಹೊಂದಿರುವ ಕೇಂದ್ರಾಡಳಿತ ಪ್ರದೇಶವಾಗಿದೆ.

## ಕೃಷಿ ಹಿಡುವಳಿದಾರರ ಶೇಕಡಾವಾರು ಹೆಚ್ಚಳ

| | |
|---|---|
| ಗೋವಾ | 47.71% |
| ಮಧ್ಯಪ್ರದೇಶ | 12.19 % |
| ರಾಜಸ್ಥಾನ | 11.35% |
| ಬಿಹಾರ | 10.47% |
| ಡಾಮನ್ ಮತ್ತು ಡಿಯು | 9.60% |
| ಆಂಧ್ರಪ್ರದೇಶ | 9.39% |
| ಚಂಡಿಘಡ | 8.26% |
| ಒಡಿಶಾ | 7.14% |
| ಪಾಂಡುಚೇರಿ | 5.56% |
| ನಾಗಾಲ್ಯಾಂಡ್ | 5.41% |
| ಜಮ್ಮು ಮತ್ತು ಕಾಶ್ಮೀರ | 5.20% |

**ಜಾರ್ಖಂಡ್:-** 2010-11 ರ ಕೃಷಿ ಗಣತಿಯಲ್ಲಿ ಮೊದಲ ಬಾರಿಗೆ ಭಾಗವಹಿಸಿದೆ. ದೇಶದ 13 ರಾಜ್ಯಗಳಲ್ಲಿ 91% ರಷ್ಟು ಹಿಡುವಳಿದಾರರ & 88% ಬಳಕೆದಾರರ ಪ್ರದೇಶವಿದೆ.

# ಸಾರ್ವಜನಿಕ ವಲಯದ ಉದ್ಯಮಗಳು
# Public Sectors Undertakings

ಭಾರತದ ಆರ್ಥಿಕತೆಯಲ್ಲಿ ಸರ್ಕಾರದ ಒಡೆತನ & ನಿಯಂತ್ರಣ ನಿರ್ವಹಣೆಗೊಳಪಟ್ಟಿರುವ ಉದ್ಯಮಗಳನ್ನು ಸಾರ್ವಜನಿಕ ವಲಯದ ಉದ್ಯಮಗಳು ಎನ್ನಬಹುದು. ಇವು ಭಾರತದ ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರಗಳ ಏಕಮಾಲೀಕತ್ವ ಅಥವಾ ಸಹಭಾಗಿತ್ವದಲ್ಲಿ ಕಾರ್ಯನಿರ್ವಹಣೆ ಮಾಡುತ್ತಿರುತ್ತವೆ. ಸಾರ್ವಜನಿಕ ವಲಯದ ಉದ್ಯಮಗಳನ್ನು ಕೇಂದ್ರ ಸಾರ್ವಜನಿಕ ವಲಯದ ಉದ್ದಿಮೆ, ಕೇಂದ್ರ-ರಾಜ್ಯ ಸಹಭಾಗಿ ವಲಯದ ಉದ್ಯಮಗಳು & ರಾಜ್ಯ ಸಾರ್ವಜನಿಕ ವಲಯದ ಉದ್ದಿಮೆಗಳು ಎಂದು ವರ್ಗೀಕರಿಸಬಹುದು.

## ಕೈಗಾರಿಕೆಗಳು & ಅವುಗಳ ವರ್ಗೀಕರಣ

- ಭಾರತದ ಆರ್ಥಿಕತೆಯ ಮಾಧ್ಯಮಿಕ ಕ್ಷೇತ್ರವಾದ ಕೈಗಾರಿಕೆ ಕಚ್ಚಾ ವಸ್ತುವನ್ನು ಸಿದ್ದ ವಸ್ತುವನ್ನಾಗಿ ಮಾರ್ಪಡಿಸುವ ಆರ್ಥಿಕ ಚಟುವಟಿಕೆಗೆ ಸಂಬಂಧಿಸಿದೆ.
- ಕೈಗಾರಿಕೆಗಳು ಮುಖ್ಯವಾಗಿ **ಪ್ರಾಥಮಿಕ** ಅಥವಾ ಮೂಲ ಕೈಗಾರಿಕೆಗಳು, **ದ್ವಿತೀಯ** ಕೈಗಾರಿಕೆಗಳು & **ತೃತೀಯ** ಕೈಗಾರಿಕೆಗಳು ಎಂಬ ವರ್ಗೀಕರಣ ಹೊಂದಿದೆ.
- ಮತ್ತೊಂದು ರೀತಿಯಲ್ಲಿ ಕೈಗಾರಿಕೆಗಳು **ಸಣ್ಣ & ಗುಡಿ ಕೈಗಾರಿಕೆ, ಬೃಹತ್ ಪ್ರಮಾಣದ ಕೈಗಾರಿಕೆ** ಇವುಗಳಲ್ಲಿ ವ್ಯವಸಾಯಾಧಾರಿತ ಕೈಗಾರಿಕೆ & ಖನಿಜಾಧಾರಿತ ಕೈಗಾರಿಕೆಗಳು ಎಂಬ ವಿಧವಿದೆ.
- **ಬಂಡವಾಳ ಹೂಡಿಕೆ ಆಧಾರದ ಮೇಲೆ** ಸೂಕ್ಷ್ಮ ಕೈಗಾರಿಕೆಗಳು ಸಣ್ಣ ಪ್ರಮಾಣದ ಕೈಗಾರಿಕೆಗಳು, ಮಧ್ಯಮ ಪ್ರಮಾಣದ ಕೈಗಾರಿಕೆಗಳು & ಬೃಹತ್ ಪ್ರಮಾಣದ ಕೈಗಾರಿಕೆಗಳು
- **ಮಾಲೀಕತ್ವದ ಆಧಾರದ ಮೇಲೆ** ಖಾಸಗಿ ವಲಯ & ಸಾರ್ವಜನಿಕ ವಲಯದ ಕೈಗಾರಿಕೆಗಳು ಎಂದು ವರ್ಗೀಕರಿಸಬಹುದು.

## ಕೈಗಾರಿಕಾ ಬೆಳವಣಿಗೆ ಐತಿಹಾಸಿಕ ಹಿನ್ನಲೆ

- ಭಾರತ ಕೃಷಿ ಪ್ರಧಾನ ಆರ್ಥಿಕತೆಯಾಗಿದ್ದು, 1947 ರ ಸ್ವಾತಂತ್ರ್ಯಕ್ಕೆ ಮುನ್ನ ಕೈಗಾರಿಕಾಭಿವೃದ್ಧಿ ನಿರೀಕ್ಷಿತ ಪ್ರಗತಿಯಲ್ಲಿರಲಿಲ್ಲ. ಆದರೆ ದೇಶದ ತ್ವರಿತ ಆರ್ಥಿಕಾಭಿವೃದ್ಧಿ, ಆರ್ಥಿಕ ಸಾರ್ವಭೌಮತ್ವ ಸಾಧಿಸಲು **ಕೈಗಾರಿಕೀಕರಣ ಇಲ್ಲವೇ ವಿನಾಶ (Industrialize or Perish)** ಎಂಬ **ಸರ್. ಎಂ. ವಿ.** ಅವರ ಮಾತಿನಂತೆ **ಬಾಂಬೆ ಯೋಜನೆಯಲ್ಲಿ** ಕೈಗಾರಿಕೆಗಳ ಸ್ಥಾಪನೆ & ನಿಯಂತ್ರಣದಲ್ಲಿ ಸರ್ಕಾರದ ಹಸ್ತಕ್ಷೇಪ ಅಗತ್ಯ ಎಂಬ ವಿಚಾರವನ್ನು ಮನಗಾಣಬಹುದು.
- ಸ್ವಾತಂತ್ರ್ಯಾನಂತರ **1948** ರಲ್ಲಿ ಭಾರತ ಸರ್ಕಾರ **ಮೊಟ್ಟ ಮೊದಲ ಕೈಗಾರಿಕಾ ನೀತಿಯನ್ನು** ಘೋಷಣೆ ಮಾಡಿತು. ಇದು ದೇಶದಲ್ಲಿ ಕೈಗಾರಿಕಾಭಿವೃದ್ಧಿಗೆ ಬುನಾದಿಯಾಗಿದೆ.
- ಕೈಗಾರಿಕಾಭಿವೃದ್ಧಿಯಲ್ಲಿ ಸರ್ಕಾರದ ಅಗತ್ಯ ಸಬಲೀಕೃತ ಕ್ರಮಗಳನ್ನು ಅನುಸರಿಸಲು **ಕೈಗಾರಿಕಾಭಿವೃದ್ಧಿ & ನಿಯಂತ್ರಣ ಕಾಯ್ದೆ – 1951** ರಲ್ಲಿ ರೂಪಿತವಾಯಿತು.
- ಭಾರತದ ಮೊದಲ ಪ್ರಧಾನಿ ನೆಹರೂ ಅವರು ಮಿಶ್ರ ಸಮಾಜವಾದಿ ಆರ್ಥಿಕತೆಯ ಕನಸನ್ನು ಹೊಂದಿದ್ದರು. ಆಮದು ಬದಲೀಕರಣ & ಕೈಗಾರಿಕೀಕರಣ ಆರ್ಥಿಕ ನೀತಿಯನ್ನು ರೂಪಿಸಲು ದೇಶದಲ್ಲಿ ಬೃಹತ್ & ಮೂಲ ಕೈಗಾರಿಕೆಗಳ ಸ್ಥಾಪನೆಯ ಮೂಲಕ ಆರ್ಥಿಕತೆಯ ಆಧುನೀಕರಣಕ್ಕೆ ನಾಂದಿ ಹಾಡಿದರು.
- **1956 ರಿಂದ 1961** ರ 2ನೇ ಪಂಚವಾರ್ಷಿಕ ಯೋಜನೆ **ಕೈಗಾರಿಕಾಭಿವೃದ್ಧಿಗೆ ಆದ್ಯತೆಯನ್ನು** ನೀಡಿದ್ದು, ನೆಹರೂ ಅವರು ರಾಷ್ಟ್ರೀಯ ಕೈಗಾರಿಕೀಕರಣ ನೀತಿಯನ್ನು ಅಭಿವೃದ್ಧಿ ಪಡಿಸಿದರು. ಇದರ ಮುಖ್ಯ ಶಿಲ್ಪಿಯಾಗಿ **ಪಿ.ಸಿ. ಮಹಲನೋಬಿಸ್** ರವರನ್ನು ಗುರ್ತಿಸಬಹುದು.
- 1956 ರ ಕೈಗಾರಿಕಾ ನೀತಿಯನ್ನು **ಭಾರತದ ಆರ್ಥಿಕ ಸಂವಿಧಾನ** ಎಂದು ಕರೆಯುತ್ತಾರೆ.

### ಕೇಂದ್ರ ಸಾರ್ವಜನಿಕ ವಲಯದ ಉದ್ದಿಮೆಗಳು:-

- ಸಂಪೂರ್ಣವಾಗಿ ಕೇಂದ್ರ ಸರ್ಕಾರದ ನೇರ ನಿಯಂತ್ರಣಕ್ಕೊಳಪಟ್ಟಿರುತ್ತವೆ. ಬಂಡವಾಳ ಹೂಡಿಕೆಯಲ್ಲಿ ಶೇ 51 ಕ್ಕಿಂತ ಹೆಚ್ಚಿನ ಪಾಲನ್ನು ಮೂಲ ಬಂಡವಾಳದಲ್ಲಿ ಹೊಂದಿರುತ್ತವೆ.

### ಭಾರತದ ಬೃಹತ್ ಕೈಗಾರಿಕೆ & ಸಾರ್ವಜನಿಕ ಉದ್ದಿಮೆ ಸಚಿವಾಲಯ:-

- ದೇಶದ ಸಾರ್ವಜನಿಕ ವಲಯದ ಉದ್ದಿಮೆಗಳನ್ನು ನಿಯಂತ್ರಣ ಮಾಡುವ ಸಂಸ್ಥೆಯಾಗಿದೆ.

### ಸಾರ್ವಜನಿಕ ವಲಯದ ಕಂಪನಿಗಳ ಇತ್ತೀಚಿನ ಬೆಳವಣಿಗೆ

2016-17 ರ ಕೇಂದ್ರ ಮುಂಗಡಪತ್ರದಲ್ಲಿ ವಿತ್ತ ಸಚಿವ ಅರುಣ್ ಜೇಟ್ಲಿ ಅವರ ಪ್ರಸ್ತಾಪದಂತೆ 2017 ಜನವರಿ 23 ರಂದು ಭಾರತ ಸರ್ಕಾರ ಸಾರ್ವಜನಿಕ ವಲಯದ ಉದ್ದಿಮೆಗಳಿಗೆ **ಸಲಹಾ ಪಾತ್ರವನ್ನು** ಒದಗಿಸುವ ಜವಾಬ್ದಾರಿಯನ್ನು Department of Investment & Public Asset Management (DIPAM) ಸಂಸ್ಥೆಯಿಂದ Department of Economic Affairs (DEA) ಗೆ ವರ್ಗಾಯಿಸಲಾಯಿತು. ಈ ಸಂಸ್ಥೆಯು ಕೇಂದ್ರ ಹಣಕಾಸು ಸಚಿವಾಲಯದ ಅಧೀನದಲ್ಲಿದೆ. ಬಂಡವಾಳ ಹೂಡಿಕೆ ಹಿಂತೆಗೆತದ ಪ್ರಕ್ರಿಯೆಗೆ ಸಂಬಂಧಿಸಿದ ನೀತಿಯನ್ನು ರಾಷ್ಟ್ರೀಯ ಹೂಡಿಕೆ ನಿಧಿ ನಿರ್ಧರಿಸುತ್ತದೆ. ಈ ನಿಧಿಯು 2005 ರಲ್ಲಿ ಸ್ಥಾಪನೆಯಾಗಿದ್ದು, ಕೇಂದ್ರ ಸಾರ್ವಜನಿಕ ವಲಯದ ಉದ್ದಿಮೆಗಳ ಹೂಡಿಕೆ ಹಿಂತೆಗೆತವನ್ನು ನೋಡಿಕೊಳ್ಳುವ ಉಸ್ತುವಾರಿ ಸಂಸ್ಥೆಯಾಗಿದೆ. 2016-17 ರ ಕೇಂದ್ರ ಬಜೆಟ್‌ನ ಪ್ರಕಾರ ಸರ್ಕಾರಿ ಒಡೆತನದ ಕಂಪನಿಗಳಲ್ಲಿ ಸಾರ್ವಜನಿಕ ಷೇರುದಾರತ್ವವನ್ನು ಹೆಚ್ಚಿಸುವುದು, ಕಂಪನಿಗಳ ಉತ್ತರದಾಯಿತ್ವ & ಪಾರದರ್ಶಕತೆಯನ್ನು ಹೆಚ್ಚಿಸುವುದು ಇದರ ಮುಖ್ಯ ಉದ್ದೇಶವಾಗಿದೆ.

ಭಾರತದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸಾರ್ವಜನಿಕ ವಲಯದ ಉದ್ದಿಮೆಗಳನ್ನು ನಿಗದಿತ ಮಾನದಂಡದ ಆಧಾರದ ಮೇಲೆ ಮಹಾರತ್ನ (7), ನವರತ್ನ (17), ಮಿನಿರತ್ನ (73) ಎಂಬ ಮೂರು ಸ್ಥಾನಮಾನಗಳನ್ನು ಅನುಕ್ರಮವಾಗಿ ನೀಡಿದೆ. ಇವುಗಳು ಸಾಪೇಕ್ಷ ಅನುಕೂಲತೆಯನ್ನು ಹೊಂದಿರುವ ಸಾರ್ವಜನಿಕ ವಲಯದ ಕಂಪನಿಗಳಾಗಿದ್ದು, ಜಾಗತಿಕ ಮಾರುಕಟ್ಟೆಯಲ್ಲಿ ಸ್ಪರ್ಧೆ ನಡೆಸುವ ಹೆಚ್ಚುವರಿ ಸಾಮರ್ಥ್ಯವನ್ನು ಬೆಳೆಸುವ ಮುಖ್ಯ ಉದ್ದೇಶ ಹೊಂದಿವೆ.

## ಮಹಾರತ್ನ (Maha Ratna)

- ಯಾವ ಕಂಪನಿಗಳ ಕಾರ್ಯನಿರತ ಬಂಡವಾಳ ಹೂಡಿಕೆಯು **ಒಂದು ಸಾವಿರ ಕೋಟಿಯಿಂದ 5 ಸಾವಿರ ಕೋಟಿ** ಇರುತ್ತದೋ ಅಂತಹ ಸಂಸ್ಥೆಗಳನ್ನು ಮಹಾರತ್ನಗಳೆಂದು ಕರೆಯಲಾಗುತ್ತದೆ.
- 2009-10 ರಲ್ಲಿ ಭಾರತ ಸರ್ಕಾರವು ಮಹಾರತ್ನ ಸ್ಥಾನಮಾನವನ್ನು ಆರಂಭಿಸಿತು.

**ಪ್ರಯೋಜನಗಳು:-**

- ಕೇಂದ್ರ ಸರ್ಕಾರಿ ಸ್ವಾಮ್ಯದ (ಪಿ.ಎಸ್.ಯು) ಈ ಉದ್ದಿಮೆ ಸಂಸ್ಥೆಗಳು ಹಣಕಾಸಿನ ವಿಷಯ, ಆಡಳಿತ ನಿರ್ವಹಣೆ, ವಿಲೀನ ಸ್ವಾಧೀನ & ನೇಮಕಾತಿ ವಿಷಯಗಳಲ್ಲಿ ಹೆಚ್ಚು ಸ್ವಾತಂತ್ರ್ಯ ಪಡೆಯಲಿವೆ.

**ಉದ್ದೇಶ:-**

- ವಹಿವಾಟು ವಿಸ್ತರಿಸಿ ಜಾಗತಿಕ ದೈತ್ಯ ಸಂಸ್ಥೆಗಳಾಗಿ ಹೊರ ಹೊಮ್ಮಲು ಹೆಚ್ಚಿನ ಸ್ವಾಯತ್ತತೆ ನೀಡುವುದೇ ಈ ಮಹಾರತ್ನ ಸ್ಥಾನಮಾನ ನೀಡುವುದರ ಮುಖ್ಯ ಉದ್ದೇಶವಾಗಿದೆ.
- ದೇಶದ **ಬಹು ರಾಷ್ಟ್ರೀಯ ಸಂಸ್ಥೆಗಳಾಗಿ** ಬೆಳೆಯುವ ಅರ್ಹತೆಗಳಿರುವ ಪಿ.ಎಸ್.ಯು. ಗಳನ್ನು ಮಹಾರತ್ನಗಳೆಂದು ಪ್ರತ್ಯೇಕವಾಗಿ ಗುರುತಿಸಲಾಗಿದೆ.

**ಮಹಾರತ್ನ ಸ್ಥಾನ ಗುರುತಿಸುವ ವಿಧಾನಗಳು:- (ಕಂಪನಿ)**

- ನವರತ್ನ ಸ್ಥಾನಮಾನ ಹೊಂದಿರಬೇಕು.
- ಕಳೆದ 3 ವರ್ಷಗಳ ಕಾಲ ವಾರ್ಷಿಕ ನಿವ್ವಳ ಲಾಭವು 2500 ಕೋಟಿ ಇರಬೇಕು. ಆರಂಭದಲ್ಲಿ ಇದು 5 ಸಾವಿರ ಕೋಟಿ ಇತ್ತು.
- ಸಂಸ್ಥೆಯ ಒಟ್ಟು ಆಸ್ತಿಯ ಮೌಲ್ಯವು 10 ಸಾವಿರ ಕೋಟಿಗಳಿರಬೇಕು. ಆರಂಭದಲ್ಲಿ 15 ಸಾವಿರ ಕೋಟಿ ಇತ್ತು.
- ಸಂಸ್ಥೆಯ ನಿವ್ವಳ ವಹಿವಾಟು ರೂ. 20 ಸಾವಿರ ಕೋಟಿಗಳಿರಬೇಕು. ಜೊತೆಗೆ ಷೇರು ಪೇಟೆಯಲ್ಲಿ ವಹಿವಾಟು ನಡೆಸುತ್ತಿರಬೇಕು.
- ಸೆಬಿಯ ನಿಯಮಾನುಸಾರ ಕನಿಷ್ಠ ಸಾರ್ವಜನಿಕ ಷೇರುಗಳನ್ನು ಒಳಗೊಂಡಿದ್ದು, ಭಾರತೀಯ ಷೇರು ವಿನಿಮಯ ಕೇಂದ್ರದ ಪಟ್ಟಿಯಲ್ಲಿರಬೇಕು.
- ಜಾಗತಿಕವಾಗಿ ಗುರುತಿಸಿಕೊಂಡಿರಬೇಕು. ಅಥವಾ ಅಂತರಾಷ್ಟ್ರೀಯ ಕಾರ್ಯಾಚರಣೆ ಹೊಂದಿರಬೇಕು.

**ಮಹಾರತ್ನದ ಸ್ಥಾನಮಾನ ಪಡೆದ 7 ಸಾರ್ವಜನಿಕ ವಲಯದ ಉದ್ದಿಮೆಗಳು & ಸ್ಥಾಪನೆ ವರ್ಷ**

1) National Thermal Power Corporation (NTPC) - NewDelhi - 1975
2) Oil and Natural Gas Corporation (ONGC) - Dehradun (Uttarakhand) - 1956
3) Steel Authority of India Limited (SAIL) - NewDelhi - 1954
4) Bharat Heavy Electricals Ltd. (BHEL) - New Delhi - 1964
5) Indian Oil Corporation Limited (IOCL) - NewDelhi - 1959
6) Coal India Limited (CIL) - Kolkatta - 1975
7) Gas Authority of India Limited(GAIL)- NewDelhi - 1984

## ನವರತ್ನ (Nava Ratna)

- ಭಾರತ ಸರ್ಕಾರವು 1997 ರಲ್ಲಿ ಸಾರ್ವಜನಿಕ ವಲಯದ ಉದ್ದಿಮೆಗಳನ್ನು ಗುರುತಿಸಿ, 'ನವರತ್ನ' ಸ್ಥಾನಮಾನ ... ನವರತ್ನ ಎಂಬುದು 9 ಬೆಲೆಬಾಳುವ ರತ್ನಗಳು ಎಂದರ್ಥ. ವಿಕ್ರಮಾದಿತ್ಯ & ಅಕ್ಬರನ ಆಡಳಿತಾವಧಿಯಲ್ಲಿ 9 ... ಆಡಳಿತಗಾರರನ್ನು ಸೂಚಿಸುತ್ತದೆ.
- ನಿವ್ವಳ ಲಾಭ, ಕಂಪನಿಯ ನಿವ್ವಳ ಮೌಲ್ಯ, ಒಟ್ಟು ಮಾನವ ಶಕ್ತಿ ಮೇಲಿನ ವೆಚ್ಚ, ಉತ್ಪಾದನಾ ಒಟ್ಟು ವೆಚ್ಚ ... ತೊಡಗಿಸಿದ ಬಂಡವಾಳ & ಸವಕಳಿ ವೆಚ್ಚ ಕಳೆಯುವ ಮುನ್ನ ಕಂಪನಿಯ ಲಾಭ ಈ ಮಾನದಂಡಗಳ ... ಮೇಲೆ 4 ಸ್ವತಂತ್ರ ನಿರ್ದೇಶಕರು & ಮಂಡಳಿ ಸಾರ್ವಜನಿಕ ವಲಯದ ಕಂಪನಿಗಳನ್ನು ನವರತ್ನ ಕಂಪನಿಗಳೆಂದು ಗುರುತಿಸುತ್ತದೆ.
- ಕಂಪನಿಯು ಒಂದು ನಿರ್ದಿಷ್ಟ ಯೋಜನೆಯಲ್ಲಿ 1,000 ಕೋಟಿಯವರೆಗೆ ಅಥವಾ ಶೇ 15 ರಷ್ಟು ನಿವ್ವಳ ಮೌಲ್ಯ ... ಅಥವಾ ಒಂದು ವರ್ಷದಲ್ಲಿ 1,000 ಕೋಟಿ ಲಾಭ ದಾಟಿದ ಕಂಪನಿಗಳನ್ನು ನವರತ್ನ ಕಂಪನಿಗಳೆಂದು ಗುರುತಿ...
- ನವರತ್ನ ಸ್ಥಾನ ಪಡೆದ ಸಂಸ್ಥೆಗಳು ಜಾಗತಿಕ ಮಾರುಕಟ್ಟೆಯಲ್ಲಿ ತನ್ನದೇ ಆದ ಕೊಡುಗೆಗಳನ್ನು ನೀಡಿವೆ.
- ಸಾರ್ವಜನಿಕ ವಲಯದ ಉದ್ಯಮಗಳು ಸಾರ್ವಜನಿಕ ವಲಯದ ಉದ್ದಿಮೆ ಇಲಾಖೆಯಿಂದ ನವರತ್ನ ಸ್ಥಾನಮಾನ ಪಡೆಯುವುದರಿಂದ ಅನೇಕ ಪ್ರಯೋಜನಗಳನ್ನು ಪಡೆಯುತ್ತವೆ.

### ಭಾರತದಲ್ಲಿ ನವರತ್ನ ಸ್ಥಾನ ಪಡೆದ ಪ್ರಮುಖ 17 ಸಂಸ್ಥೆಗಳು

1. Bharat Electronics Limited
2. Bharat Petroleum Corporation Limited
3. Container Corporation of India Limited
4. Engineers India Limited
5. Hindustan Aeronautics Limited
6. Hindustan Petroleum Corporation Limited
7. Mahanagar Telephone Nigam Limited
8. National Aluminium Company Limited
9. NBCC (India) Limited
10. NMDC Limited
11. NLC India Limited
12. Oil India Limited
13. Power Finance Corporation Limited
14. Power Grid Corporation of India Limited
15. Rashtriya Ispat Nigam Limited
16. Rural Electrification Corporation Limited
17. Shipping Corporation of India Limited

## ಮಿನಿರತ್ನ (Mini Ratna)

- 1997 ಅಕ್ಟೋಬರ್‌ನಲ್ಲಿ ಭಾರತ ಸರ್ಕಾರ ದೇಶದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಕೈಗಾರಿಕೆಗಳಲ್ಲಿ ನವರತ್ನ ಸ್ಥಾನಮಾನ ಪಡೆದ ಕೈಗಾರಿಕೆಗಳನ್ನು ಹೊರತುಪಡಿಸಿ, ಇತರೆ ನಿಗದಿತ ಅರ್ಹತೆ & ಮಾನದಂಡಗಳನ್ನು ಪೂರೈಸಲ್ಪಟ್ಟ ಕೆಲವು ಕೈಗಾರಿಕೆಗಳಿಗೆ ಹಣಕಾಸು ಸ್ವಾಯತ್ತತೆ ನೀಡಿ ದಕ್ಷ & ಪೈಪೋಟಿಯನ್ನಾಗಿಸಲು ಮಿನಿರತ್ನ ಸ್ಥಾನಮಾನವನ್ನು ಮಿನಿರತ್ನ ವರ್ಗ-1 & ವರ್ಗ-2 ಎಂದು ನೀಡಲಾಯಿತು.

**ಮಿನಿರತ್ನದಲ್ಲಿ 2 ವಿಧಗಳಿವೆ**

### 1) ಮಿನಿರತ್ನ ವರ್ಗ-1:- (59 ಕಂಪನಿಗಳು)

- ಭಾರತ ಸರ್ಕಾರವು ಕೈಗಾರಿಕೆಗಳಿಗೆ ಸಂಬಂಧಿಸಿದಂತೆ ಸತತವಾಗಿ 3 ವರ್ಷಗಳ ಒಟ್ಟು ಆದಾಯವು 30 ಕೋಟಿ ಅಥವಾ 3 ವರ್ಷಗಳಲ್ಲಿ ಒಂದು ವ... ಅದಕ್ಕಿಂತ ಹೆಚ್ಚು ಗಳಿಸಿರಬೇಕು ಎಂಬ ಅರ್ಹತೆಯ... ಹೊಂದಿದ ಈ ಕೆಳಗಿನ ಕೈಗಾರಿಕೆಗಳನ್ನು ಮಿನಿ... ವರ್ಗ-1 ಎಂದು ಗುರುತಿಸಿದೆ.

1. Airports Authority of India
2. Antrix Corporation Limited
3. Balmer Lawrie & Co. Limited
4. Bharat Coking Coal Limited
5. Bharat Dynamics Limited
6. BEML Limited
7. Bharat Sanchar Nigam Limited
8. Bridge & Roof Company (India) Limited
9. Central Warehousing Corporation

## ಭಾರತ ಮಾಲಾ ಯೋಜನೆ




ದೇಶದ ಹೆದ್ದಾರಿಗಳ ಅಭಿವೃದ್ಧಿಗಾಗಿ ಕೇಂದ್ರ ಸರ್ಕಾರವು **ಭಾರತ ಮಾಲಾ** ಎಂಬ ಸಮಗ್ರ ರಸ್ತೆ ಯೋಜನೆಯನ್ನು 10ಲಕ್ಷ ಕೋಟಿ ರೂ ವೆಚ್ಚದಲ್ಲಿ ಜಾರಿಗೆ ತರಲು ಉದ್ದೇಶಿಸಿದೆ.

ಈ ಯೋಜನೆಯು ದೇಶದ **ಗುಜರಾತ್‌ನಿಂದ ಮಿಜೋರಾಂವರೆಗೆ** ಪಶ್ಚಿಮದಿಂದ ಪೂರ್ವ 2933 ಕಿ.ಮೀ ಉದ್ದದ ಗಡಿ, ಬಂದರು, ಪ್ರವಾಸಿ ಕೇಂದ್ರಗಳನ್ನು ಸಂಪರ್ಕಿಸುವ ಹೆದ್ದಾರಿ ಯೋಜನೆಯಾಗಿದೆ. 25,000ಕಿಮೀ ರಸ್ತೆ ಇದರಡಿ ಅಭಿವೃದ್ಧಿ ಆಗಲಿದೆ. ಆರ್ಥಿಕ ಕಾರಣಗಳ ಸೃಷ್ಟಿ, ಗಡಿ ಹೆದ್ದಾರಿಗಳ ಅಭಿವೃದ್ಧಿ, ಅಂತರಾಷ್ಟ್ರೀಯ ಸಂಪರ್ಕ ಕಲ್ಪಿಸುವ ರಸ್ತೆ, ಕರಾವಳಿ ಹಾಗೂ ಬಂದರು ಸಂಪರ್ಕ ಯೋಜನೆಯನ್ನು ಭಾರತ ಮಾಲಾ ಹೊಂದಿದೆ.

ಈ ಯೋಜನೆಯಡಿಯಲ್ಲಿ ಕರ್ನಾಟಕದ ರಾಜಧಾನಿ **ಬೆಂಗಳೂರು** ಹಾಗೂ ಕರಾವಳಿಯ ಮಹಾನಗರ **ಮಂಗಳೂರು** ನಡುವೆ ಆರ್ಥಿಕ ಕಾರಿಡಾರ್ ನಿರ್ಮಿಸುವ ಪ್ರಸ್ತಾಪ ಇದೆ. ಜತೆಗೆ ಹೈದರಾಬಾದ್ ಪಣಜಿ ನಡುವೆ ಮತ್ತೊಂದು ಆರ್ಥಿಕ ಕಾರಿಡಾರ್ ನಿರ್ಮಾಣದ ಚಿಂತನೆ ಕೂಡ ಇದೆ. ವಿಶೇಷತೆ ಎಂದರೆ **ಹೈದ್ರಾಬಾದ್ ಪಣಜಿ ಕಾರಿಡಾರ್** ಹೆಚ್ಚಾಗಿ ಕರ್ನಾಟಕದಲ್ಲೇ ಹಾದು ಹೋಗುತ್ತದೆ.

ಭಾರತ ಮಾಲಾ ಯೋಜನೆಯಡಿಯಲ್ಲಿ 21,000ಕಿಮೀ ಉದ್ದದ 44 ಆರ್ಥಿಕ ಕಾರಿಡಾರ್‌ಗಳನ್ನು ಸರಕುಗಳನ್ನು ತ್ವರಿತವಾಗಿ ಸಾಗಾಣಿಕೆ ಮಾಡುವ ಉದ್ದೇಶದಿಂದ ಯೋಜನೆ ರೂಪಿಸಲು ಉದ್ದೇಶಿಸಿದೆ. ಇದರಿಂದ ಸರಕು ಸಾಗಣೆ ವೆಚ್ಚ ಸದ್ಯ ಶೇ18ರಷ್ಟಿದ್ದು, ಅದನ್ನು ತಗ್ಗಿಸಲು ಸಹಕಾರಿಯಾಗಲಿವೆ. **1998ರಲ್ಲಿ ಅಟಲ್ ಬಿಹಾರಿ ವಾಜಪೇಯಿ** ಸರ್ಕಾರ ರಾಷ್ಟ್ರೀಯ ಹೆದ್ದಾರಿ ಅಭಿವೃದ್ಧಿ ಯೋಜನೆ (NHDP)ಯಡಿ 50,000 ಕಿಮೀ ಹೆದ್ದಾರಿಯನ್ನು ಜಾಗತಿಕ ಮಟ್ಟಗಳಿಗೆ ಅನುಗುಣವಾಗಿ ನಿರ್ಮಿಸಿತ್ತು.

ಇದು **ಚಾರ್‌ಧಾಮ್**ಗಳಾದ ಉತ್ತರಾಖಂಡದಲ್ಲಿನ **ಕೇದಾರನಾಥ, ಬದರೀನಾಥ, ಯಮುನೋತ್ರಿ, ಗಂಗೋತ್ರಿ** ಸ್ಥಳಗಳನ್ನು ಕೂಡ ಸಂಪರ್ಕಿಸುವ ಭಾರತಮಾಲಾ ಪರಿಯೋಜನೆಯಾಗಿದೆ.

## ಸುವರ್ಣ ಚತುಷ್ಕೋನ (ಗೋಲ್ಡನ್ ಕ್ವಾಡ್ರಿಲ್ಯಾಟರಲ್)

ಚತುಷ್ಪಥ/ಷಟ್ಪಥ ರಸ್ತೆಗಳನ್ನು ಹೊಂದಿದ 15,500 ಕಿ.ಮೀ ಉದ್ದವಾಗಿರುವ ಭಾರತದ ಅತಿ ದೊಡ್ಡ & ಜಗತ್ತಿನ **ಅತಿ ದೊಡ್ಡ 5 ನೇ ರಾಷ್ಟ್ರೀಯ ಹೆದ್ದಾರಿ ಯೋಜನೆ**ಯಾಗಿದೆ. ಈ ಯೋಜನೆಯು 1999 ರಲ್ಲಿ ಆರಂಭವಾಯಿತು. ವಿಶ್ವ ಬ್ಯಾಂಕ್‌ನ ಅಂದಾಜಿನಂತೆ ಸುವರ್ಣ ಚತುಷ್ಕೋನ ಯೋಜನೆಯಿಂದ ಪ್ರತಿವರ್ಷ 800 ಕೋಟಿ ರೂ. ಆದಾಯವಿದೆ. ಇದು **ಅಟಲ್ ಬಿಹಾರಿ ವಾಜಪೇಯಿ** ನೇತೃತ್ವದ ಸರ್ಕಾರ ಕೈಗೊಂಡ ಮಹತ್ವಾಕಾಂಕ್ಷಿ ಯೋಜನೆಯಾಗಿದೆ. ಇದನ್ನು **NHAI** ನವರು ನಿರ್ವಹಿಸುತ್ತಿದ್ದಾರೆ. ಸುವರ್ಣ ಚತುಷ್ಕೋನ ಹೆದ್ದಾರಿಯು ದೇಶದ ಮೆಟ್ರೋಪಾಲಿಟನ್ ನಗರಗಳಾದ **ದೆಹಲಿ, ಮುಂಬಯಿ, ಚೆನ್ನೈ, ಮತ್ತು ಕೊಲ್ಕತ್ತಾ** ನಗರಗಳನ್ನು ಸಂಪರ್ಕಿಸುತ್ತದೆ. ಅಲ್ಲದೇ ಅಹಮದಾಬಾದ್, ಬೆಂಗಳೂರು, ಭುವನೇಶ್ವರ, ಜೈಪುರ, ಕಾನ್ಪುರ, ಪುಣೆ, ಸೂರತ್, ನೆಲ್ಲೂರು, ಗುಂಟೂರು, ವಿಜಯವಾಡ ಮತ್ತು ವಿಶಾಖಪಟ್ಟಣಗಳನ್ನು ಸಂಪರ್ಕಿಸುತ್ತಿದೆ. ಈ ಯೋಜನೆಯಡಿಯಲ್ಲಿ **5,846ಕಿ.ಮೀ ಉದ್ದದ** ನಾಲ್ಕು ಪಥದ, ಕೆಲವೆಡೆ ಎಕ್ಸ್‌ಪ್ರೆಸ್ ಹೆದ್ದಾರಿಯಾಗಿದೆ.

## ಗ್ರಾಂಡ್ ಟ್ರಂಕ್ ರಸ್ತೆ (Grand Trunk Road)

ಗ್ರಾಂಡ್ ಟ್ರಕ್‌ರಸ್ತೆಯು ದಕ್ಷಿಣ ಏಷ್ಯಾದಲ್ಲೇ **ಅತ್ಯಂತ ಹಳೆಯ & ಉದ್ದವಾದ** ರಸ್ತೆಯಾಗಿದೆ. ಇದು 4 ದೇಶಗಳಾದ **ಭಾರತ, ಅಫ್ಘಾನಿಸ್ತಾನ, ಬಾಂಗ್ಲಾ ದೇಶ, ಪಾಕಿಸ್ತಾನ**ಗಳನ್ನು ಸೇರಿಸುವಂತಹ ರಸ್ತೆಯಾಗಿದೆ. ಇದನ್ನು ಮೊದಲು ಚಂದ್ರಗುಪ್ತ ಮೌರ್ಯನು ಆರಂಭಿಸಿದ್ದು, ನಂತರ **ಷೇರ್ ಷಾ ಸೂರಿ**ಯು ನವೀಕರಿಸಿ ವಿಸ್ತರಿಸಿದನು. ಇದು 2500 ಕಿ.ಮೀ ಉದ್ದವಿದ್ದು, ಬಾಂಗ್ಲಾದೇಶದ ಸೋನಾರ್ ಗೊಯಾನ್‌ದಿಂದ ಆರಂಭಗೊಂಡು ಭಾರತದಲ್ಲಿ ಕೋಲ್ಕತ್ತಾ, ಬರ್ದಮಾನ್(ಪ.ಬಂಗಾಳ), ದುರ್ಗಾಪುರ್, ಅಸನಾಲ್, ಧನಾಬಾದ್, ಔರಂಗಾಬಾದ್, ದೇರಿಆನ್ ಸೋನೆ, ಸಸಾರಾಂ, ಮೊಹಾನಿಯಾ, ವಾರಣಾಸಿ, ಅಲಹಾಬಾದ್, ಕಾನ್ಪುರ, ಅಲಿಘರ್, ಘಜಿಯಾಬಾದ್, ದೆಹಲಿ, ಕರ್ನಾಲ್, ಅಂಬ್ಲಾ, ಲೂದಿಯಾನ್, ಜಲಂಧರ್, ಅಮೃತಸರಗಳಲ್ಲಿ ಹಾದು ಹೋಗಿ ಭಾರತ & ಪಾಕಿಸ್ತಾನದ ನಡುವಿನ ಗಡಿಯಾದ ವಾಘಾ ಗಡಿಯ ಮೂಲಕ ಪಾಕಿಸ್ತಾನದ ಲಾಹೋರ್ ಮೂಲಕ ಅಫ್ಘಾನಿಸ್ತಾನದ ಕಾಬೂಲ್‌ನ್ನು ತಲುಪುತ್ತದೆ.



### ಭಾರತದ ಆರ್ಥಿಕ ಸುಧಾರಣೆ ಪಿತಾಮಹ - ಪಿ.ವಿ.ನರಸಿಂಹರಾವ್

ಜೂ.21. 1991 – 16.ಮೇ.1996, ಸ್ಥಳ – ಆಂಧ್ರ ಪ್ರದೇಶದ ಕರೀಂ ನಗರ

**ವಿಶೇಷತೆ:–** ಇವರು ದಕ್ಷಿಣ ಭಾರತದಿಂದ ಆಯ್ಕೆಯಾದ ಮೊದಲ ಪ್ರಧಾನಿ. 1992ರಲ್ಲಿ **ದಿ ಸೆಕ್ಯೂರಿಟಿಸ್ ಅಂಡ್ ಎಕ್ಸ್‌ಚೇಂಜ್ ಆಫ್ ಇಂಡಿಯಾ(ಸೆಬಿ)**ಗೆ ಸ್ವಾಯತ್ತತೆ ನೀಡಿದರು. ಇವರ ಅವಧಿಯಲ್ಲಿ ಡಿ.6, 1992ರಲ್ಲಿ ಬಾಬ್ರಿ ಮಸೀದಿ ಧ್ವಂಸಗೊಳಿಸಲಾಯಿತು & ಟಾಡಾ ಕಾಯ್ದೆಯನ್ನು ಜಾರಿಗೆ ತಂದರು. 1991 ರಲ್ಲಿ ಆರ್ಥಿಕವಾಗಿ ಜಾಗತೀಕರಣ, ಉದಾರೀಕರಣ, ಖಾಸಗೀಕರಣ ನಡೆಯಿತು.ಇವರನ್ನು ಭಾರತದ **ಆರ್ಥಿಕ ಸುಧಾರಣೆ ಪಿತಾಮಹ, "ಆಧುನಿಕ ಭಾರತದ ಚಾಣಕ್ಯ"** ಎನ್ನುವರು. 1995 ಜನವರಿ 1 ರಂದು ವಿಶ್ವ ವ್ಯಾಪಾರ ಸಂಘಟನೆಯ ಸದಸ್ಯತ್ವವನ್ನು ಪಡೆಯಿತು. ಇವರ ಕಾಲದಲ್ಲಿ ಡಾ॥ ಮನಮೋಹನ್ ಸಿಂಗ್ ಅವರು ಹಣಕಾಸು ಸಚಿವರಾಗಿ ಕಾರ್ಯನಿರ್ವಹಿಸಿದ್ದಾರೆ. ಇವರ ಆತ್ಮಚರಿತ್ರೆ:– **ಇನ್‌ಸೈಡರ್**

### ನಿಮಗಿದು ತಿಳಿದಿರಲಿ

**ಭಾರತದಲ್ಲಿ RBIನ ವಿತ್ತ ವರ್ಷ:** ಜುಲೈ 1 – ಜೂನ್ 30
**ಭಾರತೀಯ ಜೀವಾ ವಿಮೆ:** ಜೂನ್ 1 – ಮೇ 31
**ಕೃಷಿ ಗಣತಿ ಅವಧಿ:** ಜುಲೈ 1 ಜೂನ್ 30

### ರಾಷ್ಟ್ರೀಯ ಕಾರ್ಮಿಕರ ಆಯೋಗ

- ಭಾರತದಲ್ಲಿ ಕಾರ್ಮಿಕರ ಕಾನೂನುಗಳನ್ನು ಪರಿಶೀಲಿಸುವ ಉದ್ದೇಶದಿಂದ ಪಿ.ಬಿ. ಗಜೇಂದ್ರ ಗಡ್ಕರ್ ನೇತೃತ್ವದಲ್ಲಿ 1966 ಡಿಸೆಂಬರ್ 24 ರಂದು ಭಾರತ ಸರ್ಕಾರ **ಮೊದಲ ರಾಷ್ಟ್ರೀಯ ಕಾರ್ಮಿಕರ ಆಯೋಗವನ್ನು** ನೇಮಿಸಿತು. ಈ ಸಮಿತಿಯು ಸಂಘಟಿತ & ಅಸಂಘಟಿತ ವಲಯದ ಕಾರ್ಮಿಕರ ಸಮಸ್ಯೆಗಳನ್ನು ಸೂಕ್ತವಾಗಿ ಪರಿಶೀಲಿಸಿತು.
- **1999 ಅಕ್ಟೋಬರ್ 15** ರಂದು ಪ್ರಧಾನಮಂತ್ರಿ ಎ.ಬಿ. ವಾಜಪೇಯಿ ಅವರು ರವೀಂದ್ರ ವರ್ಮ ನೇತೃತ್ವದಲ್ಲಿ **2ನೇ ರಾಷ್ಟ್ರೀಯ ಕಾರ್ಮಿಕರ ಆಯೋಗವನ್ನು** ನೇಮಕ ಮಾಡಿತು. ಈ ಆಯೋಗವು 2002 ಜೂನ್ 29 ರಂದು ತನ್ನ ವರದಿಯನ್ನು ಸಲ್ಲಿಸಿತು.
- **ಈ ವರದಿಯ ಮುಖ್ಯಾಂಶಗಳೆಂದರೆ** – ಕಾರ್ಮಿಕರ ಒಕ್ಕೂಟಗಳನ್ನು ಬಲಪಡಿಸುವುದು, ಕೈಗಾರಿಕಾ ಘಟಕಗಳ ಸ್ಥಾಪನೆಗೆ ಅನುಮೋದನೆ ಪಡೆಯುವ ಅಗತ್ಯತೆಯನ್ನು ಸಡಿಲಗೊಳಿಸುವುದು, ದುಡಿಯುವ ಅವಧಿಯನ್ನು ಪ್ರತಿನಿತ್ಯ 9 ಗಂಟೆ ಅಥವಾ ವಾರದಲ್ಲಿ 48 ಗಂಟೆಗಳಿಗಿಂತ ಹೆಚ್ಚಾದಲ್ಲಿ ಸೂಕ್ತ ಪರಿಹಾರ ನೀಡುವುದು, ರಾಷ್ಟ್ರೀಯ ಮಟ್ಟದಲ್ಲಿ ಕನಿಷ್ಠ ಕೂಲಿ ನಿಗದಿ, ಸಾಮಾಜಿಕ ಭದ್ರತಾ ಕೊಡುಗೆಗಳನ್ನು ನೀಡುವುದು.
- ಇದಕ್ಕಾಗಿ **ಛತ್ರಿ ಶಾಸನ ಜಾರಿಗೆ ತಂದಿದ್ದು**, ಇದು ಅಸಂಘಟಿತ ವಲಯದ ನೌಕರರಿಗೆ ಸಾಮಾಜಿಕ ಭದ್ರತೆ ನೀಡುವ ಶಾಸನವಾಗಿದೆ.

### ಪ್ರಮುಖ ಸಂಘಟನೆಗಳ ಮುಂಬರುವ ಸಭೆಗಳು

| ಸಂಸ್ಥೆ | ಸಭೆ | ವರ್ಷ | ಸ್ಥಳ |
|---|---|---|---|
| ಬ್ರಿಕ್ಸ್ | 9 | 2017 | ಚೀನಾದ ಜಿಯಾಮೆನ್ |
| ಜಿ–20 | 12 | 2017 | ಜರ್ಮನಿ |
| | 13 | 2018 | ಅರ್ಜೆಂಟೈನಾ |
| ಜಿ–7 | 43 | 2017 | ಇಟಲಿ |
| | 44 | 2018 | ಕೆನಡಾ |
| ಆಶಿಯಾನ್ | 30 | 2017 ಏಪ್ರಿಲ್ | ಫಿಲಿಫೈನ್ಸ್ |
| | 31 | 2017 ನವೆಂಬರ್ | |
| ಬಿಮ್‌ಸ್ಟೆಕ್ | 4 | 2017 | ನೇಪಾಳ |
| ಎಡಿಬಿ | ವಾರ್ಷಿಕ | 2017 | ಜಪಾನ್ |
| WTO | 11 | 2017 ಡಿಸೆಂಬರ್ | ಅರ್ಜೆಂಟೈನಾದ ಬ್ಯೂನಸ್ ಏರ್ಸ್ |

## ಬಹು ರಾಷ್ಟ್ರೀಯ ನಿಗಮ (Multi National Corporations)

+ ಒಂದು ಸಂಸ್ಥೆಯು ಮಾತೃ ದೇಶದಲ್ಲಿ ತನ್ನ ಕೇಂದ್ರ ಕಛೇರಿಯನ್ನು ಹೊಂದಿದ್ದು ವಿಶ್ವದ ಇತರ ರಾಷ್ಟ್ರಗಳಲ್ಲಿ ಸರಕು & ಸೇವೆಗಳ ಉತ್ಪಾದನಾ ಪ್ರಕ್ರಿಯೆಯಲ್ಲಿ ನಿಯಂತ್ರಣ ಹೊಂದಿದ್ದು, ಅಥವಾ ಮಾಲೀಕತ್ವವನ್ನು ಪಡೆದಿರುವ ಉದ್ಯಮವೇ ಬಹು ರಾಷ್ಟ್ರೀಯ ನಿಗಮ. ಇದರ ಮುಖ್ಯ 2 ಲಕ್ಷಣಗಳೆಂದರೆ –
+ ಇದು ಬೃಹತ್ ಪ್ರಮಾಣದಲ್ಲಿದ್ದು, ವಿಶ್ವ ವ್ಯಾಪಿ ತನ್ನ ಕಾರ್ಯಚಟುವಟಿಕೆಗಳನ್ನು ಹೊಂದಿರುತ್ತದೆ. ಅವುಗಳೆಂದರೆ – ಸರಕು & ಸೇವೆಗಳ ಆಮದು ರಫ್ತು, ವಿದೇಶಿ ಬಂಡವಾಳ ಹೂಡಿಕೆ, ವಿದೇಶಿ ಮಾರುಕಟ್ಟೆಯಲ್ಲಿ ಕೊಳ್ಳುವಿಕೆ & ಮಾರುವಿಕೆ, ವಿದೇಶಿ ಸರಕು ಸೇವೆಗಳ ಉತ್ಪಾದನೆ, ವಿದೇಶಿ ರಾಷ್ಟ್ರಗಳಲ್ಲಿ ತಯಾರಿಕಾ ಸೇವೆಗಳನ್ನು ಒದಗಿಸುವುದು.
+ ಕ್ರಿ.ಶ. 1600 ರಲ್ಲಿ ಈಸ್ಟ್ ಇಂಡಿಯಾ ಕಂಪನಿ ಮೊದಲ ಬಾರಿಗೆ ಬಹು ರಾಷ್ಟ್ರೀಯ ಉದ್ದಿಮೆ ಸಂಘಟನೆ ಪ್ರಾರಂಭಿಸಿದೆ.
+ 1991 ರ ಹೊಸ ಆರ್ಥಿಕ ನೀತಿಯ ಅಳವಡಿಕೆ ನಂತರ ಭಾರತದಲ್ಲಿ ಬಹು ರಾಷ್ಟ್ರೀಯ ನಿಗಮಗಳ ಪ್ರಾಬಲ್ಯ ಗಣನೀಯವಾಗಿ ಹೆಚ್ಚಾಗಿದೆ.
+ ಪ್ರಸ್ತುತ ಭಾರತದಲ್ಲಿ ಹಲವಾರು ನಿಗಮಗಳು ಮಾರುಕಟ್ಟೆ ಪ್ರವೇಶಿಸಿದ್ದು, ಭಾರತೀಯ ಮಾರುಕಟ್ಟೆ & ಗ್ರಾಹಕರನ್ನು ತನ್ನದನ್ನಾಗಿಸಿಕೊಳ್ಳುವಲ್ಲಿ & ಕೊಳ್ಳುಬಾಕುತನ ಸಂಸ್ಕೃತಿ (Consumerism) ವೃದ್ಧಿಸುವಲ್ಲಿ ಯಶಸ್ವಿಯಾಗಿವೆ.
+ ಭಾರತದಲ್ಲಿ ಸ್ಥಾಪಿತವಾದ ಅತ್ಯಂತ ಹಳೆಯ ಬಹುರಾಷ್ಟ್ರೀಯ ನಿಗಮ –ಜರ್ಮನ್ ಇಂಜಿನಿಯರಿಂಗ್ ಸಿಮೆನ್ಸ್ ಸಂಸ್ಥೆ.
+ ಭಾರತದ ಮೊದಲ ಎಂ.ಎನ್.ಸಿ – ಇನ್ಫೋಸಿಸ್‌ನ ಪಾಟ್ನಿ ಕಂಪ್ಯೂಟರ್ಸ್ (ಸ್ಥಾಪಕರು:ಎನ್.ಆರ್. ನಾರಾಯಣ ಮೂರ್ತಿ)
+ ಈ ಕೆಳಗಿನ ಪಟ್ಟಿಯು ಭಾರತದಲ್ಲಿ ಆದಾಯಗಳಿಕೆ & ಶ್ರಮಿಕರ ವಹಿವಾಟಿನಲ್ಲಿ ಮುಂಚೂಣಿಯಲ್ಲಿರುವ ಮೊದಲ 10 ಬಹು ರಾಷ್ಟ್ರೀಯ ನಿಗಮಗಳನ್ನು ತಿಳಿಸುತ್ತದೆ.

| ಬಹು ರಾಷ್ಟ್ರೀಯ ನಿಗಮ | ಕೇಂದ್ರ ಕಛೇರಿ | ವಿಶೇಷತೆ |
|---|---|---|
| ಸೋನಿ ಕಾರ್ಪೋರೇಷನ್ | ಜಪಾನ್‌ನ ಟೋಕಿಯೋ | ಎಲೆಕ್ಟ್ರಾನಿಕ್ ಉತ್ಪನ್ನಗಳು |
| ಹೆಚ್.ಪಿ | ಕ್ಯಾಲಿಫೋರ್ನಿಯಾ (ಭಾರತ–ಬೆಂಗಳೂರು) | ಹಾರ್ಡ್‌ವೇರ್ & ಸಾಫ್ಟ್‌ವೇರ್ ಉತ್ಪನ್ನಗಳು |
| ಟಾಟಾ ಗ್ರೂಪ್ | ಮುಂಬೈ | ಜೆಮ್‌ಷೆಡ್‌ಜೀ ಟಾಟಾ ರಿಂದ 1868 ರಲ್ಲಿ ಸ್ಥಾಪಿತವಾದ ಭಾರತದ ಮುಂದಾಳು ಎಂ.ಎನ್.ಸಿ. ಸ್ಟೀಲ್, ಇಂಧನ, ಕೆಮಿಕಲ್ಸ್, ಪಾನೀಯ, ಟೈಟಾನ್, ಹೋಟೆಲ್ಸ್, ಉತ್ಪನ್ನ |
| ಮೈಕ್ರೋಸಾಫ್ಟ್ ಕಾರ್ಪೋರೇಷನ್ | ವಾಷಿಂಗ್‌ಟನ್ (ಭಾರತದ ಹರಿಯಾಣದ ಗುರುಗ್ರಾಮ) | ಕಂಪ್ಯೂಟರ್ ಸಾಫ್ಟ್‌ವೇರ್ ಉತ್ಪನ್ನಗಳು |
| ಐ.ಬಿ.ಎಂ | ಅಮೆರಿಕ ನ್ಯೂಯಾರ್ಕ್ (ಭಾರತದ ಬೆಂಗಳೂರು) | ಕಂಪ್ಯೂಟರ್ ಸಾಫ್ಟ್‌ವೇರ್ ಉತ್ಪನ್ನಗಳು |
| ನೆಸ್ಲೆ (Nestle) | ಹರಿಯಾಣದ ಗುರುಗ್ರಾಮ | ಮಕ್ಕಳ ಆಹಾರ, ಕಾಫಿ, ಟೀ, ಡೈರಿ ಉತ್ಪನ್ನಗಳು. ವಿಶ್ವದಲ್ಲಿ ಆದಾಯ ಗಳಿಕೆಯಲ್ಲಿ ಅತ್ಯಂತ ದೊಡ್ಡದಾದ ಆಹಾರ ಕಂಪನಿ. |
| ಪಿ & ಜಿ (Procter & Gamble) | ಅಮೆರಿಕದ ಓಹಿಯೋ | ವಿಕ್ಸ್, ಏರಿಯಲ್, ಟೈಡ್, ಓರಲ್–ಬಿ, ಹೆಡ್‌ಶೋಲ್ಡರ್. ಭಾರತದ ಅತ್ಯಂತ ದೊಡ್ಡ ಕ್ಲೀನಿಂಗ್ ಏಜೆನ್ಸಿಯಾಗಿದೆ. |
| ಸಿಟಿ ಗ್ರೂಪ್ಸ್ | ಅಮೆರಿಕದ ಕಂಪನಿ (ಮುಂಬೈ) | ವಿಶ್ವದ ಅತ್ಯಂತ ದೊಡ್ಡ ಬ್ಯಾಂಕಿಂಗ್ ಹಣಕಾಸು ಸೇವೆ ಸಂಪರ್ಕ ಜಾಲ ಸಂಸ್ಥೆ. |
| ಪೆಪ್ಸಿಕೊ | ಅಮೆರಿಕದ ನ್ಯೂಯಾರ್ಕ್ | Lays, Potato Chips, Snacks, ತಂಪು ಪಾನೀಯ |
| ಕೋಕಾ ಕೋಲಾ | ಅಮೆರಿಕ | ತಂಪು ಪಾನೀಯ |

# ರಾಜ್ಯಕೋಶ /ಕೋಶೀಯ /ವಿತ್ತೀಯ ನೀತಿ
# Fiscal Policy

ಆಧುನಿಕ ರಾಷ್ಟ್ರಗಳನ್ನು ಸುಖೀ ಅಥವಾ ಕಲ್ಯಾಣ ರಾಷ್ಟ್ರಗಳೆಂದು ರಾಜಕೀಯ ಚಿಂತಕರು ಅಭಿಪ್ರಾಯ ಪಟ್ಟಿದ್ದಾರೆ. ಇದರನ್ವಯ ದೇಶದ ಸರ್ವೇ ಜನೋ ಸುಖಿನೋ ಭವಂತು ಎಂಬ ತತ್ವದನ್ವಯ ಪ್ರಜಾಕಲ್ಯಾಣಕ್ಕಾಗಿ ಅಗತ್ಯವಿರುವ ವೆಚ್ಚವನ್ನು ಸರ್ಕಾರ ನಿರ್ವಹಿಸಲು, ಅದಕ್ಕನುಗುಣವಾಗಿ ಸಾರ್ವಜನಿಕರಿಂದ ತೆರಿಗೆಗಳ ಮೂಲಕ ಆದಾಯವನ್ನು ಸ್ವೀಕರಿಸುವ, ಅದನ್ನು ಸರಿದೂಗಿಸಲು ಅಗತ್ಯ ಬಿದ್ದಾಗ ಸಾರ್ವಜನಿಕ ಸಾಲ ಎಂಬ ಅಸ್ತ್ರದ ಮೂಲಕ ತನ್ನ ಹಣಕಾಸು ವ್ಯವಹಾರವನ್ನು ಆರ್ಥಿಕ ಅಭಿವೃದ್ಧಿ & ಸ್ಥಿರತೆಯೆಡೆಯನ್ನ ನಿರ್ವಹಿಸುವ ಸಮಗ್ರ ಆರ್ಥಿಕ ನೀತಿಯೇ ಕೋಶೀಯ ನೀತಿಯಾಗಿದೆ.

**ಸಾರ್ವಜನಿಕ ಹಣಕಾಸು (Public Finance)**

ಸರ್ಕಾರದ ಹಣಕಾಸಿನ ವಿಚಾರಗಳ ಅಡಳಿತದ ನಿರ್ವಹಣೆ ಮಾಡುವ ಅಧ್ಯಯನ ಶಾಸ್ತ್ರವೇ ಸಾರ್ವಜನಿಕ ಹಣಕಾಸು

**ಕೋಶೀಯ ನೀತಿ ಅಥವಾ ರಾಜ್ಯಕೋಶ ನೀತಿ**

✦ ಸರ್ಕಾರದ ವೆಚ್ಚ ಮತ್ತು ಆದಾಯಕ್ಕೆ ಸಂಬಂಧಿಸಿದ ಸಮಗ್ರ ಆರ್ಥಿಕ ನೀತಿಯೇ ಕೋಶೀಯ ನೀತಿ. ಕೇಂದ್ರ ಬ್ಯಾಂಕು ರೂಪಿಸುವ ಹಣಕಾಸು ನೀತಿ ರೀತಿಯಲ್ಲಿ ಕೇಂದ್ರ ಸರ್ಕಾರವು ವಿತ್ತೀಯ ನೀತಿಯನ್ನು ಆರ್ಥಿಕಾಭಿವೃದ್ಧಿ ಸಾಧಿಸಲು & ಆರ್ಥಿಕ ಸಮಸ್ಯೆಗಳಾದ ಹಣದುಬ್ಬರ & ಅನಪ್ರಸರಣವನ್ನು ನಿಯಂತ್ರಿಸಲು ರೂಪಿಸುತ್ತದೆ.

**ಸಾಧನಗಳು:-**

1) ಸಾರ್ವಜನಿಕ ವೆಚ್ಚ (Public Expenditure)
2) ಸಾರ್ವಜನಿಕ ಆದಾಯ (Public Revenue)
3) ಸಾರ್ವಜನಿಕ ಸಾಲ (Public Borrowing)
4) ಕೊರತೆ ಹಣಕಾಸು (Deficit FInancing)

**ಕೋಶೀಯ ನೀತಿಯ ಉದ್ದೇಶಗಳು:-**

✦ ಆರ್ಥಿಕಾಭಿವೃದ್ಧಿ ಸಾಧನೆ, ಪೂರ್ಣೋದ್ಯೋಗ ಸ್ಥಾಪನೆ, ಹಣದುಬ್ಬರ ನಿಯಂತ್ರಣ, ಬಡತನ, ನಿರುದ್ಯೋಗ, ಆದಾಯದ ಅಸಮಾನತೆ, ಪ್ರಾದೇಶಿಕ ಅಸಮಾನತೆ, ಸಮಸ್ಯೆಗಳ ನಿವಾರಣೆ, ತೆರಿಗೆಗಳ ಮೂಲಕ ಆದಾಯ ಸಂಗ್ರಹಣೆ, ಕಲ್ಯಾಣ ರಾಜ್ಯದ ಸ್ಥಾಪನೆ, ಸಾಮಾಜಿಕ ನ್ಯಾಯ ಸ್ಥಾಪಿಸುವುದು.

## ಮುಂಗಡ ಪತ್ರ/ಆಯವ್ಯಯ (Budget)

**ಅರ್ಥ:-** ಸರ್ಕಾರದ ಮುಂಬರುವ ಹಣಕಾಸು ವರ್ಷದ ನಿರೀಕ್ಷಿತ ಆದಾಯ ಮತ್ತು ವೆಚ್ಚದ ವಿವರಗಳನ್ನು ಹೊಂದಿರುವ ಪಟ್ಟಿಯೇ ಬಜೆಟ್.

✦ ಆಯವ್ಯಯ ಇಂಗ್ಲಿಷ್‌ನಲ್ಲಿ Budget ಎಂತಲ ಈ ಪದವು ಫ್ರೆಂಚ್ ಪದವಾದ Bougette ಸಂಜಾದಿಯಾಗಿದೆ. ಈ ಪದದ ಅರ್ಥ ಹಣದ ಪತ್ರಗಳನ್ನು ಹೊಂದಿರುವ ಚರ್ಮದ ಚೀಲವಾಗಿದೆ.

**ಬಜೆಟ್ 3 ರೀತಿಯ ಅಂಕಿಅಂಶಗಳನ್ನು ಒಳಗೊಂಡ**

1) ಹಿಂದಿನ ವರ್ಷದ ನೈಜ ಅಂಕಿಅಂಶಗಳು
2) ಪ್ರಸ್ತುತ ವರ್ಷದ ಪರಿಷ್ಕೃತ ಅಂದಾಜು
3) ಮುಂಬರುವ ವರ್ಷದ ಅಂದಾಜು ಅಂಕಿ ಅಂಶಗಳು

### ಬಜೆಟ್‌ನ ಪ್ರಮುಖ ವಿಧಗಳು

**1) ಸಮತೋಲಿತ ಬಜೆಟ್ (Balanced Budget)**

✦ ವರ್ಷವೊಂದರ ಸರ್ಕಾರದ ನಿರೀಕ್ಷಿತ ಆದಾಯ ಮತ್ತು ನಿರೀಕ್ಷಿತ ವೆಚ್ಚವು ಪರಸ್ಪರ ಸಮನಾಗಿರುವ ಬಜೆಟ್ ಇದು "ಸಂಪನ್ಮೂಲದ ಮಿತಿಯೊಳಗೆ ಜೀವಿಸಿ" ಎಂಬ ತತ್ವದ ಮೇರೆಗೆ ರೂಪಿತವಾಗಿದೆ.

**2) ಉಳಿತಾಯ ಅಥವಾ ಮಿಗುತೆ ಬಜೆಟ್ (Surplus Budget)**

✦ ವರ್ಷವೊಂದರ ಸರ್ಕಾರದ ನಿರೀಕ್ಷಿತ ಆದಾಯ ನಿರೀಕ್ಷಿತ ವೆಚ್ಚಕ್ಕಿಂತ ಅಧಿಕವಿದ್ದರೆ ಅದನ್ನು ಮಿಗು ಬಜೆಟ್ ಅಥವಾ ಅನುಕೂಲಕರ ಬಜೆಟ್ ಎನ್ನುವರು.

**3) ಕೊರತೆ ಮುಂಗಡ ಪತ್ರ (Deficit Budget)**

✦ ವರ್ಷವೊಂದರ ಸರ್ಕಾರದ ನಿರೀಕ್ಷಿತ ಆದಾಯವನ್ನು ಮೀರಿ ನಿರೀಕ್ಷಿತ ವೆಚ್ಚವು ಹೆಚ್ಚಾಗಿರುವುದು. ಇದನ್ನು ಅನಾನುಕೂಲಕರ ಬಜೆಟ್ ಎನ್ನುವರು. ಜೆ.ಎಂ. ಕೇನ್ಸ್ ಎಂಬ ಅರ್ಥಶಾಸ್ತ್ರಜ್ಞರು ಆರ್ಥಿಕ ಮುಗ್ಗಟ್ಟಿನ ಸನ್ನಿವೇಶದಲ್ಲಿ ಸರ್ಕಾರದ ಹಸ್ತಕ್ಷೇಪ ಅಗತ್ಯ ಎಂದು ಹಾಗೂ ಆರ್ಥಿಕತೆಯ ತ್ವರಿತ ಅಭಿವೃದ್ಧಿಗೆ ಈ ರೀತಿಯ ಬಜೆಟ್ ಹೆಚ್ಚು ಅನುಕೂಲ ಎಂದು ತಿಳಿಸುತ್ತದೆ.

# ಬಜೆಟ್ ಸಿದ್ಧತೆ (Preparation of Budget)

+ ಕೇಂದ್ರ ಬಜೆಟ್ ತಯಾರಿಕೆಯು ಕ್ರಮಬದ್ಧವಾಗಿ ಕೆಲವು ಹಂತಗಳನ್ನು ಅನುಸರಿಸಿ ಸಿದ್ಧಗೊಳಿಸಲಾಗುತ್ತದೆ.

**ಬಜೆಟ್‌ನಲ್ಲಿ ಏನಿದೆ?**

+ ಸಂಸತ್ತಿನಲ್ಲಿ ಮಂಡಿಸುವ ಮುಂಗಡ ಪತ್ರವು ಈ ಕೆಳಕಂಡ ಅಂಶಗಳನ್ನು ಒಳಗೊಂಡಿರುತ್ತದೆ.

1) ವಾರ್ಷಿಕ ಹಣಕಾಸು ಹೇಳಿಕೆ
2) ಅನುದಾನಗಳ ಬೇಡಿಕೆ
3) ಆದಾಯಕ್ಕೆ ಸಂಬಂಧಿಸಿದ ಬಜೆಟ್ ಸಂಪುಟ 1
4) ವೆಚ್ಚಕ್ಕೆ ಸಂಬಂದಿಸಿದ ಬಜೆಟ್ ಸಂಪುಟ 2
5) ಹಣಕಾಸು ಮಸೂದೆ
6) ಹಣಕಾಸು ಮಸೂದೆ ವಿವರಿಸುವ ಟಿಪ್ಪಣಿ
7) ಬಜೆಟ್‌ನ ಒಂದು ಪಕ್ಷಿ ನೋಟ
8) ಬಜೆಟ್‌ನ ಮುಖ್ಯಾಂಶಗಳು
9) ಅನುಷ್ಠಾನ ಸ್ಥಿತಿಗತಿಯ ಘೋಷಣೆ
10) ಬಜೆಟ್ ಭಾಷಣ
11) ಇತರೆ ಕೆಲವು ಪೂರಕ ದಾಖಲೆಗಳು

**ಬಜೆಟ್ ಸಿದ್ಧ ಪಡಿಸುವವರು:-**

+ ಕೇಂದ್ರ ಹಣಕಾಸು ಸಚಿವಾಲಯ, ನೀತಿ ಆಯೋಗ ಮತ್ತು ಇತರೆ ಸಚಿವಾಲಯದ ಉನ್ನತಾಧಿಕಾರಿಗಳು ಸಮಾಲೋಚನೆ ಪ್ರಕ್ರಿಯೆ ಮೂಲಕ ಮುಂಗಡ ಪತ್ರ ತಯಾರಿಸುತ್ತಾರೆ.
+ ವೆಚ್ಚವನ್ನಾಧರಿಸಿ ಹಣಕಾಸು ಸಚಿವಾಲಯವು ಕೆಲವು ಮಾರ್ಗಸೂಚಿಯನ್ನು ಪ್ರಕಟಿಸುತ್ತದೆ. ಇದಕ್ಕೆ ಅನುಗುಣವಾಗಿ ವಿವಿಧ ಸಚಿವಾಲಯಗಳು ಬೇಡಿಕೆಯನ್ನು ಮುಂದಿರಿಸುತ್ತವೆ.
+ ಹಣಕಾಸು ಸಚಿವಾಲಯದ ಅಧೀನದಲ್ಲಿರುವ ಆರ್ಥಿಕ ವ್ಯವಹಾರಗಳ ಇಲಾಖೆ ಮುಂಗಡ ಪತ್ರ ವಿಭಾಗವು ಬಜೆಟ್‌ನ್ನು ತಯಾರಿಸುತ್ತದೆ.

## ಕೇಂದ್ರ ಬಜೆಟ್ ಸಿದ್ಧತೆ ಹಂತಗಳು:

**1) ಸುತ್ತೋಲೆ ಪ್ರಕಟ:-**

+ ಪ್ರತಿ ವರ್ಷ ಸೆಪ್ಟೆಂಬರ್‌ನಲ್ಲಿ ಬಜೆಟ್ ವಿಭಾಗವು ಸುತ್ತೋಲೆಯನ್ನು ಪ್ರಕಟಿಸಿ ಕೇಂದ್ರದ ಎಲ್ಲ ಸಚಿವಾಲಯಗಳು, ರಾಜ್ಯ ಸರ್ಕಾರಗಳು, ಕೇಂದ್ರಾಡಳಿತ ಪ್ರದೇಶದ ಸರ್ಕಾರಗಳಿಗೆ ಮತ್ತು ಸ್ವಾಯತ್ತ ಸಂಸ್ಥೆಗಳಿಗೆ ಕಳುಹಿಸುತ್ತದೆ. ಅದರಲ್ಲಿ ಮುಂದಿನ ವರ್ಷದ ಯೋಜನೆ ಮತ್ತು ಅದರ ವೆಚ್ಚವನ್ನು ಅಂದಾಜಿಸಿ ಕಳುಹಿಸುವಂತೆ ಕೋರಲಾಗುತ್ತದೆ.

**2) ಪ್ರಸ್ತಾವನೆ ಮತ್ತು ಸಮಾಲೋಚನೆ:-**

+ ಸಚಿವಾಲಯಗಳು, ಇಲಾಖೆಗಳು ವಿವರವಾದ ಪ್ರಸ್ತಾವನೆಯನ್ನು ಸಲ್ಲಿಸುತ್ತದೆ. ಇದಾದ ನಂತರ ವಿವಿಧ ಸಚಿವಾಲಯಗಳು ಹಾಗೂ ಹಣಕಾಸು ಸಚಿವಾಲಯದ ವೆಚ್ಚ ವಿಭಾಗದ ನಡುವೆ ವಿಸ್ತೃತ ಸಮಾಲೋಚನೆ ನಡೆಯುತ್ತದೆ.

**3) ಸಾರ್ವಜನಿಕ ಸಹಭಾಗಿತ್ವ:-**

+ ಆರಂಭದ ಎರಡು ಪ್ರಕ್ರಿಯೆಗಳ ಆರ್ಥಿಕ ವ್ಯವಹಾರಗಳು ಮತ್ತು ಕಂದಾಯ ವಿಭಾಗಗಳು, ಉದ್ಯಮಿಗಳು, ರೈತರು, ವ್ಯಾಪಾರಿ ಸಂಘಟನೆಗಳು, ಅರ್ಥಶಾಸ್ತ್ರಜ್ಞರು, ನಾಗರೀಕ ಸಮಾನ ತಂಡಗಳ ಜತೆ ಮಾತುಕತೆ, ಸಮಾಲೋಚನೆ ನಡೆಸಿ ಅವರ ಅಭಿಪ್ರಾಯಗಳನ್ನು ಸ್ವೀಕರಿಸುತ್ತವೆ.

**4) ಪ್ರಧಾನಿ ಜತೆ ಚರ್ಚೆ:-**

+ ಬಜೆಟ್ ಪ್ರಮಾಣದ ಚರ್ಚೆಗಳು ಮುಕ್ತಾಯವಾದ ಬಳಿಕ ಅಂದರೆ ಸರಿ ಸುಮಾರು ಜನವರಿ ತಿಂಗಳಲ್ಲಿ, ತೆರಿಗೆ ಪ್ರಸ್ತಾವನೆಗಳ ಕುರಿತು ಹಣಕಾಸು ಸಚಿವರು ಅಂತಿಮ ನಿರ್ಣಯ ಕೈಗೊಳ್ಳುತ್ತಾರೆ. ನಂತರ ಸದರಿ ಪ್ರಸ್ತಾವನೆಗಳ ಪ್ರಧಾನಿಮಂತ್ರಿಯವರ ಜತೆ ಚರ್ಚೆ ನಡೆಸಿ ಬಜೆಟ್ ರೂಪುರೇಷೆ ಅಂತಿಮಗೊಳಿಸುತ್ತದೆ. ಮುಂದಿನ ದಿನಗಳಲ್ಲಿ ಜನವರಿ-ಡಿಸೆಂಬರ್ ಗೆ ಆರ್ಥಿಕ ವರ್ಷ ಬದಲಾವಣೆಗೊಂಡರೆ, ಈ ಪ್ರಕ್ರಿಯೆಯು ನವೆಂಬರ್ ತಿಂಗಳಲ್ಲಿ ಪ್ರಾರಂಭವಾಗುತ್ತದೆ.

**ಬಜೆಟ್‌ನ ಪ್ರತಿ ತಯಾರಿಕೆ:-**

+ ಬಜೆಟ್ ಸಿದ್ಧ ಪಡಿಸುವುದು ಅತ್ಯಂತ ಗೌಪ್ಯವಾಗಿರುತ್ತದೆ. ಬಜೆಟ್‌ನ ಅಂಶಗಳು, ನೀತಿಗಳೂ ಮಂಡನೆಗೆ ಮೊದಲೇ ಬಹಿರಂಗವಾಗದಂತೆ ಗೌಪ್ಯತೆ ಕಾಪಾಡುತ್ತಾರೆ. ಬಜೆಟ್‌ನ್ನು ಸಂಸತ್ತಿನ ನಾರ್ತ್ ಬ್ಲಾಕ್‌ನಲ್ಲಿ ಸಿದ್ಧಪಡಿಸುತ್ತಾರೆ.
+ ಬಜೆಟ್‌ನ ಎಲ್ಲ ವಿಷಯಗಳನ್ನು ಕೆಲವೇ ಆಯ್ದ ಅಧಿಕಾರಿಗಳು ಹಾಗೂ ಬೆರಳಚ್ಚುಗಾರರು ಸೇರಿ ಸಿದ್ಧಪಡಿಸುತ್ತಾರೆ. ಇವರು ಕೆಲಸ ಮಾಡುವ ಕಂಪ್ಯೂಟರ್‌ಗಳು ಇತರೆ ಯಾವ ಜಾಲದೊಂದಿಗೂ ಸಂಪರ್ಕ ಹೊಂದಿರುವುದಿಲ್ಲ.
+ ಈ ಪ್ರಕ್ರಿಯೆಯಲ್ಲಿ ಒಳಗೊಂಡಿರುವ ಎಲ್ಲ ಅಧಿಕಾರಿಗಳು, ತಂತ್ರಜ್ಞರು, ಹಣಕಾಸು ಸಚಿವಾಲಯವಿರುವ ಸಿಬ್ಬಂದಿಯ ಚಲನವಲನ

ಸಂಸತ್ತಿನ ನಾರ್ತ್‌ಬ್ಲಾಕ್‌ಗಷ್ಟೇ ಸೀಮಿತವಾಗಿರುತ್ತದೆ. ಈ ಅವಧಿಯಲ್ಲಿ ಅವರು ನಾರ್ತ್‌ಬ್ಲಾಕ್ ಬಿಟ್ಟು ಬೇರೆ ಕಡೆ ತೆರಳುವಂತಿಲ್ಲ.

- ಬಜೆಟ್ ಪ್ರತಿ ಮುದ್ರಣವಾಗಿ **ಹಣಕಾಸು ಸಚಿವರು** ಅದನ್ನು ಸಂಸತ್ತಿನಲ್ಲಿ ಮಂಡಿಸಿದ ಬಳಿಕವಷ್ಟೆ ಈ ಎಲ್ಲ ಸಿಬ್ಬಂದಿ ನಾರ್ತ್‌ಬ್ಲಾಕ್‌ನಿಂದ ತೆರಳಬಹುದು.
- ಬಜೆಟ್‌ನ ಪ್ರತಿ ಸಿದ್ಧಪಡಿಸುವ ಅವಧಿಯಲ್ಲಿ ಗುಪ್ತಚರ ದಳದವರು ಬಜೆಟ್ ಸಿದ್ಧಪಡಿಸುವ ಸಿಬ್ಬಂದಿಯ ಪ್ರತಿ ಚಲನವಲನ, ಅವರ ಸುರಕ್ಷತೆ, ಭದ್ರತೆ ಗಮನಿಸುತ್ತಾರೆ.

### ಬಜೆಟ್‌ನ ಆದಾಯ & ವೆಚ್ಚವನ್ನು ರೂಪಾಯಿಯಲ್ಲಿ ಪ್ರತಿನಿಧಿಸುತ್ತದೆ

- ಬಜೆಟ್‌ನ ಒಟ್ಟು ಆದಾಯವನ್ನು ಒಂದು ರೂಪಾಯಿ ಎಂದು ಪ್ರತಿನಿಧಿಸಿ ವಿವಿಧ ಮೂಲಗಳಿಂದ ಬರುವ ಆದಾಯವನ್ನು ಪೈಸೆಗಳಲ್ಲಿ ಸೂಚಿಸಲಾಗುತ್ತದೆ. ಅದೇ ರೀತಿ ಖರ್ಚನ್ನು ಕೂಡ ಒಂದು ರೂಪಾಯಿ ಎಂದು ಪ್ರತಿನಿಧಿಸಿ, ಬೇರೆ ಬೇರೆ ವಲಯಗಳ ಯೋಜನಾ ವೆಚ್ಚಗಳನ್ನು ಪೈಸೆಗಳಲ್ಲಿ ಪ್ರತಿನಿಧಿಸಲಾಗುತ್ತದೆ.

### ಬಜೆಟ್ ಮಂಡನೆ ಯಾರು ಯಾವಾಗ ಮಂಡಿಸುತ್ತಾರೆ?

- ಸಂವಿಧಾನದ 112 ನೇ ವಿಧಿಯ ಅನ್ವಯ ಹಣಕಾಸು ಹೇಳಿಕೆಯನ್ನು ಸರ್ಕಾರ ಪ್ರತಿ ವರ್ಷ ಸಂಸತ್ತಿನಲ್ಲಿ ಮಂಡಿಸಬೇಕು. ಈ ಹಣಕಾಸು ಹೇಳಿಕೆಯೇ 'ಬಜೆಟ್' ಎಂದು ಜನಪ್ರಿಯವಾಗಿದೆ. 1947 ರಿಂದ ಕೇಂದ್ರ **ವಿತ್ತ ಸಚಿವರು ಸಂಸತ್ತಿನಲ್ಲಿ** ಮಂಡಿಸುತ್ತಾ ಬಂದಿದ್ದಾರೆ. ಸಾಮಾನ್ಯವಾಗಿ ಕೇಂದ್ರ ಬಜೆಟ್‌ನ್ನು ವಿತ್ತ ಸಚಿವರು ಫೆಬ್ರವರಿ ತಿಂಗಳ ಕೊನೆಯ ವಾರದ ಕೊನೆಯ ಕೆಲಸದ ದಿನದಂದು **ಲೋಕಸಭೆಯಲ್ಲಿ** ಮಂಡಿಸುತ್ತಾರೆ.
- ಆದರೆ, 2017–18 ರ ಬಜೆಟ್ ನ್ನು ಅರುಣ್ ಜೇಟ್ಲಿ ಅವರು ಫೆಬ್ರವರಿ ತಿಂಗಳ ಮೊದಲ ವಾರದಲ್ಲೇ ಮಂಡಿಸುವ ಸಂಪ್ರದಾಯಕ್ಕೆ ನಾಂದಿ ಹಾಡಿದರು.
- ಕೆಲವೊಮ್ಮೆ ಮಧ್ಯಂತರ ಬಜೆಟ್‌ನ್ನು ನೂತನವಾಗಿ ರಚನೆಯಾದ ಕೇಂದ್ರ ಸರ್ಕಾರವು ಬೇರೆ ತಿಂಗಳುಗಳಲ್ಲೂ ಮಂಡಿಸಬಹುದು.



### ಹಲ್ವಾ ಸಮಾರಂಭ (Halwa Ceremony)

- ಬಜೆಟ್ ಪ್ರತಿಯನ್ನು ಮುದ್ರಣಕ್ಕೆ ಕಳುಹಿಸುವ ಮುನ್ನ ಕೇಂದ್ರ ವಿತ್ತ ಸಚಿವರು ದೊಡ್ಡ ಕಡಾಯಿಯಲ್ಲಿ ಹಲ್ವಾ ಕಾಯಿಸುವ ಸಂಪ್ರದಾಯವಿದೆ.
- ಕೆಲವು ತಿಂಗಳಿನಿಂದ ಬಜೆಟ್ ಸಿದ್ಧ ಪಡಿಸುವುದಕ್ಕೆ ಶ್ರಮಿಸಿದ್ದ ಸಿಬ್ಬಂದಿ ಇದನ್ನು ಸಂಸತ್ತಿನ ಹಣಕಾಸು ಸಚಿವಾಲಯವಿರುವ **ನಾರ್ತ್ ಬ್ಲಾಕ್ ಕಚೇರಿಯಲ್ಲೇ** ಆಚರಿಸುತ್ತಾರೆ. ಬಜೆಟ್ ಅಧಿವೇಶನಕ್ಕೆ ಅಂದಾಜು 10 ದಿನ ಮೊದಲು ಈ ಕಾರ್ಯಕ್ರಮ ನಡೆಯುತ್ತದೆ.

### ಮುಂಗಡ ಪತ್ರ ಮಂಡನೆ ಮುನ್ನ

- ಮುಂಗಡ ಪತ್ರ / ಬಜೆಟ್‌ನ್ನು ಸಂಸತ್ತಿನಲ್ಲಿ ಮಂಡಿಸುವುದಕ್ಕೆ ಸರ್ಕಾರ ನಿಗದಿಪಡಿಸಿದ ದಿನಾಂಕಕ್ಕೆ ಲೋಕಸಭಾ ಸ್ಪೀಕರ್ ಅನುಮತಿ ನೀಡಿದ ನಂತರ, ಲೋಕಸಭಾ ಸಚಿವಾಲಯ ಇದಕ್ಕೆ ರಾಷ್ಟ್ರಪತಿಗಳ ಅನುಮೋದನೆ ಕೋರುತ್ತದೆ.
- ಬಜೆಟ್ ಮಂಡಿಸುವ ದಿನ ಬೆಳಗ್ಗೆ ಪ್ರಧಾನಮಂತ್ರಿ ಮತ್ತು ಹಣಕಾಸು ಸಚಿವರು ಅಂಗೀಕರಿಸಿದ ಬಜೆಟ್ **"ಸಾರಾಂಶ"** ವನ್ನು ರಾಷ್ಟ್ರಪತಿಗಳ ಒಪ್ಪಿಗೆಗೆ ಸರ್ಕಾರ ಕಳುಹಿಸುತ್ತದೆ.

### ವಿತ್ತ ಸಚಿವರ ಭಾಷಣ

- ಸಂಸತ್ತಿನ ಲೋಕಸಭೆಯಲ್ಲಿ ವಿತ್ತ ಸಚಿವರ ಬಜೆಟ್ ಭಾಷಣವು ಎರಡು ಭಾಗ ಹೊಂದಿದ್ದು,
- **ಮೊದಲ ಭಾಗ:-** ದೇಶದ ಸಾಮಾನ್ಯ ಆರ್ಥಿಕ ಸ್ಥಿತಿಯನ್ನು ಹಾಗೂ ನೀತಿಗಳ ವಿವರ ಕುರಿತ ಹೇಳಿಕೆಗಳಾಗಿರುತ್ತವೆ.
- **ಎರಡನೇ ಭಾಗ:** ಆರ್ಥಿಕ ವರ್ಷದ ತೆರಿಗೆ ಪ್ರಸ್ತಾವನೆಗಳಿರುತ್ತವೆ.
- ಬಜೆಟ್ ಮಂಡನೆಗೆ ಮೊದಲು ಸಚಿವ ಸಂಪುಟದಲ್ಲೂ ವಿತ್ತ ಸಚಿವರು ಬಜೆಟ್‌ನ ಸಾರಾಂಶ ಮಂಡಿಸುತ್ತಾರೆ. ಇದನ್ನು **"Summary of the Budget"** ಎನ್ನುವರು.

# ಲೋಕಸಭೆಯಲ್ಲಿ ಬಜೆಟ್ ಮಂಡನೆ

✦ ವಿತ್ತ ಸಚಿವರು ಲೋಕಸಭೆಯಲ್ಲಿ ಬಜೆಟ್ ಆರಂಭಿಸಿ ಪ್ರಮುಖ ಅಂದಾಜು ಹಾಗೂ ಪ್ರಸ್ತಾವನೆಗಳ ವಿವರಗಳನ್ನು ಸದಸ್ಯರ ಮುಂದಿಡುತ್ತಾರೆ. ಬಳಿಕ, ರಾಜ್ಯಸಭೆಯಲ್ಲಿ ಮಂಡನೆಯಾಗುತ್ತದೆ. ಮಂಡನೆಯಾದ ದಿನ ಮುಂಗಡ ಪತ್ರದ ಕುರಿತು ಯಾವುದೇ ಚರ್ಚೆ ನಡೆಯುವುದಿಲ್ಲ.

### ಮುಂಗಡ ಪತ್ರದ ಬಗ್ಗೆ ಸಂಸತ್ತಿನಲ್ಲಿ ಚರ್ಚೆ

✦ ಮುಂಗಡ ಪತ್ರ ಸಂಸತ್ತಿನಲ್ಲಿ ಮಂಡನೆಯಾದ ಬಳಿಕ ಅದರ ಬಗ್ಗೆ ಎರಡು ಭಾಗಗಳಲ್ಲಿ ಚರ್ಚೆ ನಡೆಯುತ್ತದೆ.

| -: ಬಜೆಟ್ ಚರ್ಚೆಗಳು :- | |
|---|---|
| 1) ಸಾಮಾನ್ಯ ಚರ್ಚೆ | 2) ವಿಸ್ತೃತ ಚರ್ಚೆ |

**ಸಾಮಾನ್ಯ ಚರ್ಚೆ:-** ಬಜೆಟ್ ಮಂಡನೆಯಾದ ನಂತರ 4 ಅಥವಾ 5 ದಿನಗಳಲ್ಲಿ ಬಜೆಟ್ ಮೇಲೆ ಸಾಮಾನ್ಯ ಸಭೆ ನಡೆಯುತ್ತದೆ.

### ವೋಟ್ ಆನ್ ಅಕೌಂಟ್:

✦ ವಿತ್ತ ವರ್ಷದ ಆರಂಭದ **ಎರಡು ತಿಂಗಳುಗಳ** ಖರ್ಚುಗಳಿಗೆ ಬಜೆಟ್‌ನ **1/6 (ಆರನೇ ಒಂದು ಭಾಗ)** ದಷ್ಟು ಹಣ ಪಡೆಯುವ ಪ್ರಕ್ರಿಯೆಯಾದ ವೋಟ್ ಆನ್ ಅಕೌಂಟ್ ಪೂರ್ಣಗೊಳಿಸಲಾಗುತ್ತದೆ.

✦ ಚರ್ಚೆ ವೇಳೆ ವಿತ್ತ ಸಚಿವರು ಸದಸ್ಯರ ಪ್ರಶ್ನೆಗಳಿಗೆ ಉತ್ತರಿಸುತ್ತಾರೆ. ಇದಾದ ನಂತರ ಸದನದ ನಿಗದಿತ ಕಾಲದವರೆಗೆ ಮುಂದೂಡಲ್ಪಡುತ್ತದೆ.

### ವಿಸ್ತೃತ ಚರ್ಚೆ

✦ ಅಲ್ಪ ವಿರಾಮದ ಅವಧಿಯಲ್ಲಿ ವಿವಿಧ ಸ್ಥಾಯಿ ಸಮಿತಿಗಳು ಅನುದಾನದ ಬೇಡಿಕೆಗಳನ್ನು ಪರಿಶೀಲಿಸುತ್ತವೆ. ತರುವಾಯ ಸದನದ ವ್ಯವಹಾರ ಸಲಹಾ ಸಮಿತಿ ಈ ಬೇಡಿಕೆಗಳನ್ನು ಒಂದೊಂದಾಗಿ ಚರ್ಚೆಗೆ ತೆಗೆದುಕೊಳ್ಳಲು ನಿರ್ಧರಿಸುತ್ತದೆ.

✦ ಅಧಿವೇಶನ ಪುನರಾರಂಭವಾದಾಗ ಯಾವುದೇ ಸದಸ್ಯ ಅನುದಾನದಲ್ಲಿ ಕಡಿತ ಮಾಡುವಂತೆ ಕೋರಬಹುದು.

**ಇದಕ್ಕಾಗಿ ಮೂರು ಆಯ್ಕೆಗಳಿವೆ**

1) **ನೀತಿ ವಿರೋಧ**

2) **ಆರ್ಥಿಕ**

3) **ಸಾಂಕೇತಿಕ ಕಡಿತಗಳಡಿ ನಿಲುವಳಿ ಮಂಡಿಸಬಹುದಾಗಿದೆ.**

✦ **ಅಧಿವೇಶನದ ಕೊನೆಯ ದಿನ** ಅನುದಾನಕ್ಕೆ ಸಂಬಂಧಿಸಿದಂತೆ ಚರ್ಚೆ ನಡೆಯುತ್ತದೆ. ತರುವಾಯ ಎಲ್ಲ ಅನುದಾನಗಳ ಬೇಡಿಕೆಗಳನ್ನು ಮತಕ್ಕೆ ಹಾಕಲಾಗುತ್ತದೆ. ನಂತರ, ಸರ್ಕಾರವು ವಿನಿಯೋಗ ಮಸೂದೆಯನ್ನು ಲೋಕಸಭೆಯಲ್ಲಿ ಮಂಡಿಸುತ್ತದೆ. ಇದಕ್ಕೆ ಅಂಗೀಕಾರ ಸಿಕ್ಕಿದಲ್ಲಿ ದೇಶದ ಸಂಚಿತ ನಿಧಿಯಿಂದ ಅಗತ್ಯಕ್ಕಾಗಿ ಖರ್ಚು ಮಾಡುವ ಅಧಿಕಾರ ಸರ್ಕಾರಕ್ಕೆ ದೊರೆಯುತ್ತದೆ. ಬಳಿಕ ವಿತ್ತ ಮಸೂದೆಯನ್ನು ನಂತರ ರಾಜ್ಯಸಭೆಯಲ್ಲಿ ಮಂಡಿಸಲಾಗುತ್ತದೆ. ರಾಜ್ಯಸಭೆಯು 14 ದಿನಗಳೊಳಗೆ ಈ ಮಸೂದೆಗೆ ಅಂಗೀಕಾರ ಸಿಕ್ಕಿ, **75 ದಿನದೊಳಗೆ ರಾಷ್ಟ್ರಪತಿಯವರ ಅಂಕಿತ** ಹಾಕಿಸಬೇಕು. ನಂತರವಷ್ಟೆ ಅದರ ಅನುಷ್ಠಾನ ಸಾಧ್ಯ. ಇಷ್ಟಾದರೆ ಮುಂಗಡಪತ್ರದ ಕಾರ್ಯಪೂರ್ಣಗೊಳ್ಳುತ್ತದೆ.

**ಭಾರತದಲ್ಲ ಕೇಂದ್ರ ಮುಂಗಡಪತ್ರವು ಈ ಕೆಳಗಿನ 4 ಹಂತಗಳ ಪ್ರಕ್ರಿಯೆಯಲ್ಲಿರುತ್ತದೆ.**

1. ಮುಂಗಡಪತ್ರದ ಸಿದ್ದತೆ
2. ಸಂಸತ್ತಿನಲ್ಲಿ ಬಜೆಟ್ ಮಂಡನೆ & ಅನುಮೋದನೆ
3. ಬಜೆಟ್ ಅನುಷ್ಠಾನ
4. ಬಜೆಟ್ ಅನುಷ್ಠಾನದ ನಂತರ ಲೆಕ್ಕ ಪರಿಶೀಲನೆ.

### ಬಜೆಟ್‌ನ ಸಿದ್ಧತಾ ಪ್ರಕ್ರಿಯೆ
**(Bottom - Up Process)**

ಬಜೆಟ್‌ನ ಸಿದ್ಧತಾ ಕಾರ್ಯವು ದೇಶದ ಇಲಾಖೆಗಳ ಅತ್ಯಂತ ಕೆಳ ವಿಭಾಗದಿಂದ ಪ್ರಾರಂಭವಾಗಿ ಇಲಾಖಾ ಮುಖ್ಯಸ್ಥರ ಮೂಲಕ ಹಣಕಾಸು ಸಚಿವಾಲಯ, ಸಂಸತ್ತಿನಲ್ಲಿ ಕೊನೆಗೊಳ್ಳುತ್ತದೆ.



# ಬಜೆಟ್ ನ ಭಾಗಗಳು – ತೆರಿಗೆಗೆ ಸಂಬಂಧಿಸಿದ ಪ್ರಮುಖ ಪರಿಕಲ್ಪನೆಗಳು




## I. ಕಂದಾಯ ಖಾತೆ (Revenue Account):-

- ಇದು ಕಂದಾಯ ಸ್ವೀಕೃತಿ ಮತ್ತು ಕಂದಾಯ ವೆಚ್ಚವನ್ನು ಒಳಗೊಂಡ ಬಜೆಟ್‌ನ ಒಂದು ಭಾಗವಾಗಿದೆ.

**i. ಕಂದಾಯ ಸ್ವೀಕೃತಿ (Revenue Receipt):-**

- ಸರ್ಕಾರ ತೆರಿಗೆ ಮತ್ತು ತೆರಿಗೆಯೇತರ ಮೂಲಗಳಿಂದ ಗಳಿಸುವ ಆದಾಯವೇ ಕಂದಾಯ ಸ್ವೀಕೃತಿ. ಇದು ಕಂದಾಯ ಖಾತೆಯ ಒಂದು ಭಾಗವಾಗಿದೆ.

**a) ತೆರಿಗೆ ಆದಾಯ (Tax Revenue):–**

- ಯಾವುದೇ ನೇರ ಪ್ರತಿಫಲಾಪೇಕ್ಷೆಯಿಲ್ಲದೆ ಸಾರ್ವಜನಿಕರು ಸರ್ಕಾರಕ್ಕೆ ಕಡ್ಡಾಯವಾಗಿ ಪಾವತಿಸಬೇಕಾದ ವಂತಿಕೆಯನ್ನು ತೆರಿಗೆ ಎನ್ನುವರು.
- ತೆರಿಗೆಯು ಪ್ರತ್ಯಕ್ಷ ಮತ್ತು ಪರೋಕ್ಷ ತೆರಿಗೆಗಳನ್ನು ಹೊಂದಿದೆ.

### ತೆರಿಗೆಗೆ ಸಂಬಂಧಿಸಿದ ಮುಖ್ಯ ಪರಿಕಲ್ಪನೆಗಳು

**ತೆರಿಗೆ ಆಘಾತ (Tax Impact):-**

- ತೆರಿಗೆಯು ಮೊದಲು ಯಾರ ಮೇಲೆ ವಿಧಿಸಲ್ಪಡುವುದೋ ಅದನ್ನು ತೆರಿಗೆ ಆಘಾತ ಎನ್ನುವರು.

**ತೆರಿಗೆ ಭಾರ/ಹೊರೆ (Tax Incidence):–**

- ತೆರಿಗೆಯನ್ನು ಅಂತಿಮವಾಗಿ ಸರ್ಕಾರಕ್ಕೆ ಪಾವತಿಸುವುದನ್ನು ತಿಳಿಸುವುದೇ ತೆರಿಗೆ ಭಾರ.

**ತೆರಿಗೆ ಪಲ್ಲಟ (Tax Shifting):–**

- ತೆರಿಗೆ ಹೊರೆಯು ಒಬ್ಬರಿಂದ ಮತ್ತೊಬ್ಬರಿಗೆ ವರ್ಗಾಯಿಸಲ್ಪಡುವುದೇ ತೆರಿಗೆ ಪಲ್ಲಟ.

**ಬಜೆಟ್ ಹೊರೆ ಅಥವಾ ಕೋಶೀಯ ಹೊರೆ (Fiscal Incidence):–**

- ಸರ್ಕಾರದ ತೆರಿಗೆ & ವೆಚ್ಚದ ಒಟ್ಟು ಆರ್ಥಿಕ ಪರಿಣಾಮವನ್ನು ತಿಳಿಸುವುದೇ ಬಜೆಟ್ ಹೊರೆ.

**ತೆರಿಗೆ ಸ್ವರ್ಗ (Tax Heaven):-**

- ತೆರಿಗೆ ದರವನ್ನು ಕಡಿಮೆ ದರದಲ್ಲಿ ವಿಧಿಸಲ್ಪಡುವುದು ಅಥವಾ ತೆರಿಗೆ ದರದಲ್ಲಿ ರಿಯಾಯಿತಿ ನೀಡಿಕೆ.

**ಟಾಬಿನ್ ತೆರಿಗೆ (Tobin Tax):-**

- ವಿದೇಶಿ ವಿನಿಮಯ ವ್ಯವಹಾರಗಳ ಮೇಲೆ ವಿಧಿಸಲ್ಪಡುವ ತೆರಿಗೆ.

**ಪಿಗು ತೆರಿಗೆ (pigouvian tax)/ಕಾರ್ಬನ್ ತೆರಿಗೆ:-**

- ಆರ್ಥಿಕತೆಯಲ್ಲಿ ಸೃಷ್ಟಿಯಾಗುವ ನಕಾರಾತ್ಮಕ ಬಾಹ್ಯತೆಗಳ ಮೇಲೆ ವಿಧಿಸಲ್ಪಡುವ ತೆರಿಗೆ. ಅಥವಾ ಋಣಾತ್ಮಕ ಹೊರಹೊಮ್ಮುವಿಕೆ ಪರಿಣಾಮ (ಉದಾ:– ಪರಿಸರ ಮಾಲಿನ್ಯ) ದ ಮೇಲೆ ವಿಧಿಸಲ್ಪಡುವ ತೆರಿಗೆ.

**ಲ್ಯಾಫರ್ ರೇಖೆ (Laffer Curve)**

- ಸರ್ಕಾರದ ತೆರಿಗೆ ದರ ಮತ್ತು ತೆರಿಗೆ ಆದಾಯ ನಡುವಿನ ಸಂಬಂಧವನ್ನು ಆರ್ಥರ್ ಲ್ಯಾಫರ್ ವಿವರಿಸಲು ರೂಪಿಸಿದ ರೇಖೆಯಾಗಿದೆ.

**ಸುಂಕ ನಿರಾಕರಣೆ (Tax Evasion):-**

- ತೆರಿಗೆ ಪಾವತಿದಾರ ಉದ್ದೇಶ ಪೂರ್ವಕವಾಗಿ ತೆರಿಗೆ ಪಾವತಿ ಮಾಡುವುದಿಲ್ಲ ಎಂದು ತಿಳಿಸುವ ಸ್ಥಿತಿ.

**ತೆರಿಗೆ ಪ್ಲವನತೆ:- (Tax Buoyacancy):-**

- ರಾಷ್ಟ್ರೀಯ ವರಮಾನ ಮತ್ತು ತೆರಿಗೆ ನಡುವಿನ ಸಂಬಂಧವನ್ನು ತಿಳಿಸುವುದೇ ತೆರಿಗೆ ಪ್ಲವನತೆ.

**ಶೂನ್ಯ ಆಧಾರಿತ ಆಯವ್ಯಯ (ZBB-Zero Based Budgeting):-**

+ ಹಣಕಾಸು ವರ್ಷದ ಆರಂಭದಲ್ಲಿ ಬಜೆಟ್‌ನ ಆದಾಯ & ವೆಚ್ಚಗಳನ್ನು ಶೂನ್ಯಗೊಳಿಸಿ, ಹೊಸ ಬಜೆಟ್ ಮಂಡಿಸುವುದು.
+ "ಜಿಮ್ಮಿ ಕಾರ್ಟರ್" 1973ರಲ್ಲಿ ಅಮೆರಿಕದಲ್ಲಿ ಮೊದಲ ಬಾರಿಗೆ ಇದನ್ನು ಅಳವಡಿಸಿದ್ದರು.

**ಪ್ರಮಾಣಾನುಗುಣ ತೆರಿಗೆ (Proportional Tax):-**

+ ವಿವಿಧ ಆದಾಯ ಮಟ್ಟಗಳಲ್ಲಿ ತೆರಿಗೆ ದರ ಏಕರೂಪವಾಗಿರುವುದು.

**ಬಜೆಟ್ ಅತಿರಿಕ್ತತೆ (Budget Surplus):-**

+ ಸರ್ಕಾರವೊಂದರ ಒಟ್ಟು ಆದಾಯವು ಅದರ ವೆಚ್ಚವನ್ನು ಮೀರುವುದು ಎಂದರ್ಥ.

**ತೆರಿಗೆ ನೀತಿ (Tax Policy):-**

+ ಸರ್ಕಾರವು ಪ್ರತ್ಯಕ್ಷ ಮತ್ತು ಪರೋಕ್ಷ ತೆರಿಗೆಗಳು ಮತ್ತು ಅವುಗಳ ದರವನ್ನು ನಿರ್ಧರಿಸುವ ವಿಚಾರವಾಗಿದೆ.

**ತೆರಿಗೆ ಸಂಗ್ರಹ (Tax Collection):-**

+ ಸರ್ಕಾರ ತೆರಿಗೆ ಇಲಾಖೆಗಳ ಮೂಲಕ ಆದೇಶಿಸಲ್ಪಟ್ಟ ದರಗಳಲ್ಲಿ ನಿರ್ದಿಷ್ಟ ಕಾಲಾವಧಿಯಲ್ಲಿ ಸಂಗ್ರಹಿಸುವುದು.

**ತೆರಿಗೆ ಸಾಮರ್ಥ್ಯ (Taxable Capacity):-**

+ ದೇಶವೊಂದರ ವ್ಯಕ್ತಿ ಅಥವಾ ಸಮುದಾಯದ ಪಾವತಿ ಸಾಮರ್ಥ್ಯ.

**ತೆರಿಗೆ ಉತ್ಪತ್ತಿ (Tax Yielding):-**

+ ಪ್ರತೀ ತೆರಿಗೆ ಸೃಷ್ಟಿಸುವ ಆದಾಯ ಪ್ರಮಾಣ.

**ತೆರಿಗೆ ಆಡಳಿತ (Tax Administration):-**

+ ಸರ್ಕಾರ ಕಾಲ-ಕಾಲಕ್ಕೆ ವಿಧಿಸಲ್ಪಡುವ ಪ್ರತ್ಯಕ್ಷ ಮತ್ತು ಪರೋಕ್ಷ ತೆರಿಗೆಗಳನ್ನು ಜಾರಿಗೊಳಿಸುವುದಕ್ಕಾಗಿ ಹೊಂದಿದ ಆಡಳಿತ ವ್ಯವಸ್ಥೆ.

**ತೆರಿಗೆ ಉತ್ತೇಜಕಗಳು (Tax Incentivesss):-**

+ ಉದ್ಯಮ ಮತ್ತು ಕೈಗಾರಿಕೆ ತನ್ನ ಉತ್ಪಾದನೆ ಹೆಚ್ಚಿಸಲು ನೀಡುವ ತೆರಿಗೆ ರಿಯಾಯಿತಿಗಳು.

**ಅವರೋಹಿ ತೆರಿಗೆ (Regressive Income Tax):-**

+ ಆದಾಯ ಹೆಚ್ಚಾದಂತೆ ತೆರಿಗೆಯ ದರವು ಇಳಿಮುಖವಾಗುವುದು. ಅಂದರೆ ಆದಾಯ & ತೆರಿಗೆ ದರದ ನಡುವೆ ಋಣಾತ್ಮಕ ಸಂಬಂಧವಿರುತ್ತದೆ.

**ಮಂದಗತಿಯ ಆರೋಹಿ ತೆರಿಗೆ (Digressive Income Tax):-**

+ ಆರ್ಥಿಕತೆಯಲ್ಲಿ ಒಂದು ಆದಾಯ ಮಟ್ಟದವರೆಗೆ ತೆರಿಗೆಯು ನಿಧಾನಗತಿಯಲ್ಲಿ ಏರಿ, ನಂತರ ಸ್ಥಿರ ದರದಲ್ಲಿ ಮುಂದುವರೆಯುವುದು.

**ಋಣಾತ್ಮಕ ತೆರಿಗೆ (Negative Tax):-**

+ ಸರ್ಕಾರಕ್ಕೆ ಜನರು ತೆರಿಗೆ ಪಾವತಿ ಬದಲಿಗೆ ಸರ್ಕಾರವೇ ಬಡಜನತೆಯ ಕೊಳ್ಳುವ ಸಾಮರ್ಥ್ಯ ಹೆಚ್ಚಿಸುವುದು. ಉದಾ:- ಸಾಮಾಜಿಕ ಭದ್ರತೆಗಳು.

**ದ್ವಂದ್ವ ತೆರಿಗೆ (Double Taxation):-**

+ ಒಂದೇ ಆದಾಯದ ಮೂಲವನ್ನು ಅನೇಕ ಬಾರಿ ತೆರಿಗೆ ವ್ಯಾಪ್ತಿಗೆ ಒಳಪಡಿಸುವುದು.

## ಪ್ರತ್ಯಕ್ಷ ಅಥವಾ ನೇರ ತೆರಿಗೆಗಳು (Direct Taxes)

**ಅರ್ಥ:-** ತೆರಿಗೆ ಆಘಾತ ಮತ್ತು ತೆರಿಗೆ ಹೊರೆಯು ಒಬ್ಬ ವ್ಯಕ್ತಿಯ ಮೇಲೆ ವಿಧಿಸಲ್ಪಡುವುದು ಅಥವಾ ತೆರಿಗೆ ಹೊರೆಯನ್ನು ಪಲ್ಲಟ ಮಾಡಲು ಸಾಧ್ಯವಾಗದೇ ಇರುವ ತೆರಿಗೆಗಳೇ ಪ್ರತ್ಯಕ್ಷ ತೆರಿಗೆ.

**ಉದಾ:-** ಆದಾಯ ತೆರಿಗೆ, ಸಂಪತ್ತಿನ ತೆರಿಗೆ, ಬಡ್ಡಿ ತೆರಿಗೆ, ವೃತ್ತಿ ತೆರಿಗೆ, ಕಾರ್ಪೊರೇಟ್ ತೆರಿಗೆ/ಕಂಪನಿ ಲಾಭ ತೆರಿಗೆ ಮುಂತಾದುವು.

+ 2015-16ರ ಕೇಂದ್ರ ಬಜೆಟ್‌ನಲ್ಲಿ ರದ್ದುಪಡಿಸಿದ ತೆರಿಗೆ – **ಸಂಪತ್ತಿನ ತೆರಿಗೆ**
+ ಕಂಪನಿ/ಉದ್ಯಮ ಸಂಸ್ಥೆಯ ನಿವ್ವಳ ಲಾಭದ ಮೇಲೆ ವಿಧಿಸಲ್ಪಡುವುದು – **ಕಂಪನಿ ಲಾಭ ತೆರಿಗೆ.**
+ ಇದು ಕೇಂದ್ರ ಸರ್ಕಾರಕ್ಕೆ **ಹೆಚ್ಚಿನ ಆದಾಯ** ತಂದು ಕೊಡುವ ಪ್ರತ್ಯಕ್ಷ ತೆರಿಗೆ ಮೂಲವಾಗಿದೆ.

**ಪುರೋಗಾಮಿ ತೆರಿಗೆ ಪದ್ಧತಿ (Progressive Income Taxes):-**

+ ಆದಾಯ ಹೆಚ್ಚಾದಂತೆ ತೆರಿಗೆ ದರ ಹೆಚ್ಚಳವಾಗುವ ತೆರಿಗೆ ಪದ್ಧತಿಯನ್ನು ಪುರೋಗಾಮಿ **ತೆರಿಗೆ** ಪದ್ಧತಿ ಎನ್ನುವರು.ಇಲ್ಲಿ ಆದಾಯ & ತೆರಿಗೆ ದರದ ನಡುವೆ ನೇರ ಸಂಬಂಧವಿರುತ್ತದೆ. **ಉದಾ:-** ಭಾರತದಲ್ಲಿ ಪ್ರಸ್ತುತ ಆಚರಣೆಯಲ್ಲಿರುವ ಆದಾಯ ತೆರಿಗೆ ಪದ್ಧತಿ.

## ಪರೋಕ್ಷ ಅಥವಾ ಅಪ್ರತ್ಯಕ್ಷ ತೆರಿಗೆಗಳು (Indirect Taxes)

+ ತೆರಿಗೆ ಭಾರ ಮತ್ತು ಪ್ರಭಾವ/ಆಘಾತವನ್ನು ಬೇರೆ ಬೇರೆ ವ್ಯಕ್ತಿಗಳು ಭರಿಸುವಂತಿದ್ದರೆ ಅದನ್ನೇ **ಪರೋಕ್ಷ ತೆರಿಗೆಗಳು** ಎನ್ನುವರು. ಇಲ್ಲಿ ತೆರಿಗೆ ಹೊರೆಯನ್ನು ವರ್ಗಾವಣೆ ಮಾಡಲು ಸಾಧ್ಯವಾಗುತ್ತದೆ.
+ **ಉದಾ:** ಕೇಂದ್ರ ಅಬಕಾರಿ ಸುಂಕ, ರಫ್ತು-ಆಮದು ಸುಂಕ (ಸೀಮಾ ಸುಂಕ) ಸೇವಾ ತೆರಿಗೆ, ಮೌಲ್ಯವರ್ಧಿತ ತೆರಿಗೆ, ಸರಕು ಮತ್ತು ಸೇವಾ ತೆರಿಗೆ (GST).

### ಅಬಕಾರಿ ಸುಂಕ (Excise Duty):-

- ದೇಶದೊಳಗೆ ಉತ್ಪಾದನೆಯಾಗುವ ಸರಕುಗಳ ಮಾರಾಟದ ಮೇಲೆ ವಿಧಿಸಲ್ಪಡುವುದು. ಇದು ವಸ್ತುಗಳ ಉತ್ಪಾದನೆ ಆಧಾರಿತ ತೆರಿಗೆ ಪ್ರಕಾರವಾಗಿದೆ.
- ಇದು ಸರ್ಕಾರಕ್ಕೆ **ಆದಾಯ ತಂದು ಕೊಡುವ ಪರೋಕ್ಷ ತೆರಿಗೆಯ** ದೊಡ್ಡ ಮೂಲವಾಗಿದೆ.

**ರಫ್ತು-ಆಮದು ಸುಂಕ (Custom Duty):-** ದೇಶದ ಆಮದು ಮತ್ತು ರಫ್ತಾಗುವ ಸರಕುಗಳ ಮೇಲೆ ವಿಧಿಸಲ್ಪಡುವುದೇ ಸೀಮಾ ಸುಂಕ / ಕಸ್ಟಮ್ಸ್ ಸುಂಕ ಇದನ್ನು Border Tax ಎಂತಲೂ ಕರೆಯುತ್ತಾರೆ.

### ಮಾರಾಟ ತೆರಿಗೆ (Sales Tax)

- ಸರಕು ಮತ್ತು ಸೇವೆಗಳ ಮಾರಾಟದ ಅಂತಿಮ ಮೌಲ್ಯದ ಮೇಲೆ ವಿಧಿಸಲ್ಪಡುವ ತೆರಿಗೆ. ಇದು ಉತ್ಪಾದಕರ ಮೇಲೆ ವಿಧಿಸಲ್ಪಟ್ಟಿರುತ್ತದೆ ಆದರೆ ಅಂತಿಮವಾಗಿ ಅನುಭೋಗಿಗಳು ಪಾವತಿಸಬೇಕು.

### ಮೌಲ್ಯವರ್ಧಿತ ತೆರಿಗೆ (VAT - Value Added Tax)

**ವರ್ಧಿತ ತೆರಿಗೆ = ಒಟ್ಟು ಮಾರಾಟ ಮೌಲ್ಯ – ಮಧ್ಯವರ್ತಿ ಅನುಭೋಗ ವೆಚ್ಚ**

1) ವಸ್ತುವಿನ **ಉತ್ಪಾದನೆಯ ವಿವಿಧ ಅಥವಾ ಪ್ರತಿ ಹಂತಗಳಲ್ಲಿ** ವಿಧಿಸಲ್ಪಡುವ ತೆರಿಗೆ.
2) ಇದು ಮಾರಾಟ ತೆರಿಗೆಗೆ ಬದಲಿಗೆ ತಂದ ಪರೋಕ್ಷ ತೆರಿಗೆ ಪದ್ಧತಿ.
3) ಭಾರತದಲ್ಲಿ ಮೊದಲ ಬಾರಿಗೆ 2003ರಲ್ಲಿ **ಹರ್ಯಾಣದಲ್ಲಿ** ಮೊದಲ ಬಾರಿ ಜಾರಿಗೆ.
4) ಭಾರತದ ಎಲ್ಲಾ ರಾಜ್ಯಗಳಲ್ಲಿ 2005ರ ಏಪ್ರಿಲ್ 1ರಲ್ಲಿ ಜಾರಿಗೆ
5) **ಕರ್ನಾಟಕ (2005)** ಯಶಸ್ವಿಯಾಗಿ VATನ್ನು ಜಾರಿಗೆ ತಂದ ಮೊಟ್ಟ ಮೊದಲ ರಾಜ್ಯವಾಗಿದೆ.

MODVAT (ಮಾರ್ಪಡಿತ ಮೌಲ್ಯವರ್ಧಿತ ತೆರಿಗೆ) – 1986 ಮಾರ್ಚ್ 1
CENVAT (ಕೇಂದ್ರೀಯ ಮೌಲ್ಯವರ್ಧಿತ ತೆರಿಗೆ)– 2000 ಏಪ್ರಿಲ್ 1
VAT – (ಮೌಲ್ಯವರ್ಧಿತ ತೆರಿಗೆ) 2005 ಏಪ್ರಿಲ್ 1

### ಸೇವಾ ತೆರಿಗೆ (Service Tax):-

- 1994–95ರ ಬಜೆಟ್‌ನಲ್ಲಿ ಜಾರಿಯಾಗಿದ್ದು, ವ್ಯಕ್ತಿ ಪಡೆಯುವ ವಿವಿಧ ಸೇವೆಗಳ ಮೇಲೆ ವಿಧಿಸಲ್ಪಡುವ ತೆರಿಗೆ.
- ಭಾರತದಲ್ಲಿ ಪ್ರಮುಖವಾಗಿ ದೂರವಾಣಿ ಸಂಪರ್ಕ, ಪ್ರವಾಸೋದ್ಯಮ, ಜಾಹೀರಾತು, ಬ್ಯಾಂಕ್ ಮತ್ತು ಹಣಕಾಸು ಸೇವೆ, ನಿರ್ವಹಣಾ ಸೇವೆ, ಮಾರ್ಗದರ್ಶಿ ಸೇವೆ, ಆರೋಗ್ಯ ಸೇವೆ. ವಾಸ್ತುಶಿಲ್ಪಿ ಸೇವೆ. ಮುಂತಾದವುಗಳ ಮೇಲೆ ವಿಧಿಸಲಾಗುತದೆ.
- **ಶೇ 0.5 ಸೆಸ್‌ನ್ನು ಸ್ವಚ್ಛ ಭಾರತ ಬಳಕೆಗಾಗಿ** ವಿಧಿಕೆ. ಈ ಸೆಸ್‌ನ್ನು 2015 ನವೆಂಬರ್ 15ರಿಂದ ವಿಧಿಸಲಾಗಿದೆ.
- 2016–17ರ ಬಜೆಟ್‌ನಲ್ಲಿ ಹಣಕಾಸು ಸಚಿವ ಅರುಣ್ ಜೇಟ್ಲಿ ಅವರು **ಕೃಷಿ ಕಲ್ಯಾಣ ಸೆಸ್‌ನ್ನು** ಶೇ 0.5ರಷ್ಟು ವಿಧಿಸಿದ್ದು, 2016ರ ಜೂನ್ 1ರಿಂದ ಜಾರಿಯಾಗಿದ್ದು, ಪ್ರಸ್ತುತ ಸೇವಾ ತೆರಿಗೆಯು ಶೇ 15ಕ್ಕೆ ಹೆಚ್ಚಳಗೊಂಡಿದೆ. 2017 ಜುಲೈ 1 ರಂದು ಜಿ.ಎಸ್.ಟಿ ನೊಂದಿಗೆ ವಿಲೀನ.

### ಡಿವಿಡೆಂಡ್ ತೆರಿಗೆ (Dividend Tax):-

- ಕಂಪನಿ ಹೂಡಿಕೆದಾರರಿಗೆ ನೀಡುವ ಡಿವಿಡೆಂಡ್ 10ಲಕ್ಷ ಮೀರಿದರೆ ಶೇ 10ರಷ್ಟು ಹೆಚ್ಚುವರಿ ತೆರಿಗೆಯನ್ನು 2016ರ ಏಪ್ರಿಲ್ 1ರಿಂದ ಜಾರಿಗೆ ತರಲಾಗಿದೆ.

### ಮೂಲ ಸೌಕರ್ಯ ಸೆಸ್ (Infrastructure Cess):-

- 2016–17ರ ಬಜೆಟ್‌ನಲ್ಲಿ ರೂಪಿಸಿದ ಇದು **ಶೇ 1ರಷ್ಟು** ಸೆಸ್‌ನ್ನು ಕಾರು ಅಥವಾ ಇನ್ನಿತರ ವಾಹನಗಳ ಬಳಕೆ–ಯ ಮೇಲೆ ವಿಧಿಸಲಾಗುತ್ತಿದೆ.

### ತೆರಿಗೆಯೇತರ ಆದಾಯ (Non-Tax Revenue):-

- ತೆರಿಗೆ ಮೂಲಗಳನ್ನು ಹೊರತುಪಡಿಸಿ ಇತರೆ ಮೂಲಗಳಿಂದ ಕೇಂದ್ರ ಸರ್ಕಾರ ಸಂಗ್ರಹಿಸುವ ಆದಾಯವೇ ತೆರಿಗೆಯೇತರ ಆದಾಯವಾಗಿದೆ. ತೆರಿಗೆಗಳನ್ನು ವಿಧಿಸುವುದರ ಬದಲಾಗಿ ಕೇಂದ್ರ ಸರ್ಕಾರ ಈ ಕೆಳಗಿನ ವಿವಿಧ ಮೂಲಗಳಿಂದ ಆದಾಯ ಪಡೆಯುತ್ತದೆ.

**ಮೂಲಗಳು:-**

1) ಬಡ್ಡಿ ಸ್ವೀಕೃತಿ
2) ಸಾರ್ವಜನಿಕ ಉದ್ದಿಮೆಗಳ ಆದಾಯ
3) ರೈಲ್ವೆಯಿಂದ ಬರುವ ಆದಾಯ
4) ನೋಟುಗಳ ಮುದ್ರಣ ಮತ್ತು ಟಂಕಸಾಲೆಗಳ ಆದಾಯ
5) ದಂಡ, ಶುಲ್ಕ & ಜುಲ್ಮಾನೆ.
6) ವಿದೇಶಿ ಹಣಕಾಸು ಸಂಸ್ಥೆಗಳ ಅನುದಾನಗಳು.

### ಕಂದಾಯ ವೆಚ್ಚ (Revenue Expenditure):–

- ಸರ್ಕಾರ ಪ್ರಸ್ತುತ ಕಂದಾಯ ಸ್ವೀಕೃತಿಯಿಂದ ಮಾಡುವ ವೆಚ್ಚವೇ ಕಂದಾಯ ವೆಚ್ಚ.

**ಇದರಲ್ಲಿ 2 ವಿಧಗಳಿವೆ.**

**ಎ) ಯೋಜನಾ ವೆಚ್ಚ (Planned Expenditure):-**

- ರಾಷ್ಟ್ರೀಯ ವರಮಾನಕ್ಕೆ ನೇರವಾಗಿ ಕೊಡುಗೆ ನೀಡುವ ವೆಚ್ಚಗಳನ್ನು ಕಂದಾಯ ಯೋಜನಾ ವೆಚ್ಚ ಎನ್ನುತ್ತಾರೆ. ಇದು ಸಾಮಾಜಿಕ, ಆರ್ಥಿಕ ಮತ್ತು ಸಾಮಾನ್ಯ ಸೇವೆಗಳ ಯೋಜನೆ ಮೇಲೆ ಮಾಡಲಾಗುವ ವೆಚ್ಚವಾಗಿದೆ. **ಉದಾ:-** ಸರ್ಕಾರದ ಯೋಜನೆಗಳು, ಕಾರ್ಯಕ್ರಮಗಳ ಅನುಷ್ಠಾನ.

## ಭಾರತದಲ್ಲಿ ಜಾರಿಗೆ ಬಂದ ವಿವಿಧ ತೆರಿಗೆಗಳು

**ಮರಣಾನಂತರ ತೆರಿಗೆ (Estate Duty)** – 1953 ಜಾರಿ, 1985 ರದ್ದತಿ

**ದಾನ ತೆರಿಗೆ (Gift Tax)** – 1958 ಜಾರಿ, 1998 ರದ್ದತಿ

**ಸಂಪತ್ತಿನ ತೆರಿಗೆ (Wealth Tax)** – 1957 ಜಾರಿ – 2015–16 ರ ಬಜೆಟ್‌ನಲ್ಲಿ ರದ್ದು ಮಾಡಲಾಯಿತು.

**ಬಡ್ಡಿ ತೆರಿಗೆ (Interest Tax):-** 1974 ಜಾರಿ, 2000–01 ಹಿಂತೆಗೆತ

**ವೆಚ್ಚ ತೆರಿಗೆ (Expenditure Tax):-** ಟಿ.ಟಿ.ಕೃಷ್ಣಮಾಚಾರಿ ಸಲಹೆ.

**ಕನಿಷ್ಠ ಪರ್ಯಾಯ ತೆರಿಗೆ** (MAT-Minimun Alternate Tax) – 1997–98 ರಲ್ಲಿ ಜಾರಿ.

**ಸುಧಾರಿತ ಮೌಲ್ಯ ಸಂಕಲಿತ ತೆರಿಗೆ** (MOD VAT):- 1986 ರಲ್ಲಿ ಜಾರಿ

**ಕೇಂದ್ರ ಮೌಲ್ಯ ಸಂಕಲಿತ ತೆರಿಗೆ (CEN VAT)**–2000–01

**ಮೌಲ್ಯ ವರ್ಧಿತ ತೆರಿಗೆ** – 2005 ಏಪ್ರಿಲ್ 1 ರಂದು ಜಾರಿ.

**ಸೇವಾ ತೆರಿಗೆ (Service Tax)** - 1994–95 ರಂದು ಜಾರಿ.

GAAR- General Anti Avoidance Rule – 2013 ಬಜೆಟ್‌ನಲ್ಲಿ ಪ್ರಸ್ತಾಪ. ಸುಂಕ ವಿಧಿಕೆ & ಸಂಗ್ರಹಣಾ ನಿಯಮಗಳು.

## ಪ್ರಮುಖ ತೆರಿಗೆಯ ಸಂಗ್ರಹಣೆ ಬಗೆಗಿನ ಮಾಹಿತಿ

» ಕೇಂದ್ರ ಸರ್ಕಾರ ವಿಧಿಸಿ ಸಂಗ್ರಹಿಸಿ ತಾನೇ ಬಳಕೆ ಮಾಡಿಕೊಳ್ಳುವುದು – **ಆದಾಯ ತೆರಿಗೆ, ಕಾರ್ಪೋರೇಟ್ ತೆರಿಗೆ.**

» ಕೇಂದ್ರ ಸರ್ಕಾರ ವಿಧಿಸಿ ಸಂಗ್ರಹಣೆ ಮಾಡಿ ಮತ್ತು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ನಡುವೆ ಹಂಚಿಕೆ – **ಅಬಕಾರಿ ತೆರಿಗೆ, ಸಂಪತ್ತಿನ ತೆರಿಗೆ.**

» ಕೇಂದ್ರ ಸರ್ಕಾರ ವಿಧಿಸಿ, ಸಂಗ್ರಹಣೆ ಮಾಡಿ ಹಾಗೂ ಪೂರ್ಣ ರಾಜ್ಯ ಸರ್ಕಾರಗಳಿಗೆ ನೀಡುವುದು – **ಮಾರಾಟ ತೆರಿಗೆ, ಸೇವಾ ತೆರಿಗೆ.**

» ಕೇಂದ್ರ ಸರ್ಕಾರ ವಿಧಿಸಿ, ರಾಜ್ಯಸರ್ಕಾರ ಸಂಗ್ರಹಣೆ, ಕೇಂದ್ರ ಸರ್ಕಾರಕ್ಕೆ ನೀಡಲ್ಪಡುವುದು – **ಜಾಹೀರಾತು ತೆರಿಗೆ, ಕಸ್ಟಂ ಸುಂಕ, ಕೃಷಿ ಆದಾಯ.**

» **ಸರಕು & ಸೇವಾ ತೆರಿಗೆ** – 5%, 12%, 18%, 28% ಎಂಬ 4 ಹಂತಗಳಲ್ಲಿ 2017 ಜುಲೈ 1 ರಿಂದ ಅಸ್ತಿತ್ವದಲ್ಲಿದೆ. ಸಿ.ಜಿ.ಎಸ್.ಟಿ, ಎಸ್.ಜಿ.ಎಸ್.ಟಿ & ಐ.ಜಿ.ಎಸ್.ಟಿ ಎಂಬ 3 ಪ್ರಕಾರದಲ್ಲಿದೆ.

## ಮೌಲ್ಯಾಧಾರಿತ ತೆರಿಗೆ
### (VAT-Value Added Tax)




ಮೌಲ್ಯಾಧಾರಿತ ತೆರಿಗೆಯು 2017 ಜುಲೈ 1 ರಿಂದ ಜಿ.ಎಸ್.ಟಿ ಯಲ್ಲಿ ಸೇರ್ಪಡೆಯಾಗಿದೆ. ಈ ತೆರಿಗೆಯು ಅನೇಕ ದೇಶಗಳಲ್ಲಿ ಜಾರಿಯಲ್ಲಿದ್ದು, ಭಾರತದಲ್ಲೂ ಕೆಲವು ರಾಜ್ಯಗಳಲ್ಲಿ ಜಾರಿಯಲ್ಲಿತ್ತು. ಈ ತೆರಿಗೆ–ಯು ಮುಂದಿನ ದಿನಗಳಲ್ಲಿ ಜಿ.ಎಸ್.ಟಿಯಾಗಿ ಮುಂದುವರಿದಿದೆ. ಕರ್ನಾಟಕ ರಾಜ್ಯದಲ್ಲೂ ಈ ತೆರಿಗೆಯು ಜಾರಿಯಲ್ಲಿತ್ತು.

ಭಾರತದಲ್ಲಿ 2005 ಏಪ್ರಿಲ್ 1 ರಂದು ಭಾರತೀಯ ತೆರಿಗೆ ಪದ್ಧತಿಯಲ್ಲಿ ಮೌಲ್ಯಾಧಾರಿತ ತೆರಿಗೆಯನ್ನು ಪರಿಚಯಿಸಲಾಯಿತು. ಕೆಲವು ರಾಜ್ಯಗಳಲ್ಲಿ ಶೇ 5 ರಷ್ಟು ತೆರಿಗೆಯಿದ್ದರೆ, ಕೆಲವು ರಾಜ್ಯಗಳಲ್ಲಿ ಶೇ 14.5 ರಷ್ಟಿದೆ. ತಮಿಳುನಾಡು ಸರ್ಕಾರವು ಮೌಲ್ಯಾಧಾರಿತ ತೆರಿಗೆ ಪದ್ಧತಿಯನ್ನು ಜಾರಿಗೆ ತಂದಿದ್ದು, ತಮಿಳುನಾಡು ಮೌಲ್ಯಾಧಾರಿತ ತೆರಿಗೆ ಕಾಯ್ದೆ – 2006 ಎಂದು ಜಾರಿಗೆ ತಂದಿದ್ದು, 2007 ಜನವರಿ 1 ರಿಂದ ಜಾರಿಯಲ್ಲಿತ್ತು.

ತೆರಿಗೆಗಳಲ್ಲಿ ಪಾರದರ್ಶಕತೆ ತರಲು ಮತ್ತು ವ್ಯಾಪಾರದ ಕಂದಕಗಳನ್ನು ಹೋಗಲಾಡಿಸಲು, ಮೌಲ್ಯಾಧಾರಿತ ತೆರಿಗೆಯನ್ನು ಜಾರಿಗೆ ತರಲಾಗಿದೆ. ಕರ್ನಾಟಕದಲ್ಲಿ ಮೌಲ್ಯಾಧಾರಿತ ತೆರಿಗೆಯನ್ನು 2005 ಏಪ್ರಿಲ್ 1 ರಂದು ಜಾರಿಗೆ ತರಲಾಗಿತ್ತು. ಕರ್ನಾಟಕ ಮೌಲ್ಯಾಧಾರಿತ ತೆರಿಗೆ ನಿಯಮಗಳು – 2005 ರಂತೆ ಮೌಲ್ಯಾಧಾರಿತ ತೆರಿಗೆಯನ್ನು ಸಂಗ್ರಹಿಸಲಾಗುತ್ತಿತ್ತು.

2017 ಜುಲೈ 1 ರಿಂದ ಜಿ.ಎಸ್.ಟಿಯು ಜಾರಿಗೆ ಬಂದ ನಂತರ ಮೌಲ್ಯಾಧಾರಿತ ತೆರಿಗೆಯು ರದ್ದುಗೊಂಡಿತು. ಈ ಮೂಲಕ ದೇಶಾದ್ಯಂತ ಏಕರೂಪದ ತೆರಿಗೆ ವ್ಯವಸ್ಥೆ ಜಾರಿಗೆ ಬಂದಿತು.

# ಜಿಎಸ್‌ಟಿ (Goods and Services Tax)




'ಒಂದು ದೇಶ, ಒಂದು ತೆರಿಗೆ, ಒಂದು ಮಾರುಕಟ್ಟೆ' (One Country, One tax, One Market) ಎಂಬ ತತ್ವದಡಿಯಲ್ಲಿ ರಾಷ್ಟ್ರಾದ್ಯಂತ ಸ್ವಾತಂತ್ರ್ಯಾನಂತರದ 70 ವರ್ಷಗಳ ಇತಿಹಾಸದಲ್ಲಿ ತೆರಿಗೆ ವ್ಯವಸ್ಥೆಯ ಸುಧಾರಣೆಯಾದ ಸರಕು & ಸೇವಾ ತೆರಿಗೆಯನ್ನು 2017 ಜೂನ್ 30 ಜುಲೈ 1 ರ ಮಧ್ಯರಾತ್ರಿ ನವದೆಹಲಿಯ ಪಾರ್ಲಿಮೆಂಟ್ ಸೆಂಟ್ರಲ್‌ಹಾಲ್‌ನಲ್ಲಿ ರಾಷ್ಟ್ರಪತಿ ಪ್ರಣಬ್ ಮುಖರ್ಜಿ, ಪ್ರಧಾನಮಂತ್ರಿ ನರೇಂದ್ರ ಮೋದಿ & ಇತರ ಗಣ್ಯರ ಉಪಸ್ಥಿತಿಯಲ್ಲಿ ಅಧಿಕೃತವಾಗಿ ಅನುಷ್ಠಾನಕ್ಕೆ ತರಲಾಯಿತು.

- "ಗ್ರಾಹಕನೇ ದೊರೆ" (Consumer Is the King) ಎಂಬ ಧ್ಯೇಯದಡಿಯಲ್ಲಿ ರೂಪಿತವಾದ ಜಿ.ಎಸ್.ಟಿ ಕಾಯ್ದೆಯು ದೇಶದಲ್ಲಿ ಆರ್ಥಿಕ ಬೆಳವಣಿಗೆಗೆ ಅಡ್ಡಿಯಾಗಿದ್ದ ತೆರಿಗೆ ಭಯೋತ್ಪಾದನೆ & ಇನ್‌ಸ್ಪೆಕ್ಟರ್ ರಾಜ್ ವ್ಯವಸ್ಥೆಯನ್ನು ಅಂತ್ಯಗೊಳಿಸಿ, ಬಡಜನರ ಆರ್ಥಿಕ ಮತ್ತು ಶೈಕ್ಷಣಿಕ ಸಬಲೀಕರಣದ ಗುರಿ ಹೊಂದಿರುವ ಕಾಯ್ದೆಯಾಗಿದ್ದು, ಕೇಂದ್ರ ಮತ್ತು ರಾಜ್ಯಗಳ ಸಂಬಂಧವನ್ನು ವೃದ್ಧಿಸುವ ಉದ್ದೇಶದಿಂದ ನವಭಾರತದ ಸಾಮಾನ್ಯ ಮಾರುಕಟ್ಟೆ ವ್ಯವಸ್ಥೆಯನ್ನು ಸೃಷ್ಟಿಸಿ, ದೇಶೀಯ ಆರ್ಥಿಕತೆಯ ಸಾಮರ್ಥ್ಯವನ್ನು ದ್ವಿಗುಣಗೊಳಿಸುವುದಾಗಿದೆ.

### ಏನಿದು ಜಿ.ಎಸ್.ಟಿ?

- ದೇಶಾದ್ಯಂತ ಸರಕು ಮತ್ತು ಸೇವೆಗಳ ಮೇಲೆ ವಿಧಿಸಲಾಗುವ ಏಕರೂಪದ ಸಾಮಾನ್ಯ ಪರೋಕ್ಷ ತೆರಿಗೆಯಾಗಿದೆ. ಸರಕುಗಳ ತಯಾರಿ ಮತ್ತು ಮಾರಾಟ ಹಾಗೂ ಸೇವೆಗಳ ಬಳಕೆಗಳ ಮೇಲೆ ವಿಧಿಸುವ ವ್ಯಾಪಕ ಮತ್ತು ಸಮಗ್ರ ತೆರಿಗೆ ವ್ಯವಸ್ಥೆಯಾಗಿದೆ.

### ಜಿ.ಎಸ್.ಟಿ ಅರ್ಥ

ವಸ್ತು & ಸೇವೆಗಳ ಮಾರಾಟ, ಕೊಳ್ಳುವಿಕೆ, ವಿನಿಮಯ, ವರ್ಗಾವಣೆ, ಆಮದು ಮುಂತಾದವುಗಳ ಮೇಲೆ ವಿಧಿಸಲ್ಪಡುವ ತೆರಿಗೆ.

ಜಿ.ಎಸ್.ಟಿ ಅನುಭೋಗ ಆಧಾರಿತ ತೆರಿಗೆಯಾಗಿದ್ದು, ಸರಕು ಸೇವೆಗಳನ್ನು ಅನುಭೋಗಿಸುವ ರಾಜ್ಯದಲ್ಲಿ ಸರ್ಕಾರಕ್ಕೆ ತೆರಿಗೆ ಸಲ್ಲಿಸುವುದೇ ವಿನಃ ಉತ್ಪಾದಿಸಿದ ರಾಜ್ಯ ವಸ್ತುಗಳ ಮೇಲಲ್ಲ.

ತೆರಿಗೆಗಳು ಪಾವತಿಗೊಂಡರೆ ರಾಷ್ಟ್ರ ನಿರ್ಮಾಣವಾಗುವುದು

### ಜಿಎಸ್.ಟಿ ಯು ಬೆಳೆದು ಬಂದ ದಾರಿ

- 1986ರಲ್ಲಿ ವಿ.ಪಿ.ಸಿಂಗ್ ಜಾರಿಗೆ ತಂದಿದ್ದ ಮಾರ್ಪಡಿತ ಮೌಲ್ಯ ವರ್ಧಿತ ತೆರಿಗೆ (Mod VAT) ಮೊದಲ ಹೆಜ್ಜೆಯಾಗಿದೆ.
- 2000 ರಲ್ಲಿ ಅಟಲ್ ಬಿಹಾರಿ ವಾಜಪೇಯಿ ನೇತೃತ್ವದ ಸರ್ಕಾರವು ಪಶ್ಚಿಮ ಬಂಗಾಳದ ರಾಜ್ಯ ಹಣಕಾಸು ಸಚಿವರಾದ ಅಸೀಮ್ ದಾಸ್ ಗುಪ್ತಾ ಅವರ ನೇತೃತ್ವದಲ್ಲಿ ಜಿ.ಎಸ್.ಟಿ ರಾಜ್ಯ ಸಚಿವರ ಸಬಲೀಕರಣ ಸಮಿತಿಯನ್ನು ರಚಿಸಿತ್ತು. ಇವರನ್ನು ಭಾರತದ ಜಿ.ಎಸ್.ಟಿ ಪಿತಾಮಹ ಎಂದು ಕರೆಯಲಾಗಿದೆ.
- ರವಿದಾಸ್ ಗುಪ್ತಾ ಸಮಿತಿಯು ತೆರಿಗೆ ತಂತ್ರಜ್ಞಾನ ಕುರಿತ ವಿಚಾರಗಳ ಸಿದ್ಧಪಡಿಸುವಿಕೆ. ಇದು 2017 ರಲ್ಲಿ ಜಾರಿಗೆ ಬಂದ GSTN ಗೆ ಆಧಾರವಾಗಿದೆ.
- 2003 ರಲ್ಲಿ ವಿಜಯ ಕೇಲ್ಕರ್ ಅವರ ನೇತೃತ್ವದಲ್ಲಿ ಕಾರ್ಯಪಡೆ ಸಮಿತಿ ನೇಮಕ & 2005 ರಲ್ಲಿ ವರದಿ ಸಲ್ಲಿಕೆ.
- 2006 ರ ಬಜೆಟ್‌ನಲ್ಲಿ ಪಿ. ಚಿದಂಬರಂ ಅವರು 2010 ಏಪ್ರಿಲ್ 1 ರ ಒಳಗೆ ಜಿ.ಎಸ್.ಟಿ ತರುವ ಪ್ರಸ್ತಾಪ.
- 2008 ರ ಫೆಬ್ರವರಿ 28 ರಂದು ಪಿ. ಚಿದಂಬರಂ ಅವರು ಮಂಡನೆ ಮಾಡಿದ ಬಜೆಟ್‌ನಲ್ಲಿ 2010 ಏಪ್ರಿಲ್ 1 ರಂದು ಜಿ.ಎಸ್.ಟಿ ಜಾರಿಗೆ ತರುವುದಾಗಿ ಘೋಷಿಸಿತ್ತು.
- 2015 ಫೆಬ್ರವರಿಯಲ್ಲಿ ಅರುಣ್ ಜೇಟ್ಲಿ ತಮ್ಮ ಬಜೆಟ್‌ನಲ್ಲಿ ಪ್ರಸ್ತಾಪಿಸಿದಂತೆ, 2016 ಏಪ್ರಿಲ್ 1 ರೊಳಗೆ ಜಾರಿಗೆ ತರಲು ಸಿದ್ಧತೆ ಮಾಡಿದ್ದರೂ ವಿಫಲವಾಗಿತ್ತು.
- 2014ರ ಡಿಸೆಂಬರ್ 19ರಂದು ಲೋಕಸಭೆಯಲ್ಲಿ ಮಸೂದೆ ಮಂಡನೆ.

+ 2015ರ ಮೇ 6ರಂದು ಲೋಕಸಭೆಯಲ್ಲಿ ವಿಧೇಯಕಕ್ಕೆ ಒಪ್ಪಿಗೆ ಪಡೆಯಲಾಗಿದೆ.
+ 2015ರ ಮೇ 12ರಂದು ರಾಜ್ಯಸಭೆಗೆ ಮಸೂದೆ ರವಾನೆ ಮಾಡಲಾಯಿತು.
+ 2015ರ ಮೇ 14ರಂದು ಲೋಕಸಭೆ & ರಾಜ್ಯಸಭೆಯ ಜಂಟಿ ಸಮಿತಿಗೆ ವಿಧೇಯಕ ರವಾನೆ.
+ 2015ರ ಜುಲೈ 22ರಂದು ಜಂಟಿ ಸಮಿತಿ ವರದಿ ಸಲ್ಲಿಕೆ ಮಾಡಲಾಯಿತು.
+ 2016 ಆಗಸ್ಟ್ 3 ರಂದು ರಾಜ್ಯಸಭೆ & 2016 ಆಗಸ್ಟ್ 8 ರಂದು ಪರಿಷ್ಕೃತ ಮಸೂದೆಗೆ ಲೋಕಸಭೆ ಮರು ಒಪ್ಪಿಗೆ.
+ ಜಿಎಸ್‌ಟಿಗೆ ಸಂಬಂಧಿಸಿದಂತೆ 122ನೇ ಸಂವಿಧಾನಾತ್ಮಕ ತಿದ್ದುಪಡಿ ಮಸೂದೆ–2014 ನ್ನು 2014 ಡಿಸೆಂಬರ್ 18 ರಂದು ಕೇಂದ್ರ ಸಚಿವ ಸಂಪುಟ ಅನುಮೋದನೆ ನೀಡಿತು.
+ ಸಂಸತ್ತು ಅಂಗೀಕರಿಸಿದ ಮತ್ತು ಅರ್ಧದಷ್ಟು ರಾಜ್ಯಗಳು ಅಂಗೀಕರಿಸಿದ ಈ ಮಸೂದೆಗೆ 2016 ಸೆಪ್ಟೆಂಬರ್ 8 ರಂದು ಭಾರತದ ರಾಷ್ಟ್ರಪತಿ ಪ್ರಣಬ್ ಮುಖರ್ಜಿ ಅವರು ಅಂಕಿತ ಹಾಕಿದರು. ಈ ಮೂಲಕ ಸಂವಿಧಾನದ 101 ನೇ ತಿದ್ದುಪಡಿಯಾಗಿ ಜಿ.ಎಸ್.ಟಿ ಮಸೂದೆಯು ಸ್ಥಾನ ಪಡೆಯಿತು.
+ 2017 ಮಾರ್ಚ್ 20 ರಂದು 4 ಮಸೂದೆಗಳಾದ CGST, IGST, UTGST, ರಾಜ್ಯಪರಿಹಾರ ಜಿ.ಎಸ್.ಟಿ ಗಳಿಗೆ ಪ್ರಧಾನಿ ನೇತೃತ್ವದ ಸಚಿವ ಸಂಪುಟವು ಅನುಮೋದನೆ ನೀಡಿದೆ.
+ ಸಂಸತ್ತಿನಲ್ಲಿ 2017 ಮಾರ್ಚ್ 29 ರಂದು ಮಂಡನೆ ಮಾಡಿ ಅಂಗೀಕಾರ ಪಡೆದು, 2017 ಜುಲೈ 1 ರಿಂದ ಜಾರಿಗೆ ತರಲಾಯಿತು.
+ ಸಂವಿಧಾನದ 246 (ಎ) ವಿಧಿಯಾನುಸಾರ 2016 ಸಂವಿಧಾನದ 101 ನೇ ತಿದ್ದುಪಡಿ ಕಾಯ್ದೆಯು ಉಭಯ ಸಂಸತ್ತು & ರಾಜ್ಯ ಶಾಸನಸಭೆಗಳಿಗೆ ಜಿ.ಎಸ್.ಟಿ ಸಂಬಂಧ ಶಾಸನಾಧಿಕಾರವನ್ನು ನಿಯುಕ್ತಿಗೊಳಿಸಿದೆ.
+ 246 (ಎ) ವಿಧಿಯ 2ನೇ ಉಪವಿಧಿಯು 269 (ಎ) ವಿಧಿಯೊಳಗೂಡಿ ಅಂತರ್ ರಾಜ್ಯ ವಾಣಿಜ್ಯ ವ್ಯವಹಾರಗಳಿಗೆ ಸಂಬಂಧಿಸಿದಂತೆ ಶಾಸನ ಮಾಡುವ ಪ್ರತ್ಯೇಕ ಅಧಿಕಾರವನ್ನು ಸಂಸತ್ತಿಗೆ ನೀಡಿದೆ.

+ ಅಸ್ಸಾಂ ರಾಜ್ಯ ವಿಧಾನಸಭೆಯು ಈ ಮಸೂದೆಗೆ 2016 ಆಗಸ್ಟ್ 12 ರಂದು ಅಂಗೀಕಾರ ನೀಡಿತು. ಈ ಮೂಲಕ **ಅಸ್ಸಾಂ ರಾಜ್ಯವು ಜಿ.ಎಸ್.ಟಿ ಮಸೂದೆಗೆ ಅಂಗೀಕಾರ ನೀಡಿದ ಮೊದಲ ರಾಜ್ಯವಾಗಿದೆ.**
+ ಕರ್ನಾಟಕ ರಾಜ್ಯ ಸರ್ಕಾರ 2017 ಜೂನ್ 15 ರಂದು **ಕರ್ನಾಟಕ** ಸರಕು & ಸೇವಾ ತೆರಿಗೆ ಮಸೂದೆ 2017 ಕ್ಕೆ ಒಪ್ಪಿಗೆ ನೀಡಿದೆ.
+ 2017 ಜುಲೈ 5 ರಂದು **ಜಮ್ಮು & ಕಾಶ್ಮೀರವು** ಜಿ.ಎಸ್.ಟಿ ಮಸೂದೆಗೆ ಅಂಗೀಕಾರ ನೀಡಿದ್ದು, 2017 ಜುಲೈ 8 ರ ಮಧ್ಯರಾತ್ರಿಯಿಂದ ಜಮ್ಮು ಕಾಶ್ಮೀರದಲ್ಲಿಯೂ ಜಿ.ಎಸ್.ಟಿ ಜಾರಿಯಾಗಿದೆ.

### GST Finder App



» 2017 ಜುಲೈ 9 ರಂದು ವಿತ್ತ ಸಚಿವ ಅರುಣ್ ಜೇಟ್ಲಿ ಅವರಿಂದ Finder App ಉದ್ಘಾಟನೆ

» ಇದು ದೇಶದ ವಿವಿಧ ಸರಕು & ಸೇವೆಗಳ ಮೇಲೆ ವಿಧಿಸಲ್ಪಡುವ ತೆರಿಗೆ ದರವನ್ನು ತಿಳಿಯಲು ಸಹಾಯಕವಾಗಿದೆ.

» ಬಳಕೆದಾರರು ತಮ್ಮ ಹೆಸರು ಅಥವಾ ಸರಕು & ಸೇವೆಗಳನ್ನು ದಾಖಲಿಸಿ, ಜಿ.ಎಸ್.ಟಿ ದರವನ್ನು ಆ್ಯಂಡ್ರಾಯ್ಡ್ ಫೋನ್ ಮೂಲಕ ಬಳಕೆ ಮಾಡಬಹುದು.

» ಕೇಂದ್ರ ಅಬಕಾರಿ & ಸೀಮಾ ಸುಂಕ ಮಂಡಳಿಯ ಪೋರ್ಟಲ್ **cbecgst.gov.in** ಮೂಲಕವೂ ಜಿ.ಎಸ್.ಟಿ ದರವನ್ನು ತಿಳಿಯಬಹುದು.

### ಐತಿಹಾಸಿಕ ಮಧ್ಯರಾತ್ರಿ ವಿಶೇಷತೆಗಳು:-

+ 1947 ಆಗಸ್ಟ್ 14 & 15 ರ ಮಧ್ಯರಾತ್ರಿ ನೆಹರೂ ಅವರಿಂದ ಐತಿಹಾಸಿಕ Tryst with Destiny ಎಂಬ ಸ್ವಾತಂತ್ರ್ಯ ಭಾಷಣ
+ 1972 ಆಗಸ್ಟ್ 15 ರಂದು ಅಂದಿನ ಪ್ರಧಾನಿ ಇಂದಿರಾಗಾಂಧಿ ಅವರಿಂದ ರಜತ ಸ್ವಾತಂತ್ರ್ಯೋತ್ಸವ ಕಾರ್ಯಕ್ರಮ.
+ 1997 ಆಗಸ್ಟ್ 15 ಐ.ಕೆ. ಗುಜ್ರಾಲ್ ಅವರಿಂದ ಸುವರ್ಣ ಸ್ವಾತಂತ್ರ್ಯೋತ್ಸವ ಕಾರ್ಯಕ್ರಮ.
+ 2017 ಜೂನ್ 30 ರಂದು ರಾಷ್ಟ್ರಪತಿ ಪ್ರಣಬ್ ಮುಖರ್ಜಿ & ಪ್ರಧಾನಿ ನರೇಂದ್ರ ಮೋದಿ ಜಿ.ಎಸ್.ಟಿ ಉದ್ಘಾಟನಾ ಕಾರ್ಯಕ್ರಮ



# ಜಿ.ಎಸ್.ಟಿ (GST)

ರಾಜ್ಯ ಆಂತರಿಕ ಚಲನೆ → ಕೇಂದ್ರ ಜಿ.ಎಸ್.ಟಿ (CGST), ರಾಜ್ಯ ಜಿ.ಎಸ್.ಟಿ (SGST)

ಅಂತರ್ ರಾಜ್ಯ ಚಲನೆ → ಅಂತರ್ಗತ ಜಿ.ಎಸ್.ಟಿ (IGST)

### ಕೇಂದ್ರ ಜಿ.ಎಸ್.ಟಿ (CGST):-

» ಕೇಂದ್ರ ಸರ್ಕಾರದಿಂದ ಒಂದು ರಾಜ್ಯದೊಳಗೆ ವ್ಯವಹಾರ ನಡೆಸುವ ಸರಕು & ಸೇವೆಗಳ ಮೇಲೆ ವಿಧಿಸಲ್ಪಡುವುದು ಕೇಂದ್ರ ಜಿ.ಎಸ್.ಟಿ.

» ಈ ತೆರಿಗೆಯನ್ನು ಕೇಂದ್ರ ಸರ್ಕಾರ ವಿಧಿಸಿ, ಸಂಗ್ರಹಿಸುವ ಜವಾಬ್ದಾರಿ ಹೊಂದಿರುತ್ತದೆ.

» ಈ ತೆರಿಗೆಯು ಹಿಂದಿನ ಕೇಂದ್ರ ಅಬಕಾರಿ ಸುಂಕ & ಸೇವಾ ತೆರಿಗೆಗಳಿಗೆ ಪರ್ಯಾಯವಾಗಿದೆ.

### ರಾಜ್ಯ ಜಿ.ಎಸ್.ಟಿ (SGST):-

» ಒಂದು ರಾಜ್ಯದೊಳಗೆ ವ್ಯವಹಾರ ನಡೆಸುವ ಸರಕು & ಸೇವೆಗಳ ಮೇಲೆ ಸಂಬಂಧಿಸಿದ ರಾಜ್ಯ ಸರ್ಕಾರ ವಿಧಿಸುವ ರಾಜ್ಯ ಸರಕು & ಸೇವಾ ತೆರಿಗೆ.

» ಈ ತೆರಿಗೆಯನ್ನು ಸಂಬಂಧಿಸಿದ ರಾಜ್ಯ ಸರ್ಕಾರ ವಿಧಿಸಿ, ಸಂಗ್ರಹಿಸುತ್ತದೆ.

» ಈ ತೆರಿಗೆಯು ಹಿಂದಿನ ಮೌಲ್ಯವರ್ಧಿತ ತೆರಿಗೆ, ಮನರಂಜನಾ ತೆರಿಗೆ, ಐಷಾರಾಮಿ ತೆರಿಗೆಗಳಿಗೆ ಬದಲಿಯಾಗಿದೆ.

### ಅಂತರ್ಗತ ಜಿ.ಎಸ್.ಟಿ (IGST):-

» ಅಂತರ್‌ರಾಜ್ಯ ಸರಕು & ಸೇವಾ ವ್ಯವಹಾರಗಳಿಗೆ ಕೇಂದ್ರ ಸರ್ಕಾರದಿಂದ ವಿಧಿಸಲ್ಪಡುವುದೇ ಅಂತರ್ಗತ ಜಿ.ಎಸ್.ಟಿ (IGST).

» ಇದನ್ನು ಅಂತರ್ ರಾಜ್ಯಗಳ ನಡುವೆ ನಡೆಯುವ ಸರಕು & ಸೇವೆ ವ್ಯಾಪಾರದ ಮೇಲೆ ಕೇಂದ್ರ ಸರ್ಕಾರ ವಿಧಿಸಿ, ಸಂಗ್ರಹಿಸುವ ಜವಾಬ್ದಾರಿ ಹೊಂದಿದೆ.

» ಇದು ಕೇಂದ್ರ ಮಾರಾಟ ತೆರಿಗೆಗೆ ಬದಲಿಯಾಗಿದೆ.

### ಕೇಂದ್ರಾಡಳಿತ ಪ್ರದೇಶ ಜಿ.ಎಸ್.ಟಿ (UTGST):-

» ಕೇಂದ್ರ ಸರ್ಕಾರದಿಂದ ಒಂದು ಕೇಂದ್ರಾಡಳಿತ ಪ್ರದೇಶದಲ್ಲಿ ವ್ಯವಹಾರ ನಡೆಸುವ ಸರಕು & ಸೇವೆಗಳ ಮೇಲೆ ಕೇಂದ್ರ ಜಿ.ಎಸ್.ಟಿ. & ಸಂಬಂಧಿಸಿದ ಕೇಂದ್ರಾಡಳಿತ ಪ್ರದೇಶ ವಿಧಿಸುವ ಸರಕು & ಸೇವಾ ತೆರಿಗೆ (UTGST).

### ರಾಜ್ಯ ಪರಿಹಾರ ಜಿ.ಎಸ್.ಟಿ (SCGST)

» ಜಿ.ಎಸ್.ಟಿ ಅನುಷ್ಠಾನದ ನಂತರ ದೇಶದ ಎಲ್ಲಾ ರಾಜ್ಯಗಳು ಅನುಭವಿಸುವ ತೆರಿಗೆ ಆದಾಯದ ನಷ್ಟವನ್ನು ಸರಿದೂಗಿಸಲು ಜಿ.ಎಸ್.ಟಿ ಮಂಡಳಿ ರೂಪಿಸಿದ ಪರಿಹಾರ ಕ್ರಮ.

» 2015–16 ರ ಆಧಾರ ವರ್ಷದಲ್ಲಿ ರಾಜ್ಯ ಸರ್ಕಾರಗಳಿಗೆ 5 ವರ್ಷಗಳವರೆಗೆ ತೆರಿಗೆ ನಷ್ಟ ಪರಿಹಾರವನ್ನು ಕೇಂದ್ರ ಸರ್ಕಾರ ನೀಡುತ್ತದೆ.

» ಭಾರತದ **ಕಂಪ್ಟ್ರೋಲರ್** & **ಆಡಿಟರ್** ಜನರಲ್ ಸಂಗ್ರಹಿತ ರಾಜ್ಯದ ಒಟ್ಟು ಆದಾಯದ ಮೇಲೆ ಪರಿಹಾರ ನಿರ್ಧರಿಸಿದ ಮೇಲೆ ಜಿ.ಎಸ್.ಟಿ ಮಂಡಳಿಯ ಮಾನದಂಡದ ಅನ್ವಯ ರಾಜ್ಯಗಳಿಗೆ ಪರಿಹಾರ ಒದಗಿಸಲಾಗುತ್ತದೆ.

» ಜಿ.ಎಸ್.ಟಿ ಅನುಷ್ಠಾನದ ನಂತರ ಭಾರತದ ಪರೋಕ್ಷ ತೆರಿಗೆ ವ್ಯವಸ್ಥೆ ಈ ಕೆಳಕಂಡಂತಿರುತ್ತದೆ.

» ವಸ್ತುಗಳ ಉತ್ಪಾದಕರು, ಮಾರಾಟಗಾರರು, ಸೇವಾ ಪೂರೈಕೆದಾರರ ಅಂತರ್ ರಾಜ್ಯ ವ್ಯವಹಾರಗಳ ಮೇಲೆ IGST, ರಾಜ್ಯ ವ್ಯವಹಾರಗಳ ಮೇಲೆ CGST & SGST

### ಸರಕು & ಸೇವಾ ತೆರಿಗೆ ಜಾಲ (ಜಿ.ಎಸ್.ಟಿ.ಎನ್)




» ಇದೊಂದು ಲಾಭೇತರ & ಸರ್ಕಾರೇತರ ಸಂಘಟನೆಯಾಗಿದೆ.

» ಸರ್ಕಾರ ತೆರಿಗೆ ಪಾವತಿದಾರರು, ವ್ಯವಹಾರೋದ್ಯಮಿಗಳಿಗೆ ಸಂಬಂಧಿಸಿದ ಸಿಂಗಲ್ ಪೋರ್ಟಲ್ ವೆಬ್‌ಸೈಟ್. & ಐಟಿ ಮೂಲ ಸೌಕರ್ಯದ ಬೆಂಬಲ ವ್ಯವಸ್ಥೆ.

» ಪ್ರಕಾಶ್ ಕುಮಾರ್ ಈ ವ್ಯವಸ್ಥೆಯ ಮೊದಲ ಸಿ.ಇ.ಒ & ವಿನ್ಯಾಸಗೊಳಿಸಿದವರು

» ನವೀನ್ ಕುಮಾರ್ ಜಿ.ಎಸ್.ಟಿ.ಎನ್ ವ್ಯವಸ್ಥೆಯ ಮೊದಲ ಅಧ್ಯಕ್ಷರಾಗಿದ್ದಾರೆ.

» ಇದು ಅಧಿಕೃತ ಬಂಡವಾಳವಾಗಿ 10 ಕೋಟಿಯನ್ನು ಹೊಂದಿದ್ದು, ಕೇಂದ್ರ & ರಾಜ್ಯ ಸರ್ಕಾರಗಳು ತಲಾ ಶೇ 24.5 ಹೊಂದಿದ್ದು, ಉಳಿದ ಬಂಡವಾಳ...

### ಜಿ.ಎಸ್.ಟಿ ತೆರಿಗೆ ವಿನಾಯಿತಿ

» ವಾರ್ಷಿಕ 20 ಲಕ್ಷ ವಹಿವಾಟು ನಡೆಸುವವರಿಗೆ ಜಿ.ಎಸ್.ಟಿ ಅನ್ವಯವಾಗುವುದಿಲ್ಲ. ಇವರಿಗೆ ತೆರಿಗೆ ವಿನಾಯಿತಿ ಇದೆ. ಆದರೆ ಮೊದಲು ಇವರು ವ್ಯಾಟ್ ಸಲ್ಲಿಸಬೇಕಿತ್ತು.

» 20 ಲಕ್ಷದಿಂದ 75 ಲಕ್ಷದವರೆಗೆ ವಹಿವಾಟು ನಡೆಸುವ ವರ್ತಕರು ಶೇ 2.5 ರಷ್ಟು ತೆರಿಗೆ ಪಾವತಿಸಬೇಕು.

### ತೆರಿಗೆ ರಿಟರ್ನ್ಸ್‌ಗೆ ಸಂಬಂಧಿಸಿದ ಮಾಹಿತಿ

» ಮಾರಾಟಕ್ಕೆ ಸಂಬಂಧಿಸಿದಂತೆ ತೆರಿಗೆ ರಿಟರ್ನ್ಸ್‌ಗಳನ್ನು ಪ್ರತಿ ತಿಂಗಳು 10 ನೇ ತಾರೀಖಿನೊಳಗೆ ಸಲ್ಲಿಸಬೇಕು.

» ಜಿ.ಎಸ್.ಟಿ ನೆಟ್‌ವರ್ಕ್ ಪ್ರತಿ ತಿಂಗಳು 11 ರಂದು ಸರಕುಗಳ ಖರೀದಿಗೆ ಸಂಬಂಧಿಸಿದ ವಿವರ ನೀಡುತ್ತದೆ.

» ಸರಕುಗಳ ಖರೀದಿಗೆ ಸಂಬಂಧಿಸಿದಂತೆ ವಿವರ ದೃಢೀಕರಿಸಲು ಪ್ರತಿ ತಿಂಗಳು 15 ರವರೆಗೆ ಅವಕಾಶ.

» ಜಿ.ಎಸ್.ಟಿ ಜಾಲ ಪ್ರತಿತಿಂಗಳು 16 ರೊಳಗೆ ತೆರಿಗೆ ಪಾವತಿಗೆ ಸಂಬಂಧಿಸಿದ ಮಾಹಿತಿ ಕಳುಹಿಸುತ್ತದೆ.

» ಪ್ರತಿ ತಿಂಗಳು 20 ರೊಳಗೆ ತೆರಿಗೆ ಪಾವತಿಸಬೇಕು.

» ಪ್ರತಿ ವರ್ಷ ಡಿಸೆಂಬರ್ 31 ರೊಳಗೆ ವಾರ್ಷಿಕ ರಿಟರ್ನ್ಸ್ ಸಲ್ಲಿಸಬೇಕು.

» 3 ತಿಂಗಳಿಗೊಮ್ಮೆ ಕಾಂಪೋಸಿಷನ್ ಯೋಜನೆಯಡಿ ತೆರಿಗೆ ರಿಟರ್ನ್ಸ್ ಸಲ್ಲಿಸಬೇಕು.

### ಜಿ.ಎಸ್.ಟಿ ಯಲ್ಲಿ ವಿಲೀನವಾಗುತ್ತಿರುವ ತೆರಿಗೆಗಳು:

**ಕೇಂದ್ರ ಸರ್ಕಾರದ ತೆರಿಗೆ:-** ಕೇಂದ್ರ ಅಬಕಾರಿ ತೆರಿಗೆ, ಹೆಚ್ಚುವರಿ ಅಬಕಾರಿ ಸುಂಕ (ಹೆಚ್ಚುವರಿ ಮಹತ್ವದ ಸುಂಕ), ಹೆಚ್ಚುವರಿ ಅಬಕಾರಿ ಸುಂಕ (ಜವಳಿ & ಜವಳಿ ಉತ್ಪನ್ನಗಳು), ಹೆಚ್ಚುವರಿ ಕಸ್ಟಮ್ಸ್ (ಸಿ.ವಿ.ಡಿ), ವಿಶೇಷ ಹೆಚ್ಚುವರಿ ಕಸ್ಟಮ್(ಎಸ್.ಎ.ಡಿ), ಸೇವಾ ತೆರಿಗೆ, ಸೆಸ್ & ಸರ್ಚಾರ್ಜ್.

**ರಾಜ್ಯ ಸರ್ಕಾರದ ತೆರಿಗೆಗಳು:-** ರಾಜ್ಯಗಳ ವ್ಯಾಟ್, ವಿಲಾಸಿ ತೆರಿಗೆ, ಎಂಟ್ರಿ ತೆರಿಗೆ (ಆಕ್ಟ್ರಾಯ್ ಹೊರತುಪಡಿಸಿ), ಮನರಂಜನಾ ತೆರಿಗೆ (ಸ್ವಯಂ ಆಡಳಿತ ಮಂಡಳಿ ವಿಧಿಸುವ ತೆರಿಗೆಯಲ್ಲ), ಜಾಹೀರಾತು ತೆರಿಗೆ, ಲಾಟರಿ, ಬೆಟ್ಟಿಂಗ್ & ಜೂಜು ಕುರಿತ ತೆರಿಗೆ, ರಾಜ್ಯಗಳ ಸೆಸ್ & ಸರ್ಚಾರ್ಜ್.

### ಕ್ಲಿಯರ್ ಟ್ಯಾಕ್ಸ್

✦ ಭಾರತದಲ್ಲಿ ಜಿ.ಎಸ್.ಟಿ ತಂತ್ರಾಂಶವನ್ನು ಬಳಸಲು ತಯಾರಿಸಿದ ಮೊಟ್ಟ ಮೊದಲ ಕಂಪನಿಯಾಗಿದೆ.

### ಜಿ.ಎಸ್.ಟಿ ದಿನ - ಜುಲೈ 1

» ಭಾರತದ 130 ಲಕ್ಷ ಕೋಟಿ ಮೊತ್ತದ ಆರ್ಥಿಕತೆ & 130 ಕೋಟಿ ಜನರನ್ನು ಒಂದೇ ಮಾರುಕಟ್ಟೆ ವ್ಯಾಪ್ತಿಗೆ ತರುವ ಅಪರೂಪ ಘಟನೆ ಹಾಗೂ ಏಕರೂಪ ತೆರಿಗೆ ವ್ಯವಸ್ಥೆಯಾಗಿರುವ ಸರಕು & ಸೇವಾ ತೆರಿಗೆ ಜಾರಿ ದಿನವಾದ ಜುಲೈ 1 ನ್ನು ಜಿ.ಎಸ್.ಟಿ ದಿನವಾಗಿ ಕೇಂದ್ರ ಸರ್ಕಾರ ಘೋಷಣೆ ಮಾಡಿದೆ.

» 2017 ಜುಲೈ 1 ರ ಶನಿವಾರದಂದು ಮೊದಲ ಜಿ.ಎಸ್.ಟಿ ದಿನ ಎಂದು ಆಚರಿಸಲಾಯಿತು.

» **ಸಂವಿಧಾನಾತ್ಮಕ ತಿದ್ದುಪಡಿ:-** ಜಿ.ಎಸ್.ಟಿ ಗೆ ಸಂಬಂಧಿಸಿದಂತೆ 122 ನೇ ಸಂವಿಧಾನಾತ್ಮಕ ತಿದ್ದುಪಡಿ ಮಸೂದೆ - 2014 ನ್ನು ಸಂಸತ್‌ನ ಎರಡೂ ಸದನಗಳಲ್ಲಿ ಅಂಗೀಕರಿಸಿದ ನಂತರ, ದೇಶದ ಅರ್ಧದಷ್ಟು ರಾಜ್ಯಗಳಲ್ಲಿ ಅಂಗೀಕಾರ ಪಡೆದು, ನಂತರ ರಾಷ್ಟ್ರಪತಿಗಳ ಅಂಕಿತ ಪಡೆದು, ಸಂವಿಧಾನದ 101 ನೇ ತಿದ್ದುಪಡಿಯಾಗಿ ಜಾರಿಗೆ ಬಂದಿತು.

## ಭಾರತದಲ್ಲಿ ಜಿ.ಎಸ್.ಟಿ ತೆರಿಗೆ ದರದ ರಚನೆ

» ಗರಿಷ್ಠ ಜಿ.ಎಸ್.ಟಿ ದರ ತುರ್ತು ಸಂದರ್ಭಗಳಲ್ಲಿ 40%. ಅಂದರೆ ತಲಾ ಕೇಂದ್ರ & ರಾಜ್ಯ ಸರ್ಕಾರಗಳು 20%.

ಭಾರತದಲ್ಲಿ ಜಿ.ಎಸ್.ಟಿ ತೆರಿಗೆ ದರದ ರಚನೆ

✦ 2017 ಮೇ 18, 19 ರಂದು ಶ್ರೀನಗರದಲ್ಲಿ ನಡೆದ ಸಭೆ, 2017 ಜೂನ್ 3 ರಂದು ನಡೆದ ಸಭೆ ಹಾಗೂ 2017 ಜೂನ್ 11 ರಂದು ನಡೆದ ಸಭೆಯಲ್ಲಿ ವಿವಿಧ ಸರಕು, ಸೇವೆಗಳಿಗೆ ಸಂಬಂಧಿಸಿದಂತೆ ಶೇ 5, ಶೇ 12, ಶೇ 18, ಶೇ 28 ಹಾಗೂ ಸೆಸ್ ನಿರ್ಧಾರವನ್ನು ಕೈಗೊಳ್ಳಲಾಗಿದೆ. ಇದು 98 ವಿಭಾಗದ 1,211 ಸರಕು & 36 ವಿಭಾಗದ ಸೇವೆಗಳಿಗೆ ಸಂಬಂಧಿಸಿದೆ.

| ತೆರಿಗೆ ಸ್ವರೂಪ | ಸರಕು ಶೇಕಡಾವಾರು |
|---|---|
| ತೆರಿಗೆ ವಿನಾಯಿತಿ | 7 |
| 5 | 14 |
| 12 | 17 |
| 18 | 43 |
| 28 | 19 |

- ಈ ಪಟ್ಟಿಯ ಪ್ರಕಾರ ದೇಶದ ಮಾರುಕಟ್ಟೆಯಲ್ಲಿರುವ ಶೇ 81 ಕ್ಕಿಂತ ಹೆಚ್ಚಿನ ಸರಕುಗಳು ಶೇ 18 ರ ತೆರಿಗೆ ದರದ ಒಳಗೆ ಹಾಗೂ ಉಳಿದ 19 ಸರಕುಗಳು ಶೇ 18 ಕ್ಕಿಂತ ಹೆಚ್ಚಿನ ತೆರಿಗೆಗೆ ಒಳಪಡುತ್ತವೆ.
- ಆದಾನ ತೆರಿಗೆ ಪತ್ತು ವಿಧಾನದ ಆಧಾರದ ಮೇಲೆ ಸರಕು & ಸೇವೆಗಳ ಮಾರಾಟ ಅಥವಾ ಕೊಂಡು ಕೊಳ್ಳುವಿಕೆಯ ಪ್ರತಿ ಹಂತದಲ್ಲಿ ಅನುಭೋಗ ಆಧಾರಿತ ತೆರಿಗೆಯನ್ನು ವಿಧಿಸುವ & ಸಂಗ್ರಹಿಸುವ ತೆರಿಗೆ ಪ್ರಕಾರವೇ ಸರಕು & ಸೇವಾ ತೆರಿಗೆ.

### ಶೇ 5 ರಷ್ಟು ತೆರಿಗೆಗೆ ಒಳಪಡುವ ಸರಕುಗಳು

ದಿನಬಳಕೆಯ ಅಗತ್ಯ ವಸ್ತುಗಳು, ಸಾರಿಗೆ, ಬಾಡಿಗೆ ಟ್ಯಾಕ್ಸಿ, ಓಲಾ, ಉಬರ್, ವೃತ್ತಪತ್ರಿಕೆ, ಎಲ್.ಪಿ.ಜಿ. ಗ್ಯಾಸ್, ಸೀಮೆ ಎಣ್ಣೆ, ವಾರ್ಷಿಕ 50 ಲಕ್ಷಕ್ಕಿಂತ ಕಡಿಮೆ ವಹಿವಾಟು ನಡೆಸುವ ರೆಸ್ಟೋರೆಂಟ್, ಎ.ಸಿ. ರೈಲ್ವೆ ಪ್ರಯಾಣ, ಇಕಾನಮಿ ದರ್ಜೆಯ ವಿಮಾನ ಪ್ರಯಾಣ, ಸಕ್ಕರೆ, ಚಹಾ, ಖಾದ್ಯ ತೈಲ, ಕಲ್ಲಿದ್ದಲು, ಪ್ಯಾಕ್ ಮಾಡಿದ ಆಹಾರ ಪದಾರ್ಥ, ಸೌರಫಲಕ, ಕೃಷಿ ಯಂತ್ರಗಳು, 1000 ಕ್ಕಿಂತ ಕಡಿಮೆ ಬೆಲೆಯ ಹತ್ತಿ, ಹತ್ತಿ ನೂಲು, ಸಿದ್ಧ ಉಡುಪು, ನೇಯ್ಗೆ ಬಟ್ಟೆ, ಅಗರ್ ಬತ್ತಿ, ಗೋಡಂಬಿ, ಇನ್ಸುಲಿನ್, ಕ್ಯಾಲ್ಸಿಯಂ, ಪಾಸ್ಫೇಟ್ ಇತ್ಯಾದಿ

### ಶೇ 12 ರಷ್ಟು ತೆರಿಗೆಗೆ ಒಳಪಡುವ ಸರಕುಗಳು

ಹವಾನಿಯಂತ್ರಣ ವ್ಯವಸ್ಥೆಯಿಲ್ಲದ ರೆಸ್ಟೋರೆಂಟ್, ಬ್ಯುಸಿನೆಸ್ ದರ್ಜೆಯ ವಿಮಾನ ಪ್ರಯಾಣ, ತಂಪು ಪಾನೀಯ, ಸಾವಿರಕ್ಕಿಂತ ಹೆಚ್ಚು ಬೆಲೆಯ ಉಡುಪುಗಳು, ಮೊಬೈಲ್ ಫೋನ್, ತುಪ್ಪ, ಬಯೋಗ್ಯಾಸ್, ಹೈಡ್ರೋಜನ್ ಪೆರಾಕ್ಸೈಡ್, ಅಯೋಡಿನ್, ಉಪ್ಪಿನಕಾಯಿ, ಅಡುಗೆ ಮನೆಯಲ್ಲಿ ಬಳಸುವ ಚಮಚ, ಚಾಕು, ಸಿದ್ಧ ಆಹಾರ ಇತ್ಯಾದಿ.

### ಶೇ 18 ರಷ್ಟು ತೆರಿಗೆಗೆ ಒಳಪಡುವ ವಸ್ತುಗಳು

ದೂರ ಸಂಪರ್ಕ, ಹಣಕಾಸು ಸೇವೆಗಳು, 2,500 ರಿಂದ 5,000 ದಿನದ ಬಾಡಿಗೆ ವಿಧಿಸುವ ಹೋಟೆಲ್, ಮದ್ಯ ಸರಬರಾಜು ಮಾಡುವ ಎ.ಸಿ. ಸೌಲಭ್ಯದ ರೆಸ್ಟೋರೆಂಟ್, ಕೇಶತೈಲ, ಸೋಪು, ಟೂಥ್‌ಪೇಸ್ಟ್, ಭಾರೀ ಯಂತ್ರೋಪಕರಣ, ಕಬ್ಬಿಣ, ಉಕ್ಕು, ಫ್ಲೋರಿನ್, ಕ್ಲೋರಿನ್, ಸಿಂಥೆಟಿಕ್ ಬಟ್ಟೆ, 100 ರೂ. ವರೆಗಿನ ಸಿನಿಮಾ ಟಿಕೆಟ್, ಸ್ಕೂಲ್ ಬ್ಯಾಗ್, ಕಂಪ್ಯೂಟರ್ಸ್ ಪ್ರಿಂಟರ್ಸ್, ಟ್ರ್ಯಾಕ್ಟರ್ ನ ಬಿಡಿಭಾಗ, ಕಣ್ಣಿನ ಕಾಡಿಗೆ, ಬಹುತೇಕ ಸರಕು & ಸೇವೆಗಳು ಈ ಹಂತದ ತೆರಿಗೆ ವ್ಯಾಪ್ತಿಯಲ್ಲಿ ಒಳಪಡುವುದರಿಂದ ಇದನ್ನು **ಆದರ್ಶ ತೆರಿಗೆ** ಎಂತಲೂ ಕರೆಯುತ್ತಾರೆ.

### ಶೇ 28 ರಷ್ಟು ತೆರಿಗೆಗೆ ಒಳಪಡುವ ವಸ್ತುಗಳು

ಕಾರು, ಬಸ್, ಟ್ರಕ್, ಮೋಟಾರ್ ಸೈಕಲ್, ವೈಯಕ್ತಿಕ ಬಳಕೆಯ ಜೆಟ್ ವಿಮಾನ, ಸಿಮೆಂಟ್, ಶಾಂಪೂ, ಸುಗಂಧ ದ್ರವ್ಯ, ಐಷಾರಾಮಿ ದೋಣಿಗಳು, 100 ಕ್ಕಿಂತ ಹೆಚ್ಚು ಸಿನಿಮಾ ಟಿಕೆಟ್ ಮುಂತಾದ ವಿಲಾಸಿ ಸರಕುಗಳು

### ಜಿ.ಎಸ್.ಟಿ ಅನುಷ್ಠಾನದ ನಂತರ ಅಗ್ಗವಾಗುವ ಸರಕುಗಳು

ಆಹಾರ ಧಾನ್ಯ, ಹಾಲು, ಕೇಶತೈಲ, ಸೋಪು, ಟೂಥ್‌ಪೇಸ್ಟ್, ಸಕ್ಕರೆ, ಚಹಾ, ಕಾಫಿ, ಖಾದ್ಯ ತೈಲ, ಕಲ್ಲಿದ್ದಲು, ಎ.ಸಿ., ರೆಫ್ರಿಜರೇಟರ್ ಇತ್ಯಾದಿ.

### ಜಿ.ಎಸ್.ಟಿ ಅನುಷ್ಠಾನದ ನಂತರ ದುಬಾರಿಯಾಗುವ ಸರಕುಗಳು

ತಂಪು ಪಾನೀಯ, ಕಾರು, ಪಾನ್‌ಮಸಾಲಾ, ಗುಟ್ಕಾ, ಸುವಾಸಿತ ಜರ್ದಾ, ಸಿಗರೇಟ್, ಮೋಟಾರ್ ಸೈಕಲ್, ವೈಯಕ್ತಿಕ ಬಳಕೆಯ ವಿಮಾನ ಇತ್ಯಾದಿ.

### ಜಿ.ಎಸ್.ಟಿ ಅನುಷ್ಠಾನದ ನಂತರ ಸರಕುಗಳಿಗೆ ವಿಧಿಸುವ ಸೆಸ್

350 ಸಿ.ಸಿ. ಇಂಜಿನ್ ಸಾಮರ್ಥ್ಯ ಮೋಟಾರ್ ಸೈಕಲ್, 1,500 ಸಿ.ಸಿ. ಡೀಸೆಲ್ ಕಾರು ಗಳಿಗೆ ಶೇ 3 ರಷ್ಟು ಸೆಸ್, 4 ಮೀ.ಗಿಂತ ಕಡಿಮೆ ಉದ್ದದ ಪೆಟ್ರೋಲ್ ಇಂಜಿನ್ ಸಣ್ಣ ಕಾರುಗಳಿಗೆ ಶೇ 1 ರಷ್ಟು ಸೆಸ್, ಮಧ್ಯಮ ಗಾತ್ರದ ಕಾರ್, ಐಷಾರಾಮಿ ಬಸ್, ವ್ಯಾನ್‌ಗಳಿಗೆ ಶೇ 15 ಹಾಗೂ ಹೈಬ್ರಿಡ್ ಕಾರ್ 1,500 ಸಿ.ಸಿ. ಇಂಜಿನ್‌ಗಳಿಗೆ ಶೇ 15 ರಷ್ಟು ಸೆಸ್.

### ಜಿ.ಎಸ್.ಟಿ ಅನುಷ್ಠಾನದ ನಂತರ ರಿಯಾಯಿತಿ ಪಡೆಯುವ ಸರಕುಗಳು

ಮೆಟ್ರೋ, ಶಿಕ್ಷಣ, ಆರೋಗ್ಯ ಸೇವೆ, ಎ.ಸಿ. ರಹಿತ ಲೋಕಲ್ ಟ್ರೈನ್, ಧಾರ್ಮಿಕ ಯಾತ್ರೆ, ಲಾಟರಿ, 1,000 ಕ್ಕಿಂತ ಕಡಿಮೆ ದಿನ ಬಾಡಿಗೆ ವಿಧಿಸುವ ಹೋಟೆಲ್, ಲಾಡ್ಜಿಂಗ್, ಆಹಾರ ಧಾನ್ಯ, ಹಾಲು, ಮೊಟ್ಟೆ, ಮೊಸರು, ತರಕಾರಿ, ಉಪ್ಪು, ಬೆಲ್ಲ ಹಾಗೂ ಹಿಂದೆ ಸೇವಾ ತೆರಿಗೆ ವಿನಾಯಿತಿ ಪಡೆದಿರುವ ಸರಕುಗಳೆಲ್ಲವೂ ಪ್ರಸ್ತುತ ವಿನಾಯಿತಿ ಪಡೆಯಲಿವೆ.

# ಜಿ.ಎಸ್.ಟಿ ಅನುಕೂಲಗಳು

## ವ್ಯವಹಾರ & ಕೈಗಾರಿಕೆಗೆ (Business & Industries)

- ಸುಲಭ ಏಕರೂಪ ತೆರಿಗೆ ದರ & ರಚನೆ ವ್ಯವಸ್ಥೆ ಜಾರಿ ಅಂದರೆ, ದೇಶಾದ್ಯಂತ ವ್ಯವಹಾರ ಮಾಡಲು ಅನುಕೂಲವಾಗಿದ್ದು, ತೆರಿಗೆ ದರವು ಏಕರೂಪವಾಗಿರುತ್ತದೆ.
- ತೆರಿಗೆ ವ್ಯಾಪ್ತಿ ವಿಸ್ತಾರ & ತೆರಿಗೆ ಹೊಣೆ ಕಡಿಮೆಗೊಳ್ಳುವುದು.
- ತೆರಿಗೆ ಪಾವತಿದಾರರ ನೊಂದಣಿ, ಪಾವತಿ, ತೆರಿಗೆಗೆ ಸಂಬಂಧಿಸಿದ ವಿಚಾರಗಳನ್ನು ಆನ್‌ಲೈನ್ ಮೂಲಕ ಸುಲಭ ರೀತಿಯಲ್ಲಿ & ಪಾರದರ್ಶಕವಾಗಿ ತಿಳಿಯಲು ಸಹಾಯಕ.
- ವ್ಯವಹಾರದಲ್ಲಿ ನಡೆಯುತ್ತಿದ್ದ ತೆರಿಗೆ ಸಾಲದ ವಂಚನೆ & ಅವ್ಯಕ್ತ ವೆಚ್ಚಗಳನ್ನು ನಿಯಂತ್ರಿಸುತ್ತದೆ.
- ತೆರಿಗೆಗಳ್ಳತನ ಕಡಿಮೆಯಾಗಿ ಸರ್ಕಾರದ ವರಮಾನ ಹೆಚ್ಚಳ
- ಸ್ಥಳೀಯವಾಗಿ ಉತ್ಪಾದಿಸಿದ ಸರಕು & ಸೇವೆಗಳ ಮೇಲೆ ವಿಧಿಸುತ್ತಿದ್ದ ಅಧಿಕ ತೆರಿಗೆ ದರವು ನಿಯಂತ್ರಿತವಾಗುತ್ತದೆ.
- ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಭಾರತೀಯ ಸರಕುಗಳ ಪೈಪೋಟಿಯನ್ನು ಹೆಚ್ಚಿಸುತ್ತದೆ.
- ತೆರಿಗೆ ದರ ಕಡಿಮೆಯಾಗುವುದರಿಂದ ರಫ್ತುಗಳ ಉತ್ತೇಜನ
- ಉದ್ಯಮಗಳು ತೆರಿಗೆ ಪಾವತಿಸುವ ವ್ಯವಸ್ಥೆ ಸರಳವಾಗುತ್ತದೆ.
- ಸರಕು & ಸೇವೆಗಳ ಉತ್ಪಾದನೆ, ಹಂಚಿಕೆ, ಗಣನೀಯವಾಗಿ ಅನುಭೋಗಕ್ಕೆ ತಕ್ಕಂತೆ ಹೆಚ್ಚಾಗುತ್ತದೆ ಇಲ್ಲವೇ ಕಡಿಮೆಯಾಗುತ್ತದೆ.
- ತೆರಿಗೆ ಆಡಳಿತದಲ್ಲಿ ನಿರ್ಧಿಷ್ಟತೆ ಖಚಿತಪಡಿಸಿ, ಒಂದು ಸಾಮಾನ್ಯ ವ್ಯವಸ್ಥೆ ಸೃಷ್ಟಿಸಿದೆ.

## ಕೇಂದ್ರ & ರಾಜ್ಯ ಸರ್ಕಾರ (Central & State Govt)

- ಎಲ್ಲ ಪರೋಕ್ಷ ತೆರಿಗೆಗಳು ಜಿಎಸ್‌ಟಿಯಲ್ಲಿ ಅಂತರ್ಗತಗೊಳ್ಳುವುದರಿಂದ ಕೇಂದ್ರ & ರಾಜ್ಯ ಸರ್ಕಾರಗಳು ವಿಧಿಸಲ್ಪಡುತ್ತಿದ್ದ ಬಹು ತೆರಿಗೆ ವ್ಯವಸ್ಥೆ ಅಂತ್ಯವಾಗಿ ಏಕರೂಪ ವಿದ್ಯುನ್ಮಾನ ತೆರಿಗೆ ವ್ಯವಸ್ಥೆ ಜಾರಿಯಾಗುವುದರಿಂದ ತೆರಿಗೆ ವ್ಯವಸ್ಥೆಯನ್ನು ಸರಳ & ಸುಲಭಗೊಳಿಸುತ್ತದೆ.
- ಐಟಿ ಮೂಲ ಸೌಕರ್ಯದ ಅನುಷ್ಠಾನದಿಂದ ತೆರಿಗೆ ದರಗಳ ವ್ಯವಸ್ಥೆ ಪಾರದರ್ಶಕವಾಗುವುದರಿಂದ ಸರ್ಕಾರಕ್ಕೆ ತೆರಿಗೆ ವಂಚನೆ ಮಾಡುತ್ತಿದ್ದುದನ್ನು ನಿಯಂತ್ರಿಸಲು [illegible]
- ಉತ್ಪಾದನೆ & ವಿತರಣೆ ಹಂತಗಳಲ್ಲಿ ಪಾವತಿಸಿದ ತೆರಿಗೆ ಪ್ರಮಾಣವನ್ನು ಅಂತಿಮ ಹಂತದಲ್ಲಿ ಅಳಿಯಲು ಅವಕಾಶ ಇದೆ ಇದು ಸ್ವಯಂಪ್ರೇರಿತ ತೆರಿಗೆ ಪಾವತಿಗೆ ಉತ್ತೇಜನ ನೀಡಿಕೆ.
- ಸರ್ಕಾರದ ತೆರಿಗೆ ಸಂಗ್ರಹಣಾ ವೆಚ್ಚ ಕಡಿಮೆಯಾಗಿ ತೆರಿಗೆ ಆದಾಯದ ದಕ್ಷತೆ ಹೆಚ್ಚಾಗುವುದರಿಂದ ಸ್ವಯಂ ಚಾಲಿತವಾಗಿ ಸರ್ಕಾರದ ಆದಾಯ ಹೆಚ್ಚುತ್ತದೆ.

## ಅನುಭೋಗಿಗಳಿಗೆ (Consumer)

- ಜಿ.ಎಸ್.ಟಿ. ಅನುಷ್ಠಾನದಿಂದ ಉತ್ಪಾದಕರಿಂದ ಅನುಭೋಗಿಗಳಿಗೆ ವರ್ಗಾವಣೆಯಾಗುತ್ತಿದ್ದ ತೆರಿಗೆ ಮಿತಿಮೀರಿದ ಹೊರೆಯು ಕಡಿಮೆಯಾಗಿ ಸರಕು & ಸೇವೆಗಳ ಮೌಲ್ಯ ಗಣನೀಯವಾಗಿ ಇಳಿಮುಖವಾಗುವುದರಿಂದ ಗ್ರಾಹಕರಿಗೆ ಕಡಿಮೆ ಬೆಲೆಯಲ್ಲಿ ವಸ್ತುಗಳು ದೊರೆಯುವುದರಿಂದ ಜೀವನ ಮಟ್ಟ ವೃದ್ಧಿ.
- ಮಾರುಕಟ್ಟೆಯಲ್ಲಿನ ಬಹುತೇಕ ಸರಕುಗಳ ಮೇಲೆ ತೆರಿಗೆ ದರವು ಕಡಿಮೆಯಾಗುವುದರಿಂದ ಮಿತಿ ಮೀರಿದ ತೆರಿಗೆ ಹೊರೆ ಕಡಿಮೆಯಾಗಿ ಗ್ರಾಹಕನೇ ರಾಜ ಎಂಬ ತತ್ವ ಅಕ್ಷರಶಃ ನಿಜ ಎನಿಸುತ್ತದೆ.
- ಸರಕು & ಸೇವೆಗಳ ಮೇಲೆ ವಿಧಿಸಲ್ಪಡುವ ತೆರಿಗೆ ಅವುಗಳ ಮೌಲ್ಯಕ್ಕೆ ತಕ್ಕಂತೆ ವಿಭಜನೆಯಾಗುವುದರಿಂದ ಹೆಚ್ಚಿನ ಸಂಕೀರ್ಣತೆ ವೆಚ್ಚವನ್ನು ಕಡಿಮೆಗೊಳಿಸುತ್ತದೆ.
- ತೆರಿಗೆಗಳು ಏಕರೂಪಗೊಳ್ಳುತ್ತಿರುವುದರಿಂದ ತೆರಿಗೆ ಹೊರೆಯು ತಯಾರಕರು & ಗ್ರಾಹಕರ ಮೇಲೆ ಸಮಾನವಾಗಿ ಹಂಚಿಕೆಯಾಗುತ್ತದೆ.
- ಪಾರದರ್ಶಕ & ಭ್ರಷ್ಟಾಚಾರ ಮುಕ್ತ ತೆರಿಗೆ ಆಡಳಿತ ವ್ಯವಸ್ಥೆ ನಿರ್ಮಾಣಕ್ಕೆ ಸಹಾಯಕಾರಿ.
- ದಿನಬಳಕೆಯ ಸಾಕಷ್ಟು ಪದಾರ್ಥಗಳು ತೆರಿಗೆ ವಿನಾಯಿತಿ ಪಡೆದಿವೆ & ಕೇವಲ ಶೇ 5 ರಷ್ಟು ತೆರಿಗೆ ವ್ಯಾಪ್ತಿಗೆ ಒಳಪಟ್ಟಿವೆ.

## ಆರ್ಥಿಕತೆಗೆ (Economy)

- ದೇಶದ ಜಿ.ಡಿ.ಪಿ ದರ ಶೇ 2 ರಷ್ಟು ಹೆಚ್ಚಳ
- ರಾಷ್ಟ್ರೀಯ ಸಂಘಟಿತ ಒಂದು ಸಾಮಾನ್ಯ ಮಾರುಕಟ್ಟೆ ಸೃಷ್ಟಿ & ದೇಶವನ್ನು ಉತ್ಪಾದನಾ ಕೇಂದ್ರ ಜಾಲವನ್ನಾಗಿಸಿ, ಆರ್ಥಿಕ ಚಟುವಟಿಕೆಗಳ ಹೆಚ್ಚಳದಿಂದ ಉದ್ಯೋಗಾವಕಾಶಗಳು ವೃದ್ಧಿಯಾಗುತ್ತವೆ.
- ರಾಷ್ಟ್ರೀಯತೆ & ಐಕ್ಯತೆ ಭಾವನೆಗಳನ್ನು ಬಲಪಡಿಸಿ, ಸ್ಪರ್ಧಾತ್ಮಕತೆ ಹೆಚ್ಚಿಸಿದೆ.
- ದೇಶಾದ್ಯಂತ ತೆರಿಗೆ ನಿಯಮ, ಪ್ರಕ್ರಿಯೆ, ದರಗಳ ನಡುವೆ ಸಾಮರಸ್ಯ ಭಾವನೆ ಸೃಷ್ಟಿಸಿದೆ.

# ಕೈಗಾರಿಕೆಗಳು (Industries)

CSO ವರ್ಗೀಕರಣ ಪ್ರಕಾರ ಭಾರತ/ಕರ್ನಾಟಕ ಆರ್ಥಿಕತೆಯ ಎರಡನೇ ವಲಯವು ಕೈಗಾರಿಕಾ ವಲಯ/ಮಾಧ್ಯಮಿಕ ವಲಯವಾಗಿದ್ದು, ಇದರಲ್ಲಿ ತಯಾರಿಕೆ ಕ್ಷೇತ್ರ, ಕಟ್ಟಡ ನಿರ್ಮಾಣ, ವಿದ್ಯುತ್ ಉತ್ಪಾದನೆ, ಜವಳಿ ಉತ್ಪನ್ನ ಉತ್ಪಾದನೆ, ಗಣಿಗಾರಿಕೆ, ಹಡಗು ನಿರ್ಮಾಣ, ಕುಡಿಯುವ ನೀರು, ತೈಲ, ಅನಿಲ, ಇಂಧನ ಪೂರೈಕೆ, ವಿದ್ಯುತ್ ಉತ್ಪಾದನೆ ಕ್ಷೇತ್ರಗಳು ಸೇರಿವೆ. ಸ್ವಾತಂತ್ರ್ಯಾನಂತರ ಕೃಷಿ ಪ್ರಧಾನ ಆರ್ಥಿಕತೆಗಳಾದ ಭಾರತ & ಕರ್ನಾಟಕದ ವ್ಯವಸ್ಥೆಯಲ್ಲಿ ಕೈಗಾರಿಕೆಗಳು ಸಾಕಷ್ಟು ಅಭಿವೃದ್ಧಿಯಾಗಿದ್ದು, ಇವುಗಳ ರಚನಾತ್ಮಕ ಬದಲಾವಣೆ ಏರಿಳಿತಗಳನ್ನು ಸಂಕ್ಷಿಪ್ತವಾಗಿ ಅಧ್ಯಯನ ಮಾಡಲು ವಿಶ್ಲೇಷಿಸಲಾಗಿದೆ.

## ಭಾರತದ ಪ್ರಮುಖ ಕೈಗಾರಿಕೆ ನೀತಿಗಳು

| | |
|---|---|
| 1948 ರ ಕೈಗಾರಿಕಾ ನೀತಿ | ದೇಶದ ಮೊದಲ ಕೈಗಾರಿಕಾ ನೀತಿ |
| 1956ರ ಕೈಗಾರಿಕೆ ನೀತಿ | ಭಾರತದ ಆರ್ಥಿಕ ಸಂವಿಧಾನ. |
| 1977ರ ಕೈಗಾರಿಕೆ ನೀತಿ | ಸೂಕ್ಷ್ಮ ಕೈಗಾರಿಕೆಗಳ ಪರಿಚಯ |
| 1980ರ ಕೈಗಾರಿಕೆ ನೀತಿ | MRTP ಕಾಯಿದೆ. |
| 1991 ಜುಲೈ 24 | ನೂತನ ಕೈಗಾರಿಕೆ ನೀತಿ |

### ಬಳಕೆಯಾಧಾರಿತ ಕೈಗಾರಿಕೆ ವರ್ಗೀಕರಣ

- ಮೂಲ ವಸ್ತುಗಳು
- ಬಂಡವಾಳ ವಸ್ತುಗಳು
- ಮಧ್ಯವರ್ತಿ ವಸ್ತುಗಳು
- ಗ್ರಾಹಕ ವಸ್ತುಗಳು – ಅತೀ ಹೆಚ್ಚಿನ ತೂಕ ಹೊಂದಿದ ವಲಯ.

» ಕೈಗಾರಿಕೀಕರಣ ಇಲ್ಲವೇ ವಿನಾಶ – ಸರ್. ಎಂ. ವಿಶ್ವೇಶ್ವರಯ್ಯ
» ಕೈಗಾರಿಕ ಯೋಜನೆ – 2ನೇ ಪಂಚವಾರ್ಷಿಕ ಯೋಜನೆ
» ಬೃಹತ್ ಕೈಗಾರಿಕೆಗಳ ಅಭಿವೃದ್ಧಿಗೆ ಒತ್ತು – ಪಿ.ಸಿ. ಮಹಲನೋಬಿಸ್ ಮಾದರಿ
» ಕರ್ನಾಟಕ ಸಾರ್ವಜನಿಕ ವಲಯದ ಹೆಚ್ಚು ಉದ್ಯೋಗಾವಕಾಶ ಒದಗಿಸಿದ ಕಂಪನಿ – ಹೆಚ್.ಎ.ಎಲ್
» ಪ್ರಸ್ತುತ ಕೈಗಾರಿಕಾ ನೀತಿ– 2014–19
» ಕರ್ನಾಟಕ ಭಾರತದ ಐಟಿ ವಲಯದ ಹಬ್ ಎಂದು ಕರೆಯಲ್ಪಟ್ಟಿದೆ.
» ಕರ್ನಾಟಕ ತಂತ್ರಜ್ಞಾನ ಕ್ಲಸ್ಟರ್‌ನಲ್ಲಿ ಜಗತ್ತಿನ 4 ನೇ ಸ್ಥಾನ

## 2013-14 ರ ಕೈಗಾರಿಕಾ ವಾರ್ಷಿಕ ಸಮೀಕ್ಷೆ ಪ್ರಕಾರ

| ಪ್ರಮುಖ ಅಂಶಗಳು | ಭಾರತದಲ್ಲಿ ಕರ್ನಾಟಕ % |
|---|---|
| ಸಂಘಟಿತ ಕೈಗಾರಿಕಾ ವಲಯ | ಶೇ 5.39 |
| ಸ್ಥಿರ ಬಂಡವಾಳ | ಶೇ 7.05 |
| ಒಟ್ಟು ಹುಟ್ಟುವಳಿ | 6.78 |
| ಒಟ್ಟು ಜಿ.ಡಿ.ಪಿಗೆ ಕೊಡುಗೆ | 6.35 |

## ತಲಾ ಕೈಗಾರಿಕೆಗಳ ಪ್ರಮುಖ ಸೂಚಕಗಳು

| | | 2012-13 | | 2013-14 | |
|---|---|---|---|---|---|
| ಸೂಚಕಗಳು | ಪರಿಮಾಣ | ಕರ್ನಾಟಕ | ಭಾರತ | ಕರ್ನಾಟಕ | ಭಾರತ |
| ಸ್ಥಿರ ಬಂಡವಾಳದಲ್ಲಿ ಹೂಡಿಕೆ | ರೂ.ಲಕ್ಷ | 1235.01 | 981.57 | 1381.93 | 1056.98 |
| ಉದ್ಯೋಗ ಸಂಖ್ಯೆ | 73.36 | 58.30 | 76.60 | 60.28 | |
| ಒಟ್ಟು ಹುಟ್ಟುವಳಿ | ರೂ.ಲಕ್ಷ | 3399.21 | 2712.92 | 3673.08 | 2918.95 |
| ಒಟ್ಟು ಮೌಲ್ಯವರ್ಧಿತ | ರೂ.ಲಕ್ಷ | 543.79 | 453.48 | 558.96 | 474.28 |

**...ರ ಕೈಗಾರಿಕಾ ವಾರ್ಷಿಕ ಸಮೀಕ್ಷೆ ಪ್ರಕಾರ ...ದಲ್ಲಿ ನೋಂದಣಿಯಾದ ಕೈಗಾರಿಕಾ ವಲಯದ ...ಖ ಕೈಗಾರಿಕಾ ಗುಂಪುಗಳ ಶೇಕಡಾವಾರು ...ಂಗಡಣೆ (ಒಟ್ಟು ಹುಟ್ಟುವಳಿ ಆಧಾರಿತ)**

| ಕ್ಷೇತ್ರಗಳು | ಶೇಕಡಾ |
|---|---|
| ...ಜಲು ಶುದ್ಧೀಕರಣ, ಪೆಟ್ರೋಲಿಯಂ | 17.32% |
| ...ಹಾರೋತ್ಪನ್ನ ಮತ್ತು ಪಾನೀಯಗಳು | 11.35% |
| ...ಮೂಲ ಲೋಹ ಉತ್ಪನ್ನ | 12.94% |
| ...ಸಿದ್ಧ ಉಡುಪುಗಳ ತಯಾರಿಕೆ | 7.68% |
| ...ಇತರೆ ಉತ್ಪಾದನಾ ಸಾಧನಗಳು | 5.88% |
| ...ವಾಹನ, ಸೆಮಿ ಟ್ರೇಲರ್‌ಗಳು | 6.60% |
| ಇತರೆ | 5.22 % |

**...ಅತಿ ಸಣ್ಣ, ಸಣ್ಣ ಮತ್ತು ಮಧ್ಯಮ ಕೈಗಾರಿಕಾ ಘಟಕ (MSME's ಕಾಯಿದೆ 2006ರ ಪ್ರಕಾರ ಕೈಗಾರಿಕಾ ಘಟಕಗಳ ವರ್ಗೀಕರಣ)**

| ...ಉದ್ಯಮ | ತಯಾರಿಕೆ ಕೈಗಾರಿಕೆ | ಸೇವಾ ಕೈಗಾರಿಕೆ |
|---|---|---|
| ಅತೀ ಸಣ್ಣ | ರೂ.25ಲಕ್ಷಗಳವರೆಗೆ | ರೂ.10ಲ.ದವರೆಗೆ |
| ಸಣ್ಣ | ರೂ25ಲಕ್ಷ–5ಕೋಟಿ | ರೂ10ಲಕ್ಷ–2ಕೋಟಿ |
| ಮಧ್ಯಮ | ರೂ 5ಕೋಟಿ–10ಕೋಟಿ | ರೂ 2ಕೋಟಿ–5ಕೋಟಿ |
| ...ಹತ್ | ರೂ 10ಕೋಟಿ ಮೇಲ್ಪಟ್ಟು | ರೂ5 ಕೋಟಿ ಮೇಲ್ಪಟ್ಟು, |

✦ NSSO ರಾಷ್ಟ್ರೀಯ ಮಾದರಿ ಸಮೀಕ್ಷಾ ಸಂಸ್ಥೆಯು ಅಸಂಘಟಿತ ಉತ್ಪಾದನಾ ವಲಯದ ಸಮೀಕ್ಷಾ ಕೈಗೊಳ್ಳುವ ಸಂಸ್ಥೆ.

**NSSO 67ನೇ ಸಮೀಕ್ಷೆ (2010-11)ರ ಪ್ರಕಾರ ಅಸಂಘಟಿತ ಕೈಗಾರಿಕಾ ಉತ್ಪಾದನಾ ಉದ್ಯಮಗಳು:-**

| ಅಸಂಘಟಿತ ವಲಯ | | | ಒಟ್ಟು ಮೌಲ್ಯವರ್ಧನೆ (ರೂ) | |
|---|---|---|---|---|
| | ಉದ್ಯಮಗಳ ಸಂಖ್ಯೆ | ಕೆಲಸಗಾರರ ಸಂಖ್ಯೆ | ತಲಾ ಉದ್ಯಮ | ತಲಾ ಕೆಲಸಗಾರರು. |
| ಕರ್ನಾಟಕ | 8.61 | 15.09 | 87299 | 49801 |
| ಭಾರತ | 172.10 | 348.88 | 89900 | 44347 |
| | ಸೇವಾ ವಲಯ ಉದ್ದಿಮೆ | ಕೆಲಸಗಾರರು | ತಲಾ ಉದ್ಯಮ | ತಲಾ ಕೆಲಸಗಾರರು |
| ಕರ್ನಾಟಕ | 28.11 | 53.90 | 146583 | 76459 |
| ಭಾರತ | 576.73 | 1079.79 | 108951 | 58193 |

**ಕರ್ನಾಟಕದ ಪ್ರಮುಖ ಕೈಗಾರಿಕೆಗಳು**

ಐಟಿ & ಐಟಿಇಎಸ್, ಬಯೋ ಟೆಕ್ನಾಲಜಿ, ಇಂಜಿನಿಯರಿಂಗ್, ಎಲೆಕ್ಟ್ರಾನಿಕ್ಸ್, ದೂರಸಂಪರ್ಕ, ಟೆಕ್ಸ್‌ಟೈಲ್, ಜವಳಿ, ಏರೋಸ್ಪೇಸ್, ಅನಿಮೇಷನ್, ಟೂರಿಸಂ, ಅಸಂಪ್ರದಾಯಕ ಇಂಧನ, ಆಟೋಮೊಬೈಲ್.

## 2016 - 17 ರ ಪ್ರಕಾರ ಉದ್ಯಮಗಳು

| ಹೆಚ್ಚು ನೊಂದಣಿಯಾದ ಉತ್ಪನ್ನ-ಉದ್ಯಮಗಳು | ಹೆಚ್ಚು ಬಂಡವಾಳ ಹೂಡಿಕೆ ಮಾಡಿರುವ ಉತ್ಪನ್ನ-ಉದ್ಯಮಗಳು | ಹೆಚ್ಚು ಉದ್ಯೋಗ ಕಲ್ಪಿಸಲಾಗಿರುವ ಉತ್ಪನ್ನ-ಉದ್ಯಮಗಳು |
|---|---|---|
| ಸಿದ್ಧ ಉಡುಪುಗಳ ತಯಾರಿಕೆ | ಇತರೆ ಯಂತ್ರೋಪಕರಣಗಳು | ಸಿದ್ಧ ಉಡುಪುಗಳ ತಯಾರಿಕೆ |
| ಬಟ್ಟೆ ತಯಾರಿಕೆ | ಸಿದ್ಧ ಪಡಿಸಿದ ಉತ್ಪನ್ನಗಳು | ಬಟ್ಟೆ ತಯಾರಿಕೆ |
| ಆಹಾರೋತ್ಪನ್ನ ಮತ್ತು ಪಾನೀಯ | ಆಹಾರೋತ್ಪನ್ನ ಮತ್ತು ಪಾನೀಯ | ಆಹಾರೋತ್ಪನ್ನ & ಪಾನೀಯಗಳು |
| ಮರ & ಮರದ ಉತ್ಪನ್ನಗಳು | ಬಟ್ಟೆ ತಯಾರಿಕೆ | ಸಿದ್ಧ ಪಡಿಸಿದ ಖನಿಜ ಉತ್ಪನ್ನಗಳು |
| ಸಿದ್ಧ ಪಡಿಸಿದ ಖನಿಜ ಉತ್ಪನ್ನ | ಸಿದ್ಧ ಪಡಿಸಿದ ಲೋಹದ ಉತ್ಪನ್ನ | ಮರ ಮತ್ತು ಮರದ ವಸ್ತುಗಳು |

## ಕರ್ನಾಟಕದ ಆರ್ಥಿಕತೆಗೆ ಸಂಬಂಧಿಸಿದ ಪ್ರಮುಖ ನೀತಿಗಳು




### ಕರ್ನಾಟಕದ ಪ್ರಮುಖ ಅಗ್ರಿ ಕೈಗಾರಿಕಾ ವಲಯಗಳು:-

+ 12ನೇ ಪಂಚವಾರ್ಷಿಕ ಯೋಜನೆಯಡಿಯಲ್ಲಿ ಕೇಂದ್ರ ಸರ್ಕಾರದ ಆಹಾರ ಸಂಸ್ಕರಣಾ ಮಂತ್ರಾಲಯ ಅನುಮೋದನೆ ನೀಡಿದ ಪಾರ್ಕ್‌ಗಳು (ನೋಡಲ್ ಏಜೆನ್ಸಿ ಆಹಾರ ಕರ್ನಾಟಕ ನಿಯಮಿತ)

**ಇನ್ನೋವಾ ಅಗ್ರಿ ಬಯೋ ಪಾರ್ಕ್ - ನಿಯಮಿತ (ಮಾಲೂರು)**

+ ಕೋಲಾರ ಜಿಲ್ಲೆ – ಮಾಲೂರು ಸ್ಥಾಪನೆ
+ ಧಾನ್ಯ ಸಂಸ್ಕರಿಸುವ, ಶ್ರೇಣಿಗೊಳಿಸುವ, ಪ್ಯಾಕೆಜಿಂಗ್ ಯಂತ್ರೋಪಕರಣ ಅಳವಡಿಕೆ ಸೌಲಭ್ಯ.

**ಗ್ರೀನ್ ಫುಡ್ ಪಾರ್ಕ್ - ಬಾಗಲಕೋಟೆ.**

+ ಬಾಗಲಕೋಟೆ ಜಿಲ್ಲೆ – ನವನಗರ ಕೈಗಾರಿಕಾ ಪ್ರದೇಶದಲ್ಲಿ ಸ್ಥಾಪನೆ.
+ ಧಾನ್ಯ, ತರಕಾರಿ, ಹಣ್ಣುಗಳನ್ನು ಶ್ರೇಣೀಕರಿಸುವ, ಪ್ಯಾಕೇಜಿಂಗ್ ಯಂತ್ರೋಪಕರಣ ಅಳವಡಿಕೆ.

**ಅಕ್ಷಯ ಆಹಾರ ಪಾರ್ಕ್ ನಿಯಮಿತ - ಹಿರಿಯೂರು**

+ ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾ – ಹುಚ್ಚವನಹಳ್ಳಿಯಲ್ಲಿ ಅಭಿವೃದ್ಧಿ.
+ ಜೇವರ್ಗಿ ಫುಡ್ ಪಾರ್ಕ್ ನಿಯಮಿತ – ಗುಲ್ಬರ್ಗಾ ಜಿಲ್ಲೆ, ಜೇವರ್ಗಿಯಲ್ಲಿ ಸ್ಥಾಪನೆ.

**ರಾಜ್ಯ ಸರ್ಕಾರದ ಯೋಜನೆಯಡಿಯಲ್ಲಿನ ಆಹಾರ ಪಾರ್ಕ್‌ಗಳು.**

+ ಶಿವಮೊಗ್ಗ ಆಹಾರ ಪಾರ್ಕ್
+ ಬಿಜಾಪುರ ಇಟಂಗಿಹಾಳ ಆಹಾರ ಪಾರ್ಕ್
+ ಸ್ಪೈಸ್ ಪಾರ್ಕ್ – ಹಾವೇರಿ ಜಿಲ್ಲೆ, ಬ್ಯಾಡಗಿ

### ನೂತನ ಜವಳಿ ನೀತಿ (2013-18)

+ 31-10-2013ರಲ್ಲಿ ಘೋಷಣೆ
+ ದೇಶದಲ್ಲಿಯೇ ಮೊದಲ ಬಾರಿಗೆ ಪ್ರಕಟಿಸಿ ಬಾರಿಗೆ ಕಂಡ ರಾಜ್ಯ ಕರ್ನಾಟಕ.
+ 8000 ಕೋಟಿ ಬಂಡವಾಳ ಹೂಡಿಕೆ ಮತ್ತು ಆಕರ್ಷಣೆ, 4 ಲಕ್ಷ ಜನರಿಗೆ ಉದ್ಯೋಗವಕಾಶ ಸೃಷ್ಟಿ.
+ ಪ್ರತೀ 1 ಯೂನಿಟ್‌ಗೆ ರೂ 1ರ ದರದಲ್ಲಿ ವಿದ್ಯುತ್ ಸಹಾಯಧನ.
+ ರೋಗಗ್ರಸ್ಥ ಸಹಕಾರಿ ನೂಲಿನ ಗಿರಣಿಗಳಲ್ಲಿ ಶೇ 20 ರವರೆಗೆ ಗರಿಷ್ಟ 2 ಕೋಟಿ ವರೆಗೆ ಸಹಾಯಧನ
+ ಸುಸಜ್ಜಿತ ಮೂಲ ಸೌಕರ್ಯ ಹೊಂದಲು ಜವಳಿ ಪಾರ್ಕ್‌ಗಳನ್ನು ಗ್ರೀನ್‌ಫೀಲ್ಡ್ ಮತ್ತು ಬ್ರೌನ್ ಫೀಲ್ಡ್ ವಲಯದಲ್ಲಿ ಸ್ಥಾಪನೆ.
+ ತಾಂತ್ರಿಕ ಜವಳಿ ವಲಯಕ್ಕೆ ಆದ್ಯತೆ.
+ ಜವಳಿ ವಲಯದ ಸರ್ವಾಂಗೀಣ ಅಭಿವೃದ್ಧಿಗಾಗಿ Centre Gor Excellence ಸ್ಥಾಪಿಸಲು 10 ಕೋಟಿ ರೂ ನೆರವು.
+ 3 ಲಕ್ಷ ನಿರುದ್ಯೋಗಿಗಳಿಗೆ ತರಬೇತಿ.

### ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ನಿಯಮಿತ:-

+ 1979ರಲ್ಲಿ ಸ್ಥಾಪನೆ.
+ ಕರ್ನಾಟಕ ಸರ್ಕಾರದ ಒಂದು ಉದ್ಯಮವಾಗಿದ್ದು, ರೇಷ್ಮೆ ಬೆಲೆಗಳಲ್ಲಿ ಸ್ಥಿರತೆ ಕಾಯ್ದುಕೊಳ್ಳಲು ಹಾಗೂ ಮಾರುಕಟ್ಟೆಯಲ್ಲಿ ಮಧ್ಯಪ್ರವೇಶ ಮಾಡಿ ರೈತರು ಹಿತಾಸಕ್ತಿ ಕಾಪಾಡುವುದು.
+ 2016–17ರ ಆಯವ್ಯಯದಲ್ಲಿ 500 ಲಕ್ಷಗಳನ್ನು ಆಡಳಿತಾತ್ಮಕ ವೆಚ್ಚಕ್ಕಾಗಿ ಬಿಡುಗಡೆ ಮಾಡಲಾಗಿದೆ.
+ ರೇಷ್ಮೆ ನೂಲಿನ ಬೆಲೆ ಸ್ಥಿರೀಕರಣ ಮಾಡುವ ಚಟುವಟಿಕೆ & ರೇಷ್ಮೆ ಖರೀದಿ ಮಾಡುವ ಸರ್ಕಾರದ ಸಂಸ್ಥೆಯಾಗಿದೆ

# ಭಾರತದ ಆರ್ಥಿಕ ಸಮೀಕ್ಷೆ 2016-17

ಕೇಂದ್ರ ಲೋಕಸೇವಾ ಆಯೋಗ ಹಾಗೂ ಕರ್ನಾಟಕ ಲೋಕಸೇವಾ ಆಯೋಗ ನಡೆಸುವ ಸರ್ಕಾರಿ ಸೇವೆಗೆ ಸಂಬಂಧಿಸಿದಂತಹ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಭಾರತದ ಆರ್ಥಿಕತೆಯನ್ನು ಕುರಿತು & ಜಾಗತಿಕ ಮಟ್ಟದಲ್ಲಾಗುವ ದೇಶದ ಆರ್ಥಿಕ ಬದಲಾವಣೆಗಳನ್ನು ಒಳಗೊಂಡ ಭಾರತದ ಆರ್ಥಿಕ ಸಮೀಕ್ಷೆಯನ್ನು ಆಧರಿಸಿ ಪ್ರಶ್ನೆಗಳನ್ನು ಕೇಳುವುದರಿಂದ ಅಂತಹ ಎಲ್ಲಾ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಉಪಯುಕ್ತವಾಗುವಂತೆ ಸರಳ ರೂಪದಲ್ಲಿ ಸಂಕ್ಷಿಪ್ತವಾಗಿ ಮುಖ್ಯಾಂಶಗಳನ್ನು ನೀಡಲಾಗಿದೆ.

ಪ್ರಸಕ್ತ ಆರ್ಥಿಕ ವರ್ಷದಲ್ಲಿ ದೇಶದ ಆರ್ಥಿಕತೆಯ ಏರಿಳಿತಗಳು, ಅಭಿವೃದ್ಧಿ ಕಾರ್ಯಕ್ರಮಗಳ ಸ್ಥೂಲನೋಟ, ನೀತಿ ಯೋಜನೆಗಳ ಕಾರ್ಯಪ್ರಗತಿಯ ವೈಖರಿ, ಹಾಗೂ ಮುಂದಿನ ವಿತ್ತೀಯ ವರ್ಷದಲ್ಲಿ ಆರ್ಥಿಕತೆ ಸಾಗುವ ದಿಕ್ಸೂಚಿ ಅಥವಾ ಕೈಗನ್ನಡಿಯಾಗಿದ್ದು, ಆರ್ಥಿಕ ಮಾಹಿತಿ ವಿಶ್ಲೇಷಣೆ ಮತ್ತು ಪರಿಹಾರೋಪಾಯ ಸೂಚಿಸುತ್ತದೆ. ಕೇಂದ್ರ ಮುಂಗಡ ಪತ್ರವನ್ನು ಸಂಸತ್ತಿನಲ್ಲಿ ಮಂಡಿಸುವ ಮುನ್ನಾ ದಿನ ಸಂಸತ್ತಿನ ಎರಡೂ ಸದನಗಳಲ್ಲಿ ಕೇಂದ್ರ ವಿತ್ತ ಸಚಿವರು ಆರ್ಥಿಕ ಸಮೀಕ್ಷೆಯನ್ನು ಮಂಡನೆ ಮಾಡುತ್ತಾರೆ. ಆರ್ಥಿಕ ಸಮೀಕ್ಷೆಯು ಹಿಂದಿನ 12 ತಿಂಗಳ ಅವಧಿಯಲ್ಲಿ ದೇಶದ ಅರ್ಥವ್ಯವಸ್ಥೆಯಲ್ಲಿ ಆಗಿರುವ ಸಮಗ್ರ ಮಾಹಿತಿಗಳನ್ನು ಒಳಗೊಂಡ ಆರ್ಥಿಕ ಹಿನ್ನೋಟವಾಗಿದೆ.

ಭಾರತದಲ್ಲಿ ಪ್ರತೀ ವರ್ಷ 'ಕೇಂದ್ರ ಹಣಕಾಸು ಸಚಿವಾಲಯ' ವು ರಾಜ್ಯದ ವಿವಿಧ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯಗಳಿಂದ ಆಯಾ ರಾಜ್ಯಗಳ ಆರ್ಥಿಕ ಅಭಿವೃದ್ಧಿ ಚಲಕಗಳಾದ ಆದಾಯ, ಬೆಲೆ, ಕೃಷಿ, ಕೈಗಾರಿಕೆ, ಮೂಲ ಸೌಕರ್ಯ ಇನ್ನಿತರ ಆರ್ಥಿಕ ಘಟಕಗಳಿಗೆ ಸಂಬಂಧಿಸಿದ ಮತ್ತು ಕೇಂದ್ರ ಸರ್ಕಾರದ ವಿವಿಧ ಇಲಾಖೆಗಳ ಆರ್ಥಿಕ ದತ್ತಾಂಶಗಳನ್ನು ಸಂಗ್ರಹಿಸಿ ಕ್ರೋಢೀಕರಿಸಿ ವ್ಯವಸ್ಥಿತವಾಗಿ ಕ್ರಮಬದ್ಧ ರೀತಿಯಲ್ಲಿರುವ ದೇಶದ ಆರ್ಥಿಕ ಸಮೀಕ್ಷೆಯನ್ನು ವಾರ್ಷಿಕವಾಗಿ ಪ್ರಕಟ ಪಡಿಸುತ್ತಾ ಬಂದಿದೆ.

### ಭಾರತದ ಆರ್ಥಿಕತೆಯಲ್ಲಿ ಆರ್ಥಿಕ ಸಮೀಕ್ಷೆಯ ರಚನೆ

- **ಆರ್ಥಿಕ ಸಮೀಕ್ಷೆಯ** ಮೊದಲ ಕರಡನ್ನು "ಕೇಂದ್ರ ಹಣಕಾಸು ಸಚಿವಾಲಯ"ದ 'ಆರ್ಥಿಕ ವ್ಯವಹಾರಗಳ ಇಲಾಖೆ' ಸಿದ್ಧಪಡಿಸುತ್ತದೆ.
- 2016-17ರ ಭಾರತದ ಆರ್ಥಿಕ ಸಮೀಕ್ಷೆಯನ್ನು ಪ್ರಧಾನಮಂತ್ರಿ ಆರ್ಥಿಕ ಸಲಹೆಗಾರರು (ಪ್ರಸ್ತುತ ಅರವಿಂದ ಸುಬ್ರಮಣಿಯನ್) ಮತ್ತು ಹಣಕಾಸು ಇಲಾಖೆ ಕಾರ್ಯದರ್ಶಿ (ಪ್ರಸ್ತುತ ಅಶೋಕ ಲವಾಸ) ಸಮೀಕ್ಷೆಯ ಕರಡನ್ನು, ಸ್ಪಷ್ಟಗೊಳಿಸಿದ್ದಾರೆ.
- ಆರ್ಥಿಕ ಸಮೀಕ್ಷೆಯು ಅಂತಿಮ, ಸ್ಪಷ್ಟ ರೂಪ ನೀಡುವುದು ಮತ್ತು ಪರಿಗಣನೆ ಮಾಡುವುದು ಕೇಂದ್ರ ಹಣಕಾಸು ಸಚಿವರು ಮತ್ತು ಹಣಕಾಸು ಇಲಾಖೆ ಕಾರ್ಯದರ್ಶಿಗಳ ಜವಾಬ್ದಾರಿಯಾಗಿದೆ.

### ಭಾರತದಲ್ಲಿ ಆರ್ಥಿಕ ಸಮೀಕ್ಷೆ ಮಂಡನೆಯ ಐತಿಹಾಸಿಕ ಬೆಳವಣಿಗೆ

- ಭಾರತದಲ್ಲಿ 1950-51 ರ ಆರ್ಥಿಕ ವರ್ಷದಲ್ಲಿ ಮೊದಲ ಬಾರಿಗೆ ಕೇಂದ್ರ ಹಣಕಾಸು ಸಚಿವಾಲಯವು ಆರ್ಥಿಕ ಸಮೀಕ್ಷೆಯನ್ನು ತಯಾರಿಸಿ ಲೋಕಸಭೆಯಲ್ಲಿ ಮಂಡನೆ ಮಾಡಿತು.
- 1957-58ರ ವಿತ್ತೀಯ ವರ್ಷದ ನಂತರ ಆರ್ಥಿಕ ಸಮೀಕ್ಷೆಯು ಹಣಕಾಸು ಇಲಾಖೆಯ ಅಧಿಕೃತ ವೆಬ್‌ಸೈಟಿನಲ್ಲಿ ಪ್ರಕಟ ಮತ್ತು ಸಾರ್ವತ್ರಿಕವಾಗಿ ಲಭ್ಯವಾಗುವುದಕ್ಕೆ ಅವಕಾಶ ಕಲ್ಪಿಸಿತು.
- 1964 ರ ಮೊದಲು ಕೇಂದ್ರ ಬಜೆಟ್‌ನ ಆರ್ಥಿಕ ದಾಖಲೆಗಳೊಂದಿಗೆ ಆರ್ಥಿಕ ಸಮೀಕ್ಷೆ ಮಾಹಿತಿ ಲಭ್ಯವಾಗುತ್ತಿತ್ತು.
- 2016-17 ರ ಆರ್ಥಿಕ ಸಮೀಕ್ಷೆಯನ್ನು ಅರುಣ್ ಜೇಟ್ಲಿ ಅವರು 2017 ಜನವರಿ 31 ರಂದು ಲೋಕಸಭೆಯಲ್ಲಿ ಮಂಡನೆ ಮಾಡಿದರು.

### ಭಾರತದ ಆರ್ಥಿಕ ಸಮೀಕ್ಷೆ ಬಗ್ಗೆ ಸಂಕ್ಷಿಪ್ತ ಟಿಪ್ಪಣಿ:-

- ಭಾರತದ "ಆರ್ಥಿಕ ಸಮೀಕ್ಷೆ"ಯು ಶಾಸನಬದ್ಧ ಮತ್ತು ಸಂವಿಧಾನಿಕ ನಿಯಮಾವಳಿಗಳಿಗೆ ಬದ್ಧವಾಗಿರುವುದಿಲ್ಲ.
- "ಕೇಂದ್ರೀಯ ಸಾಂಖ್ಯಿಕ ಕಛೇರಿ" (CSO) ಮತ್ತು "ಸಾಂಖ್ಯಿಕ ಹಾಗೂ ಕಾರ್ಯಕ್ರಮ ಅನುಷ್ಠಾನ ಇಲಾಖೆ" (MOSPI) ಒದಗಿಸುವ ಆರ್ಥಿಕ ದತ್ತಾಂಶಗಳ ಆಧಾರದ ಮೇಲೆ ಆರ್ಥಿಕ ಸಮೀಕ್ಷೆಯನ್ನು ಕೇಂದ್ರ ಹಣಕಾಸು ಸಚಿವಾಲಯ ಸಿದ್ಧಪಡಿಸುತ್ತದೆ.

## ಆರ್ಥಿಕ ಸಮೀಕ್ಷೆ ಮತ್ತು ಆರ್ಥಿಕ ಗಣತಿಗಿರುವ ವ್ಯತ್ಯಾಸ (Distinction Between Economic Survey and Economic Census)

| | ಆರ್ಥಿಕ ಸಮೀಕ್ಷೆ (Economic Survey) | ಆರ್ಥಿಕ ಗಣತಿ (Economic Census) |
|---|---|---|
| ಪ್ರಕಟ ಪಡಿಸುವವರು | ಕೇಂದ್ರ ಹಣಕಾಸು ಸಚಿವಾಲಯ | ಕೇಂದ್ರೀಯ ಸಾಂಖ್ಯಿಕ ಸಂಸ್ಥೆ |
| ಮೊದಲು ಬಿಡುಗಡೆ | 1950–51 | 1976–77 |
| ಉದ್ದೇಶ | ವಿತ್ತೀಯ ವರ್ಷ(ಹಿಂದಿನ 12 ತಿಂಗಳ)ದ ಆರ್ಥಿಕ ಸ್ಥಿತಿಗತಿಗಳ ಮಾಹಿತಿ | ಆರ್ಥಿಕತೆಯ ವಿವಿಧ ವಲಯಗಳ ಕಾರ್ಯಾಚರಣೆ ಕುರಿತ ಮಾಹಿತಿ(ದೀರ್ಘಾವಧಿ) |
| ಪ್ರಕಟ | ಪ್ರತಿವರ್ಷ ಬಜೆಟ್ ಮಂಡಿಸುವ ಮುನ್ನಾದಿನ | ದೇಶದಲ್ಲಿ 1977, 1980, 1990, 1998, 2005, 2013 ಒಟ್ಟು 6 ಬಾರಿ |
| ಸಹಯೋಗ | CSO & MOSPI ಸಂಸ್ಥೆಗಳ ಸಹಯೋಗ | ರಾಜ್ಯಗಳ ಆರ್ಥಿಕ & ಸಾಂಖ್ಯಿಕ ನಿರ್ದೇಶನಾಲಯದ ಸಹಯೋಗ |

## ಭಾರತದ ಆರ್ಥಿಕತೆ – ಸಂಕ್ಷಿಪ್ತ ಮಾಹಿತಿ

- ಭಾರತ ದೇಶ **ಮಿಶ್ರ ಅರ್ಥವ್ಯವಸ್ಥೆ** ಹೊಂದಿರುವ ಮಧ್ಯಮ ವರಮಾನ ಹೊಂದಿದ ರಾಷ್ಟ್ರವಾಗಿದ್ದು, ಬೃಹತ್ ಆರ್ಥಿಕತೆ, ಮುಕ್ತ ಆರ್ಥಿಕತೆ ಮತ್ತು ತ್ವರಿತವಾಗಿ ಬೆಳೆಯುತ್ತಿರುವ ಉದಯೋನ್ಮುಖ ರಾಷ್ಟ್ರಗಳ ಸಾಲಿನಲ್ಲಿ ಮುಂಚೂಣಿಯಲ್ಲಿದೆ.
- ಭಾರತ ದೇಶವು ಉತ್ತರಾರ್ಧಗೋಳದ ಪೂರ್ವ ಭಾಗದಲ್ಲಿ 8.4 ಡಿಗ್ರಿ ಉತ್ತರ ಅಕ್ಷಾಂಶದಿಂದ 37.6 ಡಿಗ್ರಿ ಉತ್ತರ ಅಕ್ಷಾಂಶದವರೆಗೆ, ಹಾಗೂ 68.7 ಡಿಗ್ರಿ ಪೂರ್ವ ರೇಖಾಂಶದಿಂದ 97.25 ಡಿಗ್ರಿ ಪೂರ್ವ ರೇಖಾಂಶದವರೆಗೆ ವ್ಯಾಪಿಸಿದೆ. 32,87,263 ಚ.ಕಿ.ಮೀ ವಿಸ್ತೀರ್ಣವುಳ್ಳ ಜಗತ್ತಿನ 7ನೇ ದೊಡ್ಡ ರಾಷ್ಟ್ರವಾಗಿದ್ದು, ವಿಶ್ವದ ಒಟ್ಟು ವಿಸ್ತೀರ್ಣದಲ್ಲಿ ಶೇ 2.4 ರಷ್ಟನ್ನು ಹೊಂದಿದೆ.
- ಭಾರತ ದೇಶವು ಬಾಂಗ್ಲಾ ದೇಶದೊಂದಿಗೆ ಅತಿ ಹೆಚ್ಚಿನ ಭೂ ಗಡಿಯನ್ನು ಹೊಂದಿದ್ದು, ಆಫ್ಘಾನಿಸ್ತಾನದೊಂದಿಗೆ ಕಡಿಮೆ ಗಡಿಯನ್ನು ಹೊಂದಿದೆ.
- ದೇಶದಲ್ಲಿ ಉತ್ತರಪ್ರದೇಶ ರಾಜ್ಯವು ಗರಿಷ್ಠ 8 ರಾಜ್ಯಗಳು ಮತ್ತು 1 ರಾಷ್ಟ್ರೀಯ ರಾಜಧಾನಿಯೊಂದಿಗೆ ಗಡಿಯನ್ನು ಹೊಂದಿದೆ.
- ಮಹಾರಾಷ್ಟ್ರ ರಾಜ್ಯವು 6,08,140 ಕಿ.ಮೀ ಉದ್ದದ ರಸ್ತೆಯನ್ನು ಹೊಂದಿರುವ ದೇಶದ ಅತಿ ದೊಡ್ಡ ರಸ್ತೆ ಸಂಪರ್ಕ ಹೊಂದಿದ ರಾಜ್ಯವಾಗಿದೆ.
- ಏಷ್ಯಾದ ಅತಿ ದೊಡ್ಡ & ವಿಶ್ವದ ಎರಡನೇ ದೊಡ್ಡ ರೈಲ್ವೆ ವ್ಯವಸ್ಥೆ ಹಾಗೂ ದೇಶದಲ್ಲಿ ಅತೀ ಹೆಚ್ಚು ಉದ್ಯೋಗಾವಕಾಶ ಕಲ್ಪಿಸಿದ ಸಾರ್ವಜನಿಕ ವಲಯ – **ಭಾರತೀಯ ರೈಲ್ವೆ.**
- ಭಾರತದಲ್ಲಿ ಅತ್ಯಂತ ದೊಡ್ಡ ರೈಲ್ವೆ ವಲಯ – **ಉತ್ತರ ರೈಲ್ವೆ.**
- ಭಾರತದಲ್ಲಿ ಕೋಲ್ಕತ್ತ ಮೆಟ್ರೋ ವಲಯವನ್ನು ಸೇರಿದಂತೆ 17 ವಲಯಗಳಿವೆ.
- ಭಾರತದಲ್ಲಿ ಮೊದಲ ಮೆಟ್ರೋ ಕೋಲ್ಕತ್ತ ಮೆಟ್ರೋ ಆಗಿದ್ದು, ಇದು 1984ರಲ್ಲಿ ಉದ್ಘಾಟನೆಗೊಂಡಿತ್ತು. ಪ್ರಸ್ತುತವಾಗಿ ಇದು ಹೂಗ್ಲಿ ನದಿಯಲ್ಲಿ **ಜಲಸುರಂಗ ಮಾರ್ಗವನ್ನು ಹೊಂದಿದ ದೇಶದ ಮೊದಲ ಮೆಟ್ರೋ** ಆಗಿದೆ.
- ಭಾರತದ ಅತ್ಯಂತ ಸಂಪದ್ಭರಿತ ರಾಜ್ಯವಾದ ಮಹಾರಾಷ್ಟ್ರದ ಮುಂಬೈನಲ್ಲಿ ಮೋನೋ ರೈಲು ವ್ಯವಸ್ಥೆ ಜಾರಿಯಲ್ಲಿದೆ.
- 2017ರ ಜುಲೈ ವೇಳೆಗೆ ಭಾರತದ ಆರ್ಥಿಕತೆ ನಾಮಮಾತ್ರ ಜಿಡಿಪಿಯಲ್ಲಿ ವಿಶ್ವದ 6ನೇ ದೊಡ್ಡ ಆರ್ಥಿಕತೆ ಮತ್ತು ಕೊಳ್ಳುವ ಶಕ್ತಿ ಆಧಾರದಲ್ಲಿ 3ನೇ ದೊಡ್ಡ ಆರ್ಥಿಕತೆಯಾಗಿ ಹೊರಹೊಮ್ಮಿದೆ.
- ವಿಶ್ವ ಬ್ಯಾಂಕಿನ ಬೆಳವಣಿಗೆ ಹೊರನೋಟ ವರದಿಯ ಪ್ರಕಾರ 2016–17ರಲ್ಲಿ ದೇಶದ ಜಿಡಿಪಿ ಬೆಳವಣಿಗೆ ದರ ಶೇ7.1 ಆದರೆ ಐಎಂಎಫ್ ವರದಿ ಎಕನಾಮಿಕ್ ಔಟ್‌ಲುಕ್ ಪ್ರಕಾರ ಶೇ 6.6 ಆಗಿದೆ.

## 2016-17 ನೇ ಆರ್ಥಿಕ ವರ್ಷದ ಭಾರತದ ಆರ್ಥಿಕತೆಗೆ ಸಂಬಂಧಿಸಿದ 8 ಕುತೂಹಲಕಾರಿ ಸಂಗತಿಗಳು (Eight Interesting Facts about India's Economy)

1) ವಾರ್ಷಿಕ ಕಾರ್ಯನಿರತ ಜನರ ವಲಸೆ ಪ್ರಮಾಣ 9 ದಶಲಕ್ಷವಿದ್ದು, 2011 ಕ್ಕೆ ಹೋಲಿಸಿದರೆ ದ್ವಿಗುಣಗೊಂಡಿದೆ.

2) ಜಾಗತಿಕ ಸಾಲ ದರ ಸೂಚ್ಯಂಕದ ಅನ್ವಯ 2009–15ರವರಗಿನ ಅವಧಿಯಲ್ಲಿ ಭಾರತ (BBB-) ಸ್ಥಾನವನ್ನು ಕಾಯ್ದು-ಕೊಂಡಿದ್ದರೆ. ಚೀನಾದ ಆರ್ಥಿಕತೆಯು A+ ನಿಂದ AA- ಗೆ ಕುಸಿತಗೊಂಡಿದೆ.

3) ಸರ್ಕಾರದ ಸಾಮಾಜಿಕ ಕಲ್ಯಾಣ ಯೋಜನೆಗಳ ಗುರಿಗಳು ನಿರೀಕ್ಷಿತ ಪ್ರಮಾಣದ ಸಾಧನೆ ಮಾಡುವಲ್ಲಿ ವಿಫಲವಾಗಿವೆ. ಉದಾ:- ದೇಶದ ಶೇ 40 ರಷ್ಟು ಹಿಂದುಳಿದ ಜಿಲ್ಲೆಗಳು ಕೇವಲ ಶೇ 29 ರಷ್ಟು ಅಭಿವೃದ್ಧಿ ನಿಧಿಯನ್ನು ಬಳಸಿಕೊಂಡಿವೆ.

4) ಭಾರತ ರಾಜಕೀಯ ಪ್ರಜಾಪ್ರಭುತ್ವ ಸಾಧಿಸಿದೆಯೇ ಹೊರತು ಕೋಶೀಯ ಪ್ರಜಾಸತ್ತಾತ್ಮಕತೆ ಪ್ರಸ್ತಾರ್ಥಕವಾಗಿ ಉಳಿದಿದೆ. ಕಾರಣ, ದೇಶದ 100 ಮತದಾರರಲ್ಲಿ ಕೇವಲ 7 ಜನ ಸರ್ಕಾರಕ್ಕೆ ತೆರಿಗೆ ಪಾವತಿ ಮಾಡುತ್ತಿದ್ದಾರೆ. ಒಟ್ಟಾರೆ 1.9 ಕೋಟಿ ಜನ(15%) ರಷ್ಟು ಮಾತ್ರ ತೆರಿಗೆ ಪಾವತಿದಾರರಾಗಿದ್ದು,

ಎ) ವಿಶ್ವದ ಜಿ–20 ರಾಷ್ಟ್ರಗಳ ಸಂಘಟನೆಯ 18 ರಾಷ್ಟ್ರಗಳ ರ್‍ಯಾಂಕ್‌ನಲ್ಲಿ **ಭಾರತ 13 ನೇ ಸ್ಥಾನ** ಪಡೆದಿದೆ.

ಬಿ) ಬ್ರಿಕ್ಸ್ ರಾಷ್ಟ್ರಗಳ ಗುಂಪಿನಲ್ಲಿ **ಬ್ರೆಜಿಲ್, ಚೀನಾ, ದಕ್ಷಿಣ ಆಫ್ರಿಕಾ, ಭಾರತ, ರಷ್ಯಾ** ರಾಷ್ಟ್ರಗಳು ಶೇಕಡಾವಾರು ಪ್ರಮಾಣದ ತೆರಿಗೆ ಪಾವತಿದಾರರನ್ನು ಹೊಂದಿರುವ ರಾಷ್ಟ್ರಗಳು ಕ್ರಮಾನುಗತಿಯಲ್ಲಿವೆ.

ಸಿ) ವಿಶ್ವದಲ್ಲಿ **ನಾರ್ವೆ ದೇಶ** ಶೇ 100 ರಷ್ಟು ತೆರಿಗೆ ಪಾವತಿದಾರರನ್ನು ಹೊಂದಿದ್ದರೆ, **ಟರ್ಕಿ ದೇಶವು** ಶೇ. 1 ರಷ್ಟು ಹೊಂದಿದೆ.

5) **ಜನಸಂಖ್ಯಾ ಲಾಭಾಂಶ** (ದೇಶದ ಒಟ್ಟು ಜನಸಂಖ್ಯೆಯಲ್ಲಿ ಕಾರ್ಯನಿರತ ಯುವ ಜನಸಂಖ್ಯಾ ಪ್ರಮಾಣ ತಿಳಿಸುವುದು) ದಲ್ಲಿ 15–64 ವಯೋಮಾನದ ಕಾರ್ಯನಿರತೇತರ ಜನಸಂಖ್ಯಾ ಪ್ರಮಾಣಕ್ಕಿಂತ ಕಾರ್ಯನಿರತ ಜನಸಂಖ್ಯಾ ಪ್ರಮಾಣ ಹೆಚ್ಚಾಗಿದೆ.

6) ದೇಶದ ಒಟ್ಟು ಆಂತರಿಕ ಉತ್ಪನ್ನ (ಜಿ.ಡಿ.ಪಿ) ಮತ್ತು ಸರಕು ಸೇವಾ ವ್ಯಾಪಾರದ ನಡುವಿನ ಅನುಪಾತದಲ್ಲಿ ಚೀನಾದ ಆರ್ಥಿಕತೆಯನ್ನು ಆಂತರಿಕ ವ್ಯಾಪಾರದಲ್ಲಿ ಹಿಂದಿಕ್ಕಿದೆ. ಆದರೆ ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಚೀನಾದ ಪ್ರಾಬಲ್ಯ ಮುಂದುವರೆದಿದೆ.

7) 2004–14ರ ದಶಕದಲ್ಲಿಯೂ ಭಾರತ ದೇಶದ **ಭೌಗೋಳಿಕ ಆದಾಯ ಅಸಮಾನತೆ** ವಿಸ್ತರಣೆಯ ಹಾದಿಯಲ್ಲಿ ಮುಂದುವರೆದಿದೆ.

8) ಉಪಗ್ರಹ ಆಧಾರಿತ ದತ್ತಾಂಶದ ಆಧಾರದ ಮೇಲೆ ಬೆಂಗಳೂರು & ಜೈಪುರ ನಗರಗಳು 5% ರಿಂದ 20% ರ ನಡುವೆ ಆಸ್ತಿ ತೆರಿಗೆ ಸಂಗ್ರಹಿಸುತ್ತಿವೆ.

## 2016-17 ರ ಭಾರತ ಆರ್ಥಿಕ ಸಮೀಕ್ಷೆಯ ಮುಖ್ಯ ಲಕ್ಷಣಗಳು:

✦ 2017 ರ ಜನವರಿ – ಫೆಬ್ರವರಿಯಲ್ಲಿ ನಡೆದ ಸಂಸತ್ತಿನ ಬಜೆಟ್ ಅಧಿವೇಶನದಲ್ಲಿ ಕೇಂದ್ರ ವಿತ್ತ ಸಚಿವರಾದ ಅರುಣ್ ಜೇಟ್ಲಿ ಅವರು ಕೇಂದ್ರ ಹಣಕಾಸು ಸಚಿವಾಲಯದ ಮುಖ್ಯ ಆರ್ಥಿಕ ಸಲಹೆಗಾರರಾದ ಅರವಿಂದ ಸುಬ್ರಮಣ್ಯನ್ ನೇತೃತ್ವದ ಆರ್ಥಿಕ ವಿಭಾಗ ಮಂಡಳಿಯ ಸದಸ್ಯರು ರೂಪಿಸಿದ ಭಾರತದ ಆರ್ಥಿಕ ಸಮೀಕ್ಷೆಯನ್ನು 2017 ರ ಜನವರಿ 31 ರಂದು ಮಂಡಿಸಿದರು. ಈ ಆರ್ಥಿಕ ಸಮೀಕ್ಷೆಯಲ್ಲಿ ಭಾರತದ ಆರ್ಥಿಕತೆಯ 2017–18 ರ ವಿತ್ತೀಯ ವರ್ಷದಲ್ಲಿ ಆರ್ಥಿಕ ಬೆಳವಣಿಗೆ ದರವು ಶೇ 6.75 ರಿಂದ ಶೇ 7.5 ರವರೆಗೆ ಇರಬಹುದು ಎಂದು ಅಂದಾಜಿಸಿತು.

✦ 2016 ರ ನವೆಂಬರ್ 8 ರಂದು ಪ್ರಧಾನಿ ನರೇಂದ್ರ ಮೋದಿ ಅವರು ಘೋಷಿಸಿದ ನೋಟು ಅಮಾನ್ಯೀಕರಣ ಹಿನ್ನೆಲೆಯಲ್ಲಿ ದೇಶದ ಆರ್ಥಿಕತೆಯ ಬೆಳವಣಿಗೆ ದರದ ಮೇಲೆ ಪ್ರತಿಕೂಲ ಪರಿಣಾಮ ಉಂಟಾಗಿರುವುದನ್ನು ನಿರೀಕ್ಷಿತ ಆರ್ಥಿಕ ಬೆಳವಣಿಗೆ ದರದ ಅಂದಾಜಿಸುವಿಕೆಯಲ್ಲಿ ಕುಸಿದಿರುವುದನ್ನು ಸೂಚಿಸುತ್ತದೆ.

**ದೇಶದ ಜಿ.ಡಿ.ಪಿ ಬೆಳವಣಿಗೆ ದರದ ಅಂದಾಜು:-**

✦ ದೇಶದ ಆರ್ಥಿಕ ಬೆಳವಣಿಗೆ ದರ 2015–16 ರ ವಿತ್ತೀಯ ವರ್ಷದಲ್ಲಿ ಶೇ 7.6 ರಷ್ಟಿದ್ದು, 2016–17 ವರ್ಷದಲ್ಲಿ ಶೇ 6.5 ಕ್ಕೆ ಕುಸಿತ (ಮಾರುಕಟ್ಟೆ ಬೆಲೆ) ವಾಗಿದೆ. ಆದರೆ 2017–18 ರ ವರ್ಷದಲ್ಲಿ ಶೇ 6.75 ರಿಂದ ಶೇ 7.5 ಇರಬಹುದೆಂದು ಮುನ್ನಂದಾಜಿಸಲಾಗಿದೆ.

✦ ದೇಶದ ಪ್ರಾಥಮಿಕ ವಲಯದ ಬೆಳವಣಿಗೆ ದರವು 2015–16 ರಲ್ಲಿ ಶೇ 1.2 ರಷ್ಟಿದ್ದು, 2016–17 ರಲ್ಲಿ ಶೇ 4.1 ಕ್ಕೆ ಹೆಚ್ಚಾಗಿರುವುದು ಕೃಷಿ ವಲಯದ ಅಭಿವೃದ್ಧಿಯ ದ್ಯೋತಕ.

✦ ಕೈಗಾರಿಕಾ ವಲಯದ ಬೆಳವಣಿಗೆ ದರವು 2015–16 ರಲ್ಲಿ ಶೇ 7.4 ರಷ್ಟಿದ್ದು, 2016–17 ರ ವೇಳೆಗೆ ಶೇ 5.2 ಕ್ಕೆ ಕುಸಿತಗೊಂಡಿದೆ.

✦ ಸೇವಾ ವಲಯದ ಬೆಳವಣಿಗೆ ದರವು 2016–17 ರಲ್ಲಿ ಶೇ 8.9 ರಷ್ಟಿದೆ.

# ಅರ್ಥಶಾಸ್ತ್ರಕ್ಕೆ ಪ್ರಮುಖಾಂಶಗಳು

- ಬ್ಯಾಂಕುಗಳ ಹಣಕಾಸು ವರ್ಷ ಏಪ್ರಿಲ್ – ಮಾರ್ಚ್
- ಆರ್.ಬಿ.ಐನ ಹಣಕಾಸು ವರ್ಷ – ಜುಲೈ – ಜೂನ್
- ಸೆಬಿ (SEBI) ಎಂಬುದು – 1992 ರಲ್ಲಿ ಒಂದು ಶಾಸನ ಬದ್ಧ ಸಂಸ್ಥೆಯಾಯಿತು. (1988 ರಲ್ಲಿ ಸ್ಥಾಪನೆ)
- ಬಿ. ಶಿವರಾಮನ್ ಸಮಿತಿ ಮೇರೆಗೆ ಸ್ಥಾಪನೆಯಾದ ಬ್ಯಾಂಕ್ – ನಬಾರ್ಡ್
- ಸಾರ್ಕ್ ವಿಶ್ವ ವಿದ್ಯಾಲಯದ ಕೇಂದ್ರ ಕಛೇರಿ – ಭಾರತದ ನವದೆಹಲಿ
- 88 ನೇ ಸೆಕ್ಷನ್ ಪ್ರಕಾರ ತೆರಿಗೆ ವಿನಾಯಿತಿಗಳನ್ನು ರದ್ದುಪಡಿಸಲು ಕಾರಣವಾದ ಸಮಿತಿ – ಕೇಲ್ಕರ್
- ಸೆಪ್ಟೆಂಬರ್ 1 ಸಂಸ್ಥಾಪನಾ ದಿನವಾದ ಸಂಸ್ಥೆ – ಎಲ್.ಐ.ಸಿ
- ಜಾಗತಿಕ ಹಸಿವು ಸೂಚ್ಯಂಕವನ್ನು ಪ್ರಕಟ ಪಡಿಸುವ ಸಂಸ್ಥೆ – IFPRI -International Food Policy Research Institute
- 2016 ರ ಜಾಗತಿಕ ಹಸಿವು ಸೂಚ್ಯಂಕದ ಪ್ರಕಾರ ಭಾರತದ ಸ್ಥಾನ – 97ನೇ ಸ್ಥಾನ
- ಆರ್ಥಿಕ ಯೋಜನೆ – ಸಂವಿಧಾನದ ಸಮವರ್ತಿ ಪಟ್ಟಿಯಲ್ಲಿ ಸೇರಿದೆ.
- ಬಡ್ಡಿದರ ನೀತಿ – ಹಣಕಾಸು ನೀತಿಯ ಒಂದು ಭಾಗವಾಗಿದೆ.
- ಪ್ರಧಾನಮಂತ್ರಿ ಫಸಲ್ ಭಿಮಾ ಯೋಜನೆ ಉದ್ಘಾಟನೆಯಾದ ವರ್ಷ – 2015–16
- ನಬಾರ್ಡ್ – 6ನೇ ಪಂಚವಾರ್ಷಿಕ ಯೋಜನೆಯಲ್ಲಿ ಸ್ಥಾಪನೆಯಾಯಿತು.
- 2016–17 ರ ಆರ್ಥಿಕ ಸಮೀಕ್ಷೆ ಪ್ರಕಾರ ಭಾರತದ ಕೃಷಿ & ಕೃಷಿ ಸಂಬಂಧಿ ಚಟುವಟಿಕೆಗಳ ಬೆಳವಣಿಗೆ ದರ – ಶೇ 4.1
- 2016–17 ರ ಆರ್ಥಿಕ ಸಮೀಕ್ಷೆ ಪ್ರಕಾರ ಸ್ಥಿರ ಬೆಲೆಗಳಲ್ಲಿ 2017–18 ರ ಬೆಳವಣಿಗೆ ದರದ ಅಂದಾಜು – ಶೇ 6.75 ರಿಂದ ಶೇ 7.5
- 2016–17 ರ ಆರ್ಥಿಕ ವರ್ಷದ ಸ್ಥಿರ ಬೆಲೆಗಳಲ್ಲಿ ಜಿ.ಡಿ.ಪಿ ಬೆಳವಣಿಗೆ ದರ – ಶೇ 7.1
- 2016–17 ರ ಆರ್ಥಿಕ ವರ್ಷ (ಏಪ್ರಿಲ್–ಡಿಸೆಂಬರ್) ರ ಕೈಗಾರಿಕಾ ಬೆಳವಣಿಗೆ ದರ – ಶೇ 0.3
- 2017 ಜೂನ್ 8 ರ ಆರ್.ಬಿ.ಐ ನ ಹಣಕಾಸು ನೀತಿ ಪ್ರಕಾರ ರೆಪೋದರ – ಶೇ 6.25
- 2017 ಜೂನ್ 8 ರ ಆರ್.ಬಿ.ಐ ನ ಹಣಕಾಸು ನೀತಿ ಪ್ರಕಾರ ಶಾಸನ ಬದ್ಧ ದ್ರವ್ಯತೆಯ ಪ್ರಮಾಣ (SLR) – ಶೇ 20 (ಶೇ 0.5 ರಷ್ಟು ಕಡಿತ)
- 2015–16 ರ ಭಾರತದ ಆಹಾರಧಾನ್ಯಗಳ ಉತ್ಪಾದನೆಯ ಪ್ರಮಾಣ – 252.22 ದಶಲಕ್ಷ ಟನ್
- ಇತ್ತೀಚೆಗೆ ಭಾರತದ ಆಹಾರ ಧಾನ್ಯಗಳ ಉತ್ಪಾದನೆ ಗರಿಷ್ಠ ಪ್ರಮಾಣದಲ್ಲಿರುವ ವರ್ಷ – 2013–14
- 2011 ರ ಧರ್ಮ ಆಧಾರಿತ ಜನಗಣತಿಯಲ್ಲಿ ಅಧಿಕ ಮುಸ್ಲಿಂ ಜನಸಂಖ್ಯೆ ಬೆಳವಣಿಗೆ ದರ ಹೊಂದಿರುವುದು – ಲಕ್ಷದ್ವೀಪ
- ರಾಷ್ಟ್ರೀಯ ಅಭಿವೃದ್ಧಿ ಮಂಡಳಿ ಸ್ಥಾಪನೆಯಾದ ವರ್ಷ – 1952 ಆಗಸ್ಟ್ 6
- ನೀತಿ ಆಯೋಗ ಎಂಬುದು ಶಾಸನಬದ್ಧವಲ್ಲದ ಸಂಸ್ಥೆ & ಥಿಂಕ್ ಟ್ಯಾಂಕ್ ಸಂಸ್ಥೆ
- ನೀತಿ ಆಯೋಗದ ಮೊದಲ ಹೆಸರು – ಯೋಜನಾ ಆಯೋಗ
- ಯೋಜನಾ ಆಯೋಗವು ನೀತಿ ಆಯೋಗವಾಗಿ ಮರುನಾಮಕರಣವಾದ ವರ್ಷ – 2015 ಜನವರಿ 1
- ನೀತಿ ಆಯೋಗದ ಅಧ್ಯಕ್ಷರು – ಪ್ರಧಾನಮಂತ್ರಿ
- ನೀತಿ ಆಯೋಗದ ಉಪಾಧ್ಯಕ್ಷರು – ಅರವಿಂದ ಪನಗಾರಿಯಾ
- ನೀತಿ ಆಯೋಗದ ಉಪಾಧ್ಯಕ್ಷ ಹುದ್ದೆ – ಕ್ಯಾಬಿನೆಟ್ ಸಚಿವ ದರ್ಜೆ ಶ್ರೇಣಿ ಹೊಂದಿರುತ್ತದೆ.
- ಆರ್ಥಿಕತೆಯ ಜಿಗಿತದ ಹಂತ (Take of Stage) ದ ಅರ್ಥ – ಸ್ಥಿರ ಆರ್ಥಿಕ ಬೆಳವಣಿಗೆ ಪ್ರಾರಂಭ
- ಭಾರತದಲ್ಲಿ ಯೋಜನೆಗಳ ಉದ್ದೇಶಗಳನ್ನು ತಿಳಿಸುವುದು – ಸಂವಿಧಾನದ ರಾಜ್ಯ ನಿರ್ದೇಶಕ ತತ್ವಗಳು
- ಭಾರತದಲ್ಲಿ ಆರ್ಥಿಕ ಸಮೀಕ್ಷೆಯನ್ನು ಪ್ರಕಟ ಪಡಿಸುವವರು – ಕೇಂದ್ರ ಹಣಕಾಸು ಸಚಿವಾಲಯ
- ಭಾರತದಲ್ಲಿ ಆರ್ಥಿಕ ಗಣತಿಯನ್ನು ನಡೆಸಿ, ಮಾಹಿತಿ ಪ್ರಕಟ ಪಡಿಸುವವರು – ಕೇಂದ್ರೀಯ ಸಾಂಖ್ಯಿಕ ಸಂಸ್ಥೆ
- ಭಾರತದಲ್ಲಿ ಪಂಚವಾರ್ಷಿಕ ಯೋಜನೆಗಳ ಪರಿಕಲ್ಪನೆ ರೂಪಿಸಿದವರು – ಜವಾಹರ್‌ಲಾಲ್ ನೆಹರೂ
- ಭಾರತ ಮಿಶ್ರ ಅರ್ಥವ್ಯವಸ್ಥೆಯನ್ನು ಅಳವಡಿಸಿಕೊಂಡಿದ್ದು – 1948 ರ ಕೈಗಾರಿಕಾ ನೀತಿ
- ಭಾರತದ ಯೋಜನಾ ಆಯೋಗದ ಮೊದಲ

ಉಪಾಧ್ಯಕ್ಷರು – **ಗುಲ್ಜಾರಿಲಾಲ್ ನಂದಾ**

- ಭಾರತದಲ್ಲಿ ಸಾರ್ವಜನಿಕ ವಲಯದ ಪ್ರಾಬಲ್ಯ ಹೆಚ್ಚಿರುವುದು – **ವಾಣಿಜ್ಯ ಬ್ಯಾಂಕ್ ಕ್ಷೇತ್ರ**
- ಭಾರತದಲ್ಲಿ ಮೊದಲ ಬಾರಿಗೆ ಆರ್ಥಿಕ ಯೋಜನೆಗಳ ಮಹತ್ವ ತಿಳಿಸಿದವರು – **ಸರ್. ಎಂ. ವಿಶ್ವೇಶ್ವರಯ್ಯ**
- ಭಾರತದಲ್ಲಿ ವಿಕೇಂದ್ರೀಕೃತ ಆಡಳಿತ ವ್ಯವಸ್ಥೆಯನ್ನು ಶಿಫಾರಸ್ಸು ಮಾಡಿದವರು – **ಬಲವಂತರಾಯ್ ಮೆಹ್ತಾ**
- ಮೊದಲ ಪಂಚವಾರ್ಷಿಕ ಯೋಜನೆ ಆದ್ಯತೆ ನೀಡಿದ ಕ್ಷೇತ್ರ – **ಕೃಷಿ**
- ಸಮುದಾಯ ಅಭಿವೃದ್ಧಿ ಕಾರ್ಯಕ್ರಮ (CDP) ಪ್ರಾರಂಭವಾದ ಪಂಚವಾರ್ಷಿಕ ಯೋಜನೆ – **ಮೊದಲನೇ (1952)**
- ತ್ವರಿತ ಕೈಗಾರಿಕಾಭಿವೃದ್ಧಿಗೆ ಆದ್ಯತೆ ನೀಡಿದ ಪಂಚವಾರ್ಷಿಕ ಯೋಜನೆ – **ಎರಡನೇ ಪಂ. ಯೋಜನೆ**
- ಮೂಲ ಕೈಗಾರಿಕೆಗಳ ವಿಸ್ತರಣೆಗೆ ಅವಕಾಶ ಕಲ್ಪಿಸಿದ ಯೋಜನೆ – **ಮೂರನೇ ಪಂ. ಯೋಜನೆ**
- ಕನಿಷ್ಠ ಅಗತ್ಯತೆಗಳ ಕಾರ್ಯಕ್ರಮ ಪ್ರಾರಂಭವಾದ ಯೋಜನೆ – **ಐದನೇ ಪಂ. ಯೋಜನೆ**
- ಭಾರತದಲ್ಲಿ ಆವರ್ತ ಯೋಜನೆಗಳು ಚಾಲ್ತಿಯಲ್ಲಿದ್ದ ಅವಧಿ – **1978–79**
- ಭಾರತದಲ್ಲಿ ಆವರ್ತ ಯೋಜನೆಗಳನ್ನು ಜಾರಿಗೆ ತಂದ ಪ್ರಧಾನಿ – **ಮೊರಾರ್ಜಿ ದೇಸಾಯಿ**
- ಇತ್ತೀಚಿನ ದಿನಗಳಲ್ಲಿ ಭಾರತದ ಆರ್ಥಿಕತೆಗೆ **ಕೃಷಿ ವಲಯದ ಕೊಡುಗೆ** ಇಳಿಕೆಯಾಗುತ್ತಿದೆ.
- ದೇಶದಲ್ಲಿ ಪಂಚವಾರ್ಷಿಕ ಯೋಜನೆಗಳ ಕರಡನ್ನು ಅಂತಿಮಗೊಳಿಸುತ್ತಿದ್ದ ಸಂಸ್ಥೆ – **ರಾಷ್ಟ್ರೀಯ ಅಭಿವೃದ್ಧಿ ಮಂಡಳಿ**
- ದಾದಾ ಬಾಯಿ ನವರೋಜಿ ಸಂಪತ್ತಿನ ಸೋರಿಕೆ ಸಿದ್ದಾಂತವನ್ನು ತಿಳಿಸಿದ ಕೃತಿ – **ಪಾವರ್ಟಿ ಅಂಡ್ ಅನ್‌ಬ್ರಿಟಿಷ್ ರೂಲ್ ಇನ್ ಇಂಡಿಯಾ**
- ಮಾನವಾಭಿವೃದ್ಧಿ ದೇಶದ ಎಲ್ಲಾ ಅಭಿವೃದ್ಧಿಯ ಪ್ರಯತ್ನಗಳಿಗೆ ಮೂಲ ಎಂದು ಮನಗಾಣಿಸಿದ ಪಂಚವಾರ್ಷಿಕ ಯೋಜನೆ – **8ನೇ ಪಂ. ಯೋಜನೆ**
- ಸಮಾಜದ ದುರ್ಬಲ ವರ್ಗದ ಏಳಿಗೆಗಾಗಿ ಮೊದಲು ಆದ್ಯತೆಯನ್ನು ನೀಡಿದ ಪಂ. ಯೋಜನೆ – **5ನೇ ಪಂ. ಯೋಜನೆ**
- ಭಾರತದಲ್ಲಿ ಕೃಷಿ ವಲಯದ ಮೇಲೆ ಗರಿಷ್ಠ ವೆಚ್ಚವನ್ನು ಮಾಡಿದ ಪಂ. ಯೋಜನೆ – **4ನೇ ಪಂ. ಯೋಜನೆ.**
- ಸ್ವಯಂ ಪ್ರಗತಿ & ಶೂನ್ಯ ವಿದೇಶಿ ನೆರವನ್ನು ಉದ್ದೇಶವನ್ನು ಹೊಂದಿದ ಪಂ. ಯೋಜನೆ – **4 ನೇ ಪಂಚವಾರ್ಷಿಕ ಯೋಜನೆ**
- 3ನೇ ಪಂಚವಾರ್ಷಿಕ ಯೋಜನೆಯ ಉದ್ದೇಶಗಳ ಅಧ್ಯಾಯದ ಕರ್ತೃ – **ಮೊರಾರ್ಜಿ ದೇಸಾಯಿ**
- ಭಾರತದ ಒಟ್ಟು ರಾಷ್ಟ್ರೀಯ ಉತ್ಪನ್ನಕ್ಕೆ ವಲಯವಾರು ಕೊಡುಗೆಗಳ ಇಳಿಕೆ ಕ್ರಮ – **ಸೇವಾ, ಕೈಗಾರಿಕೆ, ಕೃಷಿ**
- ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯ ಪದನಿಮಿತ್ತ ಅಧ್ಯಕ್ಷರು – **ಪ್ರಧಾನಮಂತ್ರಿ**
- ಭಾರತದಲ್ಲಿ ಬೃಹತ್ ಪ್ರಮಾಣದ ಕೈಗಾರಿಕೆಗಳಿಗೆ ಕಡಿಮೆ ಒತ್ತನ್ನು ನೀಡಿ ಮೂಲ ಸೌಕರ್ಯಗಳ ಅಭಿವೃದ್ಧಿಗೆ ಹೆಚ್ಚಿನ ಆದ್ಯತೆ ನೀಡಲು ಪ್ರಾರಂಭಿಸಿದ ಪಂಚವಾರ್ಷಿಕ ಯೋಜನೆ – **8ನೇ ಪಂ. ಯೋಜನೆ**
- ಮೆಲ್ಟ್ ಡೌನ್ ಆರ್ಥಿಕ ಪರಿಭಾಷೆಯಲ್ಲಿ ಈ ಪದದ ಅರ್ಥ – **ಸ್ಟಾಕು ಬೆಲೆಗಳ ಇಳಿಕೆ**
- ನೆಹರೂ–ಮಹಲನೋಬಿಸ್ ಕಾರ್ಯತಂತ್ರ ಆರಂಭ & ಅಂತ್ಯಗೊಂಡ ಪಂಚವಾರ್ಷಿಕ ಯೋಜನೆ – **2 ರಿಂದ 7ನೇ ಪಂಚವಾರ್ಷಿಕ ಯೋಜನೆ.**
- ಬಡತನ ನಿವಾರಣೆಗೆ ಆದ್ಯತೆ ನೀಡಿದ ಪಂಚವಾರ್ಷಿಕ ಯೋಜನೆ – **5 ನೇ ಪಂಚವಾರ್ಷಿಕ ಯೋಜನೆ**
- ಆಹಾರ ಭದ್ರತೆ & ಮಹಿಳಾ ಸಬಲೀಕರಣಕ್ಕೆ ಆದ್ಯತೆ ನೀಡಿದ ಪಂ. ಯೋಜನೆ – **9ನೇ ಪಂ. ಯೋಜನೆ.**
- ಜನಸಂಖ್ಯಾ ಇಬ್ಭಾಗದ ವರ್ಷ ಎಂದು ಕರೆಯಲ್ಪಡುವುದು – **1921**
- ಜನಸಂಖ್ಯಾ ಇಬ್ಭಾಗದ ದಶಕ ಎಂದು ಕರೆಯಲ್ಪಡುವುದು – **1921 – 1931**
- ಜನಸಂಖ್ಯಾ ಇಳಿಕೆ ದರದ ದಶಕ ಎಂದು ಕರೆಯಲ್ಪಡುವುದು – **2001–2011**
- ಭಾರತದ ಆರ್ಥಿಕ ಸಂವಿಧಾನ ರೂಪಿತವಾದ ವರ್ಷ – **1956**
- 3ನೇ ಪಂಚವಾರ್ಷಿಕ ಯೋಜನೆಯ ವಿಫಲತೆಗೆ ಕಾರಣಗಳು – **ಭಾರತ–ಚೀನಾ ಯುದ್ಧ, ಭಾರತ–ಪಾಕ್ ಯುದ್ಧ ಇದರಿಂದ ರಕ್ಷಣಾ ವೆಚ್ಚ ಹೆಚ್ಚಳ ಹಾಗೂ ಮಾನ್ಸೂನ್ ಮಳೆ ಅಭಾವ**
- 4 ನೇ ಪಂಚವಾರ್ಷಿಕ ಯೋಜನೆಯ ವಿಫಲತೆಗೆ ಕಾರಣಗಳು – **ಭಾರತ–ಪಾಕ್ ಯುದ್ಧ ಇದರಿಂದ ರಕ್ಷಣಾ ವೆಚ್ಚ ಹೆಚ್ಚಳ, ಮಾನ್ಸೂನ್ ಮಳೆ ಅಭಾವ & ಬಂಗಾಳದ ನಿರಾಶ್ರಿತರ ಸಮಸ್ಯೆ**
- ಭಾರತದ ಕೂಲಿ ನೀತಿಯು ಆಧಾರವಾಗಿರುವುದು – **ಜೀವನ ವೆಚ್ಚದ ಮೇಲೆ**
- ಕಾರ್ಮಿಕರು ಒಂದು ಉದ್ಯೋಗದಿಂದ ಇನ್ನೊಂದು

ಉದ್ಯೋಗಕ್ಕೆ ವಲಸೆ ಹೋದ ಸಂದರ್ಭದಲ್ಲಿ ಸೃಷ್ಟಿಯಾದ ನಿರುದ್ಯೋಗ – **ಘರ್ಷಣಾತ್ಮಕ**

- ಭಾರತದ ಆರ್ಥಿಕತೆಯಲ್ಲಿ ಹೆಚ್ಚು ಕಂಡು ಬರುವ ನಿರುದ್ಯೋಗದ ಪ್ರಕಾರ – **ಮರೆ ಮಾಚಿದ ನಿರುದ್ಯೋಗ**
- ಭಾರತದಲ್ಲಿ ಮರೆಮಾಚಿದ ನಿರುದ್ಯೋಗ ಸ್ವರೂಪ ಹೆಚ್ಚು ಕಂಡು ಬರಲು ಕಾರಣ – **ಕೃಷಿ ವಲಯ & ಗ್ರಾಮೀಣ ವಲಯ ಹೆಚ್ಚಾಗಿರುವುದು.**
- ಭಾರತದಲ್ಲಿ ಮರೆಮಾಚಿದ ನಿರುದ್ಯೋಗ ಸ್ವರೂಪ ಗ್ರಾಮೀಣ ಪ್ರದೇಶದಲ್ಲಿ ಹೆಚ್ಚು ಕಂಡು ಬರಲು ಕಾರಣ – **ದೇಶದಲ್ಲಿ ತಾಂತ್ರಿಕ ಅಭಿವೃದ್ಧಿಯ ಮಟ್ಟ ಕಡಿಮೆ.**
- ಅಭಿವೃದ್ಧಿ ಶೀಲ ರಾಷ್ಟ್ರಗಳಲ್ಲಿ ನಿರುದ್ಯೋಗ ಸಾಮಾನ್ಯವಾಗಿರಲು ಕಾರಣ – **ಪೂರಕ ಉತ್ಪಾದನಾಂಗಗಳ ಕೊರತೆ**
- ಚಕ್ರೀಯ ನಿರುದ್ಯೋಗ ಕಂಡು ಬರಲು ಮುಖ್ಯ ಕಾರಣ – **ಆರ್ಥಿಕತೆಯಲ್ಲಿ ವ್ಯಾಪಾರಿ ಚಕ್ರಗಳ ಏರಿಳಿತ**
- ಭಾರತದ ಯೋಜನಾ ಆಯೋಗದ ಪ್ರಕಾರ ಬಡತನ ರೇಖೆ ವ್ಯಾಖ್ಯಾನ ಆಧಾರವಾಗಿರುವುದು – **ಕನಿಷ್ಠ ಅಗತ್ಯ ಆಹಾರ**
- ಭಾರತದಲ್ಲಿ ಸುರೇಶ್ ತೆಂಡೂಲ್ಕರ್ ಸಮಿತಿ ಸಂಬಂಧಿಸಿದ್ದು – **ಬಡತನ ರೇಖೆ ಅಂದಾಜು**
- ನಿರಪೇಕ್ಷ ಬಡತನದ ಅರ್ಥ – **ಕನಿಷ್ಠ ಕ್ಯಾಲೋರಿ ಆಹಾರ ತೆಗೆದುಕೊಳ್ಳಲು ಅಸಾಧ್ಯವಾದ ಸ್ಥಿತಿ**
- ಮಹಾತ್ಮ ಗಾಂಧೀಜಿ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಫಲಾನುಭವಿಗಳ ಅರ್ಹತೆ – **ಗ್ರಾಮೀಣ ಪ್ರದೇಶದ ಎಸ್.ಸಿ, ಎಸ್.ಟಿ, ಬಿ.ಪಿ.ಎಲ್ ಕುಟುಂಬಗಳು, ಹಿಂದುಳಿದ ಕುಟುಂಬಗಳ ವಯಸ್ಕರು.**
- ಬಡತನ ಅಂತರದ ಅರ್ಥ – **ಬಡತನ ರೇಖೆಗಿಂತ ಕೆಳಗಿರುವವರ ನೈಜ ಆದಾಯ ಮಟ್ಟ & ಬಡತನ ರೇಖೆಯ ನಡುವಿನ ವ್ಯತ್ಯಾಸ.**
- ಕೂಲಿಗಾಗಿ ಕಾಳು ಕಾರ್ಯಕ್ರಮದ ಹೊಸ ಹೆಸರು – **ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಯೋಜನೆ (1980)**
- ಪ್ರಧಾನಮಂತ್ರಿ ಗ್ರಾಮೋದಯ ಯೋಜನೆಯ ಮುಖ್ಯ ಉದ್ದೇಶ – **ಪ್ರಾಥಮಿಕ ಶಿಕ್ಷಣ, ಆರೋಗ್ಯ, ಕುಡಿಯುವ ನೀರು, ವಸತಿ, ರಸ್ತೆ ಮುಂತಾದ ಗ್ರಾಮೀಣ ಮೂಲಸೌಕರ್ಯ ಒದಗಿಸುವುದು.**
- DWACRA ಸಂಬಂಧಿಸಿರುವುದು – **ಗ್ರಾಮೀಣ ಪ್ರದೇಶದ ಮಹಿಳೆ & ಮಕ್ಕಳ ಅಭಿವೃದ್ಧಿ.**
- ಅಂತ್ಯೋದಯ ಕಾರ್ಯಕ್ರಮದ ಮುಖ್ಯ ಉದ್ದೇಶ – **ಬಡವರನ್ನು ಅಭಿವೃದ್ಧಿ ಪಡಿಸುವುದು.**
- ಕನಿಷ್ಠ ಅಗತ್ಯ ಕಾರ್ಯಕ್ರಮದ ಮುಖ್ಯ ಉದ್ದೇಶ – **ಬಡವರ ಜೀವನಮಟ್ಟ ಸುಧಾರಿಸುವುದು & ಆರೋಗ್ಯ ಶಿಕ್ಷಣವನ್ನು ಉತ್ತೇಜಿಸುವುದು.**
- ಕಪ್ಪು ಹಲಗೆ ಕಾರ್ಯಾಚರಣೆಯ ಮುಖ್ಯ ಉದ್ದೇಶ – **ಶಾಲಾ ಮೂಲ ಸೌಕರ್ಯ ಒದಗಿಸುವುದು.**
- **ಸ್ವರ್ಣ ಜಯಂತಿ ಸ್ವರೋಜ್‌ಗಾರ್ ಯೋಜನೆ** IRDP, TRYSEM, DWACRA ಕಾರ್ಯಕ್ರಮಗಳ ವಿಲೀನವಾಗಿದೆ.
- ಹಣದುಬ್ಬರದ ಅಂತರ – **ಪೂರ್ಣ ಉದ್ಯೋಗ ಮಟ್ಟದಲ್ಲಿ ಸಮಗ್ರ ಬೇಡಿಕೆಯು ಸಮಗ್ರ ಪೂರೈಕೆಗಿಂತ ಹೆಚ್ಚಾಗಿರುವುದು.**
- ಹಣದುಬ್ಬರಕ್ಕೆ ಮುಖ್ಯ ಕಾರಣ – **ಹಣದ ಪೂರೈಕೆ ಹೆಚ್ಚಳ & ಉತ್ಪಾದನೆಯ ಕುಂಠಿತ.**
- ಆರ್ಥಿಕ ಸುಧಾರಣೆಗಳ ನಂತರದ ಅವಧಿಯಲ್ಲಿ ಕನಿಷ್ಠ ಹಣದುಬ್ಬರ ದಾಖಲಾಗಿರುವ ವರ್ಷ – **1999–2000**
- ವೆಚ್ಚ ತಳ್ಳಿಕೆಯ ಹಣದುಬ್ಬರಕ್ಕೆ ಮುಖ್ಯ ಕಾರಣ – **ಪರೋಕ್ಷ ತೆರಿಗೆ ಪದ್ಧತಿ ಅಧಿಕವಾಗಿರುವುದು.**
- ದೇಶದಲ್ಲಿ ಪ್ರಸ್ತುತ ಕಂಡು ಬರುತ್ತಿರುವ ಹಣದುಬ್ಬರದ ಸ್ವರೂಪ – **ವೆಚ್ಚ ತಳ್ಳಿಕೆ ಹಣದುಬ್ಬರ.**
- ಭಾರತದಲ್ಲಿ ಹಣದುಬ್ಬರವನ್ನು ನಿಯಂತ್ರಿಸಲು ಕೈಗೊಳ್ಳಬೇಕಾದ ಸರ್ಕಾರದ ಮುಖ್ಯ ಕ್ರಮ – **ಬಜೆಟ್ ಕೊರತೆ & ಅನುತ್ಪಾದಕ ವೆಚ್ಚದ ನಿಯಂತ್ರಣ**
- ಅಪಮೌಲ್ಯೀಕರಣದ ಅರ್ಥ – **ಸ್ವದೇಶಿ ನಾಣ್ಯದ ಬಾಹ್ಯ ಮೌಲ್ಯವನ್ನು ವಿದೇಶಿ ಕರೆನ್ಸಿಗೆ ಹೋಲಿಸಿದಂತೆ ಉದ್ದೇಶ ಪೂರ್ವಕವಾಗಿ ಕಡಿಮೆ ಮಾಡುವುದು.**
- ಭಾರತದಲ್ಲಿ ಹಣಕಾಸು ನೀತಿಯನ್ನು ರೂಪಿಸುವವರು – **ಆರ್.ಬಿ.ಐ**
- ದೇಶದ 1 ರೂ. ನೋಟಿನ ಮೇಲೆ **ಕೇಂದ್ರ ಹಣಕಾಸು ಸಚಿವಾಲಯದ ಕಾರ್ಯದರ್ಶಿ** ಸಹಿ ಇರುತ್ತದೆ.
- ಭಾರತದಲ್ಲಿ ದಶಮಾಂಶ ಕರೆನ್ಸಿ ವ್ಯವಸ್ಥೆ ಅನುಷ್ಠಾನಕ್ಕೆ ಬಂದ ವರ್ಷ – **1957**
- ಅಂತರಾಷ್ಟ್ರೀಯ ಪಾವತಿಗಾಗಿ ಭಾರತದ ಕರೆನ್ಸಿ ಸಂಪರ್ಕ ಹೊಂದಿರುವುದು – **ಅಮೆರಿಕನ್ ಡಾಲರ್**
- ಭಾರತದ 100 ರೂ. ನೋಟಿನ ಮೇಲೆ ಇರುವ ಭಾಷೆಗಳ ಸಂಖ್ಯೆ – **17 (15 ಪ್ರಾದೇಶಿಕ ಭಾಷೆಗಳು. ಇದರಲ್ಲಿ ಕನ್ನಡ ಭಾಷೆ 4ನೇ ಸ್ಥಾನದಲ್ಲಿದೆ. ಹಿಂದಿ & ಇಂಗ್ಲೀಷ್ ಸೇರಿ 17 ಭಾಷೆಗಳು)**
- **ರೂಪಾಯಿಯ ಪರಿವರ್ತನೆ** ಅರ್ಥ – ವಿದೇಶದ ಪ್ರಮುಖ ಕರೆನ್ಸಿಗೆ ಹೋಲಿಸಿದಂತೆ ಭಾರತದ ರೂಪಾಯಿಯನ್ನು ಮುಕ್ತವಾಗಿ ಪರಿಗಣಿಸಲು ಅವಕಾಶ ಕಲ್ಪಿಸುವುದು

- ಕಪ್ಪು ಹಣದ ಅರ್ಥ – ತೆರಿಗೆಯ ವ್ಯಾಪ್ತಿಗೆ ಒಳಪಡದ ಹಣ.
- ಭಾರತದಲ್ಲಿ ಸಂಕುಚಿತ & ವಿಶಾಲ ಹಣವನ್ನು ತಿಳಿಸುವುದು – ಕ್ರಮವಾಗಿ M1, M3
- ಭಾರತದಲ್ಲಿ ಆರ್.ಬಿ.ಐ ನೋಟುಗಳನ್ನು ಮುದ್ರಿಸಲು ಅನುಸರಿಸುವ ಪದ್ಧತಿ – ಕನಿಷ್ಠ ಆಪದ್ಧನ ಮೀಸಲು
- ರೂಪಾಯಿ ಅಪಮೌಲ್ಯೀಕರಣದ ಮುಖ್ಯ ಉದ್ದೇಶ – ಆಮದು ಬದಲೀಕರಣಕ್ಕೆ ಉತ್ತೇಜನ & ರಫ್ತು ವ್ಯಾಪಾರದ ಪ್ರೋತ್ಸಾಹ.
- ಭಾರತದ ರೂಪಾಯಿ ಪೂರ್ಣ ಪರಿವರ್ತನೆ ಹೊಂದಿರುವುದು – ಪಾವತಿ ಶಿಲ್ಕಿನ ಚಾಲ್ತಿ ಖಾತೆಯಲ್ಲಿ ಮಾತ್ರ.
- ಹಣದುಬ್ಬರದ ಅರ್ಥ – ಸರಕುಗಳ ಬೆಲೆ ಹೆಚ್ಚಳ & ಹಣದ ಮೌಲ್ಯದ ಕುಸಿತ.
- ಹಣದುಬ್ಬರದೊಂದಿಗೆ ನಿರುದ್ಯೋಗ ದರ ಹೆಚ್ಚಳವಾಗುವ ಸನ್ನಿವೇಶ – **Stagflation**
- ಭಾರತದಲ್ಲಿ ಹಣದುಬ್ಬರದ ವಿರುದ್ಧ ಪ್ರತಿಭಟಿಸದವರು – ಕೃಷಿ ಕಾರ್ಮಿಕರು.
- ಆರ್ಥಿಕತೆಯಲ್ಲಿ ಸಮಗ್ರ ಬೇಡಿಕೆಯು ಸಮಗ್ರ ಪೂರೈಕೆಗಿಂತ ಹೆಚ್ಚಳವಾಗುವುದರಿಂದ ಸಾಮಾನ್ಯ ಬೆಲೆ ಮಟ್ಟಗಳಲ್ಲಾಗುವ ಬದಲಾವಣೆ ತಿಳಿಸುವುದು. – ಬೇಡಿಕೆ ಸೆಳೆತ ಹಣದುಬ್ಬರ.
- ಅಧಿಕ ಹಣದುಬ್ಬರವು ದೇಶದ ಪಾವತಿ ಶಿಲ್ಕನ್ನು ಪ್ರತಿಕೂಲವನ್ನಾಗಿಸುತ್ತದೆ ಏಕೆಂದರೆ ರಫ್ತುಗಳ ಬೆಲೆ ಹೆಚ್ಚಳವಾಗುವುದರಿಂದ ವಿದೇಶಿ ಮಾರುಕಟ್ಟೆಯಲ್ಲಿ ಪೈಪೋಟಿ ಕುಂಠಿತವಾಗುತ್ತದೆ.
- ಹಣದುಬ್ಬರವು ಸರ್ಕಾರದ ತೆರಿಗೆ ಆದಾಯದ ಮೇಲೆ ಬೀರುವ ಪರಿಣಾಮವನ್ನು ತಿಳಿಸುವ ಸನ್ನಿವೇಶ – **Fiscal Drag**
- ಭಾರತ ಸಂವಿಧಾನದ ಪ್ರಕಾರ ಸಾರ್ವಜನಿಕ ನಿಧಿಯನ್ನು ಪಡೆಯುವ & ಹಂಚಿಕೆ ಮಾಡುವುದು – ಕೇಂದ್ರ & ರಾಜ್ಯ ಸರ್ಕಾರಗಳ ನಡುವೆ ಹಂಚಿಕೆ.
- ದೇಶದ ಸಗಟು ಬೆಲೆ ಸೂಚ್ಯಂಕದಲ್ಲಿ ಒಳಪಟ್ಟಿರುವ ಮುಖ್ಯ ಸರಕುಗಳೆಂದರೆ – ಪ್ರಾಥಮಿಕ ಉತ್ಪನ್ನಗಳು, ತಯಾರಿಕಾ ಉತ್ಪನ್ನಗಳು, ಇಂಧನ, ಶಕ್ತಿ & ಪೆಟ್ರೋಲಿಯಂ ಉತ್ಪನ್ನಗಳು
- 'ಕಾಗದದ ಚಿನ್ನ' ಎಂದು ಕರೆಯಲ್ಪಡುವುದು – ವಿಶೇಷ ಸ್ವೀಕಾರದ ಹಕ್ಕುಗಳು (SDR)
- ಆರ್ಥಿಕತೆಯಲ್ಲಿ ಕಡಿಮೆ ಅಂತರದಲ್ಲಿ ಹಿಂಜರಿತ ಸನ್ನಿವೇಶ ಸಂಭವಿಸುವುದು – ಆಳವಾದ ಹಿಂಜರಿತ
- ಗೂಳಿ & ಕರಡಿ ಪ್ರವೃತ್ತಿಗಳು ಸಂಬಂಧಿಸಿರುವುದು – ಷೇರು ಮಾರುಕಟ್ಟೆ
- ಭಾರತದ ಮೊಟ್ಟ ಮೊದಲ ವಾಣಿಜ್ಯ ಬ್ಯಾಂಕು – ಹಿಂದ್ ಬ್ಯಾಂಕ್
- ಆರ್.ಬಿ.ಐ ಮುದ್ರೆಯಲ್ಲಿರುವ ಪ್ರಾಣಿಯ ಹೆಸರು – ಪಂತರ್
- ಭಾರತೀಯ ವಿಮಾ ಕ್ಷೇತ್ರದ ನಿಯಂತ್ರಕ ಸಂಸ್ಥೆ – ಭಾರತೀಯ ವಿಮಾ ನಿಯಂತ್ರಣಾ ಪ್ರಾಧಿಕಾರ.
- ಆರ್.ಬಿ.ಐ ನ ಪರಿಶಿಷ್ಟ ಬ್ಯಾಂಕುಗಳ ಪಟ್ಟಿಯಲ್ಲಿ ಸೇರ್ಪಡೆಯಾಗಲು ಹೊಂದಿರಬೇಕಾದ ಮೂಲ ಬಂಡವಾಳ – 5 ಲಕ್ಷ ಅಥವಾ ಅದಕ್ಕಿಂತ ಕಡಿಮೆ.
- ಭಾರತದ ಅತ್ಯಂತ ದೊಡ್ಡ ಸಾರ್ವಜನಿಕ ವಲಯದ ಬ್ಯಾಂಕು – ಎಸ್.ಬಿ.ಐ
- ಭಾರತದ ಅತ್ಯಂತ ದೊಡ್ಡ ಖಾಸಗಿ ವಲಯದ ಬ್ಯಾಂಕು – ಐ.ಸಿ.ಐ.ಸಿ.ಐ
- ಆರ್.ಬಿ.ಐ ನ್ನು ಕೇಂದ್ರ ಸರ್ಕಾರ ತನ್ನ ನಿಯಂತ್ರಣಕ್ಕೆ ತೆಗೆದುಕೊಂಡ ವರ್ಷ (ರಾಷ್ಟ್ರೀಕರಣ) – 1949 ಜನವರಿ 1
- ದೇಶದಲ್ಲಿ ಹಣಕಾಸು ಮಾಹಿತಿಯನ್ನು ಸಂಗ್ರಹಿಸಿ ಪ್ರಕಟ ಪಡಿಸುವ ಜವಾಬ್ದಾರಿ ಹೊಂದಿರುವ ಸಂಸ್ಥೆ – ಆರ್.ಬಿ.ಐ
- ನರಸಿಂಹನ್ ಸಮಿತಿಯ ಶಿಫಾರಸ್ಸಿನ ಮೇರೆಗೆ ವಿಲೀನಗೊಂಡ ರಾಷ್ಟ್ರೀಕೃತ ಬ್ಯಾಂಕುಗಳು – ಪಂಜಾಬ್ ನ್ಯಾಷನಲ್ ಬ್ಯಾಂಕ್ & ನ್ಯೂ ಬ್ಯಾಂಕ್ ಆಫ್ ಇಂಡಿಯಾ
- ಬಂಡವಾಳ ಮಾರುಕಟ್ಟೆಯಲ್ಲಿ ಭಾಗವಹಿಸಿರುವ ವಿವಿಧ ಮಾರುಕಟ್ಟೆ ಪ್ರತಿನಿಧಿಗಳನ್ನು ತಿಳಿಸುವ ಪದ – ಸ್ವ ನಿಯಂತ್ರಣ ಸಂಘಟನೆ
- Gilt Edged Securities ಸಂಬಂಧಿಸಿರುವುದು – ಸರ್ಕಾರದ ಸಾಲ ಪತ್ರಗಳ ವ್ಯವಹಾರ.
- ಆರ್.ಬಿ.ಐ ನ ಬ್ಯಾಂಕ್ ದರದ ಅರ್ಥ – ಕೇಂದ್ರ ಬ್ಯಾಂಕಿನಿಂದ ವಾಣಿಜ್ಯ ಬ್ಯಾಂಕುಗಳ ಪಡೆಯುವ ಸಾಲದ ಮೇಲೆ ವಿಧಿಸುವ ಬಡ್ಡಿ ದರ.
- ರಾಷ್ಟ್ರೀಯ ಷೇರು ವಿನಿಮಯ ಮಾರುಕಟ್ಟೆ ಕೇಂದ್ರ ಇರುವುದು – ಮುಂಬೈ
- ವಾಣಿಜ್ಯ ಬ್ಯಾಂಕುಗಳು ಸಾರ್ವಜನಿಕರಿಂದ ಸಂಗ್ರಹಿಸಿದ ಠೇವಣಿ ಹಣದಲ್ಲಿ ನಿರ್ದಿಷ್ಟ ಮೊತ್ತವನ್ನು ತಮ್ಮಲ್ಲಿಯೇ ಇಟ್ಟುಕೊಳ್ಳುವುದನ್ನು ತಿಳಿಸುವುದು – ಶಾಸನ ಬದ್ಧ ದ್ರವ್ಯತೆ ಅನುಪಾತ (Statutory Liquidity Ratio)
- ದೇಶದಲ್ಲಿ ಅತಿ ಹೆಚ್ಚು ವಾಣಿಜ್ಯ ಬ್ಯಾಂಕುಗಳು ರಾಷ್ಟ್ರೀಕೃತಗೊಂಡ ವರ್ಷ – 1969

- ವಾಣಿಜ್ಯ ಬ್ಯಾಂಕುಗಳು ಸಾರ್ವಜನಿಕರಿಂದ ಸಂಗ್ರಹಿಸಿದ ಠೇವಣಿ ಹಣದಲ್ಲಿ ನಿರ್ದಿಷ್ಟ ಮೊತ್ತವನ್ನು ಆರ್.ಬಿ.ಐ ನಲ್ಲಿ ಇಡುವುದನ್ನು ತಿಳಿಸುವುದು – ನಗದು ಮೀಸಲು ಅನುಪಾತ (Cash Reserve Ratio)
- ರೆಪೋದರದ ಅರ್ಥ – ವಾಣಿಜ್ಯ ಬ್ಯಾಂಕುಗಳು ಆರ್.ಬಿ.ಐ ನಿಂದ ಪಡೆಯುವ ಸಾಲದ ಮೇಲಿನ ಅಲ್ಪಾವಧಿ ಬಡ್ಡಿದರ.
- ರಿವರ್ಸ್ ರೆಪೋದರದ ಅರ್ಥ – ವಾಣಿಜ್ಯ ಬ್ಯಾಂಕುಗಳು ಆರ್.ಬಿ.ಐ ಗೆ ನೀಡುವ ಸಾಲದ ಮೇಲಿನ ಅಲ್ಪಾವಧಿ ಬಡ್ಡಿದರ.
- ಭಾರತದ ಅತ್ಯಂತ ಹಳೆಯ ಅಭಿವೃದ್ಧಿ ಹಣಕಾಸು ಸಂಸ್ಥೆ – IFCI – Indian Financial Corporation of India
- ಭಾರತದಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಸ್ಥಾಪನೆಯಾದ ವರ್ಷ – 1975 ಅಕ್ಟೋಬರ್ 2
- ಭಾರತದ ಕೈಗಾರಿಕಾ ಹಣಕಾಸು ವ್ಯವಸ್ಥೆಯ ಅಪೆಕ್ಸ್ ಸಂಸ್ಥೆ – Industrial Development Bank of India - IDBI
- EXIM ಬ್ಯಾಂಕ್ ಸ್ಥಾಪನೆ – 1982 (ರಫ್ತುಗಳನ್ನು ಉತ್ತೇಜಿಸುವ & ಆಮದು ನಿಯಂತ್ರಿಸುವ ಉದ್ದೇಶ)
- ಷೇರುದಾರರು & ಡಿಬೆಂಚರುದಾರರ ಮುಖ್ಯ ವ್ಯತ್ಯಾಸ – ಷೇರುದಾರರು ಕಂಪನಿಯ ಮಾಲೀಕರು & ಡಿಬೆಂಚರು ದಾರರು ಕಂಪನಿಯ ಸಾಲಿಗರು
- ಭಾರತದ ಬಂಡವಾಳ ಮಾರುಕಟ್ಟೆಯ ವ್ಯವಹಾರದ ನಿಯಂತ್ರಕ ಸಂಸ್ಥೆ – ಸೆಬಿ
- ಇಂಪೀರಿಯಲ್ ಬ್ಯಾಂಕ್ ಆಫ್ ಇಂಡಿಯಾ ರಾಷ್ಟ್ರೀಕರಣಗೊಂಡ ನಂತರದ ಹೆಸರು – ಎಸ್.ಬಿ.ಐ
- ಕೇಂದ್ರ ಬ್ಯಾಂಕು ನಗದು ಮೀಸಲು ಅನುಪಾತವನ್ನು ಕಡಿಮೆ ಮಾಡಿದುದರ ಪರಿಣಾಮ – ಪತ್ತು ಸೃಷ್ಟಿ ಹೆಚ್ಚಳ
- ಈಕ್ವಿಟಿ ಪದದ ಅರ್ಥ – ಕಂಪನಿಯ ಷೇರುದಾರರು ತಮ್ಮ ಷೇರು ಬಂಡವಾಳದ ಮೇಲೆ ಹೊಂದಿರುವ ಮತದಾನದ ಹಕ್ಕು ತಿಳಿಸುವ ಪತ್ರ.
- ನಾಯಿಯ ಮುದ್ರೆಯನ್ನು ಹೊಂದಿದ್ದು Faithfull Friendly ಧ್ಯೇಯವಾಕ್ಯ ಹೊಂದಿರುವ ಸಾರ್ವಜನಿಕ ವಲಯದ ಬ್ಯಾಂಕು – ಸಿಂಡಿಕೇಟ್ ಬ್ಯಾಂಕು
- ಭಾರತದ ಅತ್ಯಂತ ಹಳೆಯ ಷೇರು ಪೇಟೆ – ಬಿ.ಎಸ್.ಇ
- ತೆರಿಗೆಯ ಆಘಾತ & ಹೊರೆ ಎರಡೂ ಒಬ್ಬ ವ್ಯಕ್ತಿ ಮೇಲೆ ಬೀಳುವಂತಿದ್ದರೆ – ಪ್ರತ್ಯಕ್ಷ ತೆರಿಗೆ.
- ದೇಶದ ಆರ್ಥಿಕ ಬೆಳವಣಿಗೆ ದರವನ್ನು ಅಂದಾಜಿಸುವುದು – ರಾಷ್ಟ್ರೀಯ ವರಮಾನದ ಮೇಲೆ
- ದೇಶದ ಜೀವನದ ಗುಣಮಟ್ಟ ಅಂದಾಜಿಸುವುದು – ತಲಾ ವರಮಾನದ ಮೇಲೆ
- ಭಾರತದಲ್ಲಿ ಆಂತರಿಕ ಉಳಿತಾಯಕ್ಕೆ ಹೆಚ್ಚು ಕೊಡುಗೆ ಕೊಡುತ್ತಿರುವ ಕ್ಷೇತ್ರ – ಕುಟುಂಬ ವಲಯ
- ಭಾರತದಲ್ಲಿ ವಿತ್ತೀಯ ನೀತಿಯನ್ನು ರೂಪಿಸುವವರು – ಕೇಂದ್ರ ಸರ್ಕಾರ.
- ಭಾರತದಲ್ಲಿ ಬಾಹ್ಯ ವಾಣಿಜ್ಯ ಸಾಲಗಳ ತೀರುವಳಿ ಮಾಡುವ ನಿಯಂತ್ರಣ ಪ್ರಾಧಿಕಾರ ಸಂಸ್ಥೆ – ಆರ್.ಬಿ.ಐ
- ಭಾರತದಲ್ಲಿ ಶೂನ್ಯ ಆಧಾರಿತ ಆಯವ್ಯಯವನ್ನು ಮೊದ ಬಾರಿಗೆ ರೂಪಿಸಿದ್ದು, – 1987 ಏಪ್ರಿಲ್
- ಸಮತೂಕದ ಬೆಳವಣಿಗೆ ಅರ್ಥ – ಆರ್ಥಿಕತೆಯ ಎಲ್ಲಾ ವಲಯಗಳ ಮೇಲೆ ಏಕ ಕಾಲದಲ್ಲಿ ಹೂಡಿಕೆ ಮಾಡಿ ಬೆಳವಣಿಗೆ ಸಾಧಿಸುವುದು.
- ಭಾರತದಲ್ಲಿ ರೈಲ್ವೆ ಬಜೆಟ್ & ಸಾಮಾನ್ಯ ಬಜೆಟ್‌ನ್ನು ಪ್ರತ್ಯೇಕವಾಗಿ ಮಂಡಿಸಿದ್ದು – 1924–25
- ಭಾರತದಲ್ಲಿ ರೈಲ್ವೆ ಬಜೆಟ್ & ಸಾಮಾನ್ಯ ಬಜೆಟ್‌ನ್ನು ವಿಲೀನ ಮಾಡಿ ಮಂಡಿಸಿದ್ದು – 2017–18
- ಭಾರತದಲ್ಲಿ ರಾಷ್ಟ್ರೀಯ ವರಮಾನದ ವ್ಯವಸ್ಥಿತ ಅಂದಾಜು ಮಾಡಿದ ಮೊದಲ ಅರ್ಥಶಾಸ್ತ್ರಜ್ಞ – ವಿ.ಕೆ. ಆರ್.ವಿ. ರಾವ್
- ಭಾರತದ ರಾಷ್ಟ್ರೀಯ ಆದಾಯ ಸಮಿತಿ ಅಧ್ಯಕ್ಷರಾಗಿದ್ದವರು – ಪಿ.ಸಿ. ಮಹಲನೋಬಿಸ್
- ಭಾರತದ ರಾಷ್ಟ್ರೀಯ ಆದಾಯವನ್ನು ಅಂದಾಜು ಮಾಡುವವರು – ಕೇಂದ್ರೀಯ ಸಾಂಖ್ಯಿಕ ಸಂಸ್ಥೆ
- ದೇಶದ ಉಳಿತಾಯ ಹೂಡಿಕೆಗಿಂತ ಅಧಿಕವಾದಾಗ ರಾಷ್ಟ್ರೀಯ ವರಮಾನವು – ಸ್ಥಿರವಾಗಿರುತ್ತದೆ.
- Reflation ಪದದ ಅರ್ಥ – ಆರ್ಥಿಕ ಮುಗ್ಗಟ್ಟಿನಿಂದ ಆರ್ಥಿಕತೆ ಚೇತರಿಕೆಗೊಳ್ಳುವ ಸನ್ನಿವೇಶ.
- ಸಾರ್ವಜನಿಕ ವಲಯದಲ್ಲಿ ಬಂಡವಾಳ ಹೂಡಿಕೆ ಸಂಬಂಧಿಸಿರುವುದು – ಬಂಡವಾಳ ವೆಚ್ಚದಲ್ಲಿ
- ಆಯವ್ಯಯ ಕೊರತೆಯ ಅರ್ಥ – ಸರ್ಕಾರದ ಒಟ್ಟು ವೆಚ್ಚವು ಅದರ ಒಟ್ಟು ಆದಾಯಕ್ಕಿಂತ ಹೆಚ್ಚಾಗಿರುವುದು.
- ವಿತ್ತೀಯ ಕೊರತೆಯ ಅರ್ಥ – ಸರ್ಕಾರದ ಬಜೆಟ್ ಕೊರತೆಯ ಜೊತೆಗೆ ಸರ್ಕಾರದ ನಿವ್ವಳ ಸಾಲವನ್ನು ತಿಳಿಸುತ್ತದೆ.
- ಆಕ್ಟ್ರಾಯ್ (ಪ್ರವೇಶ ಸುಂಕ) ಸುಂಕವನ್ನು ವಿಧಿಸುವುದು & ಸಂಗ್ರಹಿಸುವುದು – ಸ್ಥಳೀಯ ಸರ್ಕಾರಗಳು
- ಕೇಂದ್ರ ಅಬಕಾರಿ ಸುಂಕವನ್ನು ವಿಧಿಸಲ್ಪಡುವುದು – ವಸ್ತುಗಳ ಉತ್ಪಾದನೆಯ ಮೇಲೆ
- ಕಾರ್ಪೋರೇಟ್ ಸುಂಕವನ್ನು ವಿಧಿಸಲ್ಪಡುವುದು – ಕಂಪನಿಗಳ ಆದಾಯದ ಮೇಲೆ

# ವಿವಿಧ ವರ್ಷಗಳಲ್ಲಿ ಐ.ಎ.ಎಸ್ ಪೂರ್ವಭಾವಿ ಪರೀಕ್ಷೆಯಲ್ಲಿ ಕೇಳಲಾದ ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಪ್ರಶ್ನೆಗಳು

**ಭಾರತೀಯ ನವೀಕರಿಸಬಲ್ಲ ಶಕ್ತಿ ಅಭಿವೃದ್ಧಿ ಏಜೆನ್ಸಿ ಲಿಮಿಟೆಡ್ (IREDA - Indian Renewable Energy Development Agence Limited) ಗೆ ಸಂಬಂಧಿಸಿದಂತೆ ಸರಿಯಾದ ಹೇಳಿಕೆಗಳು:**

- ಇದೊಂದು ಸಾರ್ವಜನಿಕ ನಿಗಮಿತ ಸರ್ಕಾರಿ ಕಂಪನಿ
- ಇದೊಂದು ಬ್ಯಾಂಕೇತರ ಹಣಕಾಸಿನ ಕಂಪನಿ

**ಐ.ಆರ್.ಇ.ಡಿ.ಎ ಬಗ್ಗೆ ಹೆಚ್ಚಿನ ಮಾಹಿತಿ:-**

- ನೂತನ ಮತ್ತು ನವೀಕರಿಸಬಲ್ಲ ಶಕ್ತಿ ಸಚಿವಾಲಯವನ್ನು 2015 ರಲ್ಲಿ ಮಿನಿರತ್ನ (ವರ್ಗ–1) ಸ್ಥಾನಮಾನ ನೀಡಿದೆ. 1987 ರಲ್ಲಿ ನವೀಕರಿಸಲು ಶಕ್ತಿಗೆ ಮತ್ತು ಶಕ್ತಿ ಸಾಮರ್ಥ್ಯ ಹೆಚ್ಚಿಸುವ/ಸಂರಕ್ಷಣಾ ಯೋಜನೆಗೆ ಹಣಕಾಸಿನ ನೆರವು ವಿಸ್ತರಿಸಲು ಸ್ಥಾಪಿಸಲಾಯಿತು.
- ಇದರ ಧ್ಯೇಯವಾಕ್ಯ:– **Energy for Ever**

**ಭಾರತೀಯ ಆರ್ಥಿಕತೆಗೆ ಸಂಬಂಧಿಸಿದಂತೆ ಸರಿಯಾದ ಹೇಳಿಕೆ:-**

- ಮಾರುಕಟ್ಟೆ ಬೆಲೆಯಲ್ಲಿ (ರೂಪಾಯಿಗಳಲ್ಲಿ)
- ನಿವ್ವಳ ರಾಷ್ಟ್ರೀಯ ಉತ್ಪನ್ನ (GDP) ಕಳೆದ ದಶಕಗಳಿಂದ ನಿಧಾನವಾಗಿ ಹೆಚ್ಚಾಗುತ್ತಿದೆ.

**ಸೀಡ್ ವಿಲೇಜ್ ಪರಿಕಲ್ಪನೆ ಉದ್ದೇಶವನ್ನು ಸಮರ್ಥವಾಗಿ ವಿವರಿಸುವ ಹೇಳಿಕೆ ಯಾವುದು?**

- ರೈತರನ್ನು ಗುಣಮಟ್ಟದ ಬೀಜ ಉತ್ಪಾದನೆಯಲ್ಲಿ ತೊಡಗಿಸುವುದು ಮತ್ತು ಸೂಕ್ತವಾದ ಕಾಲದಲ್ಲಿ ಸೂಕ್ತವಾದ ಬೆಲೆಗೆ ಗುಣಮಟ್ಟದ ಬೀಜ ದೊರೆಯುವಂತೆ ಮಾಡುವುದು.

**ವರ್ಷದಿಂದ ವರ್ಷಕ್ಕೆ ನಿರಂತರವಾಗಿ ಕೊರತೆ ಬಜೆಟ್ ಕಂಡು ಬಂದಾಗ ಸರ್ಕಾರವು ಕೊರತೆ ಕಡಿಮೆ ಮಾಡಲು ಸರ್ಕಾರ ಕೈಗೊಳ್ಳುವ ಕ್ರಮಗಳು**

- ರೆವಿನ್ಯೂ ವೆಚ್ಚ (Revenue Expenditure) ನ್ನು ಕಡಿಮೆ ಮಾಡುವುದು ಮತ್ತು ಸಬ್ಸಿಡಿಗಳ ತರ್ಕಬದ್ಧತೆ (Rationalising Subsidies)

**ಕಬ್ಬಿಗೆ ನ್ಯಾಯಯುತ ಮತ್ತು ಲಾಭದಾಯಕ ಬೆಲೆ ಅನುಮೋದಿಸುವವರು**

- ಆರ್ಥಿಕ ವಿದ್ಯಮಾನದ ಸಂಪುಟ ಸಮಿತಿ (Cabinet Committee on Economic Affairs)
- **ವಿವರಣೆ:–** 1966 ರ ಕಬ್ಬು (ನಿಯಂತ್ರಣ) ಆದೇಶದ ತಿದ್ದುಪಡಿ 2009 ಅಕ್ಟೋಬರ್ 22 ರಂದು ಮಾಡಿದ್ದು, ಸ್ಥಾಯತ್ತತ ಕನಿಷ್ಠ ಬೆಲೆ (SMP) ಎಂಬ ಪರಿಕಲ್ಪನೆ ಬದಲಿಸಿ, 2009–10 ರಲ್ಲಿ ಕನಿಷ್ಠ & ನ್ಯಾಯಯುತ ಬೆಲೆ (FRP) ಹೇಳಲಾಯಿತು.
- ಕಬ್ಬಿನ ಬೆಂಬಲ ಬೆಲೆಯನ್ನು ಕೃಷಿ ವೆಚ್ಚ & ಬೆಲೆ ಆಯೋಗ (CACP) ಯ ಶಿಫಾರಸ್ಸಿನ ಮೇಲೆ ಕೇಂದ್ರ ಸರ್ಕಾರ ರಾಜ್ಯಗಳೊಂದಿಗೆ ಹಾಗೂ ಸಕ್ಕರೆ ಕೈಗಾರಿಕೆಯೊಂದಿಗೆ ನಿರ್ಧರಿಸುತ್ತದೆ ಮತ್ತು ಆರ್ಥಿಕ ವಿದ್ಯಮಾನದ ಸಂಪುಟ ಸಮಿತಿ ಅನುಮೋದಿಸುತ್ತದೆ.
- ದೇಶದ ಜಿ.ಡಿ.ಪಿ ಅನುಪಾತಕ್ಕಾಗಿ ತೆರಿಗೆ ಕಡಿಮೆ ಮಾಡುವುದು ಏನನ್ನು ಸೂಚಿಸುತ್ತದೆ.
- ರಾಷ್ಟ್ರೀಯ ಆದಾಯದ ಕಡಿಮೆ ಸಮಾನ ವಿತರಣೆ (Less Equitable Distribution of National Income)
- ಭಾರತೀಯ ಅರ್ಥವ್ಯವಸ್ಥೆಗೆ ಸಂಬಂಧಿಸಿದಂತೆ ಯಾವುದು ಹೊಂದುತ್ತದೆ.

**ತೆರೆದ ಮಾರುಕಟ್ಟೆ ಕಾರ್ಯಾಚರಣೆ ಮತ್ತು ಬ್ಯಾಂಕ್ ದರ**

- **ವಿವರಣೆ:–** ತೆರೆದ ಮಾರುಕಟ್ಟೆ ಕಾರ್ಯಾಚರಣೆ (Open Market Operation) ಎಂದರೆ ಆರ್.ಬಿ.ಐ ತೆರೆದ ಮಾರುಕಟ್ಟೆಯಲ್ಲಿ ಸರ್ಕಾರದ ಬಾಂಡ್‌ಗಳನ್ನು ಮಾರುವ ಅಥವಾ ಕೊಳ್ಳುವ ಚಟುವಟಿಕೆಯಾಗಿದೆ.
- ಬ್ಯಾಂಕ್‌ದರ ಎಂದರೆ ಕೇಂದ್ರೀಯ ಬ್ಯಾಂಕ್ (RBI) ತಾನು ನೀಡಿದ ಸಾಲ ಮತ್ತು ಮುಂಗಡಗಳಿಗೆ ವಾಣಿಜ್ಯ ಬ್ಯಾಂಕುಗಳಿಗೆ ವಿಧಿಸುವ ಬಡ್ಡಿದರ.

**ಭಾರತದಲ್ಲಿ ಹಣದುಬ್ಬರ (Inflation) ಕ್ಕೆ ಸಂಬಂಧಿಸಿದಂತೆ ಸಂಬಂಧಿಸಿದ ಸರಿಯಾದ ಹೇಳಿಕೆ**

- ಹಣ ಚಲಾವಣೆ ಕಡಿಮೆ ಮಾಡುವುದು ಹಣದುಬ್ಬರವನ್ನು ನಿಯಂತ್ರಿಸಲು ಸಹಕಾರಿಯಾಗಿದೆ.

**ಕೃಷಿ ಉತ್ಪಾದನೆಗೆ ಮರದ ನೇಗಿಲುಗಳ ಬದಲಿಗೆ ಉಕ್ಕಿನ ಬಳಕೆಯು ಯಾವುದರ ಉದಾಹರಣೆ:**

- ಬಂಡವಾಳ ತಾಂತ್ರಿಕತೆ ಪ್ರಕ್ರಿಯೆಯನ್ನು ಹೆಚ್ಚಿಸುವುದು (Capital - Augmenting Technological Progress)

Index of Eight Core Industries

✦ ಎಂಟು ಪ್ರಮುಖ ಕೈಗಾರಿಕೆಗಳ ಸೂಚ್ಯಂಕದಲ್ಲಿ ಯಾವ ಕೈಗಾರಿಕೆ ಅತಿ ಹೆಚ್ಚು ಆದ್ಯತೆ (Weightage) ನೀಡಲಾಗಿದೆ.

✦ ಉತ್ತರ:– ವಿದ್ಯುತ್ ಉತ್ಪಾದನೆ.

| ಪ್ರಮುಖ ಕೈಗಾರಿಕೆಗಳು | ಆದ್ಯತೆ |
|---|---|
| ಕಲ್ಲಿದ್ದಲು ಉತ್ಪಾದನೆ | 4.38% |
| ಕಚ್ಚಾ ತೈಲ | 5.22% |
| ಸ್ವಾಭಾವಿಕ ಅನಿಲ | 1.71% |
| ರಿಫೈನರಿ ಉತ್ಪನ್ನಗಳು | 0.93% |
| ರಸಗೊಬ್ಬರ ಉತ್ಪಾದನೆ | 1.25% |
| ಉಕ್ಕು ಉತ್ಪಾದನೆ | 6.68% |
| ಸಿಮೆಂಟ್ | 2.41% |
| ವಿದ್ಯುತ್ | 10.32% |

**ಭಾರತೀಯ ಸಾಗರ ರಿಮ್ ಅಸೋಸಿಯೇಷನ್‌ಗೆ ಸಂಬಂಧಿಸಿದಂತೆ ಯಾವ ಹೇಳಿಕೆ ಸೂಕ್ತವಾದುದು (IOR-ARC)**

✦ ಇದೊಂದು ಅಂತರಾಷ್ಟ್ರೀಯ ಸಂಘಟನೆಯಾಗಿದೆ.

✦ ಹಿಂದೂ ಮಹಾಸಾಗರದೊಂದಿಗೆ ಗಡಿ ಹೊಂದಿರುವ ಕರಾವಳಿ ದೇಶಗಳನ್ನು ಹೊಂದಿದೆ.

✦ 21 ಸದಸ್ಯ ರಾಷ್ಟ್ರಗಳನ್ನು ಹೊಂದಿದೆ.

✦ ಕೇಂದ್ರ ಕಛೇರಿ ಮಾರಿಷಸ್‌ನ ಎಬೆನ್ ಸೈಬರ್ ಸಿಟಿಯಲ್ಲಿದೆ.

✦ ಸ್ಥಾಪನೆ:– 1995 ಮಾರ್ಚ್‌ನಲ್ಲಿ ಸ್ಥಾಪನೆ.

✦ ಅಧಿಕೃತ ಉದ್ಘಾಟನೆ:– 1997 ಮಾರ್ಚ್ 7

✦ ಸದಸ್ಯ ರಾಷ್ಟಗಳ ನಡುವೆ ಸುಸ್ಥಿರ ಬೆಳವಣಿಗೆ & ಪ್ರಾದೇಶಿಕ ಬೆಳವಣಿಗೆ ಉಂಟು ಮಾಡುವುದು.

**ಭಾರತವು ಈ ಕೆಳಗಿನ ಸದಸ್ಯ ರಾಷ್ಟ್ರವಾಗಿದೆ.**

**ಪೂರ್ವ ಏಷ್ಯಾ ಸಮ್ಮೇಳನ (East Asia Summit) - ಸದಸ್ಯ ರಾಷ್ಟ್ರವಾಗಿ ಭಾರತ:-**

✦ ವಿವರಣೆ:– ಕೇಳಿದ ಪ್ರಶ್ನೆಯಲ್ಲಿ Asia-Pacific Economic Co-Operation ಇತ್ತು. ಇದರಲ್ಲಿ ಭಾರತ ಸದಸ್ಯ ರಾಷ್ಟ್ರವಲ್ಲ.

✦ Association of South East Asian Nation ಇತ್ತು. ಇದರಲ್ಲೂ ಭಾರತ ಸದಸ್ಯ ರಾಷ್ಟ್ರವಾಗಿಲ್ಲ.

**ಬಾಸೆಲ್ ಒಪ್ಪಂದ ಅಥವಾ ಸರಳ ಬಾಸೆಲ್ - III (Basel-III Accord):-**

✦ ಆರ್ಥಿಕ & ಹಣಕಾಸಿನ ಒತ್ತಡ ಹಾಗೂ ಅಪಾಯ ನಿರ್ವಹಣೆ ಮಾಡಲು ಬ್ಯಾಂಕಿಂಗ್ ವಲಯ ಸಾಮರ್ಥ್ಯ ಹೆಚ್ಚಿಸುವ ಬಗ್ಗೆ ವ್ಯವಹರಿಸುವುದು

✦ ಬಾಸೆಲ್ ಒಪ್ಪಂದಗಳು ಬ್ಯಾಂಕಿಂಗ್‌ನ ಮೂರು ಒಪ್ಪಂದಗಳು

✦ ಬ್ಯಾಂಕಿಂಗ್ ಮೇಲ್ವಿಚಾರಣೆಗೆ ಬಾಸೆಲ್ ಸಮಿತಿ (BCBS) ರಚಿಸಿದ ಒಪ್ಪಂದಗಳು

1ನೇ ಬಾಸೆಲ್ ಒಪ್ಪಂದ – 1998:– ಆರ್ಥಿಕ ಸಂಸ್ಥೆಗಳಲ್ಲಿ ಬಂಡವಾಳ ಸಮರ್ಪಕತೆ

2ನೇ ಬಾಸೆಲ್ ಒಪ್ಪಂದ – 2004:– ಬಾಸೆಲ್–1 ರ ಪುನರ್ ನವೀಕೃತ & ಸುಧಾರಿತವಾದದ್ದು.

3ನೇ ಬಾಸೆಲ್ ಒಪ್ಪಂದ – 2008:– 2008 ರ ಆರ್ಥಿಕ ಬಿಕ್ಕಟ್ಟನ್ನು ನಿವಾರಿಸಲು ಮಾರ್ಗಸೂಚಿ

✦ ನೀರಿನ ಬಳಕೆಯ ಸಾಮರ್ಥ್ಯ ವೃದ್ಧಿಗೊಳಿಸಲು 1974–75 ರಲ್ಲಿ ನೀರಿನ ಬಳಕೆ ಸಾಮರ್ಥ್ಯ ಅಭಿವೃದ್ಧಿಪಡಿಸಲು ಆರಂಭಿಸಲಾಯಿತು.

✦ ಕೈಗಾರಿಕಾ ಕಾರ್ಮಿಕರ ಸಂಖ್ಯೆಯ ಗ್ರಾಹಕರ ಬೆಲೆ ಸೂಚ್ಯಂಕ (CPI) ಹೊರ ತರುತ್ತದೆ.

**ಕಾರ್ಮಿಕರ ಬ್ಯೂರೋ (Labour Bureau):-**

✦ ಕಾರ್ಮಿಕರ ಬ್ಯೂರೋದವರು ಕೈಗಾರಿಕೆಯ ಕಾರ್ಮಿಕರ ಸಂಖ್ಯೆಯ ಗ್ರಾಹಕರ ಬೆಲೆ ಸೂಚ್ಯಂಕವನ್ನು ಬಿಡುಗಡೆ ಮಾಡುತ್ತಾರೆ. ಹೊಸ ಸರಣಿಯನ್ನು ಆಧಾರ ವರ್ಷ 2001=100 ರ ಮೇಲೆ 2006 ಮಾರ್ಚ್ 9 ರಂದು ಬಿಡುಗಡೆ ಮಾಡಿದ್ದಾರೆ. 2006 ಜನವರಿಯಲ್ಲಿ (1982=100) ಸರಣಿಯನ್ನು ಬದಲಾಯಿಸಲಾಯಿತು.

✦ Agreement on Agriculture, Agreement on the Application of Sanitary and Phytosanitary Measures ಎಂಬ ಪದಗಳು ಪದೇ ಪದೇ ಸುದ್ದಿಯಲ್ಲಿದ್ದು, ಇವುಗಳು **ವಿಶ್ವ ವ್ಯಾಪಾರ ಸಂಘಟನೆಗೆ** ಸಂಬಂಧಿಸಿದ ವಿಷಯಗಳಾಗಿವೆ.

✦ Global Economic Prospects ಎಂಬ ವರದಿಯನ್ನು ಕಾಲಕಾಲಕ್ಕೆ ವಿಶ್ವಬ್ಯಾಂಕ್‌ನವರು ವರದಿ ಮಾಡುತ್ತಾರೆ. ವಿಶ್ವ ಬ್ಯಾಂಕ್ ಈ ವರದಿಯನ್ನು ವರ್ಷಕ್ಕೆ 2 ಬಾರಿ (ಪ್ರತಿ ವರ್ಷ ಜನವರಿ ಮತ್ತು ಜೂನ್) ಜಾಗತಿಕ ಆರ್ಥಿಕತೆಗೆ ಸಂಬಂಧಿಸಿದಂತೆ ಮತ್ತು ಅದು ಹೇಗೆ ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಮೇಲೆ ಪ್ರಭಾವ ಬೀರುತ್ತದೆ ಎಂಬ ಜಾಗತಿಕ ಆರ್ಥಿಕ ಮುನ್ನೋಟವನ್ನು ಪ್ರಕಟಿಸುತ್ತದೆ.

# ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಪ್ರಮುಖ ಪರಿಕಲ್ಪನೆಗಳು

- **ದುಬಾರಿ ಹಣ:-** ಹೆಚ್ಚಿನ ಬಡ್ಡಿದರದಲ್ಲಿ ಸಾಲ ಪಡೆಯುವವರಿಗೆ ಹಣ ಕಡಿಮೆ ಪ್ರಮಾಣದಲ್ಲಿ ಲಭ್ಯವಾಗುವುದು. ಇದು ಬ್ಯಾಂಕುಗಳ ಸಾಲ ನಿರ್ಮಾಣ ಕುಂಠಿತವಾಗುವುದರಿಂದ ಸೃಷ್ಟಿಯಾಗುತ್ತದೆ.
- **ಮೂಲ ವಲಯ:-** ಆರ್ಥಿಕತೆಗೆ ಅಗತ್ಯವಿರುವ ಮೂಲಭೂತ ಸೌಕರ್ಯಗಳ ಕ್ಷೇತ್ರ ಅಂದರೆ, ಸಿಮೆಂಟ್, ಕಬ್ಬಿಣ, ಉಕ್ಕು, ಪೆಟ್ರೋಲಿಯಂ, ಭಾರೀ ಯಂತ್ರಗಳು
- **ಸಾಲ ಹೀರುವಿಕೆ:-** ಹಣಕಾಸು ಪ್ರಾಧಿಕಾರ ಆರ್ಥಿಕತೆಯಲ್ಲಿ ಹಣದುಬ್ಬರ ನಿಯಂತ್ರಿಸಲು ನೀಡುವ ಸಾಲವನ್ನು ಕಡಿಮೆ ಮಾಡುವುದು.
- **ಹಣದುಬ್ಬರದ ಹಿಂತೆಗೆತ (Disinflation):-** ಇದೊಂದು ಹಣದುಬ್ಬರ ನಿಯಂತ್ರಣ ಕ್ರಮವಾಗಿದ್ದು, ಹಣದುಬ್ಬರ ಸನ್ನಿವೇಶದಲ್ಲಿ ಉತ್ಪಾದನೆ & ಉದ್ಯೋಗದ ಮೇಲೆ ಯಾವುದೇ ಅಡ್ಡ ಪರಿಣಾಮಗಳಿಲ್ಲದೇ ಬೆಲೆಯನ್ನು ನಿಯಂತ್ರಿಸು ಪ್ರಕ್ರಿಯೆ.
- **FOB - Free On Board:-** ಮಾರಾಟಗಾರ ಎಲ್ಲಾ ಸಾರಿಗೆ ಹಡಗು ವೆಚ್ಚ, ವಿಮೆಯನ್ನು ಭರಿಸುವುದು.
- **ಲಿಂಗಸಬಲೀಕರಣ ಮಾಪನ:-** ಆರ್ಥಿಕ ಭಾಗವಹಿಸುವಿಕೆ, ತೀರ್ಮಾನ ಕೈಗೊಳ್ಳುವಿಕೆ, ರಾಜಕೀಯ ಭಾಗವಹಿಸುವಿಕೆ & ಆರ್ಥಿಕ ಸಂಪನ್ಮೂಲಗಳ ಮೇಲೆ ಹಿಡಿತ ಸಾಧಿಸುವ ಆಯಾಮಗಳನ್ನು ಒಳಗೊಂಡ ಲಿಂಗ ಅಸಮಾನತೆ ಮಾಪನ ಮಾಡುವ ಸಂಯುಕ್ತ ಸೂಚ್ಯಂಕ.
- **Pump Priming:-** ಜೆ.ಎಂ.ಕೇನ್ಸ್ ಈ ಪರಿಕಲ್ಪನೆಯನ್ನುನೀಡಿದ್ದು, ಆರ್ಥಿಕ ಮುಗ್ಗಟ್ಟಿನ ಸನ್ನಿವೇಶದಲ್ಲಿ ಸರ್ಕಾರ ಹಸ್ತಕ್ಷೇಪ ಮಾಡಿ, ಸ್ವತಂತ್ರ ಹೂಡಿಕೆಯ ಮೂಲಕ ಉದ್ಯೋಗ, ಆದಾಯ, ಉತ್ಪನ್ನ ಸೃಷ್ಟಿ ಮಾಡುವುದರ ಮೂಲಕ ದೇಶದ ಅಭಿವೃದ್ಧಿಗೆ ಕಾರಣವಾಗುವ ಸಂಚಿತ ಪ್ರಕ್ರಿಯೆಯನ್ನು ತಿಳಿಸುತ್ತದೆ.
- **ನೆರಳಿನ ಬೆಲೆ (Shadow Prize):-** ವಸ್ತುವಿನ ಉತ್ಪಾದನೆಯಲ್ಲಿ ಸಂಪನ್ಮೂಲಗಳ ಸದಾವಕಾಶ ವೆಚ್ಚದ ಆಧಾರದ ಮೇಲೆ ವಸ್ತು ಹೊಂದಿರುವ ಅವ್ಯಕ್ತ ಮೌಲ್ಯ.
- **ಮೃದು ಕರೆನ್ಸಿ :-** ಚಿನ್ನ ಅಥವಾ ಇತರೆ ಕರೆನ್ಸಿಗಳಿಗೆ ಪೂರ್ಣ ಪರಿವರ್ತನೆ ಮಾಡಲು ಕಡಿಮೆ ಮಿತಿಯನ್ನು ಹೊಂದಿರುವ ಕರೆನ್ಸಿ.
- **ವ್ಯಾಪಾರಾಂತರ:-** ಗೋಚರಿತ ಆಮದು & ರಫ್ತುಗಳ ನಡುವಿನ ವ್ಯತ್ಯಾಸ.
- **Trickle Down Theory:-** ದೇಶದ ರಾಷ್ಟ್ರೀಯ ಆದಾಯದ ಅಧಿಕ ಬೆಳವಣಿಗೆ ದರದ ಫಲ ಸಮಾಜದ ತಳಹಂತದ ಜನರಿಗೂ ತಲುಪುವಂತೆ ನೋಡಿಕೊಳ್ಳುವುದು ಎಂದು ಪ್ರತಿಪಾದಿಸುತ್ತದೆ. ಇದು ಆದಾಯದ ಅಸಮಾನತೆಯನ್ನು ಕಡಿಮೆ ಮಾಡುವುದನ್ನು ತಿಳಿಸುತ್ತದೆ. ಇದನ್ನು ಅರ್ಥಶಾಸ್ತ್ರಜ್ಞ ರೊನಾಲ್ಡ್ ರೇಗನ್ ಅಭಿವೃದ್ಧಿ ಪಡಿಸಿದ್ದಾರೆ.
- **Reganomics (ಪೂರೈಕೆ ಭಾಗದ ಅರ್ಥಶಾಸ್ತ್ರ):-** ತೆರಿಗೆ ದರವನ್ನು ಕಡಿಮೆ ಮಾಡಿ, ಉತ್ಪಾದನೆಯನ್ನು ಹೆಚ್ಚಿಸುವ ಆರ್ಥಿಕ ಸಿದ್ಧಾಂತ ಪ್ರತಿಪಾದಿಸಿದ ಅರ್ಥಶಾಸ್ತ್ರಜ್ಞರ ಪಂಥ. ಇದರಲ್ಲಿ ಲ್ಯಾಫರ್, ಮಾರ್ಟಿನ್, ಫೆಲ್‌ಸ್ಟೈನ್, ಗಿಲ್ಡರ್ ಪ್ರಮುಖರಾಗಿದ್ದಾರೆ.
- **Vittal Statistics:-** ಜನನ, ಮರಣ, ವಿವಾಹ, ವಿಚ್ಛೇದನ ಮುಂತಾದವುಗಳಿಗೆ ಸಂಬಂಧಿಸಿದ ದತ್ತಾಂಶ ಅಧ್ಯಯನ.
- **Webriz ರೇಖೆ:-** ರಾಷ್ಟ್ರದಲ್ಲಿ ಲಭ್ಯವಿರುವ ಉದ್ಯೋಗದ ಮಟ್ಟ & ನಿರುದ್ಯೋಗ ಮಟ್ಟದ ನಡುವಿನ ಸಂಬಂಧವನ್ನು ತಿಳಿಸುವ ನಕ್ಷಾ ನಿರೂಪಣೆ. ಇಲ್ಲಿ ಉದ್ಯೋಗ & ನಿರುದ್ಯೋಗದ ನಡುವೆ ವಿಪರ್ಯಾಯ ಸಂಬಂಧವಿರುತ್ತದೆ.
- **ಮೆಟ್ಜ್ಲರ್ ವಿರೋಧಾಭಾಸ:-** ಸುಂಕ ವಿಧಿಸುವಿಕೆಯು ಆದಾಯದ ಮೇಲೆ ಬೀರುವ ಪರಿಣಾಮವನ್ನು ತಿಳಿಸುತ್ತದೆ. ಅಂದರೆ ಸ್ಟಾಪ್ಲರ್ ಸ್ಯಾಮ್ಯುಯೆಲ್‌ಸನ್ ಸಿದ್ಧಾಂತಕ್ಕೆ ಇದು ವಿರುದ್ಧವಾಗಿದ್ದು, ಸುಂಕ ವಿಧಿಸುವಿಕೆಯಿಂದ ಕೊರತೆ ಯಲ್ಲಿರುವ ಉತ್ಪಾದನಾಂಗಗಳಿಗಿಂತ ಸಮೃದ್ಧ ಉತ್ಪಾದನಾಂಗಗಳ ಆದಾಯ ಹೆಚ್ಚಾಗುತ್ತದೆ ಎಂದು ತಿಳಿಸುತ್ತದೆ.

**ವಿಶೇಷ ಆರ್ಥಿಕ ವಲಯ (SEZ):** ಇದೊಂದು ಭೌಗೋಳಿಕ ಪ್ರದೇಶವಾಗಿದ್ದು, ದೇಶವೊಂದರ ವಿಶಿಷ್ಟ ಅಥವಾ ರಾಷ್ಟ್ರೀಯ ಕಾನೂನುಗಳಿಗಿಂತ ಹೆಚ್ಚಿನ ರೀತಿಯಲ್ಲಿ ಮುಕ್ತ ಮಾರುಕಟ್ಟೆ ಉದ್ದೇಶಿತವಾಗಿರುವ ಆರ್ಥಿಕ & ಇತರೆ ಕಾನೂನುಗಳನ್ನು ಇದು ಹೊಂದಿರುತ್ತದೆ. ವಿಶೇಷ ಆರ್ಥಿಕ ವಲಯದ ಒಂದರಲ್ಲಿ ರಾಷ್ಟ್ರವ್ಯಾಪಿ ಕಾನೂನುಗಳು ಸ್ಥಗಿತಗೊಳಿಸಲ್ಪಟ್ಟಿರಲು ಸಾಧ್ಯವಿದೆ. ವಿಶೇಷ ಆರ್ಥಿಕ ವಲಯವು ಹೆಚ್ಚು ನಿರ್ದಿಷ್ಟವಾಗಿರುವ ವಲಯದ ಬಗೆಗಳ ಒಂದು ವ್ಯಾಪಕ ಶ್ರೇಣಿಯನ್ನು ಒಳಗೊಳ್ಳುತ್ತದೆ. ಚೀನೀ ಜನರ ಗಣರಾಜ್ಯದಲ್ಲಿ 1979 ರಲ್ಲಿ **ಡೇಂಗ್ ಲಿಯೋಪಿಂಗ್** ನೇತೃತ್ವದಲ್ಲಿ ಕೇಂದ್ರ ಸರ್ಕಾರದ ವತಿಯಿಂದ ವಿಶೇಷ ಆರ್ಥಿಕ ವಲಯಗಳು ಸ್ಥಾಪಿಸಲ್ಪಟ್ಟವು.

## ವಿನೂತನವಾಗಿ ವಿಶಿಷ್ಟತೆಯಿಂದ ಕೂಡಿದ
## ಪ್ರತಿಯೊಬ್ಬ ಸ್ಪರ್ಧಾರ್ಥಿಯು ಓದಲೇಬೇಕಾದ

# ಸಾಮಾನ್ಯ ಅರ್ಥಶಾಸ್ತ್ರ & ಆರ್ಥಿಕ ಸಮೀಕ್ಷೆ



ಆತ್ಮೀಯ ಸ್ಪರ್ಧಾರ್ಥಿಗಳೇ,

ನಿಮ್ಮ ಸ್ಪರ್ಧಾವಿಜೇತ ಪಬ್ಲಿಕೇಷನ್ ವತಿಯಿಂದ ಈಗಾಗಲೇ ಸಾಮಾನ್ಯ ವಿಜ್ಞಾನ, ಭಾರತದ ಸಂವಿಧಾನ, ಭಾರತದ ಭೂಗೋಳಶಾಸ್ತ್ರ ಪುಸ್ತಕಗಳನ್ನು ಹೊರ ತಂದಿದ್ದು, ಈ ಪುಸ್ತಕಗಳು ಅನೇಕ ಬಾರಿ ಮರು ಮುದ್ರಣಗೊಂಡಿವೆ. & ಸ್ಪರ್ಧಾರ್ಥಿಗಳಿಗೆ ಎಲ್ಲಾ ರೀತಿಯ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಯಶಸ್ವಿಯಾಗಲು ಸಹಕಾರಿಯಾಗಿವೆ.

ಅದೇ ರೀತಿ ಉತ್ತಮ ಗುಣಮಟ್ಟದ ಪುಸ್ತಕಗಳನ್ನು ಹೊರತಂದು, ಸ್ಪರ್ಧಾರ್ಥಿಗಳು ಸ್ಪರ್ಧಾತ್ಮಕ ಪರೀಕ್ಷೆಯನ್ನು ಯಶಸ್ವಿಯಾಗಿ ನಿಭಾಯಿಸುವಂತೆ ಹಾಗೂ ಪರೀಕ್ಷೆಯಲ್ಲಿ ಯಶಸ್ಸು ಗಳಿಸುವಂತೆ ಮಾಡುವ ಉದ್ದೇಶದಿಂದ ನಿಮ್ಮ ಸ್ಪರ್ಧಾ ವಿಜೇತ ಪಬ್ಲಿಕೇಷನ್ ವತಿಯಿಂದ "ಸಾಮಾನ್ಯ ಅರ್ಥಶಾಸ್ತ್ರ & ಆರ್ಥಿಕ ಸಮೀಕ್ಷೆ" ಎಂಬ ಪುಸ್ತಕವನ್ನು ಹೊರತರಲಾಗುತ್ತಿದೆ. ಈ ಪುಸ್ತಕವು ಅರ್ಥಶಾಸ್ತ್ರದ ಮೂಲಾಂಶಗಳು, ಪ್ರಚಲಿತ ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಅಂಶಗಳನ್ನು ಒಳಗೊಂಡಿದ್ದು, ಭಾರತದ ಆರ್ಥಿಕ ಸಮೀಕ್ಷೆ & ಕರ್ನಾಟಕದ ಆರ್ಥಿಕ ಸಮೀಕ್ಷೆಯನ್ನು ಒಳಗೊಂಡಿದ್ದು, ಒಂದು ವಿನೂತನ ಶೈಲಿಯಲ್ಲಿ ಹೊರ ಬಂದಿದೆ.

ಈ ಪುಸ್ತಕದ ವಿಶೇಷತೆಯೆಂದರೆ, ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಇತರೆ ವಿಷಯಗಳಾದ ಸಂವಿಧಾನಾತ್ಮಕ ಅಂಶಗಳು, ಭೌಗೋಳಿಕ ಅಂಶಗಳು, ಇತಿಹಾಸದ ಅಂಶಗಳು & ಪ್ರಚಲಿತ ಘಟನೆಗಳಿಗೆ ಸಂಬಂಧಿಸಿದ ಅಂಶಗಳನ್ನು ಆಧರಿಸಿ ಸರಳ ಭಾಷೆಯಲ್ಲಿ ರಚಿಸಲಾಗಿದೆ. ಅರ್ಥಶಾಸ್ತ್ರ ಅಧ್ಯಯನ ಮಾಡದ ಸ್ಪರ್ಧಾರ್ಥಿಗಳೂ ಕೂಡ ಸುಲಭವಾಗಿ ಅಧ್ಯಯನ ಮಾಡಬಹುದಾಗಿದೆ. ಈ ಪುಸ್ತಕವು ವಿನೂತನ ಹಾಗೂ ವಿಶಿಷ್ಟವಾದ ಅರ್ಥಶಾಸ್ತ್ರದ ಪುಸ್ತಕವಾಗಲೆಂದು ನಮ್ಮ ಬಯಕೆಯಾಗಿದೆ. ಈ ಪುಸ್ತಕ ರಚನೆಗೆ ವಿವಿಧ ಮೂಲಗಳಿಂದ ಮಾಹಿತಿಯನ್ನು ಸಂಗ್ರಹಣೆ ಮಾಡಿ, ಸ್ಪರ್ಧಾತ್ಮಕ ಪರೀಕ್ಷೆಗೆ ಉಪಯುಕ್ತವಾಗುವಂತಹ ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ಈ ಪುಸ್ತಕದಲ್ಲಿ ನೀಡಲಾಗಿದೆ. ಈ ಪುಸ್ತಕವು ಸ್ಪರ್ಧಾರ್ಥಿಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಅತಿ ಹೆಚ್ಚು ಅಂಕ ಪಡೆಯಲು ಸಹಕಾರಿಯಾಗಲಿ, ಸ್ಪರ್ಧಾರ್ಥಿಗಳು ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಯಶಸ್ಸು ಪಡೆಯುವಂತಾಗಲಿ ಎಂದು ಹಾರೈಸುತ್ತೇನೆ...............

ಬೆಲೆ ರೂ-350/-




**ಸ್ಪರ್ಧಾ ವಿಜೇತ ಸ್ಟಡಿ ಸೆಂಟರ್**

**ಡಾ|| ಕೆ.ಎಂ. ಸುರೇಶ್** ಪ್ರಧಾನ ಸಂಪಾದಕರು

# 629, ಮೊದಲನೇ ಮಹಡಿ, 7ನೇ ಮುಖ್ಯರಸ್ತೆ, ವಿಜಯನಗರ

ಬೆಂಗಳೂರು - 560040

ದೂರವಾಣಿ ಸಂಖ್ಯೆ: 080-23507859, 9845419561, 9964477859